# ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
ಅಯ್ಯಾಳಿ ಯರಿಸ್ವಾಮಿ

ಮಾರ್ಗದರ್ಶಕರು
ಡಾ. ಸಿ.ಆರ್. ಗೋವಿಂದರಾಜು
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಅಯ್ಯಾಳಿ ಯರಿಸ್ವಾಮಿ**

ಮಾರ್ಗದರ್ಶಕರು

**ಡಾ. ಸಿ.ಆರ್. ಗೋವಿಂದರಾಜು**

ಪ್ರಾಧ್ಯಾಪಕರು





**ಚರಿತ್ರೆ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩೨೭೬

೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗದ** ಪಿಎಚ್.ಡಿ. ಪದವಿಗಾಗಿ **ಅಯ್ಯಾಳಿ ಯರಿಸ್ವಾಮಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ :** 20.9.12
**ಸ್ಥಳ : ವಿದ್ಯಾರಣ್ಯ**

**ಡಾ. ಸಿ.ಆರ್. ಗೋವಿಂದರಾಜು**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಸಂಶೋಧಕರ ಪ್ರಮಾಣ ಪತ್ರ

**ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಸಿ.ಆರ್. ಗೋವಿಂದರಾಜು,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ :** 20.9.02
**ಸ್ಥಳ : ವಿದ್ಯಾರಣ್ಯ**

Ayyali

**ಅಯ್ಯಾಳಿ ಯರಿಸ್ವಾಮಿ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

## ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಹಿನ್ನೆಲೆ, ಆಶಯ ಹಾಗೂ ಜರೂರು, ವ್ಯಾಪ್ತಿ ಮತ್ತು ಮಿತಿಗಳು, ವಿಧಿ-ವಿಧಾನ ಹಾಗೂ ಸ್ವರೂಪ ಮತ್ತು ಅಧ್ಯಯನದ ಸಮೀಕ್ಷೆ

೧.೧. ಅಧ್ಯಯನದ ಹಿನ್ನೆಲೆ

೧.೨. ಅಧ್ಯಯನದ ಆಶಯ ಹಾಗೂ ಜರೂರು

೧.೩. ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳು

೧.೪. ಅಧ್ಯಯನದ ವಿಧಿ-ವಿಧಾನ

೧.೫. ಅಧ್ಯಯನದ ಸ್ವರೂಪ

೧.೬. ಅಧ್ಯಯನದ ಸಮೀಕ್ಷೆ

### ಅಧ್ಯಾಯ : ಒಂದು

# ಅಧ್ಯಯನದ ಹಿನ್ನೆಲೆ, ಆಶಯ ಹಾಗೂ ಜರೂರು, ಅಧ್ಯಯನದ ಸಮೀಕ್ಷೆ, ವ್ಯಾಪ್ತಿ ಮತ್ತು ಮಿತಿಗಳು, ವಿಧಿ-ವಿಧಾನ ಹಾಗೂ ಸ್ವರೂಪ

## ೧.೧. ಅಧ್ಯಯನದ ಹಿನ್ನೆಲೆ, ಆಶಯ ಹಾಗೂ ಜರೂರು

ವಸಾಹತು ಸನ್ನಿವೇಶದಲ್ಲಿ ಬ್ರಿಟಿಷ್ ಹಾಗೂ ಪಾಶ್ಚಾತ್ಯ ಸೈದ್ಧಾಂತಿಕತೆಗಳಿಗೆ ಒಳಗಾದ ನಮ್ಮ ಮನೋಚಿಂತನೆಗಳು ಇಂದಿಗೂ ಅವುಗಳಿಂದ ಮುಕ್ತಗೊಂಡಿಲ್ಲ. ಲಿಖಿತ ದಾಖಲೆಗಳೇ ಉತ್ಕೃಷ್ಟವಾದವು ಎಂದು ಅರಿತಿದ್ದ ಪಾಶ್ಚಾತ್ಯ ಚರಿತ್ರೆ ರಚನಶಾಸ್ತ್ರವು ನಮ್ಮಲ್ಲಿದ್ದ ಮೌಖಿಕ ಪರಂಪರೆಯನ್ನು 'ನಗಣ್ಯ'ವೆಂದು ಪರಿಗಣಿಸಿತು. ಈ ದಿಸೆಯಲ್ಲಿಯೇ ಬ್ರಿಟಿಷ್ ಮತ್ತು ಪಾಶ್ಚಾತ್ಯ ಇತಿಹಾಸಕಾರರು 'ಭಾರತೀಯರಿಗೆ ಚರಿತ್ರೆಯೇ ಇಲ್ಲ' ಎಂದೂ ಹೇಳಿದ್ದು. ಆದರೆ ನಮ್ಮಲ್ಲಿ ಕಥೆ-ದಂತಕಥೆ-ಒಗಟು-ಗಾದೆ-ಹಾಡು-ಕಾವ್ಯ-ಲಾವಣಿ-ಪುರಾಣ-ಐತಿಹ್ಯ ಮೊದಲಾದ ಪ್ರಕಾರಗಳಲ್ಲಿ ಚರಿತ್ರೆಯು ಬಾಯಿಂದ ಬಾಯಿಗೆ 'ತೋಂಡಿ' ರೂಪದಲ್ಲಿ ಜೀವಂತವಾಗಿತ್ತು. ವಸಾಹತೀಕರಣ ಕ್ಕೊಳಪಟ್ಟ ನಮ್ಮ ವಿದ್ವಾಂಸರೂ ಸಹ ಈ ಜೀವಂತ ಮೌಖಿಕ ದಾಖಲೆಗಳನ್ನು ನಿರ್ಲಕ್ಷಿಸಿದರು. ಇವರಿಗೆ ಅಕ್ಷರ ಬಲ್ಲ ಕೆಲವೇ ಮಂದಿ ಪರಿಗಣಿಸಬಹುದಾದ ಲಿಖಿತ ದಾಖಲೆಗಳೇ 'ನೈಜ ಚರಿತ್ರೆ'ಗಳಾಗಿದ್ದವು. ಇಂಥ ನೈಜ ಚರಿತ್ರೆಯ ಪರಿಮಿತಿಗಳು ಸಹ ಇವರಾರಿಗೂ ತಿಳಿಯಲೇ ಇಲ್ಲ. ಆದ್ದರಿಂದಲೇ ಈ ಹೊತ್ತಿಗೂ ನಮ್ಮಲ್ಲಿನ ಸಂಪ್ರದಾಯಿಕ ಚರಿತ್ರೆಯು ಅನೇಕ ಬಗೆಯ ಟೀಕೆ, ಪ್ರತಿಕ್ರಿಯೆ ಹಾಗೂ ಪ್ರತಿರೋಧಗಳಿಗೆ ಒಳಗಾಗುತ್ತಿರುವುದು. ಆ ಬಗೆಯ ಪ್ರತಿರೋಧಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಮೌಖಿಕ ಆಕರಗಳೇ ಪ್ರಧಾನವಾಗತೊಡಗಿದ್ದು ಗಮನಾರ್ಹ. ಅಂತೆಯೇ ಸಾಂಸ್ಕೃತಿಕ ಒಳನೋಟಗಳನ್ನು ನೀಡುವಂಥವು ಅವೆ ಆಗಿದ್ದವು. ಈ ಮಾತುಗಳು ಕನ್ನಡದ ಸಂದರ್ಭಕ್ಕೂ ಅನ್ವಯ ಆಗುವಂಥದ್ದು. ಈ ಎಲ್ಲಾ ನೋಟಗಳಿಂದ ಪ್ರಸ್ತುತ ಅಧ್ಯಯನವು ಲಿಖಿತ ಹಾಗೂ ಮೌಖಿಕ ಪರಂಪರೆಯ ದಾಖಲೆಗಳ ತೌಲನಿಕ ಪರಿಶೀಲನೆಯಲ್ಲಿ ಜರೂರು ಅನ್ನಿಸಿಕೊಂಡಿದೆ.

ಯಾವುದೇ ಸಂಸ್ಕೃತಿಗೂ ಐತಿಹ್ಯಗಳಂಥ ಮೌಖಿಕ ಆಕರಗಳು ಉಳಿದು ವಿಸ್ತಾರವಾಗುವುದ ರೊಂದಿಗೆ ಪರಂಪರೆಗಳಾಗಿ ನೆಲೆ ನಿಲ್ಲುತ್ತವೆ. ಅಲ್ಲದೆ ಆಯಾ ಪ್ರದೇಶದ ಭೌಗೋಳಿಕ,

ಸಾಮಾಜಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಲು ಸಹ ಪೂರಕವಾಗುತ್ತವೆ. ಕಂಠಸ್ಥ ಪರಂಪರೆಯಿಂದ ದೊರೆಯಬಹುದಾದ ಮೌಖಿಕ ಆಕರಗಳು ಚರಿತ್ರೆಯನ್ನು ನಿರ್ಮಿಸಲು ಹೇಗೆ ನೆರವಾಗಬಲ್ಲವು ಎಂಬುದನ್ನು ವಿಶಿಷ್ಟ ಮಾದರಿಯಲ್ಲಿ ವಿಶ್ಲೇಷಿಸುವ ಆಶಯವನ್ನು ಇಲ್ಲಿ ಪರಿಶೀಲಿಸಲಾಗಿದೆ. ಮೌಖಿಕ ಸಾಹಿತ್ಯವು ಆಕರಗಳಾಗಲು ಸಾಧ್ಯವಿಲ್ಲ ಎಂಬ ಅನೇಕ ತರ್ಕಗಳನ್ನು ಪ್ರಶ್ನಿಸುವುದರ ಜೊತೆಗೆ ಅವುಗಳನ್ನೇ ಪ್ರಧಾನವನ್ನಾಗಿಸಿಕೊಂಡು ಪರಿಶೀಲಿಸುವ ಆಶಯ ಈ ಅಧ್ಯಯನದ್ದು.

ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಡೆದ ರಾಜಪ್ರಭುತ್ವ, ಯಜಮಾನಿಕೆ, ಅಸಹಾಯಕತೆ, ಸ್ಥಳ ಮಹತ್ವ, ಕ್ಷೇತ್ರ ಮಹಿಮೆ, ದಾನ-ದತ್ತಿ ಹೀಗೆ ಹಲವಾರು ಸಂದರ್ಭಗಳು ಆಯಾಕಾಲದ ಸಾಮಾಜಿಕ ಜನ-ಜೀವನದ ಚಿತ್ರಣಗಳನ್ನು ಐತಿಹ್ಯಗಳು ಪ್ರತಿನಿಧಿಸುತ್ತವೆ. ಐತಿಹ್ಯಗಳ ಅಧ್ಯಯನವೆಂದರೆ ಒಂದು ಬಗೆಯ ಚಾರಿತ್ರಿಕ ಅಧ್ಯಯನವೇ ಸರಿ. ಮೌಖಿಕ ಆಕರಗಳಿಂದ ಚಾರಿತ್ರಿಕ ಅಧ್ಯಯನವನ್ನು ಈವರೆಗೆ ಗಮನಿಸದೇ ಇರುವಂಥದ್ದೇ ಹೆಚ್ಚು. ಮೌಖಿಕ ಪರಂಪರೆಯ ಜಾತಿ, ವೃತ್ತಿ, ವರ್ಗ ಸಮುದಾಯಗಳ ಸಂಸ್ಕೃತಿಯ ಬಹುಮುಖಿ ಆಯಾಮಗಳನ್ನು ಪ್ರತಿನಿಧಿಸುವಂಥ ಐತಿಹ್ಯಗಳನ್ನು ಇಲ್ಲಿ ವಿಶ್ಲೇಷಿಸಿ ಚರ್ಚಿಸಲಾಗಿದೆ. ಆ ಮೂಲಕ ಚಾರಿತ್ರಿಕ ನೆಲೆಗಳ ಐತಿಹ್ಯಗಳು ಈ ಹೊತ್ತಿನ ಜಾಗತೀಕರಣದ ಕಾಲಘಟ್ಟದಲ್ಲಿ ಹೇಗೆ ತಮ್ಮ ಸ್ಥಾನವನ್ನು ಉಳಿಸಿಕೊಂಡಿವೆ ಎಂಬುದನ್ನು ಹೊಸ ಬಗೆಯಲ್ಲಿ ನೋಡುವ ನೋಟ ಇಲ್ಲಿನದು.

ಸಮಾಜದಲ್ಲಿನ ಮೇಲ್ವರ್ಗದವರಿಗೆ 'ಪುರಾಣ'ಗಳೇ ಐತಿಹ್ಯಗಳು. ಅಂತೆಯೇ ತಳಸಮುದಾಯ ಗಳಿಗೆ ಆ ಬಗೆಯ 'ಐತಿಹ್ಯ'ಗಳೇ 'ಪುರಾಣ'ಗಳಾಗಿ ಅನಾವರಣವಾಗಿರುವುದುಂಟು. ಈ ಕಾರಣಗಳಿಂದಾಗಿ ಐತಿಹ್ಯಗಳನ್ನು 'ಜನಪದ'ರ ನೆಲೆಗೂ ಸೇರಿಸಿ ಅಧ್ಯಯನ ಮಾಡುವ ಉಪಕ್ರಮಗಳು ಇಂದು ಚಾಲ್ತಿಯಲ್ಲಿವೆ. ಗಮನಿಸಬೇಕಾದ ಅಂಶವೆಂದರೆ ಐತಿಹ್ಯಗಳ ವ್ಯಾಪ್ತಿ ಇಷ್ಟಕ್ಕೆ ಸೀಮಿತವಾಗಿಲ್ಲ. ಬದಲಾಗಿ ಇವುಗಳ ವಸ್ತು ಸಾಮಗ್ರಿ, ಕ್ರಿಯಾ ಸಾಮಗ್ರಿ ಮತ್ತು ಭಾಷಾ ಸಾಮಗ್ರಿಗಳ ನೆಲೆಗಳಲ್ಲಿ ಹುಟ್ಟಿಕೊಂಡಿರುವುದುಂಟು. ಅಲ್ಲದೆ ಅವುಗಳನ್ನು ಇಂದಿಗೂ ಹುಟ್ಟು ಹಾಕುತ್ತಲೇ ಮುಂದುವರೆದಿರುವುದು ಸಹ ಗಂಭೀರವಾದುದು. ಅಂದರೆ, ಇತಿಹಾಸ ರಚನೆಗೆ ಶಾಸನ, ಸ್ಮಾರಕಗಳು ನೆರವಾದರೆ, ಈ ಆಕರಗಳ ಹುಟ್ಟಿನ ಇತಿಹಾಸವನ್ನು ಐತಿಹ್ಯಗಳು ಬಿಚ್ಚಿಡುತ್ತವೆ. ಹೀಗಾಗಿ ಐತಿಹ್ಯಗಳು ಇತಿಹಾಸದ ಆಕರಗಳೂ ಹೌದು. ಹೊಸಪೇಟೆ ತಾಲೂಕಿನ ಚರಿತ್ರೆಯನ್ನು ಈ ಭಾಗಕ್ಕೆ ನೆರವಾಗಬಹುದಾದ ಆಕರಗಳ ಹಿನ್ನೆಲೆಯಲ್ಲಿ ನೋಡುವ ಆಶಯವೇ ಪ್ರಸ್ತುತ ಅಧ್ಯಯನದ್ದು. ಐತಿಹ್ಯಗಳಲ್ಲಿ ಸುಳ್ಳು, ಉತ್ಪ್ರೇಕ್ಷೆ, ಊಹೆ, ಪುರಾಣ ಕಲ್ಪನೆಗಳಿವೆ ಎಂಬ ಭಾವನೆಯಿಂದ ಉಪೇಕ್ಷೆ ಮಾಡುತ್ತಾ ಬಂದಿರುವ ಮಡಿವಂತಿಕೆಯ ವಿದ್ವಾಂಸರು ಅಲ್ಲಿನ ಸತ್ಯವನ್ನು ಕಾವ್ಯ, ಶಾಸನ, ಆಚಾರ-ವಿಚಾರಗಳಂಥ ಅನ್ಯಮೂಲಗಳಿಂದಲೂ ತೌಲನಿಕವಾಗಿ ಸಮರ್ಥನೆಗೊಳಪಡಿಸಿದಾಗ ನೈಜತೆಗಳು ಮನವರಿಕೆಯಾಗುತ್ತವೆ ಎಂಬುದನ್ನು ಸಹ ಇಲ್ಲಿ ಪರಿಶೀಲಿಸಲಾಗಿದೆ.

ಸಂಸ್ಕೃತಿಗಳು 'ತೋಂಡಿ' ಪರಂಪರೆಯ ಮೂಲಕ ಉಳಿದು, ಬೆಳೆದುಕೊಂಡು ಬಂದ ಜೀವಂತ ಪ್ರಕ್ರಿಯೆಗಳಾಗಿವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಅಕ್ಷರ ಬಾರದ 'ಜನಪದ'ರು ತಮ್ಮ ಜೀವನದ ಅನುಭವ ಹಾಗೂ ಸಾಂಸ್ಕೃತಿಕವಾದ ವಿಭಿನ್ನ ಚಹರೆಗಳನ್ನು ಬರೆಹದ ಮುಖೇನ ದಾಖಲಿಸಲು ಸಾಧ್ಯ ಆಗಲಿಲ್ಲ. ಆದರೆ ಈ ಎಲ್ಲ ಬಗೆಯ ಅಂಶಗಳನ್ನು ಕಲಾತ್ಮಕವಾಗಿ ಕಟ್ಟಿಕೊಡುವುದರ ಜೊತೆಗೆ ಮೌಖಿಕವಾಗಿಯೇ ನೆನಪಿನಲ್ಲಿ ಉಳಿಯುವಂತೆ ದಾಖಲು ಮಾಡಿದ್ದು ಗಮನಾರ್ಹ. ಸಾಹಿತ್ಯ ಮತ್ತು ಸಾಹಿತ್ಯೇತರ ರೂಪಗಳಲ್ಲಿ ಜನಪದರ ಸಾಂಸ್ಕೃತಿಕ ಅನನ್ಯತೆಗಳು ಪರಂಪರಾನುಗತವಾಗಿ ಚಲನಶೀಲವಾಗಿಯೇ ಉಳಿದು, ಬೆಳೆದುಕೊಂಡು ಬಂದಿವೆ. ಇಂಥ ದಾಖಲಾಗದ 'ಐತಿಹ್ಯ'ಗಳನ್ನೊಳಗೊಂಡ ಸಂಸ್ಕೃತಿಗಳ ಪರಿಶೀಲನೆಯೇ ಈ ಅಧ್ಯಯನ.

ಇಲ್ಲಿಯವರೆಗೂ ರಚನೆಗೊಂಡಿರುವ 'ಲಿಖಿತ ಇತಿಹಾಸ'ವು ಬಹುಪಾಲು ಪ್ರಭುತ್ವವನ್ನೇ ಕೇಂದ್ರೀಕರಿಸಿದಂಥ ದೃಷ್ಟಿಕೋನದ್ದೇ ಆಗಿವೆ. ಆದರೆ ಈ ದೃಷ್ಟಿಕೋನವು ಮಿತಿಗಳಿಗೆ ಒಳಪಡುವಂಥದ್ದು. ಪ್ರಭುತ್ವಕ್ಕೆ ಮಾತ್ರ ಸೀಮಿತವಾದ ಈ ಬಗೆಯ ಇತಿಹಾಸ ಸಮಾಜದ ಇನ್ನುಳಿದ ಆಯಾಮಗಳನ್ನು ಗೌಣವಾಗಿಸುತ್ತದೆ. 'ಜನ' ಅಥವಾ 'ಜನಪದ'ರನ್ನೊಳಗೊಂಡ ಚರಿತ್ರೆಯ ಚಹರೆಗಳು ಇಲ್ಲಿ ಪ್ರಧಾನಧಾರೆಗೆ ಬರುವುದೇ ಇಲ್ಲ. ಇವರೆವಿಗೂ ರಚನೆಗೊಂಡಿರುವ ಸಾಂಪ್ರದಾಯಿಕ ಚರಿತ್ರೆಗಳು ಪ್ರಭುತ್ವವನ್ನು ಹೊರತುಪಡಿಸಿದ ಆಳ್ವಿಕೆಗೆ ಒಳಪಟ್ಟವರ, ಜನಸಾಮಾನ್ಯರ ಚಹರೆಗಳನ್ನು ಕಟ್ಟಿಕೊಡುವಲ್ಲಿ ಸೋತಿವೆ. ಹೀಗೆ ಸೋಲುವುದರ ಜೊತೆಗೆ ಬಹುಮುಖಿ ನೆಲೆಯ ಸಾಂಸ್ಕೃತಿಕ ಒಳನೋಟಗಳ ಫಲಿತಗಳನ್ನು ಪಡೆಯುವಲ್ಲಿಯೂ ವಿಫಲವಾಗಿರುವುದುಂಟು. ಈ ಕೊರತೆಗಳನ್ನು ಲಿಖಿತ ಚರಿತ್ರೆಗಳ ಜೊತೆ ಜೊತೆಗೆ ಮೌಖಿಕ ಚರಿತ್ರೆಯ ಆಕರಗಳ ಮೂಲಕ ತೌಲನಿಕವಾಗಿ ಪರಿಶೀಲಿಸುವ ಜರೂರು ಈ ಅಧ್ಯಯನದ್ದಾಗಿದೆ. ಈ ಹಿನ್ನೆಲೆಯಲ್ಲಿ 'ಜನ', 'ಜನಪದ' ಅಥವಾ 'ಜನಸಾಮಾನ್ಯ'ರನ್ನು ಹೆಚ್ಚಾಗಿ ಪ್ರತಿನಿಧಿಸಿ, ಪ್ರತಿಬಿಂಬಿಸುವ ವಿಭಿನ್ನ ಪ್ರಕಾರಗಳ ಮೌಖಿಕ ಆಕರಗಳನ್ನೇ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅದರಲ್ಲೂ ವ್ಯಕ್ತಿ, ಸ್ಥಳ ಮತ್ತು ಘಟನೆಗಳ ನಿರೂಪಣೆಯನ್ನು ಕಟ್ಟಿಕೊಡುವಂಥ 'ಐತಿಹ್ಯ'ಗಳನ್ನೇ ನೇರವಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವುದು ಇಲ್ಲಿನ ವಿಶೇಷತೆ. ಈ ಬಗೆಯ ನೋಟದಿಂದ 'ಜನಪದ'ರ ಇತಿಹಾಸ ಅಥವಾ 'ಜನಸಾಮಾನ್ಯ'ರ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯ ಎಂಬುದು ಇಲ್ಲಿನ ಆಶಯ. ಇದರ ಜೊತೆಗೆ ಸಂಸ್ಕೃತಿಗಳಲ್ಲಿನ ಬಹುಮುಖಿ ಚಹರೆ ಹಾಗೂ ಸಂಗತಿಗಳನ್ನು ಅನಾವರಣ ಮಾಡುವ ತುಡಿತವೂ ಹೌದು.

ಪ್ರಸ್ತುತ ಅಧ್ಯಯನದ ಶೀರ್ಷಿಕೆಯೆ ಹೇಳುವಂತೆ ಇದೊಂದು ಸಂಸ್ಕೃತಿಯ ಬಹುಮುಖಿ ನೆಲೆಗಳಿಗೆ ಸಂಬಂಧಿಸಿದ್ದು. ಈ ಅಧ್ಯಯನದಲ್ಲಿ 'ಬರೆಹ' ಹಾಗೂ 'ತೋಂಡಿ' (ಮೌಖಿಕ) ಪ್ರಕಾರದ ಆಕರಗಳು ಮುಖ್ಯ ಅನ್ನಿಸಿಕೊಳ್ಳುತ್ತವೆ. ಅಲ್ಲದೆ ಈ ವಸ್ತುವಿಷಯವು ಹೊಸಪೇಟೆ ತಾಲೂಕಿನ ಐತಿಹ್ಯಗಳಿಗೆ ಮಾತ್ರ ಸಂಬಂಧಪಟ್ಟದ್ದು. ಪ್ರಸ್ತುತ ಅಧ್ಯಯನವು ಚರಿತ್ರೆಯ ವಿಧಿ-

ವಿಧಾನಗಳಿಗೆ ಸಂಬಂಧಿಸಿದ್ದಾದರೂ ಸಾಹಿತ್ಯ-ಚರಿತ್ರೆ-ಜಾನಪದ-ಸಮಾಜ ಇನ್ನುಳಿದ ಸಾಂಸ್ಕೃತಿಕ ಆಯಾಮಗಳು ಹಾಗೂ ಒಳನಂಟುಗಳನ್ನು ಹೊಂದಿರುವಂಥದ್ದು. ಈ ಹಿನ್ನೆಲೆಯಲ್ಲಿ ಇದೊಂದು ಬಹುಶಿಸ್ತೀಯ ಅಧ್ಯಯನವೇ ಹೌದು ಎಂದರೂ ತಪ್ಪಾಗಲಾರದು.

ಮಧ್ಯಕಾಲೀನ ಕರ್ನಾಟಕದ ರಾಜಕಾರಣದ ನೆಲೆಯಲ್ಲಿ ಕಂಪಿಲರಾಯನ ಅರಸುಮನೆತನ ಗಮನಾರ್ಹವಾದುದು. ಇವನ ನಂತರ ಕರ್ನಾಟಕದ ರಾಜಕಾರಣದ ಚಟುವಟಿಕೆಗಳನ್ನು ನಿಯಂತ್ರಿಸಿದವರು ವಿಜಯನಗರದ ಅರಸರು. ಅಲ್ಲದೆ ಛಿದ್ರಗೊಂಡ ಪಾಳೇಗಾರರು. ವೀರಶೈವ ವಿರಕ್ತರ ಆಂದೋಲನ ಹಾಗೂ ಮಾಧ್ವರ ದಾಸ ಆಂದೋಲನಗಳು ಹುಟ್ಟಿದ್ದು, ಬೆಳೆದದ್ದು ಈ ಪ್ರದೇಶದಲ್ಲಿಯೇ. ಹೀಗೆ ಮಧ್ಯಕಾಲೀನ ಕರ್ನಾಟಕದ ವಿಭಿನ್ನ ಮುಖಗಳ ಇತಿಹಾಸವೆಂದರೆ ಅದು ಅಂದಿನ ಹೊಸಪೇಟೆ ತಾಲೂಕಿನ ಇತಿಹಾಸವೂ ಹೌದು. ಸಾವಿರಾರು ಶಾಸನಗಳು, ಕೆರೆ-ಬಾವಿಗಳು, ದೇವಾಲಯಗಳು, ಪರ್ವತಗಳು, ಮಾಸ್ತಿಗಲ್ಲು, ವೀರಗಲ್ಲುಗಳಂಥ ಸ್ಮಾರಕಗಳು, ಶಿಲೆಯ ಮೇಲಿನ ಚಿತ್ರಗಳು, ಗುಹಾಚಿತ್ರಗಳು, ಕಾವ್ಯಗಳು, ಮೌಖಿಕ ಆಕರಗಳು ಹೇರಳವಾಗಿ ಈ ಪರಿಸರದಲ್ಲಿ ದೊರೆಯುತ್ತವೆ. ಇಂಥ ಅನೇಕ ಆಕರ - ಅಂಶಗಳು ಸಾಂಸ್ಕೃತಿಕವಾಗಿ ಪ್ರಾಗೈತಿಹಾಸಿಕ ಕಾಲದವರೆಗೂ ವ್ಯಾಪಿಸಿದೆ. ಅವುಗಳ ಅಧ್ಯಯನವೂ ಇಲ್ಲಿ ನಡೆದಿದೆ.

### ೧.೨. ಅಧ್ಯಯನದ ಸಮೀಕ್ಷೆ

ಇಂಥ ಅಧ್ಯಯನ ಮಾಡುವುದಕ್ಕೂ ಮೊದಲು ಇಲ್ಲಿಯವರೆಗೂ ನಡೆದಿರುವ ಈ ದಿಸೆಯ ಪ್ರಯತ್ನಗಳನ್ನು ಸಮೀಕ್ಷಿಸುವ ಅಗತ್ಯತೆ ಇದೆ. ಸಾಂಸ್ಕೃತಿಕ ಸಂಶೋಧನೆಗಳಿಗೆ ಮೌಖಿಕ ಆಕರಗಳ ಅಧ್ಯಯನವೂ ಸಹ ಹೆಚ್ಚು ಸಹಕಾರಿಯಾದುದು. ನಮ್ಮಲ್ಲಿ ಇರುವುದೆಲ್ಲ ಕಂಠಸ್ಥ ಪರಂಪರೆಯ ಇತಿಹಾಸವೇ ಆಗಿದ್ದರೂ, ವಸಾಹತುಶಾಹಿ ವ್ಯವಸ್ಥೆಯ ಪೂರ್ವದಲ್ಲಿ ನಮ್ಮ ದೇಶಿ ವಿದ್ವಾಂಸರು ಇಂಥ ಅಧ್ಯಯನಗಳ ಬಗೆಗೆ ಉದಾಸೀನ ಭಾವವನ್ನು ತೋರಿದ್ದರು. ಭಾರತಕ್ಕೆ ಬಂದ ಬ್ರಿಟಿಷರು ಇಲ್ಲಿನ ಜನಪದರ ಸಂಸ್ಕೃತಿಗಳ ಅಧ್ಯಯನಕ್ಕೆ ತೊಡಗಿದಾಗ, ಇಲ್ಲಿನ ವಿದ್ವಾಂಸರು ಸಹ ಮೌಖಿಕ ಆಕರಗಳ ಕಡೆಗೆ ಹೆಚ್ಚು ಆಕರ್ಷಿತರಾಗಿ ಅವುಗಳನ್ನೇ ಸಂಗ್ರಹಿಸುವ ಮತ್ತು ಸಂಶೋಧಿಸುವ ಕೆಲಸಗಳಲ್ಲಿ ತೊಡಗಿದ್ದು ಗಮನಾರ್ಹವಾದುದು. ಈ ಪರಿಣಾಮವಾಗಿ ಜನಪದ ಸಾಹಿತ್ಯದ ಒಂದು ರೂಪವಾದ ಐತಿಹ್ಯಗಳ ಬಗೆಗೂ ನಾಡಿನಲ್ಲಿ ಅನೇಕ ಅಧ್ಯಯನಗಳು ನಡೆಯುವಂತೆ ಆಯಿತು.

ಮೌಖಿಕ ಆಕರಗಳ ಅಧ್ಯಯನದ ಪ್ರಾರಂಭಿಕ ಹಂತದಲ್ಲಿ ಕಂಠಸ್ಥವಾಗಿರುವ ಐತಿಹ್ಯಗಳನ್ನು ನಿರೂಪಕರಿಂದ ಸಂಗ್ರಹಿಸಿ, ಪ್ರಕಟಿಸುವುದಕ್ಕೆ ಹೆಚ್ಚಿನ ಪ್ರಾಧ್ಯಾನತೆ ಕೊಟ್ಟಿರುವುದು ಕಂಡುಬರುತ್ತದೆ. ನಂತರದ ಕಾಲಘಟ್ಟಗಳಲ್ಲಿ ಐತಿಹ್ಯಗಳನ್ನು ಕುರಿತು ಮೌಲಿಕವಾದಂಥ ವಿವೇಚನೆ, ವಿಶ್ಲೇಷಣೆಗಳು ನಡೆದವು. ಪ್ರಸ್ತುತ ಸಂದರ್ಭದಲ್ಲಿ ಐತಿಹ್ಯಗಳಿಂದ ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಮತ್ತು ಇತಿಹಾಸ ರಚನೆಯ ಸಂದರ್ಭದಲ್ಲಿ ಆಕರಗಳಾಗಿ ಪರಿಗಣಿಸಿಕೊಳ್ಳಬೇಕೆನ್ನುವ ಆಲೋಚನೆಗಳು ಹಾಗೂ ಸಂಶೋಧನಾ ಅಧ್ಯಯನಗಳು ನಡೆದಿವೆ.

ಜಾಗತಿಕ ಮಟ್ಟದಲ್ಲಿಯೂ ಐತಿಹ್ಯಗಳ ಸಂಗ್ರಹ ಹಾಗೂ ಅಧ್ಯಯನಗಳು ವ್ಯಾಪಕವಾಗಿ ನಡೆದಿವೆ. ಅಂಥ ವಿದ್ವಾಂಸರ ಚಿಂತನೆಗಳು ಇತರರಿಗೂ ಮಾದರಿಯಾಗಿರುವುದುಂಟು. ತಮ್ಮ ಐತಿಹ್ಯಗಳ ಬಗೆಗಿನ ಚಿಂತನೆ ಮತ್ತು ವಿಶ್ಲೇಷಣೆಗಳಲ್ಲಿ ತೊಡಗಿದಂಥ ರಿಚರ್ಡ್ ಡಾರ್ಸನ್, ಸ್ಟಿಥ್ ಥಾಂಪ್ಸನ್, ಆರ್.ಎಸ್. ಬಾಗ್ಸ್, ಅರ್ನ್ ಆಂಟೆ, ಅಲನ್ ಡಂಡಿಸ್, ಜಾಕಬ್ಸ್ ಡೇ ವರ್ಗಿಸ್, ಮರಿಯಾ ಲೀಚ್, ಥಾಮ್ಸ್ ವಿಲಿಯಂ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ಪ್ರಮುಖರಾಗುತ್ತಾರೆ.

ಭಾರತೀಯ ಸಂದರ್ಭದಲ್ಲಿ ಎ.ಕೆ. ಘೋಷ್‌ರವರು ಪ್ರಮುಖರಾಗುತ್ತಾರೆ. ಇವರು 'ಲೆಜೆಂಡ್ ಫ್ರಮ್ ಇಂಡಿಯನ್ ಹಿಸ್ಟರಿ' ಕೃತಿಯಲ್ಲಿ ಐತಿಹ್ಯಗಳಲ್ಲಿ ಹುದುಗಿರುವ ಚಿಂತನೆಗಳನ್ನು ಗುರುತಿಸಿದ್ದಾರೆ. ಅಲ್ಲದೆ ಚರಿತ್ರೆಯ ಬರವಣಿಗೆಯ ಸಂದರ್ಭದಲ್ಲಿ ಚರಿತ್ರೆಕಾರರು ಐತಿಹ್ಯಗಳನ್ನು ಹೇಗೆ ಅಭ್ಯಾಸ ಮಾಡಬೇಕಾದ ಜರೂರು ಇದೆ ಎಂಬುದನ್ನು ಸಹ ಸೂಚಿಸಿದ್ದಾರೆ.

ಜಿ.ವಿ. ದಾಸೇಗೌಡ ಅವರ 'ಕನ್ನಡ ಐತಿಹ್ಯಗಳು' ಎಂಬ ಕೃತಿಯಲ್ಲಿ ಮಂಡ್ಯ, ಮೈಸೂರು, ಬೆಂಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಿಂದ ಐತಿಹ್ಯಗಳನ್ನು ಸಂಗ್ರಹಿಸಿ, ಅವುಗಳನ್ನು ಸ್ಥಳೀಯ ಮತ್ತು ಸಂಚಾರಿ ಐತಿಹ್ಯಗಳ ವರ್ಗೀಕರಣದಲ್ಲಿ ಅಧ್ಯಯನ ಮಾಡಿರುವುದು ಗಮನಿಸಬೇಕಾದ ಸಂಗತಿ.

ಅಂತೆಯೇ ತಾಳ್ತಜೆ ವಸಂತಕುಮಾರ ಅವರು ತಮ್ಮ 'ಸಾರಸ' ಕೃತಿಯಲ್ಲಿ 'ದಕ್ಷಿಣ ಕನ್ನಡದ ಕೆಲವು ಜಾನಪದ ಐತಿಹ್ಯಗಳು' ಎಂಬ ವಿಷಯದ ಮೇಲೆ ವಿಶ್ಲೇಷಣಾತ್ಮಕ ಲೇಖನವೊಂದನ್ನೇ ಬರೆದಿರುವುದು ಸಹ ಉಲ್ಲೇಖನೀಯ.

ಜಾನಪದ ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆಯವರು 'ಕರಾವಳಿ ಜಾನಪದ'ದಲ್ಲಿ 'ಐತಿಹ್ಯ: ಸ್ವರೂಪ, ಲಕ್ಷಣ ಮತ್ತು ಪ್ರಕಾರಗಳು' ಎಂಬ ತಮ್ಮ ಲೇಖನದಲ್ಲಿ ಐತಿಹ್ಯದ ಪದ ನಿಷ್ಪತ್ತಿ, ಅರ್ಥ, ಸ್ವರೂಪ, ಪ್ರಕಾರಗಳನ್ನು ನಿರ್ಧರಿಸುವಲ್ಲಿ ವಿದ್ವಾಂಸರ ವ್ಯಾಖ್ಯಾನಗಳನ್ನು ಉಲ್ಲೇಖಿಸಿ, ಐತಿಹ್ಯದ ಹುಟ್ಟು, ಬೆಳವಣಿಗೆ, ವಸ್ತುನಿಷ್ಟತೆ, ಚಾರಿತ್ರಿಕ ನೆಲೆ, ಸಾಂಸ್ಕೃತಿಕ ಪ್ರಜ್ಞೆಯ ಬಗೆಗೆ ಚರ್ಚಿಸಿದ್ದಾರೆ. ಇವರ ಮತ್ತೊಂದು ಲೇಖನ 'ಜಾನಪದ ವಿಚಾರ ಸಾಹಿತ್ಯ-ರ್ಗರ್ಭ' ಕೃತಿಯಲ್ಲಿಯೂ ಸಹ 'ಹುತ್ತಕ್ಕೆ ಹಾಲೆರೆಯುವ ಹಸು' ಎಂಬ ಐತಿಹ್ಯವನ್ನು ಕುರಿತ ಲೇಖನದಲ್ಲಿ ಹೇಗೆ ಒಂದು ಐತಿಹ್ಯವು ನಾಡಿನ ಇತರೆಡೆಗಳಲ್ಲಿ ತನ್ನ ರೂಪ-ಸ್ವರೂಪದಿಂದ ಭಿನ್ನವಾಗಿ ಗುರುತಿಸಿಕೊಂಡು ವಿಸ್ತೃತವಾಗುತ್ತದೆ ಎಂಬುದರ ಬಗೆಗೆ ಶೋಧನಾತ್ಮಕ ನೆಲೆಗಳಲ್ಲಿ ವಿಶ್ಲೇಷಿಸಿದ್ದಾರೆ.

'ಹಂಪಿ ಜಾನಪದ' ಕೃತಿಯಲ್ಲಿ ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು ಅವರು ಹಂಪಿ ಪರಿಸರದಲ್ಲಿನ ಐತಿಹ್ಯಗಳನ್ನು ಸಂಗ್ರಹಿಸಿ, ವ್ಯಕ್ತಿ, ಸ್ಥಳ, ಘಟನಾಪ್ರಧಾನ ಐತಿಹ್ಯಗಳೆಂದು ವಿಂಗಡಿಸಿರುವ ಅಧ್ಯಯನವು ಗಮನಾರ್ಹವಾದುದು. ವೃಷಭೇಂದ್ರಸ್ವಾಮಿ ಮತ್ತು

ಸೋಮಶೇಖರ ಇಮ್ರಾಪುರ ಅವರ ಸಂಪಾದಕತ್ವದ 'ಜನಪದ ಸಾಹಿತ್ಯ ದರ್ಶನ-೧೫' ಕೃತಿಯಲ್ಲಿ ಬಿ.ಎ. ವಿವೇಕ ರೈ ಅವರು 'ಪುರಾಣ-ಐತಿಹ್ಯ-ದಂತಕಥೆ: ಸಾಹಿತ್ಯ' ಕುರಿತ ತಮ್ಮ ಲೇಖನದಲ್ಲಿ ಪುರಾಣ ಮತ್ತು ಐತಿಹ್ಯಗಳ ಸಂಬಂಧವನ್ನು ಕುರಿತು ಚರ್ಚಿಸುತ್ತಾ, ಸಾಹಿತ್ಯ ಸೃಷ್ಟಿಗೆ ಕಾರಣವಾದ ಐತಿಹ್ಯಗಳನ್ನೂ ಉಲ್ಲೇಖಿಸಿ, ಅವುಗಳ ಪಾತ್ರವನ್ನು ಸ್ಪಷ್ಟಪಡಿಸಿದ್ದಾರೆ. ಐತಿಹ್ಯಗಳನ್ನು ಹೇಗೆ ಮನೋವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಬಹುದು ಎಂಬುದನ್ನು ವಿಶೇಷವಾಗಿ ಇಲ್ಲಿ ಚರ್ಚಿಸಿರುವುದುಂಟು.

ಕೆ. ಸಂಪದ್ಗಿರಿರಾವ್ ಅವರ ಸಂಪಾದನೆಯ 'ಕರ್ನಾಟಕದ ಪರಂಪರೆ'(ಭಾಗ-೧) ಕೃತಿಯಲ್ಲಿ ಕೆ.ಎಲ್. ಗೋಪಾಲಕೃಷ್ಣಯ್ಯ ಅವರು ಅನುವಾದಿಸಿರುವ(ಮೂಲ ಲೇಖಕರು: ಆರ್.ಎಸ್. ಪಂಚಮುಖಿ) 'ಐತಿಹ್ಯಗಳು ಮತ್ತು ಆಖ್ಯಾನಗಳು' ಎಂಬ ಲೇಖನದಲ್ಲಿಯೂ ಸಹ ಐತಿಹಾಸಿಕ ಎಳೆಗಳಿಂದ ಕೂಡಿದ ಐತಿಹ್ಯಗಳನ್ನು ವಿವೇಚಿಸಿರುವುದು ಗಮನ ಸೆಳೆಯುತ್ತದೆ.

'ನೇಗಿನಹಾಳ ಪ್ರಬಂಧಗಳು' ಎಂಬ ಕೃತಿಯಲ್ಲಿ ಎಂ.ಬಿ. ನೇಗಿನಹಾಳ ಅವರು 'ಎಲ್ಲಮ್ಮನ ಐತಿಹ್ಯಗಳು' ಎಂಬ ತಮ್ಮ ಲೇಖನದಲ್ಲಿ ಎಲ್ಲಮ್ಮನಿಗೆ ಸಂಬಂಧಿಸಿದ ಐತಿಹ್ಯಗಳನ್ನು ಆಧಾರವಾಗಿಟ್ಟು ಕೊಂಡು ಆ ದೇವತೆಯ ಪೂರ್ವಾಪರ ತಿಳಿಯುವ, ಗುರುತಿಸುವ ಪ್ರಯತ್ನವನ್ನು ಮಾಡಿರುವುದು ಅಧ್ಯಯನ ಯೋಗ್ಯವಾದುದು. ಕೊಟ್ಟಾರತ್ತಿಲ್ ಶಂಕುಣ್ಣಿ ಅವರು ಕೇರಳದಲ್ಲಿಯ ಐತಿಹ್ಯಗಳನ್ನು ಸಂಗ್ರಹಿಸಿ 'ಐತಿಹ್ಯ ಮಾಲೆ' ಎಂಬ ಹೆಸರಿನಲ್ಲಿ ಕೃತಿ ಪ್ರಕಟಿಸಿದರು. ಈ ಕೃತಿಯಲ್ಲಿಯ ಇಪ್ಪತ್ತು ಐತಿಹ್ಯಗಳನ್ನು ಬಿ.ಆರ್. ವೆಂಕಟರಮಣ ಐತಾಳ ಅವರು ಕನ್ನಡಕ್ಕೆ ಅನುವಾದಿಸಿ 'ಐತಿಹ್ಯ ಮಾಲೆಯ ಕಥೆಗಳು' ಎಂಬ ಕೃತಿಯನ್ನು ಹೊರತಂದಿದ್ದಾರೆ. ಇಲ್ಲಿನ ಅನೇಕ ಅಂಶಗಳು ಗಮನ ಸೆಳೆಯುತ್ತವೆ.

ದೇ. ಜವರೇಗೌಡ ಅವರು ತಮ್ಮ 'ಜಾನಪದ ಅಧ್ಯಯನ' ಕೃತಿಯಲ್ಲಿ 'ಐತಿಹ್ಯ-ಪುರಾಣ'ಗಳನ್ನು ಕುರಿತು ಚರ್ಚಿಸುತ್ತಾ, ಪುರಾಣ, ಐತಿಹ್ಯ ಹಾಗೂ ಕತೆಗಳ ನಡುವಿನ ವ್ಯತ್ಯಾಸವನ್ನು ಗುರುತಿಸಿ, ಅಲ್ಲಿನ ಸೂಕ್ಷ್ಮತೆಯ ಬಗೆಗೆ ಹೇಳುತ್ತಾ ಕೆಲವು ಐತಿಹ್ಯಗಳನ್ನು ಉಲ್ಲೇಖಿಸಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಐತಿಹ್ಯದ ಹುಟ್ಟು, ಬೆಳವಣಿಗೆ, ಸ್ವರೂಪ, ಆಶಯ, ಸಂಚಾರಿ ಗುಣದ ಬಗೆಗೂ ವಿವೇಚಿಸಿದ್ದಾರೆ. ಜವರೇಗೌಡರು ತಮ್ಮ ವಿಶ್ಲೇಷಣೆಗೆ ಹೆಚ್ಚಾಗಿ ವಿದೇಶಿ ಐತಿಹ್ಯಗಳನ್ನೇ ಆಧಾರವವನ್ನಾಗಿಸಿಕೊಂಡಿರುವ ಮಿತಿಗಳಿಗೂ ಒಳಪಟ್ಟಿದ್ದಾರೆ.

ವೀರಣ್ಣ ದಂಡೆಯವರು 'ಕನ್ನಡ ಜಾನಪದ ಪ್ರಜ್ಞೆ' ಎಂಬ ಕೃತಿಯಲ್ಲಿ 'ಕನ್ನಡ ಐತಿಹ್ಯಗಳು-ಒಂದು ಟಿಪ್ಪಣಿ' ಲೇಖನದಲ್ಲಿ ಕರ್ನಾಟಕ ಸಂದರ್ಭದ ಐತಿಹ್ಯಗಳ ಸಂಗ್ರಹದ ಪಟ್ಟಿಯನ್ನು ನೀಡುತ್ತಾ, ಕಥೆ, ಐತಿಹ್ಯ, ಪುರಾಣಗಳಲ್ಲಿರುವ ಅಂತರ್ ಭಿನ್ನತೆಗಳನ್ನು ಸ್ಪಷ್ಟಪಡಿಸಿ, ಚಾರಿತ್ರಿಕ ಐತಿಹ್ಯ, ಪೌರಾಣಿಕ ಐತಿಹ್ಯಗಳ ಕುರಿತಂತೆ ಉದಾಹರಣೆ ಸಹಿತ ವಿವರಿಸಿದ್ದಾರೆ.

ಲಕ್ಷ್ಮಣ್ ತೆಲಗಾವಿ ಅವರ ಸಂಪಾದಕತ್ವದಲ್ಲಿ 'ಹರತಿಸಿರಿ'(ಹೆಚ್.ವಿ. ವೀರನಾಯಕ ಹರತಿ ನೆನಪಿನ ಸಂಪುಟ) ಕೃತಿಯಲ್ಲಿ ವಿ. ಶಿವಾನಂದ ಅವರು 'ಗುಂಡ-ಬ್ರಹ್ಮಯ್ಯರ ಐತಿಹ್ಯ' ಕುರಿತ ಲೇಖನದಲ್ಲಿ ಸ್ಥಳ ಐತಿಹ್ಯಗಳ ಹಿನ್ನೆಲೆಯಲ್ಲಿ ಗುಂಡ-ಬ್ರಹ್ಮಯ್ಯರ ಐತಿಹ್ಯವನ್ನು ಪರಿಶೀಲಿಸಿದ್ದಾರೆ.

ಇದೇ ಕೃತಿಯ ಮತ್ತೊಂದು ಲೇಖನದಲ್ಲಿ ಸಂಧ್ಯಾರೆಡ್ಡಿ ಕೆ.ಆರ್. ಅವರು 'ಐತಿಹ್ಯಗಳ ಐತಿಹಾಸಿಕ ವಿಶ್ಲೇಷಣೆ' ಕುರಿತ ಲೇಖನದಲ್ಲಿ ಐತಿಹ್ಯದ ಅರ್ಥ, ಹುಟ್ಟು, ಬೆಳವಣಿಗೆ ಮತ್ತು ಪ್ರಕಾರಗಳನ್ನು ಕುರಿತಂತೆ ಚರ್ಚಿಸುತ್ತಾ, ಐತಿಹ್ಯಗಳ ವಿವರಣೆಗಳೊಂದಿಗೆ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ತೀ.ನಂ. ಶಂಕರನಾರಾಯಣ ಮತ್ತು ಎಂ.ಎಸ್. ವೆಂಕಟೇಶ ಅವರ ಸಂಪಾದಕತ್ವದಲ್ಲಿ 'ಜನಪದ ಸಾಹಿತ್ಯ ಪ್ರಕಾರಗಳು' ಕೃತಿಯಲ್ಲಿ ಎಂ. ಚಿದಾನಂದಮೂರ್ತಿಯವರ 'ಜನಪದ ಕಥೆ-ಐತಿಹ್ಯ-ಪುರಾಣ' ಕುರಿತ ವಿವರಣೆಯ ಲೇಖನವಿದೆ. ಡಿ. ಲಿಂಗಯ್ಯ ಮತ್ತು ಕೆ.ಆರ್. ಸಂಧ್ಯಾರೆಡ್ಡಿಯವರ 'ಜಾನಪದ: ಸಾಹಿತ್ಯ ಮತ್ತು ಸ್ವರೂಪ' ಕೃತಿಯಲ್ಲಿ 'ಐತಿಹ್ಯ ಮತ್ತು ಪುರಾಣ' ಕುರಿತ ಲೇಖನವಿದೆ. ಸಿಂಪಿ ಲಿಂಗಣ್ಣನವರ 'ಉತ್ತರ ಕರ್ನಾಟಕದ ಜನಪದ ಕಥೆಗಳು' ಸಂಕಲನದಲ್ಲಿಯ ಕೃತಿಯಲ್ಲಿ 'ವಾಸ್ತವ ಕಥೆಗಳು' ಲೇಖನವು ಐತಿಹ್ಯಗಳನ್ನು ಹೋಲುತ್ತವೆ. 'ಭಾರತೀಯ ಜಾನಪದ ಸಮೀಕ್ಷೆ' ಕೃತಿಯಲ್ಲಿ ಜಿ.ಎಸ್. ಶಿವರುದ್ರಪ್ಪನವರು 'ಐತಿಹ್ಯ' ಶೀರ್ಷಿಕೆಯಡಿ ಹಲವು ಐತಿಹ್ಯಗಳನ್ನು ಉಲ್ಲೇಖಿಸಿದ್ದಾರೆ. ವೀರಣ್ಣದಂಡೆ ಅವರ ಸಂಪಾದಕತ್ವದ 'ಜಾನಪದ: ೧೯೯೨' ಕೃತಿಯಲ್ಲಿ ವಿಜಯಕುಮಾರ ಸಾಲಿಮಠ ಅವರು 'ಮಹಾಲಕ್ಷ್ಮಿ ಬಾವಿ ಒಂದು ಐತಿಹ್ಯ' ಕುರಿತ ಲೇಖನದಲ್ಲಿ ೧೩ ವರ್ಷದ ಹುಡುಗಿ ಬಾವಿಗೆ ಹಾರವಾದ ಕಥೆಯನ್ನು ಒಳಗೊಂಡಿದೆ. ಕೆರೆಗೆಹಾರದ ಐತಿಹ್ಯದಂತೆ ಈ ಕಥೆಯು ಸಾಗಿಕೊಂಡು ಬಂದಿದೆ. ಬಸವರಾಜ ನೆಲ್ಲಿಸರ ಸಂಪಾದಕತ್ವದ 'ಜಾನಪದ: ೧೯೯೬' ಕೃತಿಯಲ್ಲಿ ರಂಗಾರೆಡ್ಡಿ ಕೋಡಿರಾಂಪುರ ಅವರು 'ಗೌರಿಬಿದನೂರು ಸುತ್ತಿನ ಸ್ಥಳನಾಮಗಳು' ಲೇಖನದಲ್ಲಿ ಅವುಗಳ ಜೊತೆ ಸ್ಥಳ ಐತಿಹ್ಯಗಳನ್ನು ಪರಿಶೀಲಿಸಿದ್ದಾರೆ. 'ಜಾನಪದ ದರ್ಶನ' ಕೃತಿಯಲ್ಲಿ ಗೊ.ರು. ಚನ್ನಬಸಪ್ಪ, ಬಿ. ರಾಮೇಗೌಡ ಮತ್ತು ಚಕ್ಕರೆಶಿವಶಂಕರ ಅವರುಗಳು 'ಪುರಾಣ ಮತ್ತು ಐತಿಹ್ಯ' ಲೇಖನದಲ್ಲಿ ಅವುಗಳ ಅಂತರ್‌ಸಂಬಂಧದ ಐತಿಹ್ಯಗಳನ್ನು ಚರ್ಚೆಗೆ ಒಳಪಡಿಸಿದ್ದಾರೆ. ಎನ್.ಎಮ್.ಎಲ್. ಲಕ್ಷ್ಮಣನ್ ಚೆಟ್ಟಿಯಾರ್ ಅವರ 'ತಮಿಳುನಾಡಿನ ಜಾನಪದ' ಕೃತಿಯಲ್ಲಿ 'ಐತಿಹ್ಯಗಳು ಮತ್ತು ಪುರಾಣಗಳು' ಎಂಬ ಲೇಖನವನ್ನು ಜೀ.ಶಂ. ಪರಮಶಿವಯ್ಯ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಎನ್.ಆರ್. ನಾಯಕ್ ಅವರು ತಮ್ಮ 'ಜಾನಪದ ಸಾಂಬಾರ ಬಟ್ಟಲು' ಕೃತಿಯಲ್ಲಿ 'ಸಾಧ್ವಿಯ ಕುರಿತಾಗಿರುವ ಐತಿಹ್ಯ ಹಾಗೂ ವದಂತಿಗಳು' ಕುರಿತು ಚರ್ಚಿಸಿದ್ದಾರೆ. ಬಸವರಾಜ ಪೊಲೀಸ್ ಪಾಟೀಲ ಅವರು ತಮ್ಮ 'ಜಾನಪದ ಚಿಂತನ' ಕೃತಿಯಲ್ಲಿ ಸ್ಥಳೀಯ ಐತಿಹ್ಯಗಳನ್ನು ಕುರಿತಂತೆ ಐತಿಹ್ಯದ ಹುಟ್ಟು, ಬೆಳವಣಿಗೆಯ ಜೊತೆಗೆ ಇತಿಹಾಸದಲ್ಲಿ ಅವುಗಳ ಸ್ಥಾನಮಾನಗಳನ್ನು ಕುರಿತಂತೆ ಚರ್ಚಿಸಿದ್ದಾರೆ.

ಶ್ರೀರಾಮ ಇಟ್ಟಣ್ಣವರ ಅವರು ತಮ್ಮ 'ಹಲಗಲಿ: ಗ್ರಾಮ ಜಾನಪದ' ಕೃತಿಯಲ್ಲಿ 'ಪುರಾಣ-ಐತಿಹ್ಯ-ಇತಿಹಾಸ' ಕುರಿತ ಚರ್ಚೆಯಲ್ಲಿ ಹಲಗಲಿ ಪರಿಸರದ ಐತಿಹ್ಯಗಳನ್ನು ಬಳಸಿಕೊಂಡಿದ್ದಾರೆ. ಎ. ಸುಬ್ಬಣ್ಣ ರೈ ಅವರು ತಮ್ಮ 'ಗಾಳೆಮ್ಮ', 'ಕದ್ರಿ'' ಕೃತಿಗಳಲ್ಲಿ ದೇವತೆಗಳ ಬಗೆಗಿನ ಐತಿಹ್ಯಗಳನ್ನು ಕುರಿತು ವಿಶ್ಲೇಷಿಸಿದ್ದಾರೆ.

ಐತಿಹ್ಯಗಳ ಬಗೆಗೆ ಬಿಡಿ ಲೇಖನಗಳು ಸಾಕಷ್ಟು ಪ್ರಮಾಣದಲ್ಲಿದ್ದರೂ ಕೂಡ ಒಂದು ಪ್ರದೇಶದ ಐತಿಹ್ಯಗಳನ್ನು ಸಂಗ್ರಹಿಸಿ ಬಹುಮುಖಿ ಆಯಾಮಗಳೊಂದಿಗೆ ಸಂಶೋಧನೆಗೆ ಒಳಪಡಿಸಿದ್ದು ತೀರ ಕಡಿಮೆ ಅಥವಾ ಇಲ್ಲ ಅನ್ನುವಷ್ಟು. ಐತಿಹ್ಯಗಳಿಂದ ಆಯಾ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಮತ್ತು ಚರಿತ್ರೆಗೆ ಆಕರಗಳಾಗಿ ಬಳಸಿಕೊಳ್ಳಬೇಕೆನ್ನುವ ಸಂಶೋಧನಾ ಅಧ್ಯಯನಗಳು ವಿಶ್ವವಿದ್ಯಾಲಯ ಮಟ್ಟದಲ್ಲಿ ತೀರ ಇತ್ತೀಚೆಗೆ ನಡೆಯುತ್ತಿವೆ.

ಎಸ್.ಎಸ್. ಭದ್ರಾಪುರ ಅವರು 'ಉತ್ತರ ಕರ್ನಾಟಕದ ಜಾನಪದ ಐತಿಹ್ಯಗಳು' ಎಂಬ ವಿಷಯ ಕುರಿತು ಮಹಾಪ್ರಬಂಧ ಸಿದ್ಧಪಡಿಸಿ ೧೯೯೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಎ. ಸುಬ್ಬಣ್ಣ ರೈ ಅವರು 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' ಎಂಬ ವಿಷಯ ಕುರಿತ ಮಹಾಪ್ರಬಂಧವನ್ನು ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ೧೯೯೨ರಲ್ಲಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಶಂಕರಬಾಳಿ ಅವರು ೨೦೦೨ರಲ್ಲಿ 'ಗುಲಬರ್ಗಾ ಜಿಲ್ಲೆಯ ಜನಪದ ಐತಿಹ್ಯಗಳು' ಕುರಿತು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಎ. ಕರಿಬಸಪ್ಪ ಅವರು 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಕುರಿತು ೨೦೦೩ರಲ್ಲಿ, ಎಲ್. ಲಕ್ಷ್ಮೀದೇವಿ ಅವರು 'ಕೋಲಾರ ಜಿಲ್ಲೆಯ ಐತಿಹ್ಯಗಳು' ಎಂಬ ವಿಷಯ ಕುರಿತು ೨೦೦೬ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದುಕೊಂಡಿದ್ದಾರೆ.

ವೀರಣ್ಣ ಅವರು ೧೯೯೨ರಲ್ಲಿ 'ಕನ್ನಡ ಕವಿಗಳ ಮೇಲಿನ ಐತಿಹ್ಯಗಳು' ಕುರಿತು ಎಂ.ಫಿಲ್. ಪದವಿಗಾಗಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ್ದಾರೆ. ಬೇಬಿ ಅವರು ೨೦೦೭ರಲ್ಲಿ 'ಬೀದರ್ ಕೋಟೆಯ ಐತಿಹ್ಯಗಳು', ಕೆ.ಎಲ್. ಪ್ರಸನ್ನ ಅವರು ೨೦೦೮ರಲ್ಲಿ 'ತೀರ್ಥಹಳ್ಳಿ ತಾಲ್ಲೂಕಿನ ಸುತ್ತಮುತ್ತಲಿನ ಐತಿಹ್ಯಗಳು', ಗಿರಿಯಪ್ಪ ಡಿ. ಜೋಗಣ್ಣವರ ಅವರು ೨೦೦೮ರಲ್ಲಿ 'ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ', ಅಯ್ಯಾಳಿ ಯರಿಸ್ವಾಮಿ ಅವರು ೨೦೧೦ರಲ್ಲಿ 'ಹಂಪಿ ಪರಿಸರದ ಐತಿಹ್ಯಗಳು: ಚಾರಿತ್ರಿಕ ವಿಶ್ಲೇಷಣೆ', ಬಸವರಾಜ.ಸಿ. ಅವರು 'ಚಿತ್ರದುರ್ಗ ಕೋಟೆಯ ಐತಿಹ್ಯಗಳು', ೨೦೧೦ರಲ್ಲಿ ಈ ಎಲ್ಲಾ ನಿಬಂಧಗಳು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ನಿಬಂಧಗಳಾಗಿವೆ. ಇವು ಈವರೆಗೆ ಐತಿಹ್ಯಗಳ ಕುರಿತು ನಡೆದ ಸಂಶೋಧನೆಗಳಾಗಿವೆ.

ಈ ಎಲ್ಲಾ ಸಂಶೋಧನಾ ಪ್ರಬಂಧಗಳು ಆಯಾ ಪ್ರದೇಶದಲ್ಲಿ ಪ್ರಚಲಿತದಲ್ಲಿರುವ ಐತಿಹ್ಯಗಳಿಂದ ಅಲ್ಲಿಯ ಭೌಗೋಳಿಕ ಪರಿಸರ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿವೆ. ಅಲ್ಲದೇ ಚರಿತ್ರೆ ರಚನೆಗೆ ಐತಿಹ್ಯಗಳು ಆಕರಗಳಾಗಬಲ್ಲವು ಎಂಬುದನ್ನು ವಿವೇಚನೆಗೆ ಒಳಪಡಿಸಿವೆ. ಆದರೆ ಹೊಸಪೇಟೆ ಐತಿಹ್ಯಗಳನ್ನು ಹೊರತುಪಡಿಸಿದ, ವಿಶ್ಲೇಷಣೆಗಳ ಕೊರತೆಯನ್ನು ಹೊಂದಿದೆ. ಅಲ್ಲದೆ ಪ್ರಸ್ತುತ ಮಹಾಪ್ರಬಂಧದ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೊಸಪೇಟೆ ತಾಲೂಕಿನ ಐತಿಹ್ಯಗಳ ಕುರಿತು ಅಲ್ಲಲ್ಲಿ ಬಿಡಿ ಲೇಖನಗಳ ರೂಪದಲ್ಲಿ ಒಂದಷ್ಟು ಕೆಲಸ ನಡೆದಿರುವುದನ್ನು ಬಿಟ್ಟರೆ, ಸಮಗ್ರ ಸಂಗ್ರಹದಂತಹ ಕೆಲಸ ಇದುವರೆಗೂ ನಡೆದಿಲ್ಲ. ಸಾಹಿತ್ಯ ಹಾಗೂ ಜಾನಪದ ಜ್ಞಾನಶಾಖೆಗಳ ಹಿನ್ನೆಲೆಯಿಂದ ನಡೆಸಲಾದ ಅಧ್ಯಯನಗಳನ್ನು

ಪರಿಶೀಲಿಸಿ ಚರಿತ್ರೆಯ ನೆಲೆಗಳಿಂದಲೂ ಅಭ್ಯಾಸ ಮಾಡಬಹುದಾದ ಸಾಧ್ಯತೆಗಳ ಕಡೆಗೆ ಇಲ್ಲಿ ಗಮನಹರಿಸಲಾಗಿದೆ. ಇಂಥ ಅನೇಕ ಕೊರತೆಗಳನ್ನು ನೀಗಿಸುವ ಹಾಗೂ ಐತಿಹ್ಯಗಳ ವಿಮರ್ಶೆ, ವಿಶ್ಲೇಷಣೆಗಳ ಮೂಲಕ ಫಲಿತಗಳನ್ನು ಕಟ್ಟಿಕೊಡುವ ಸಣ್ಣ ಪ್ರಯತ್ನವೇ ಈ ಮಹಾಪ್ರಬಂಧ.

## ೧.೩. ಅಧ್ಯಯನದ ವ್ಯಾಪ್ತಿ ಮತ್ತು ಮಿತಿಗಳು

ಸ್ಥಳೀಯ ಚರಿತ್ರೆಯ ಅಧ್ಯಯನದ ಹಿನ್ನೆಲೆಯಲ್ಲಿ ಹೊಸಪೇಟೆ ತಾಲೂಕಿನ ಐತಿಹ್ಯಗಳನ್ನು ಒಳಗೊಂಡಂತೆ ಸಾಂಸ್ಕೃತಿಕ ಒಳನೋಟಗಳನ್ನು ಹೆಕ್ಕಿ ತೆಗೆಯುವುದು ಇಲ್ಲಿನ ಆಶಯವಾಗಿರುತ್ತದೆ. ಈ ಅಧ್ಯಯನಕ್ಕೆ ತನ್ನದೇ ಆದ ಕಾರ್ಯಕ್ಷೇತ್ರವಿದೆ. ತಾಲೂಕಿನ ನಾಲ್ಕು ಹೋಬಳಿಗಳಾದ ಹೊಸಪೇಟೆ, ಕಮಲಾಪುರ, ಕಂಪ್ಲಿ ಹಾಗೂ ಮರಿಯಮ್ಮನಹಳ್ಳಿ ಹೋಬಳಿಗಳಿಗೆ ಸಂಬಂಧಿಸಿದಂತೆ ಎಂಬತ್ತಕ್ಕೂ ಹೆಚ್ಚಿನ ಗ್ರಾಮಗಳ ಐತಿಹ್ಯಗಳನ್ನಲ್ಲದೆ, ಹಂಪಿಯ ಪರಿಸರದ ಭಾಗವೇ ಆಗಿರುವ ಆನೆಗೊಂದಿ ಹಾಗೂ ಹನುಮನಹಳ್ಳಿ(ಪ್ರಸ್ತುತ ಗಂಗಾವತಿ ತಾಲೂಕಿಗೆ ಸೇರಿವೆ.)ಗಳಂಥ ಪರಿಸರವನ್ನೂ ಕಾರ್ಯಕ್ಷೇತ್ರವಾಗಿ ಒಳಪಡಿಸಿಕೊಳ್ಳಲಾಗಿದೆ. ಸಾಂಸ್ಕೃತಿಕವಾಗಿ ಮತ್ತು ಪೌರಾಣಿಕವಾಗಿ ಅನೇಕ ಐತಿಹ್ಯಗಳು ತಾಲೂಕು ಪರಿಸರದ ಜೊತೆ ತಳಕು ಹಾಕಿಕೊಂಡಿರುವುದರಿಂದ ಅವುಗಳನ್ನೂ ಸಹ ಇಲ್ಲಿ ಪರಿಶೀಲಿಸಲಾಗಿದೆ. ಐತಿಹ್ಯಗಳೊಂದಿಗೆ ಅಂತರ್‌ಸಂಬಂಧ ಹೊಂದಿರುವ ಪವಾಡ, ಸ್ಥಳನಾಮ, ಸ್ಥಳಪುರಾಣ ಮುಂತಾದ ಕ್ಷೇತ್ರಗಳನ್ನು ಸಹ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಮೌಖಿಕ ಪರಂಪರೆಯನ್ನೇ ಪ್ರಧಾನವನ್ನಾಗಿಸಿಕೊಳ್ಳುವ ಈ ಅಧ್ಯಯನವು 'ಕಾಲ್ಪನಿಕ' ಕಥೆಗಳಿಗೆ ಎಡೆಮಾಡಿಕೊಡುವ ಸಾಧ್ಯತೆಯೇ ಹೆಚ್ಚು. ಹೀಗಾಗಿ 'ನೈಜ ಚರಿತ್ರೆ'ಯ ಪುನಾರ್ರಚನೆಗೆ ಧಕ್ಕೆ ಆಗುವ ಸಾಧ್ಯತೆಗಳು ಇಲ್ಲದಿಲ್ಲ. ಆದ್ದರಿಂದ ಇಂಥ ಮಿತಿಗಳ ಎಚ್ಚರಿಕೆಯ ನಡುವೆಯೇ ಲಿಖಿತ ದಾಖಲೆಗಳನ್ನು ಸಹ ತೌಲನಿಕವಾಗಿ ಜಾಗರೂಕತೆಯಿಂದ ಪರಿಶೀಲಿಸಲಾಗಿದೆ. ಅಂತೆಯೇ ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಸಹ ಮಾಡಲಾಗಿದೆ.

ಐತಿಹ್ಯಗಳು ಬಹುಮುಖಿ ಆಯಾಮಗಳನ್ನು ಹೊಂದಿರುವುದರಿಂದ ಅವುಗಳನ್ನು ಭಾಷೆ, ಸಾಹಿತ್ಯ, ಧರ್ಮ, ಸಮಾಜ, ಚರಿತ್ರೆ ಹಾಗೂ ಮನಃಶಾಸ್ತ್ರೀಯ ನೆಲೆಗಳ ಅಧ್ಯಯನಕ್ಕೂ ಒಳಪಡಿಸಲಾಗಿದೆ. ಪ್ರಸ್ತುತ ಅಧ್ಯಯನವು ಹೊಸಪೇಟೆ ತಾಲೂಕಿನ ಸಾಂಸ್ಕೃತಿಕ ಚರಿತ್ರೆಯ ಪ್ರಾಧ್ಯಾನತೆಯೊಂದಿಗೆ, ಪ್ರಾತಿನಿಧಿಕವಾದ ಪ್ರಾಕೃತಿಕ ಪರಿಸರ ಹಾಗೂ ಐತಿಹಾಸಿಕ ಚರಿತ್ರೆಯನ್ನು ಕಟ್ಟಿಕೊಡುವಂಥದ್ದು. ಈ ಮಿತಿಗಳಲ್ಲಿಯೇ ತಾಲೂಕಿನ ಐತಿಹ್ಯಗಳಲ್ಲಿ ವ್ಯಕ್ತವಾಗಿರುವ ನಂಬಿಕೆ, ಸಂಪ್ರದಾಯ, ಹಬ್ಬಗಳು, ಗ್ರಾಮದೇವತೆಗಳು, ಆಚರಣೆಗಳು ಮುಂತಾದವುಗಳ ಆಧಾರದಿಂದ ಇಲ್ಲಿನ ಜನರ ಸಾಮಾಜಿಕ ಬದುಕು, ಧಾರ್ಮಿಕ ಮನಸ್ಥಿತಿ, ಆರ್ಥಿಕ ಸ್ಥಿತಿಗತಿ, ಚಾರಿತ್ರಿಕ ಹಿನ್ನೆಲೆ, ಪೌರಾಣಿಕ ಕಲ್ಪನೆ ಹಾಗೂ ಪ್ರಾಕೃತಿಕ ಚಿಂತನೆಗಳ ಮುಖೇನ ಒಳನೋಟಗಳನ್ನು ಹೊಂದುವ ಆಶಯ ಇಲ್ಲಿನದು.

## ೧.೪. ಅಧ್ಯಯನದ ವಿಧಿ-ವಿಧಾನ

ಈ ಅಧ್ಯಯನವು ಚರಿತ್ರೆಯ ಆಕರಗಳನ್ನಾಗಿ ಐತಿಹ್ಯಗಳನ್ನೇ ಬಳಸಿಕೊಂಡಿದೆ. ಹೀಗಾಗಿ ಐತಿಹ್ಯಗಳ ಸಂಗ್ರಹ ಕಾರ್ಯ ಪ್ರಧಾನವಾದದ್ದು. ಈ ಸಂಗ್ರಹಕ್ಕೆ ಪ್ರಶ್ನಾವಳಿಗಳ ಮೂಲಕ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಗಿದೆ. ದೊರೆತ ಐತಿಹ್ಯಗಳನ್ನು ಕ್ರಮಬದ್ಧವಾಗಿ ವರ್ಗೀಕರಿಸಿಕೊಂಡು

ವೈಜ್ಞಾನಿಕವಾಗಿ ಪರಿಶೀಲಿಸಿ ವಿಶ್ಲೇಷಿಸಲಾಗಿದೆ. ಅಲ್ಲದೇ ಮೌಖಿಕ ರೂಪದ ಆಕರಗಳನ್ನು ಈಗಾಗಲೇ ಲಭ್ಯವಿರುವ ಲಿಖಿತ ದಾಖಲೆಗಳೊಂದಿಗೆ ತೌಲನಿಕವಾಗಿ ನೋಡಲಾಗಿದೆ. ಈ ಹಿನ್ನೆಲೆಯಲ್ಲಿ ಚರಿತ್ರೆಯ ವಿಧಿ-ವಿಧಾನಗಳನ್ನೇ ಹೆಚ್ಚಾಗಿ ಬಳಸಿಕೊಂಡಿರುವುದು ಗಮನಾರ್ಹ. ಮೌಖಿಕ ಪರಂಪರೆಯಲ್ಲಿನ 'ಕಾಲ್ಪನಿಕ ಸಂಗತಿ'ಗಳನ್ನು ಸೋಸಿ 'ವಾಸ್ತವಿಕ ಚರಿತ್ರೆ'ಗೆ ಪೂರಕ ಹಾಗೂ ಹತ್ತಿರವಾಗುವ ಅಂಶಗಳ ಪುನರ್ರಚನೆಗೆ ಪ್ರಯತ್ನಿಸಲಾಗಿದೆ.

ಕೆಲವು ಕಡೆ ನಿರೂಪಕರನ್ನು ಸಂದರ್ಶಿಸಿ ವ್ಯಕ್ತಿ-ಸ್ಥಳ-ಘಟನೆ ಮೊದಲಾದ ವಿಚಾರಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳನ್ನು ಸಂಗ್ರಹಿಸಿಕೊಳ್ಳಲಾಯಿತು. ಒಂದೇ ವಿಚಾರಕ್ಕೆ ಹಲವು ಐತಿಹ್ಯಗಳ ನಿರೂಪಣೆಗಳು ದೊರೆಯುವ ಸಾಧ್ಯತೆಗಳಿದಿದ್ದರಿಂದ ಭಿನ್ನತೆಗಳು ಕಂಡು ಬರುವುದು ಸಹಜ. ಇಂಥ ಭಿನ್ನತೆಗಳನ್ನು ಸರಿಯಾಗಿ ಪರಿಶೀಲಿಸಿ, ತಾಳೆ ನೋಡಿ, ಪ್ರಮಾಣೀಕರಿಸಿಕೊಂಡು ಮುಂದುವರೆಯಲಾಗಿದೆ. ಈ ಅಧ್ಯಯನದಲ್ಲಿ ವಿವಿಧ ಸಮಾಜ ಹಾಗೂ ಸಂಸ್ಕೃತಿಗಳೇ ಪ್ರಧಾನವಾಗಿರುತ್ತವೆ. ಅಂತೆಯೇ ಚರಿತ್ರೆ ಜ್ಞಾನಶಾಖೆಯ ವಿಧಿ-ವಿಧಾನಗಳೂ ಸಹ ಪ್ರಧಾನ. ಆದರೂ ಈ ಅಧ್ಯಯನವು ಚರಿತ್ರೆ-ಜಾನಪದ-ಮಾನವಶಾಸ್ತ್ರ ಮೊದಲಾದ ಸಮಾಜ ವಿಜ್ಞಾನಗಳಿಗೆ ಅನ್ವಯವಾಗುವ ವಿಧಿ-ವಿಧಾನಗಳನ್ನು ಬಳಸಿಕೊಂಡಿದೆ. ಚರಿತ್ರೆಯ ರಚನೆ, ಪುನರ್ರಚನೆ, ವಿಮರ್ಶೆ, ವಿಶ್ಲೇಷಣೆ ಹಾಗೂ ವ್ಯಾಖ್ಯಾನಗಳ ಕಡೆಗೂ ಗಮನಹರಿಸಿರುವುದು ಇಲ್ಲಿನ ವಿಶೇಷತೆ. ಒಟ್ಟಾರೆ ಇತಿಹಾಸ ಜ್ಞಾನಶಿಸ್ತಿನ ವೈಧಾನಿಕತೆಯನ್ನೇ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ.

### ೧.೫. ಅಧ್ಯಯನದ ಸ್ವರೂಪ

ಸಂಸ್ಕೃತಿ ಕೇಂದ್ರಿತ ಪ್ರಸ್ತುತ ಅಧ್ಯಯನವು ಬಹುಮುಖಿ ಚರಹರೆಗಳನ್ನೊಳಗೊಂಡ ಐತಿಹ್ಯಗಳನ್ನು ಮಾತ್ರ ಪ್ರಧಾನವಾಗಿ ಪರಿಗಣಿಸಿದರೂ, ಇನ್ನುಳಿದ ಮೌಖಿಕ ಸಾಹಿತ್ಯಿಕ ಪ್ರಕಾರದ ಆಕರಗಳನ್ನು ಕಡೆಗಣಿಸಲು ಸಾಧ್ಯವಿಲ್ಲ. ಅವುಗಳಲ್ಲಿ ಕಾವ್ಯ-ಕಥನಕಾವ್ಯ-ಲಾವಣಿ-ಪುರಾಣ-ತ್ರಿಪದಿ-ಹಾಡು-ಗಾದೆ ಮತ್ತು ಒಗಟುಗಳು ಪ್ರಧಾನವಾದವು. ಅಂತೆಯೇ ಲಿಖಿತ ರೂಪದ ಬಖೈರು, ಕೈಫಿಯತ್ತು, ಶಾಸನಗಳಂಥ ಮೊದಲಾದ ಆಕರಗಳನ್ನು ಸಹ ಇಲ್ಲಿ ಬಳಸಿಕೊಳ್ಳಲಾಗಿದೆ. ಇವೆಲ್ಲವುಗಳನ್ನು ಆಧಾರವನ್ನಾಗಿಸಿಕೊಂಡು ವ್ಯಕ್ತಿ-ಸ್ಥಳ-ಘಟನೆ ಮೊದಲಾದವುಗಳನ್ನು ಕುರಿತಂತೆ ಈ ಅಧ್ಯಯನದ ಸ್ವರೂಪವನ್ನು ಗುರುತಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಹೊಂದಿದೆ.

**ಮೊದಲನೆಯ ಅಧ್ಯಾಯ**ದಲ್ಲಿ ಅಧ್ಯಯನದ ಹಿನ್ನೆಲೆ, ಆಶಯ ಹಾಗೂ ಜರೂರು ಯಾವ ಥರದ್ದು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಈ ಅಧ್ಯಯನದಲ್ಲಿನ ಸಮಸ್ಯೆ ಹಾಗೂ ಕುತೂಹಲಗಳಿಗೆ ಉತ್ತರಗಳನ್ನು ಕಂಡುಕೊಳ್ಳುವುದು ಬಹಳ ಮುಖ್ಯವಾದುದು. ಅಂತೆಯೇ ಇಂಥ ಅಧ್ಯಯನಕ್ಕೆ ಒಪ್ಪುವ ಚರಿತ್ರೆಯ ವಿಧಾನಗಳನ್ನು ಅಳವಡಿಸಿಕೊಳ್ಳುವುದು ಸಹ. ಯಾವ ರೀತಿ, ಹೇಗೆ ವಿಶ್ಲೇಷಣೆ - ವ್ಯಾಖ್ಯಾನಗಳನ್ನು ಅಳವಡಿಸಿಕೊಳ್ಳಲು ಸಾಧ್ಯ ಎಂಬುದನ್ನು ಅಧ್ಯಯನದ ಸ್ವರೂಪದಲ್ಲಿ ನಿರ್ಧರಿಸಿಕೊಂಡು ಅಭ್ಯಾಸ ಮಾಡಲಾಗಿದೆ.

**ಎರಡನೆಯ ಅಧ್ಯಾಯ**ದಲ್ಲಿ ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು - ಬೆಳವಣಿಗೆ ಹಾಗೂ ಪ್ರಕಾರಗಳನ್ನು ಕುರಿತಂತೆ ಅವುಗಳಲ್ಲಿ ಮುಖ್ಯವಾಗಿ ವ್ಯಕ್ತಿಪ್ರಧಾನ ಐತಿಹ್ಯಗಳು, ಸ್ಥಳಪ್ರಧಾನ

ಐತಿಹ್ಯಗಳು ಮತ್ತು ಘಟನಾಪ್ರಧಾನ ಐತಿಹ್ಯಗಳೆಂದು ವಿಭಜಿಸಿಕೊಂಡು ವಿಮರ್ಶಾತ್ಮಕ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

**ಮೂರನೆಯ ಅಧ್ಯಾಯ**ವು 'ಸ್ಥಳಪ್ರಧಾನ ಐತಿಹ್ಯಗಳು' ಎಂಬ ಶೀರ್ಷಿಕೆಯಲ್ಲಿ ಪ್ರಾಕೃತ, ಭೌಗೋಳಿಕ ಇಲ್ಲವೆ ಪ್ರಾದೇಶಿಕ ವೈಶಿಷ್ಟ್ಯ, ಸ್ವರೂಪಗಳ ಕಾರಣದಿಂದ ನಿರ್ದಿಷ್ಟ ಸ್ಥಳವೊಂದರಲ್ಲಿ ಘಟಿಸಿದ ವಿಶಿಷ್ಟ ಘಟನೆಗಳಲ್ಲಿ ಸ್ಥಳಕ್ಕೆ ಮಹತ್ವ ಇರುತ್ತದೆ. ಇಂತಹ ಐತಿಹ್ಯಗಳು ಪ್ರಧಾನವಾಗಿ ವ್ಯಕ್ತಿನಿಷ್ಠವಾದವುಗಳು. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ, ಸ್ಥಳಕ್ಕೆ ಹೆಚ್ಚಿನ ಮಹತ್ವ ಸಂದಾಯವಾಗುತ್ತದೆ. ಜೊತೆಗೆ ಪವಾಡಗಳು, ಸ್ಥಳ ಪುರಾಣಗಳು, ಸ್ಥಳ ನಾಮಗಳು, ನಂಬಿಕೆಗಳು ಮತ್ತು ಕೆರೆ-ಬಾವಿಗಳಿಗೆ ಸಂಬಂಧಿಸಿದ ಐತಿಹ್ಯಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯ**ವು 'ವ್ಯಕ್ತಿಪ್ರಧಾನ ಐತಿಹ್ಯ'ಗಳಿಗೆ ಸಂಬಂಧಿಸಿದ್ದು. ಇದರಲ್ಲಿ ವಿಶಿಷ್ಟನಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳು ಈ ವ್ಯಕ್ತಿಯ ಸಾಧನೆಗೆ ಹೇಗೆ ಪೋಷಕವಾಗಿಯೇ ಬರುತ್ತವೆ ಎಂಬುದನ್ನು ಪರಿಶೀಲಿಸಲಾಗಿದೆ. ವ್ಯಕ್ತಿಯೊಬ್ಬ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಆ ಸ್ಥಳದ ಮಹತ್ವಿಕೆಯನ್ನು ಮೀರಿ ಅವನ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಇಂತಹ ಐತಿಹ್ಯಗಳನ್ನು 'ಪೌರಾಣಿಕ ವ್ಯಕ್ತಿ' ಮತ್ತು 'ಐತಿಹಾಸಿಕ ವ್ಯಕ್ತಿ' ಕೇಂದ್ರಿತ ಐತಿಹ್ಯಗಳನ್ನಾಗಿ ವರ್ಗೀಕರಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಐದನೆಯ ಅಧ್ಯಾಯ**ವು 'ಘಟನಾಪ್ರಧಾನ ಐತಿಹ್ಯ'ಗಳನ್ನು ಕುರಿತದ್ದು. ಈ ಶೀರ್ಷಿಕೆಯಲ್ಲಿ ಘಟನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಐತಿಹ್ಯಗಳ ಬಗೆಗೆ ಚರ್ಚಿಸಲಾಗಿದೆ. ಇಲ್ಲಿ ಒಂದು ನಿರ್ದಿಷ್ಟ ಘಟನೆಯೇ ಪ್ರಧಾನವಾಗಿದ್ದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಹಲವು ಬಾರಿ ಒಬ್ಬ ವ್ಯಕ್ತಿಯೇ ಇರುವುದಕ್ಕೆ ಬದಲಾಗಿ ಜನರ ಗುಂಪು ಅಥವಾ ಜನ ಸಮೂಹಗಳೂ ಕಾಣಿಸಿಕೊಳ್ಳುವುದು ಉಂಟು. ಇಂಥ ಐತಿಹ್ಯಗಳ ಜೊತೆಗೆ ಗ್ರಾಮದೇವತೆಗಳು, ಹಬ್ಬಗಳು ಮತ್ತು ಆಚರಣೆಗಳ ಕುರಿತಾದ ಐತಿಹ್ಯಗಳನ್ನು ವಿಶ್ಲೇಷಿಸುವುದರೊಂದಿಗೆ ತಾಲೂಕಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

**ಆರನೆಯ ಅಧ್ಯಾಯ**ವು 'ಫಲಿತಗಳ ಸಮಾರೋಪ'ವಾಗಿದ್ದು, ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹಾಗೂ ತಳೆದಂಥ ನಿಲುವುಗಳನ್ನು ಕುರಿತು ದಾಖಲಿಸುವಂಥದ್ದಾಗಿದೆ. ಉಳಿದಂತೆ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ನಾಲ್ಕು ಅನುಬಂಧಗಳಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃಗಳ ವಿವರ, ಗ್ರಾಮಗಳ ವಿವರ ಹಾಗೂ ಛಾಯಾಚಿತ್ರ ಇತ್ಯಾದಿಗಳನ್ನು ಸಂಯೋಜಿಸಲಾಗಿದೆ.



ಅಧ್ಯಾಯ : ಎರಡು

# ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು-ಬೆಳವಣಿಗೆ ಹಾಗೂ ಪ್ರಕಾರಗಳು

# ಅಧ್ಯಾಯ : ಎರಡು

# ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು-ಬೆಳವಣಿಗೆ ಹಾಗೂ ಪ್ರಕಾರಗಳು

## ೨.೧. ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು-ಬೆಳವಣಿಗೆ

'ಇತಿ', 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯ'ವು ನಿಷ್ಪನ್ನವಾಗಿದ್ದು ಈ ಶಬ್ದ ರೂಪಗಳಿಗೆ 'ಹೀಗೆ', 'ಹೀಗಿತ್ತು', 'ಹೀಗೆ ನಡದದ್ದು' ಎಂಬಿತ್ಯಾದಿ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ನಿರೂಪಕ ರಲ್ಲಿರುತ್ತದೆ. ಈ ಅಂಶವನ್ನು ಮನಗಂಡೇ ಅನೇಕ ವಿದ್ವಾಂಸರು ಇಂಥ ವಿಶಿಷ್ಟ ಪ್ರಕಾರವನ್ನು 'ಐತಿಹ್ಯ'ವೆಂದು ಕರೆದಿದ್ದಾರೆ.

ಪ್ರಾಚೀನ ಕಾಲದಿಂದಲೂ ಕೆಲವು ಸಂಗತಿಗಳು ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯಗಳು ರೂಪುಗೊಂಡಿರುತ್ತವೆ. ಅಂದರೆ ಐತಿಹ್ಯಗಳು ವ್ಯಕ್ತಿ, ಸ್ಥಳ ಅಥವಾ ಘಟನೆಗಳ ವಾಸ್ತವ ಅಥವಾ ಅವಾಸ್ತವ ನಂಬಿಕೆಗಳನ್ನೊಳಗೊಂಡ ಕಥನಗಳು ಅಥವಾ 'ನಡೆದ ಘಟನೆಗಳ ಪಳೆಯುಳಿಕೆ'ಗಳು ಎನ್ನಬಹುದು.

'ಐತಿಹ್ಯ'ವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಈ ಹಿಂದೆ ವಾಸ್ತವವಾಗಿ ನಡೆದಿರಲೇಬೇಕು ಎಂಬ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಬದಲಾಗಿ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ-ಸಂಬಂಧ ಕಂಡು ಬರಬಹುದು. ಇನ್ನೂ ಕೆಲವು ಬಾರಿ ಇವೆರೆಡು ತೀರಾ ವ್ಯತ್ಯಾಸವೇ ಆಗಿ ಕಾಣಬಹುದು. ಅಂದರೆ 'ಐತಿಹ್ಯ'ವೆಂದು ನಾವಿಂದು ತಿಳಿಯುವ ಈ ಜನಪದ ಇತಿಹಾಸವು ನೈಜ ಘಟನೆಗಳ ನಿರೂಪಣೆಯಾಗಿರಬಹುದು ಅಥವಾ ಕಲ್ಪಿತ ಅಂಶಗಳ ನಿರೂಪಣೆಯಾಗಿರಲೂಬಹುದು. ಕೆಲವು ಐತಿಹ್ಯಗಳಲ್ಲಿ ನಡೆದ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹಬ್ಬಿಕೊಂಡಿರುತ್ತವೆ.

ಹಿಂದೆ ನಡೆದ, ನಡೆದಿರಬಹುದಾದ ಕೇಳಿದ ಘಟನೆಯೊಂದರ ಮರುಹುಟ್ಟು ಇದಾಗಿದ್ದರೂ ಈ ಹೊತ್ತಿನ ಇತಿಹಾಸ ರಚನೆಗೆ ಒಂದು ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.

'ಐತಿಹ್ಯ' ಎಂಬ ಪದವನ್ನು ಆಂಗ್ಲ ಭಾಷೆಯ 'ಲೆಜೆಂಡ್' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'ಲೆಜೆಂಡ್' ಎಂಬ ಪದವು ಮೂಲತಃ ಲ್ಯಾಟಿನ್ ಭಾಷೆಯದ್ದು. ಅಲ್ಲಿ ಇದಕ್ಕೆ 'ಥಿಂಕ್ಸ್ ಟು ಬೀ ರೀಡ್' ಎಂಬ ಅರ್ಥವಿದೆ. ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಇವು ಪ್ರಾರ್ಥನಾ ಮಂದಿರಗಳಲ್ಲಿ ಪಠಣ ಮಾಡಬಹುದಾದ ವಿಷಯಗಳಾಗಿದ್ದವು.[೧]

ಮೌಖಿಕ ಆಕರಗಳನ್ನು ಕುರಿತಾದ ಅಧ್ಯಯನಗಳು ವ್ಯಾಪಕವಾಗಿ ನಡೆದಂತೆ 'ಲೆಜೆಂಡ್' ಪದವು ತನ್ನ ಅರ್ಥವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ಚರಿತ್ರೆಯನ್ನು ಕಟ್ಟುವಲ್ಲಿ ಲಿಖಿತ ದಾಖಲೆಗಳು ದೊರೆಯದೆ ಇದ್ದಾಗ ಅಥವಾ ಅಪೂರ್ಣವೆಂದೆನಿಸಿದಾಗ ಮತ್ತು ಜನರಲ್ಲಿ ಒಗ್ಗಟ್ಟನ್ನು ಮೂಡಿಸಲು ಪರಂಪರಾಗತವಾದ ಇಂತಹ ಸಾಂಪ್ರದಾಯಿಕ ವಿಷಯಗಳನ್ನು ಆಶ್ರಯಿಸಬೇಕೆನ್ನುವ ವಿದ್ವಾಂಸರ ಚಿಂತನೆಗಳು 'ಲೆಜೆಂಡ್' ಅರ್ಥ-ಸ್ವರೂಪದ ಬದಲಾವಣೆಗೆ ಕಾರಣವಾಯಿತು. ಪ್ರಾರಂಭದಲ್ಲಿದ್ದ 'ಸಾಧು-ಸಂತರ ಜೀವನ ಕಥೆ' ಎಂಬುದು ಹಿಂದೆ ಸರಿದು ಮುಂದೆ 'ಪರಂಪರೆಯಿಂದ ಬಂದದ್ದು' ಎಂಬ ಅರ್ಥ ಪಡೆದುಕೊಂಡಿತು. ಭಾರತಕ್ಕೆ ಆಗಮಿಸಿದ ಪಾಶ್ಚಾತ್ಯರು ನಮ್ಮ ದೇಶದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಅರಿತುಕೊಳ್ಳಲು ಆಸಕ್ತರಾದರು. ಪ್ರಾರಂಭಲ್ಲಿ ಲಿಖಿತ ದಾಖಲೆಗಳನ್ನು ಆಶ್ರಯಿಸಿ ನಂತರ ತೋಂಡಿ ರೂಪದ ಚರಿತ್ರೆಯ ಕಡೆಗೆ ತಮ್ಮ ಒಲವನ್ನು ಮೂಡಿಸಿದರು. ಅವರ ಇಂಥ ಪ್ರಯತ್ನಗಳಿಂದಾಗಿ ದೇಶೀಯ ವಿದ್ವಾಂಸರನ್ನು ಸಹ ಮೌಖಿಕ ಆಕರಗಳ ಕಡೆಗೆ ಆಕರ್ಷಿತರಾಗುವಂತೆ ಮಾಡಿತು. ಇದರಿಂದಾಗಿ ಜಾನಪದ ಸಾಹಿತ್ಯ ಪ್ರಕಾರವಾದ ಐತಿಹ್ಯಗಳ ಸಂಗ್ರಹ, ವ್ಯಾಖ್ಯಾನ ಮತ್ತು ವಿಶ್ಲೇಷಣೆಗಳು ನಡೆದವು. ಐತಿಹ್ಯಗಳ ಬಗೆಗೆ ಅಧ್ಯಯನ ನಡೆಸಿದ ನಾಡಿನ ವಿದ್ವಾಂಸರು ಮತ್ತು ನಿಘಂಟುಕಾರರು ಐತಿಹ್ಯದ ಅರ್ಥ, ಸ್ವರೂಪಗಳನ್ನು ಗ್ರಹಿಸಿ, ವಿವೇಚಿಸಿರುವುದನ್ನು ಪರಿಶೀಲಿಸಬಹುದು.

ಕಿಟ್ಟೆಲ್ ಕೋಶದಲ್ಲಿ 'ಲೆಜೆಂಡ್' ಎಂಬುದಕ್ಕೆ ಕನ್ನಡದಲ್ಲಿ 'ಐತಿಹ್ಯ' ಎಂದು ಉಲ್ಲೇಖಿಸಲಾಗಿದೆ. ಐತಿಹ್ಯದ ಮೂಲ ರೂಪ ಸಂಸ್ಕೃತದ 'ಇತಿಹ' (ಹೀಗೆ ಇತ್ತು) ಎಂಬುದನ್ನು ಹೇಳಿ, ಅದಕ್ಕೆ 'ಓರಲ್ ಟ್ರಡೀಷನ್, ಎ ಲೆಜೆಂಡ್, ಎ ಟೇಲ್'[೨] ಎಂಬ ಅರ್ಥವನ್ನು ಬಳಸಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ನಿಘಂಟುವಿನಲ್ಲಿ 'ಐತಿಹ್ಯ' ಎಂಬುದಕ್ಕೆ 'ಪರಂಪರೆಯಿಂದ ಬಂದಿರುವುದು ಚರಿತ್ರೆ'[೩] ಎಂಬ ಅರ್ಥವನ್ನು ಕೊಡಲಾಗಿದೆ.

ಸಿರಿಗನ್ನಡ ಅರ್ಥಕೋಶದಲ್ಲಿ 'ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ'[೪] ಎಂಬರ್ಥವಿದೆ. ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ವಿಶ್ವಕೋಶ'ದಲ್ಲಿ 'ಚಾರಿತ್ರಿಕವೆಂದು ಜನ ಸಾಮಾನ್ಯವಾಗಿ ಅಂಗೀಕರಿಸಿದ್ದು ಪರಂಪರಾಗತವಾದ ವಿಶೇಷ ಘಟನೆ (ಲೆಜೆಂಡ್). ಐತಿಹ್ಯಗಳು ವ್ಯಕ್ತಿ, ಸ್ಥಳ ಮತ್ತು ಘಟನೆಗಳ ವಾಸ್ತವ ಅಥವಾ ಹೊರನೋಟದ ನಂಬಿಕೆಗಳನ್ನೊಳಗೊಂಡ ಕಥನಗಳು'.[೫]

'ಕನ್ನಡ ಜಾನಪದ ವಿಶ್ವಕೋಶ'ದಲ್ಲಿ 'ಒಬ್ಬ ವ್ಯಕ್ತಿ, ಸ್ಥಳ ಅಥವಾ ಘಟನೆಗಳನ್ನು ಕುರಿತು ಹೇಳಿದ, ವಾಸ್ತವಾಂಶವನ್ನು ಕುರಿತದ್ದು ಎಂದು ಹೇಳಲಾಗುವ ಹಾಗೂ ಸಾಂಪ್ರದಾಯಿಕ ಅಂಶಗಳನ್ನು ಮೇಳೈವಿಸಿಕೊಂಡ ಕಥೆಗೆ ಅನ್ವಯಿಸಲಾಗಿದೆ'.[೬]

ಇಂಗ್ಲೀಷ್-ಕನ್ನಡ ನಿಘಂಟುವಿನಲ್ಲಿ 'ಸಾಧು-ಸಂತರ ಜೀವನ ಕಥಾ ಸಂಗ್ರಹ'[೭] ಎಂಬುದಾಗಿ ಅರ್ಥೈಸಲಾಗಿದೆ.

ದೇಜಗೌ ಅವರು 'ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕತೆಗಳೇ ಐತಿಹ್ಯಗಳು'[೮] ಎನ್ನುತ್ತಾರೆ.

ಜೀ.ಶಂ.ಪರಮಶಿವಯ್ಯ ಅವರು 'ಐತಿಹ್ಯಗಳು ಅನೇಕ ಸಂದರ್ಭಗಳಲ್ಲಿ ಕಾಲ್ಪನಿಕವೇ ಆದರೂ 'ಐತಿಹಾಸಿಕ ಸತ್ಯ' ಕೆಲವು ಕಡೆಗಳಲ್ಲಾದರೂ ಇದ್ದೇ ಇರುತ್ತದೆ. ಯಾವುದೋ ವಾಸ್ತವಿಕ ಘಟನೆಯ ಆಧಾರದ ಮೇಲೆಯೇ ಈ ಕಥೆಗಳು ಬೆಳೆದುಬಂದಿವೆ'[೯] ಎಂದಿದ್ದಾರೆ.

ಪುರುಷೋತ್ತಮ ಬಿಳಿಮಲೆಯವರು 'ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮಾತೊಂದು ಜನಪ್ರಿಯವೂ ನಂಬುವಂತೆಯೂ ಇದ್ದಾಗ ಅದನ್ನು ಅಲ್ಲಿಯ ಜನರು 'ಐತಿಹ್ಯ'ವೆಂದು ಕರೆಯುತ್ತಿದ್ದರೆಂದು'[೧೦] ಹೇಳುತ್ತಾರೆ.

ಎ. ಸುಬ್ಬಣ್ಣ ರೈ ಅವರು 'ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ - ಘಟನೆಗಳ ಗದ್ಯ ರೂಪದ ನಿರೂಪಣೆ'[೧೧] ಎಂದಿದ್ದಾರೆ.

ಕೆ.ಎಲ್. ಗೋಪಾಲ ಕೃಷ್ಣಯ್ಯ ಅವರು ಐತಿಹ್ಯವನ್ನು ಈ ಕೆಳಗಿನಂತೆ ವಿವರಿಸುತ್ತಾರೆ. 'ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಬಾಯಿಮಾತಿನಲ್ಲಿ ಮುಂದುವರಿದುಕೊಂಡು ಬರುವ ಕೆಲವು ಘಟನೆಗಳ ನಿರೂಪಣೆ ಅಥವಾ ಕಥೆಗಳೇ ಐತಿಹ್ಯಗಳು'.[೧೨]

ಚಾರಿತ್ರಿಕವಾಗಿ ಈ 'ಲೆಜೆಂಡ್' ಪದದ ಅರ್ಥ ಒಂದೇ ರೀತಿಯಾಗಿ ಉಳಿದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಹಾಗೂ ಚರಿತ್ರೆಯ ಅಧ್ಯಯನಗಳು ಬೆಳೆದುಬಂದಂತೆ ಅವುಗಳ ಅರ್ಥಗಳಲ್ಲಿಯೂ ವ್ಯತ್ಯಾಸಗಳಾಗತೊಡಗಿದವು. ಮೊದಲಿನ 'ಸಾಧು-ಸಂತರ ಜೀವನ ಕಥೆ' ಎಂಬ ಅರ್ಥವನ್ನುಳಿಸಿಕೊಂಡು ಅದು ಇನ್ನಷ್ಟು ಹಿಗ್ಗತೊಡಗಿತು. ೧೯-೨೦ನೆಯ ಶತಮಾನದ ಹೊತ್ತಿಗೆ 'ಲೆಜೆಂಡ್' ಪದವು 'ಪರಂಪರೆಯಿಂದ ಬಂದದ್ದು' ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗಿದ್ದು ಗಮನಾರ್ಹ. ಐತಿಹ್ಯಗಳ ಹಿಂದೆ ಒಂದು ಚಿಂತನೆ ಇರುವುದಂತೂ ಸ್ಪಷ್ಟ. ಭಾರತೀಯ ಚಿಂತನೆಯಲ್ಲಿ ಐತಿಹ್ಯವೇ ಇತಿಹಾಸ ಅಥವಾ ಆಧುನಿಕ ಪರಿಭಾಷೆಯಲ್ಲಿ ಚರಿತ್ರೆ ಅಥವಾ ಹಿಸ್ಟೋರಿ. 'ಪರಂಪರೆಯಿಂದ ಬಂದ ತಿಳುವಳಿಕೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದ ಚರಿತ್ರೆ' ಎಂದಾಗಿದೆ. 'ಇದು ಹೀಗೆಯೇ ಇತ್ತು' ಎಂಬುದರ ನಿರೂಪಣೆಯ ಜೊತೆಗೆ ಅದನ್ನು ನಿರೂಪಿಸುವವನ ದೃಷ್ಟಿಯಲ್ಲಿ ಇತಿಹಾಸವು 'ನಿಜವೇ' ಆಗಿರುತ್ತದೆ. ಅವನ ದೃಷ್ಟಿಯಲ್ಲಿ ಅದು 'ನಡೆದ ಘಟನೆಗಳ ನಿರೂಪಣೆ'. ಈ ಘಟನೆಗಳ ನಿರೂಪಣೆಯ ಉದ್ದೇಶ

ಮನರಂಜನೆಯಲ್ಲ. ಬದಲಾಗಿ ಸಮಕಾಲೀನ ಬದುಕಿಗೆ ಹಿರಿದಾದ ಮಹತ್ವವನ್ನು ಒದಗಿಸಿಕೊಳ್ಳುವುದು. ಈ ಅಂಶವು ಮಹತ್ತರವಾದ ಮೌಲ್ಯಗಳನ್ನು ವರ್ತಮಾನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವ ಗಂಭೀರ ಪ್ರಯತ್ನ. ಲಘು ಧಾಟಿಯಾಗಲೀ, ಲೇವಡಿತನವಾಗಲೀ ಇಲ್ಲಿ ಸಲ್ಲದು. ಹೀಗಾಗಿ ಇತಿಹಾಸದ ನಿರೂಪಣೆಯಲ್ಲಿ ವ್ಯತ್ಯಾಸ ಮಾಡತಕ್ಕದ್ದಲ್ಲ. ಅದು ಯಾರು ಬೇಕಾದರೂ ಹೇಳಬಹುದಾದದ್ದು ಅಲ್ಲ. ಮೌಖಿಕ ಪರಂಪರೆಯಲ್ಲಿಯೇ ಮುಂದುವರೆದುಕೊಂಡು ಬಂದರೂ ಇತಿಹಾಸವು ತುಂಬ ಜಾಗೃತ ಸ್ಥಿತಿಯನ್ನು ಕಾದುಕೊಂಡಿರುತ್ತದೆ.

'ಐತಿಹ್ಯ'ಗಳು ನೇರವಾಗಿ ಇತಿಹಾಸವನ್ನು ದಾಖಲಿಸುವ, ವಿಮರ್ಶಿಸುವ ಕೆಲಸಕ್ಕೆ ಹೋಗುವುದಿಲ್ಲ. ಆದರೆ ಇತಿಹಾಸವಾಗಿರುವ ಸಂಗತಿಗಳನ್ನು ಅವಲಂಬಿಸಿರುತ್ತವೆ. ಗಟ್ಟಿಯಾದ ಇತಿಹಾಸವಾಗದೇ, ಇತಿಹಾಸಕ್ಕೆ ಮೂಲವಾಗುತ್ತವೆ. ಆದರೆ ಕಲ್ಪನೆಗಳಿಗೂ ಕೂಡ ಒಂದು ವಸ್ತುಸ್ಥಿತಿ ಇರುತ್ತದೆ ಎಂಬುದು ಐತಿಹ್ಯವಾಗುತ್ತದೆ. ಕಲ್ಪನೆ ಎಂಬುದು ಎಂದಿಗೂ ಭ್ರಮೆಯಾಗಿರುವುದಿಲ್ಲ. ಬದಲಾಗಿ ಅದು ಕಲ್ಪನೆಯ ಮುಂದುವರಿದ ಗುಣ. ಐತಿಹ್ಯದ ಪರಂಪರೆಯನ್ನು ಸದಾ ಜೀವಂತವಾಗಿಟ್ಟಿರುವಂಥದ್ದು ಸಹ. ಆದ್ದರಿಂದಲೇ ಐತಿಹ್ಯಗಳು ಇಂದಿಗೂ ಸೃಷ್ಟಿಯಾಗುತ್ತಲೇ ಇವೆ. ಐತಿಹ್ಯಗಳಲ್ಲಿ ನಿರೂಪಿತವಾಗುವ ಸಂಗತಿಗಳನ್ನು ಜನ ನಿಜವೆಂದು ನಂಬುತ್ತಾರೆ ಮತ್ತು ಅವುಗಳನ್ನು ಒಮ್ಮೊಮ್ಮೆ ಆವೇಶಭರಿತ ಭಾಷೆಯಲ್ಲಿಯೂ ನಿರೂಪಿಸುತ್ತಾರೆ. ನಡೆದದ್ದು ಐತಿಹ್ಯಗಳಲ್ಲಿ ಅರಳುವ ಕಲ್ಪನೆ. ಇದು ಒಂದು ವಸ್ತುಸ್ಥಿತಿಯಾಗಿರುತ್ತದೆಯೇ ಹೊರತು ಭ್ರಮೆಯೆನಿಸುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕಿದೆ.

'ಐತಿಹ್ಯ'ವು ಇತಿಹಾಸಕ್ಕೆ ಹತ್ತಿರವಾದದ್ದು. ಚರಿತ್ರೆಯ ನಿರ್ಮಿತಿಯಂತೆ ಇಲ್ಲಿ ಕೂಡ ಭೌತಿಕ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲೇ ಹಿಡಿದಿಟ್ಟುಕೊಳ್ಳಲಾಗುವುದು. ಅನಂತರ ನಂಬಿಕೆಗಳ, ಕಲ್ಪನೆಗಳ ಆಧಾರದಿಂದ ಅದನ್ನು ಬಳಸಲಾಗುವುದು. ಮೂಲ ಘಟನೆಯೊಂದರ ಸುತ್ತ ರಮ್ಯವಾದ ವಿವರಣೆಯನ್ನು ಕಟ್ಟಲಾಗುವುದು.[೧೩]

'ಐತಿಹ್ಯ' ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ವಕಲ್ಪಿತ ದಂತಕತೆಯೂ ಅಲ್ಲ. ಎಲ್ಲೋ, ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆ ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವದ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ, ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿಬಿಡುತ್ತಾನೆ. ನಂತರ ಬಾಯ್ದೆರೆಯ ಮೂಲಕ ಪ್ರಚಾರ ಪಡೆಯುತ್ತದೆ. ಮುಂದುವರೆದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ. ಇಂಥ ಐತಿಹ್ಯದ ಸೃಷ್ಟಿಯಲ್ಲಿ ದೊರೆತ ದಾಖಲೆಗಳನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಇವು ನೈಜ ಚರಿತ್ರೆಯಾಗಲು ಬೇಕಾದ ವಸ್ತುನಿಷ್ಠತೆಯಿಂದ, ವೈಜ್ಞಾನಿಕ ದೃಷ್ಟಿಕೋನದಿಂದ ದೂರ ಸರಿದು ಕಲ್ಪನೆಯ ಆಶ್ರಯವನ್ನು ಪಡೆದು ಕಾವ್ಯದ ಧಾಟಿಯಲ್ಲಿ ಸಾಗುತ್ತದೆ. ಭಾವುಕತೆ ವಿಜೃಂಭಿಸುತ್ತದೆ ಅಂದಾಗಲೂ ನಡೆದಿರಬಹುದಾದ ಘಟನೆಯೊಂದು ಅದರ ತಳಭಾಗದಲ್ಲಿ

ರೂಪಾಂತರಗೊಳ್ಳದೇ ಇರುವುದುಂಟು. ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಸತ್ಯ ಪೂರ್ಣ ನಾಶವಾಗುವುದಿಲ್ಲ. ಕಲಾಕೃತಿಯೊಂದರಲ್ಲಿ ನಡೆಯುವಂತೆ ಪೂರ್ಣವಾಗಿ ಹೊಸ ಆಕಾರವನ್ನು ಪಡೆಯುವುದಿಲ್ಲ. ಅಂದರೆ ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತಾ ತಲೆಮಾರುಗಳ ಮೂಲಕ ಹರಿದು ಬರುವಾಗ, ಒಂದು ಹಂತದಲ್ಲಿ ಐತಿಹ್ಯ ನಿಧಾನವಾಗಿ ರೂಪುಗೊಳ್ಳುತ್ತಾ ಸಾಗಿ ಕೊನೆಗೆ ನಿರ್ದಿಷ್ಟ ಆಕೃತಿಯನ್ನು ಪಡೆದು ಗಟ್ಟಿಯಾಗುತ್ತದೆ.

ಚಾರಿತ್ರಿಕ ಘಟನೆಗಳು ರಂಜನೀಯವಾದ ಅಂಶಗಳನ್ನು ಒಳಗೊಂಡು ತಲೆಮಾರುಗಳ ಮೂಲಕ ಹರಿದು ಬರುವಾಗ 'ಐತಿಹ್ಯ'ಗಳಾಗಿ ರೂಪುಗೊಳ್ಳುತ್ತವೆ. ಅಂದರೆ ಐತಿಹ್ಯಗಳು ವ್ಯಕ್ತಿ, ಸ್ಥಳ ಅಥವಾ ಘಟನೆಗಳ ವಾಸ್ತವ ಸಂಗತಿಗಳ, ನಡೆದ ಘಟನೆಗಳ ಪಳೆಯುಳಿಕೆಗಳು ಎನ್ನಬಹುದಾದ ಸೃಷ್ಟಿಗಳು. ಆದ್ದರಿಂದ ಐತಿಹ್ಯದ ವಸ್ತು ಸಮಗ್ರವಾಗಿ ಕಲ್ಪನಾತ್ಮಕವೆಂದು ಸಹ ಹೇಳಲಾಗುವುದಿಲ್ಲ. ಕಲ್ಪನೆಗೆ ಆಧಾರ ಕೊಡುವ ಸತ್ಯಾಂಶಗಳೂ ಸಹ ಅಲ್ಲಿರುತ್ತವೆ. ವಿವಿಧ ವೃತ್ತಿಗಳಿಗೆ ಸಂಬಂಧಿಸಿದ ಉಪಾಸನಾ ವಿಧಿಗಳು, ನಂಬಿಕೆ, ಸಂಪ್ರದಾಯ, ಆಚರಣೆಗಳು ಐತಿಹ್ಯದ ಹುಟ್ಟಿಗೆ ಕಾರಣವಾಗುತ್ತಿರುತ್ತವೆ ಎಂಬುದು ಸಹ ಗಮನಾರ್ಹವಾದುದು.

ಪೌರಾಣಿಕ ಹಾಗೂ ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದಂತೆಯೂ ಹೇರಳವಾಗಿ ಐತಿಹ್ಯಗಳು ಹುಟ್ಟಿಕೊಂಡಿರುವುದುಂಟು. ಪರಾಕ್ರಮವನ್ನು ಬಣ್ಣಿಸುವ, ತ್ಯಾಗ, ಸಾಹಸ, ಸತ್ಯಸಂಧತೆಯನ್ನು ಎತ್ತಿಹಿಡಿಯುವ ವ್ಯಕ್ತಿಯ ಘಟನೆಗಳನ್ನೊಳಗೊಂಡ ಐತಿಹ್ಯಗಳು ವಿಶೇಷವಾಗಿ ಕಂಡು ಬರುವುದುಂಟು. ಹಾಗೆಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಅಂದಂದಿನ ಮೌಲ್ಯಗಳ ಉಳಿವಿಗೆ ಪುರಾವೆಯಾಗುವ ಕಟ್ಟಿದ ಕಟ್ಟಡಗಳು, ದೇವಸ್ಥಾನ, ಕೆರೆ, ಬಾವಿ, ಕೋಟೆಗಳು ಅವು ಶಾಶ್ವತವಾಗಿ ನಿಲ್ಲಲು ತಮ್ಮನ್ನು ತಾವೇ ಬಲಿಕೊಟ್ಟುಕೊಂಡ ವ್ಯಕ್ತಿಗಳಿಗೆ ಸಂಬಂಧಿಸಿದಂತೆ, ಗುಪ್ತನಿಧಿಯ ಬಗೆಗೆ ಮತ್ತು ಸ್ಥಳನಾಮಗಳಿಗೆ ಸಂಬಂಧಿಸಿದ ಐತಿಹ್ಯಗಳು ಜಗತ್ತಿನಾದ್ಯಂತ ವ್ಯಾಪಕವಾಗಿ ಹರಡಿವೆ. ಇಂಥ ಐತಿಹ್ಯಗಳು ನೈಜತೆಗೆ ಹತ್ತಿರವಾಗಿರಬಹುದು. ಇಲ್ಲವೆ ಕಾಲ್ಪನಿಕವೆನಿಸಲೂಬಹುದು. ಅಂತೆಯೇ ಭೂತ, ಪ್ರೇತ, ರಾಕ್ಷಸ, ವನದೇವತೆ, ಜಲದೇವತೆ ಮೊದಲಾದ ವೈವಿಧ್ಯತೆಗಳಿಗೆ ಸಂಬಂಧಿಸಿದ ಐತಿಹ್ಯಗಳು ಸಹ ಹುಟ್ಟಿಕೊಳ್ಳುತ್ತಿರುತ್ತವೆ. ಇವುಗಳಲ್ಲಿ ಪವಾಡ ಸದೃಶ್ಯವಾದ ಅದ್ಭುತ ಅಂಶಗಳನ್ನು ಒಳಗೊಂಡರೂ ವಾಸ್ತವಿಕಾಂಶಗಳೂ ಇದ್ದೇ ಇರುತ್ತವೆ ಎಂಬುದನ್ನು ಕಡೆಗಣಿಸುವಂತಿಲ್ಲ.

ಈಗಾಗಲೇ ಸ್ಪಷ್ಟಪಡಿಸಿದಂತೆ ಚರಿತ್ರೆಗೂ, ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ, ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗುತ್ತದೆ. ಜನಪದರ ಮಟ್ಟಿಗೆ ಐತಿಹ್ಯಗಳೇ ಚರಿತ್ರೆಗಳಾಗುವ ಸಂಭವವೇ ಹೆಚ್ಚು.[೧೪]

ಮೇಲಿನ ವಿಚಾರಗಳ ಜೊತೆ ಇನ್ನೊಂದು ಅಂಶವೂ ಮುಖ್ಯವಾದುದು. ಅದೆಂದರೆ ಐತಿಹ್ಯಗಳ ಶೈಕ್ಷಣಿಕ ಪ್ರವೃತ್ತಿಗೆ ಸಂಬಂಧಿಸಿದ್ದು. ಐತಿಹ್ಯಗಳಲ್ಲಿ ಗಾಢವಾಗಿ ಹುದುಗಿರುವ ಅದರ

ಶೈಕ್ಷಣಿಕ ಪ್ರವೃತ್ತಿಯು ಅದನ್ನು ಮನರಂಜನಾ ಉದ್ದೇಶದಿಂದ ಬೇರ್ಪಡಿಸುತ್ತಾ ಹೋಗುತ್ತಿರುತ್ತದೆ. ಜನರಿಗೆ ತಿಳುವಳಿಕೆ ನೀಡಬಯಸುವ ಐತಿಹ್ಯದ ಶೈಕ್ಷಣಿಕ ಪ್ರವೃತ್ತಿಯೇ ಅದರ ವಿವರಣಾತ್ಮಕ ಭಾಗವನ್ನು ನಿಯಂತ್ರಿಸುತ್ತಿರುತ್ತದೆ. ಅಂದರೆ ಐತಿಹ್ಯಗಳು ಸತ್ಯವೆಂಬ ಭಾವದಲ್ಲಿ ಸಂಕ್ಷಿಪ್ತವಾಗುವುದುಂಟು. ಆದ್ದರಿಂದಲೆ ಐತಿಹ್ಯಗಳು ಜನಪದ ಕತೆಗಳಿಗಿಂತ ಭಿನ್ನವಾಗುವುದು.

ಯಾವುದೇ ವ್ಯಕ್ತಿಯು ತನ್ನ 'ಸತ್ಯ' ಅಥವಾ 'ನಿಜ'ವನ್ನು ನಿರೂಪಿಸುವ ಹಂತದಲ್ಲಿಯೇ ಚರಿತ್ರೆ, ಐತಿಹ್ಯ, ಕತೆ ಅಥವಾ ಪುರಾಣಗಳು ಸೃಷ್ಟಿಗೊಳ್ಳುತ್ತಿರುತ್ತವೆ. 'ನಿಜ'ಕ್ಕೆ ಚರಿತ್ರೆಯಲ್ಲಿ ವಿವರಣೆ ಮತ್ತು ವ್ಯಾಖ್ಯಾನಗಳು ಇರುವಂತೆಯೇ ಐತಿಹ್ಯದಲ್ಲಿ ನಿರೂಪಣೆಗಳು ಮಾತ್ರ ಇರುತ್ತವೆ. ಕಥೆಯಲ್ಲಿ ರಂಜನಾಂಶಗಳು ಪ್ರಧಾನವಾಗುವಂತೆ ಪುರಾಣದಲ್ಲಿ ಸಾರ್ವಕಾಲಿಕತೆ ಮುಖ್ಯವಾಗುತ್ತಿರುತ್ತದೆ. ಇವುಗಳೆಲ್ಲದರ ಹುಟ್ಟಿಗೆ ವ್ಯಕ್ತಿಯೊಬ್ಬನ ಪ್ರತಿಭೆ ಮಾತ್ರ ಸಾಲದು. ಬದಲಾಗಿ ಆ ಪ್ರತಿಭೆ ಅರಳುವುದಕ್ಕೆ ಪೋಷಕವಾದ ಸಾಮಗ್ರಿಯೊಂದು ಸಹ ಭೌತಿಕ ಜಗತ್ತಿನಲ್ಲಿರಬೇಕಾಗುತ್ತದೆ. ಇದರ ಸಹಾಯದಿಂದ ಅನಂತರ ನಿರೂಪಕನ ಪ್ರತಿಭೆ ಪ್ರಾಚೀನ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಳ್ಳುತ್ತಿರುತ್ತವೆ ಎಂಬುದು ಸ್ಪಷ್ಟ[೧೫]

ಐತಿಹ್ಯದ ಗರ್ಭದೊಳಗಿರುವ 'ಭೌತಿಕ ಸತ್ಯ'ವು ವಿಶ್ವದ ಮಾನವ, ಪ್ರಾಣಿ ಹಾಗೂ ಸಸ್ಯವರ್ಗದ ಯಾವುದೇ ವಿಷಯಗಳನ್ನು ಕುರಿತಾಗಿರಬಹುದು ಅಥವಾ ಈ ಮೂರರ ಬಳಕೆಯಲ್ಲಿಯೇ ಹುಟ್ಟಬಹುದು. ಹೀಗಾಗುವಾಗ ಭೌತಿಕ ಸತ್ಯದ ಅಥವಾ ಆಧಾರದ ನಿರೂಪಣೆಯು ವೈಜ್ಞಾನಿಕವಾಗಿದ್ದಂತೆ ಮೇಲ್ನೋಟಕ್ಕೆ ತೋರಿದರೂ ಐತಿಹ್ಯದಲ್ಲಿ ಹಾಗೆ ಇರಲು ಸಾಧ್ಯವಿಲ್ಲ. ಏಕೆಂದರೆ ಅದು 'ನಾಟಕೀಯ ಅತಿಮಾನುಷತೆ'ಯನ್ನು ಹೊಂದುವಂಥದ್ದು. ಇಲ್ಲವೇ ಆ ವಿಮರ್ಶಕ ತಿಳುವಳಿಕೆಯಿಂದಲೂ ಹೊಸ ರೂಪ ಪಡೆದುಕೊಳ್ಳುವಂಥದ್ದಾಗಿರುತ್ತದೆ. ಹೀಗೆ ಆದಾಗಲೂ ಐತಿಹ್ಯದ ನಿರೂಪಕನು ಕೊಡುವ ಭೌತಿಕ ಆಧಾರವು ಕಣ್ಣೆದುರೇ ಕಂಡುಬರುತ್ತದೆ. ಆಧಾರಕ್ಕೂ ನಿರೂಪಣೆಗೂ ವೈಜ್ಞಾನಿಕ ಸಂಬಂಧವೇ ಇರುವುದಿಲ್ಲ. ಬದಲಾಗಿ ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಕಲ್ಲಿನ ಒಂದೆರೆಡು ಗೆರೆ ಇದ್ದರೆ ಮಾತ್ರ ಅದು 'ಸೀತೆಯ ಸೆರಗಿನ' ಗುರುತು ಎಂಬ ನಿರೂಪಣೆಯನ್ನು ಪಡೆದುಕೊಳ್ಳುತ್ತಿರುತ್ತದೆ. ಅದೇ ರೀತಿ ಕಲ್ಲಿದ್ದರೆ ಮಾತ್ರ 'ಭೀಮನಕಲ್ಲು', ಕೆರೆಯಿದ್ದರೆ ಮಾತ್ರ 'ಜಟಾಯು ತೀರ್ಥ' ಗುಹೆಯಿದ್ದರೆ ಮಾತ್ರ 'ಪಾಂಡವರ ಗುಹೆ' ಸಿದ್ಧವಾಗುವುದನ್ನು ಗಮನಿಸಬಹುದು.

ಭೌತಿಕ ಆಧಾರ ಅಥವಾ ಸತ್ಯಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರವು. ಅವು ಸಾಮಾನ್ಯ ಜೀವನದ ಯೋಗ್ಯವಾದದ್ದಕ್ಕಿಂತ ಭಿನ್ನವಾಗಿದ್ದು, ಪ್ರತ್ಯೇಕವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕಾಗುತ್ತದೆ. ಸಾಮಾನ್ಯ ಯೋಗ್ಯವಾದದ್ದಕ್ಕಿಂತ ಹೆಚ್ಚಿನ ಗುಣ ಹೊಂದಿರುವ ಯಾವುದೇ ಆದರೂ ತನ್ನ ಇರುವಿಕೆಯ ಸ್ಥಿತಿಯಲ್ಲಿಯೇ ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತದೆ. ವ್ಯಕ್ತಿ, ಸ್ಥಳ ಮತ್ತು ಘಟನೆಯೆಂಬ ಮೂರು ವಿಂಗಡಣೆಗಳಲ್ಲಿ ಈ ಅಸಾಧಾರಣತ್ವಗಳನ್ನು ಗುರುತಿಸಲು ಸಾಧ್ಯವಿದೆ. ಊರಿಗೆಲ್ಲಾ ದೊಡ್ಡದಾಗಿರುವ ಬೆಟ್ಟ ಅಥವಾ ಕೆರೆ. ಸಾಮಾನ್ಯರಿಗಿಂತ ವಿಶೇಷ ಶಕ್ತಿವಂತನಾದ ಅಥವಾ ಪ್ರತಿಭಾಶಾಲಿಯಾದ ವ್ಯಕ್ತಿ, ಸಾಮಾನ್ಯ

ಜೀವನದಲ್ಲಿ ಸೇರ್ಪಡೆಯಾಗಿರುವ ಕಾಲಕ್ಕಿಂತ ಭಿನ್ನವಾದ, ಅರ್ಥಪೂರ್ಣವಾದ ಕಾಲಗಳು ಒಂದುಗೂಡಿ ಅಥವಾ ಪ್ರತ್ಯೇಕ, ಪ್ರತ್ಯೇಕವಾಗಿಯೂ ಐತಿಹ್ಯಗಳಲ್ಲಿ ಸ್ಥಾನ ಪಡೆಯುತ್ತವೆ.[೧೬]

ಐತಿಹ್ಯಗಳು ಪ್ರತ್ಯೇಕತೆಯನ್ನು ಯೋಗ್ಯಕ್ಕೆ ಒಗ್ಗಿಸುವ ಪ್ರಯತ್ನಗಳೂ ಹೌದು. ಐತಿಹ್ಯದ ನಿರೂಪಕನ ಪೀಠಿಕಾ ರೂಪದ ಮಾತಿನಲ್ಲಿಯೇ ಇದು ಸ್ಪಷ್ಟವಾಗುತ್ತದೆ. ಸರಿಯಾದ ಸ್ಥಳ, ಸಮಯ ಮತ್ತು ವ್ಯಕ್ತಿಯನ್ನು ತಡವರಿಸದೇ ಹೇಳುತ್ತಾ, ಭೌತಿಕ ಆಧಾರವನ್ನು ನಿರೂಪಣೆಯ ಮಧ್ಯೆ ಮತ್ತೆ, ಮತ್ತೆ ತರುವುದರ ಮೂಲಕ ಕಲ್ಪನೆಯ ಆಕಾರ ರಹಿತವಾಗದಂತೆ ನೋಡಿಕೊಳ್ಳುತ್ತಾನೆ. "ಅದರ ಅವಶೇಷ ಇರುವುದರಿಂದಲೇ ನಾನದನ್ನು ನಂಬಿದೆ - ಇಲ್ಲದಿದ್ದರೆ ನನ್ನಂಥವನು ಅದನ್ನು ನಂಬುತ್ತಿರಲಿಲ್ಲ" ಎಂಬ ಸಾಯುವಾಗ ಆಡುವ ಕೊನೆಯ ಮಾತು ಸಹ ನಿರೂಪಿತ ಸತ್ಯವನ್ನು ಇನ್ನಷ್ಟು ಬಲಗೊಳಿಸಲು ಪ್ರಯೋಗವಾಗುವುದನ್ನು ಉದಾಹರಿಸಬಹುದು.

ಹೀಗೆ ಹೇಳುವುದರ ಮೂಲಕ ಐತಿಹ್ಯದ ನಿರೂಪಕನು ಕೇಳುಗನ ಮತ್ತು ತನ್ನ ಜೀವನದ ಕೇಂದ್ರ ಆಶಯಕ್ಕೆ ಐತಿಹ್ಯವನ್ನು ತಂದು ಜೋಡಿಸುತ್ತಾನೆ. ಆ ಮುಖೇನ ತನ್ನ ಬದುಕಿಗೆ ಒಂದು ಸಮರ್ಥನೆಯನ್ನು ತಂದುಕೊಳ್ಳುತ್ತಾನೆ. ಈ ಸಮರ್ಥನೆಯಿಂದ ಆತ ತನ್ನ ಊರಿಗೆ, ಕುಲಕ್ಕೆ, ಸಮಾಜಕ್ಕೆ ಒಂದು ಹಿರಿಮೆಯನ್ನು ಒದಗಿಸಿಕೊಡಬಲ್ಲವನೂ ಆಗುತ್ತಿರುತ್ತಾನೆ. ಇಂಥ ನಡೆದ ಅನೇಕ ಹಿರಿಮೆಗಳು ಐತಿಹ್ಯಗಳಾಗಿ ವರ್ತಮಾನಕ್ಕೆ ಒಗ್ಗಿಕೊಳ್ಳುವುದುಂಟು.

ಇತಿಹಾಸದ ಪ್ರತ್ಯೇಕತೆಯ ಅಸಾಧಾರಣತ್ವವನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿ ವರ್ತಮಾನಕ್ಕೂ, ಇತಿಹಾಸಕ್ಕೂ ಇರುವ ಅಂತರ ಕುಗ್ಗಿ ಹೋಗುತ್ತದೆ. ಇಲ್ಲವೇ ಪೂರ್ಣವಾಗಿ ಕುಸಿಯುತ್ತದೆ. ಈಗ ಇದನ್ನು ವ್ಯಕ್ತಿಯೊಬ್ಬನು ತನ್ನನ್ನು ಪರಂಪರೆಯೊಂದಿಗೆ ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನವೆಂದೇ ಹೇಳಬಹುದು. ಏನಿದ್ದರೂ ಐತಿಹ್ಯಗಳ ಕಾರ್ಯವು ಬದುಕನ್ನು ಸುಲಲಿತವಾಗಿ ಮುಂದುವರೆಸಿಕೊಂಡು ಹೋಗುವ ಉದ್ದೇಶವನ್ನು ಹೊಂದಿದೆ. ಅದು ಏನಿದ್ದರೂ ಪೂರ್ಣವಾಗಿ ಬದುಕಿರುವವರಿಗಾಗಿ ಅವರ ಲೌಕಿಕ ಜೀವನದ ಒಳತಿಗಾಗಿ. ಈ ದೃಷ್ಟಿಯಿಂದ ಐತಿಹ್ಯಗಳು ಚರಿತ್ರೆಯ ಧ್ವನಿಪೂರ್ಣ ಸಂಕೇತಗಳಾಗಿರುವಂತೆ ವರ್ತಮಾನದ ಬಲಿಷ್ಠ ಸ್ವರಗಳೂ ಹೌದು.

ಮೇಲೆ ವಿವರಿಸಲಾದ ಗುಣಗಳಿಂದಾಗಿಯೇ ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗುವುದುಂಟು. ಗಾಢವಾದ ಪ್ರಾದೇಶಿಕತೆಯ ಗುಣವನ್ನು ಹೊಂದಿದ ಐತಿಹ್ಯಗಳು ಆ ಸ್ಥಳದ ಕಾಲ ಮತ್ತು ವ್ಯಕ್ತಿಗಳೊಂದಿಗೆ ಒಂದು ಸೂಕ್ಷ್ಮ ಸಂಬಂಧವನ್ನು ಹೊಂದುವುದು ಅನಿವಾರ್ಯ.[೧೭] ಇದರಿಂದಾಗಿ ಪ್ರತಿ ಐತಿಹ್ಯಗಳಿಗೆ ಸ್ಥಳೀಯವೇ ಆದ ಒಂದು ಶೈಲಿಯೂ ಲಭ್ಯವಾಗುತ್ತದೆ. ಸ್ಥಳದ ಬದಲಾವಣೆಯೊಂದಿಗೆ ಐತಿಹ್ಯದ ಸ್ವರೂಪವೂ ಬದಲಾಗಬಹುದು, ಹಾಗೆಯೇ ಒಂದು ನಿರ್ದಿಷ್ಟ ಸ್ಥಳದಲ್ಲಿನ ಉತ್ಪಾದನಾ ವಿಧಾನಗಳಲ್ಲಾದ ಮಾರ್ಪಾಡು ಅಥವಾ ಆ ಸಮಾಜದ ಆರ್ಥಿಕ ರಚನೆಯಲ್ಲಾದ ಸ್ಥಿತ್ಯಂತರಗಳು ಸಹ ಐತಿಹ್ಯವನ್ನು ಸಾಯಿಸಿ ಅದರ ಸ್ಥಾನದಲ್ಲಿ ಇನ್ನೊಂದನ್ನು ಹುಟ್ಟು ಹಾಕಲೂಬಹುದು. ಆದರೆ ಇಲ್ಲಿ ಗಮನಿಸಲೇ ಬೇಕಾದ ಒಂದು ಅಂಶವಿದೆ. ಅದೆಂದರೆ ಒಂದು ಕಾಲದ ವರ್ತಮಾನದ ಅವಶ್ಯಕತೆಗಳಿಗೆ

ಅನುಗುಣವಾಗಿ ಹುಟ್ಟಿ, ಬೆಳೆದ ಐತಿಹ್ಯವೊಂದು ಅನಂತರ ತಾನು ಹುಟ್ಟಿ ಬೆಳೆದ ಪರಿಸರವನ್ನೇ ನಿಯಂತ್ರಿಸುವಷ್ಟು ಪ್ರಬಲವಾಗಿ ಬೆಳೆಯುವಂಥದ್ದು. ಆ ಮೂಲಕ ಸಮಾಜದ ಆರ್ಥಿಕ ರಚನೆಗಳಲ್ಲಿ ಮಾರ್ಪಾಡುಗಳಾಗದಂತೆ ತಡೆಗೋಡೆಯಾಗಲೂಬಹುದು. ಚರಿತ್ರೆಯ ಕೊಡುಗೆಯಾದ ಐತಿಹ್ಯಗಳು ಮುಂದೆ ಚರಿತ್ರೆಯ ನೆಲೆಗಳೂ ಆಗಿ ಮುಖ್ಯವಾಗಿ ಬಿಡಬಹುದು. ಈ ಮಾತುಗಳು ಭಾರತದ ಸಾಮಾಜಿಕ ನೆಲೆಗಳಲ್ಲಿ ಹುಟ್ಟಿದ ಐತಿಹ್ಯಗಳಿಗೆ ಹೆಚ್ಚು ಹೊಂದುತ್ತವೆ.

ಶ್ರೇಣೀಕರಣದ ಮೇಲ್ತುದಿಯಲ್ಲಿರುವ ಬ್ರಾಹ್ಮಣನು ಪೂರ್ತಿ 'ಮಡಿ ಅಥವಾ ಶುದ್ಧ'ನಾದರೆ, ಕೆಳತುದಿಯಲ್ಲಿರುವ ಪಂಚಮ ಅಥವಾ ಹೊಲೆಯ ಪೂರ್ತಿಯಾಗಿ 'ಮೈಲಿಗೆ ಅಥವಾ ಅಶುದ್ಧನಾಗುತ್ತಾನೆ'. ಇವೆರಡರ ಮಧ್ಯೆದಲ್ಲಿ ಬರುವವರು ಮೇಲಿನವರ ದೃಷ್ಟಿಯಲ್ಲಿ 'ಮೈಲಿಗೆ'ಯಾಗಿಯೂ, ಕೆಳಗಿನವರ ದೃಷ್ಟಿಯಲ್ಲಿ 'ಮಡಿ'ಯಾಗಿಯೂ ವರ್ತಿಸುತ್ತಾರೆ. ಇಂಥ ಕಡೆ ಶ್ರೇಣೀಕರಣ ಮೇಲ್ತುದಿಯಿಂದ ಸೃಷ್ಟಿಯಾಗುವ ಐತಿಹ್ಯಗಳು ತನ್ನ ಅನುಲೋಮ ಕ್ರಮದಲ್ಲಿ ಎಲ್ಲರಿಗೂ ಅರ್ಥಪೂರ್ಣವಾಗುತ್ತದೆ. ಆದರೆ ಕೆಳತುದಿಯಿಂದ ಸೃಷ್ಟಿಯಾದದ್ದು, ತನ್ನ ವಿಲೋಮ ಕ್ರಮದಲ್ಲಿ ಮೇಲಿನವರಿಗೆ ಕೇವಲ 'ಕಟ್ಟುಕತೆ'ಯಂತೆ ತೋರುತ್ತದೆ. ಇಂಥ ಕಡೆಗಳಲ್ಲಿ ಆಳುವ ವರ್ಗ ಅಥವಾ ಜಾತಿಯು ನಿರ್ಮಾಣ ಮಾಡಿದ ಐತಿಹ್ಯಗಳು ಸಾಮಾಜಿಕ ಶ್ರೇಣೀಕರಣವನ್ನು ಉಳಿಸುವ, ಮತ್ತಷ್ಟು ಬಲಪಡಿಸುವ ಉದ್ದೇಶವನ್ನು ಹೊಂದಿರುತ್ತವೆ. ಜಾತಿಯ ಇತಿಹಾಸವು ವರ್ತಮಾನಕ್ಕೆ ಒಗ್ಗಿ ಬರುವಾಗ ಇತಿಹಾಸದ ಶ್ರೇಣೀಕರಣವು ವರ್ತಮಾನವನ್ನು ಬಲಪಡಿಸುತ್ತದೆ ಎಂಬುದು ಗಮನಾರ್ಹವಾದುದು.

ಆಧುನೀಕರಣದಿಂದ ಜಾತಿ ಸಂಬಂಧಗಳು ಸಡಿಲವಾಗತೊಡಗಿದರೆ, ಆಗ ಹಳೆಯ ವ್ಯವಸ್ಥೆಯ ಗರ್ಭದಿಂದ ಹೊಸ ಐತಿಹ್ಯಗಳು ಹುಟ್ಟಿ ಹಳೆಯದನ್ನು ಗಟ್ಟಿಗೊಳಿಸಲು ಶ್ರಮಿಸಬಹುದು.[೧೮] ಇದನ್ನು ತುಂಬ ವ್ಯಾಪಕವಾದ ಚೌಕಟ್ಟಿನಲ್ಲಿಟ್ಟು ಹೇಳುವುದಾದರೆ ಒಂದು ಐತಿಹ್ಯವು ತಾನು ಬದುಕುಳಿದ ಸಾಂಸ್ಕೃತಿಕ ವಾತಾವರಣದ ಒಳಗಿನ ಅಪಾಯಗಳ ವಿರುದ್ಧ ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುತ್ತದೆ.

**೨.೨. ಐತಿಹ್ಯಗಳ ಪ್ರಕಾರಗಳು**

ಐತಿಹ್ಯಗಳ ವಸ್ತು, ತಂತ್ರ, ಸ್ವರೂಪ ಮತ್ತು ಶೈಲಿಗಳು ತುಂಬ ಸಂಕೀರ್ಣವಾಗಿರುವುದರಿಂದ ಅವುಗಳನ್ನು ಕರಾರುವಕ್ಕಾಗಿ ವಿಭಜಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಐತಿಹ್ಯಗಳಿಗೆ ಒಂದು ನಿರ್ದಿಷ್ಟ ಪಠ್ಯವೇ ಇಲ್ಲದಿರುವುದರಿಂದ ಇದರ ಜೊತೆಗೆ ಕರ್ನಾಟಕವೂ ಸೇರಿದಂತೆ ಭಾರತದಲ್ಲಿ ಐತಿಹ್ಯಗಳ ಸಂಪಾದನಾ ಕಾರ್ಯವು ನಡೆದಿಲ್ಲ.[೧೯] ಹೀಗಾಗಿ ಐತಿಹ್ಯಗಳ ಸ್ವರೂಪದ ಬಗ್ಗೆ ಕೊನೆ ಮಾತುಗಳನ್ನು ಹೇಳುವುದು ಸಾಧ್ಯವಿಲ್ಲದ್ದಾಗಿದೆ.

ಸಂಶೋಧನಾ ಅಧ್ಯಯನದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಕ್ರಮಬದ್ಧವಾಗಿ ವಿಂಗಡಿಸಿಕೊಳ್ಳದ ಹೊರತು, ವಿಷಯ ವಿಶ್ಲೇಷಣೆ ಸಮರ್ಪಕವೆಂದನಿಸುವುದಿಲ್ಲ. ಅಲ್ಲದೇ ನಿಖರವಾಗಿ ಏನನ್ನು ಅರಿತುಕೊಳ್ಳಲು, ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಐತಿಹ್ಯಗಳ ಅಧ್ಯಯನ ಸಂಪೂರ್ಣ ಕ್ಷೇತ್ರಕಾರ್ಯವನ್ನೇ ಅವಲಂಬಿಸಿರುವಂಥದ್ದು. ಪಾಶ್ಚಾತ್ಯ ದೇಶಗಳಲ್ಲಿ ಕೆಲವರಾದರೂ ಐತಿಹ್ಯಗಳನ್ನು

ಅಧ್ಯಯನ ಸೌಕರ್ಯಕ್ಕೋಸ್ಕರ ವಿಭಜಿಸಿಕೊಂಡಿದ್ದಾರೆ. ಇದರಲ್ಲಿ ಆರಂಭಿಕ ಯತ್ನಗಳನ್ನು ನಡೆಸಿದವರು 'ಗ್ರೀಮ್' ಸಹೋದರರು. ಅವರು ದೊರೆತ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡಿದ್ದಾರೆ. ಅವುಗಳೆಂದರೆ,

ಅ. ಸ್ಥಳೀಯ ಐತಿಹ್ಯಗಳು

ಆ. ವಿವರಣಾತ್ಮಕ ಐತಿಹ್ಯಗಳು

ಇ. ಚಾರಿತ್ರಿಕ ಐತಿಹ್ಯಗಳು

ಈ ವರ್ಗೀಕರಣ ತುಂಬ ಸ್ಥೂಲವಾಗಿರುವುದು ಮೇಲ್ನೋಟಕ್ಕೆ ಕಂಡು ಬರುವ ವಿಚಾರ. ಇದರಲ್ಲಿ ಮೊದಲಿನ ವರ್ಗೀಕರಣವೇನೋ ಸಮರ್ಪಕವಾಗಿದೆ. ಆದರೆ ಎರಡನೆಯದಾದ 'ವಿವರಣಾತ್ಮಕ ಐತಿಹ್ಯಗಳು', 'ಸ್ಥಳೀಯ ಐತಿಹ್ಯ'ಗಳಲ್ಲಿ ಇಡಿಯಾಗಿ ಸೇರಿ ಹೋಗುತ್ತದೆ. ಬಹುತೇಕ ಜನಪದ ನಿರುಕ್ತಿಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿದ್ದು, ಆ ಊರಿನ ವೈಶಿಷ್ಟ್ಯವನ್ನು ಸಾರುತ್ತವೆ. ಇವುಗಳನ್ನು ಹೊರತುಪಡಿಸಿದರೆ 'ಕೇವಲ ಸ್ಥಳೀಯ' ಅನ್ನುವುದು ಉಳಿಯುವುದೇ ಇಲ್ಲ. ಮೂರನೆಯದಾದ 'ಚಾರಿತ್ರಿಕ ಐತಿಹ್ಯ'ಗಳು ಮೊದಲಿನ ಎರಡು ವಿಭಜನೆಗಳಲ್ಲಿರುವ ಚಾರಿತ್ರಿಕಾಂಶಗಳನ್ನೇ ಪ್ರಶ್ನಿಸಿಬಿಡುತ್ತವೆ. ಚರಿತ್ರೆಗೆ ನೇರವಾಗಿ ಸಂಬಂಧಿಸಿದೆ ಎನ್ನುವಾಗಲೂ ಅದು ಒಂದು ಪ್ರದೇಶಕ್ಕೆ ಬದ್ಧವಾಗಿರುತ್ತದೆ.[೨೦] ಈ ಕಾರಣಕ್ಕೆ ಗ್ರೀಮ್ ಸಹೋದರರ ವರ್ಗೀಕರಣವು ಸಾಕಷ್ಟು ಗೊಂದಲಕಾರಿಯಾಗಿದೆ. ಹಾಗೆ ನೋಡಿದರೆ ಎಲ್ಲ ಐತಿಹ್ಯಗಳನ್ನು 'ಸ್ಥಳೀಯ ಐತಿಹ್ಯ'ಗಳೆಂದೇ ಕರೆಯಬಹುದು.

ಜನಪದ ಗದ್ಯ ಸಾಹಿತ್ಯ ಪ್ರಕಾರಗಳಲ್ಲಿ ಪುರಾಣ, ಕಥೆ ಮತ್ತು ಐತಿಹ್ಯ ಎಂದು ಮೂರು ಪ್ರಕಾರವಾಗಿ ರಾಲ್ಫ್‌ಸ್ಟೀಲ್ ಬಾಗ್ಸ್(ಆರ್.ಎಸ್.ಬಾಗ್ಸ್) ವಿಂಗಡಿಸಿದ್ದಾರೆ. ಅವರು ಐತಿಹ್ಯಗಳನ್ನು ಏಳು ಭಾಗಗಳಾಗಿ ವಿಂಗಡಿಸಿಕೊಂಡು, ಮತ್ತೆ ಉಪವರ್ಗಗಳನ್ನು ಗುರುತಿಸಿಕೊಂಡಿದ್ದಾರೆ.

೧. ಅತಿಮಾನುಷವರ್ಗ :- ದೇವದೂತರು, ದಿವ್ಯಪುರುಷರು, ಯಕ್ಷ-ಯಕ್ಷಿಣಿ, ಪಿಶಾಚಿ, ಸೈತಾನ, ರಾಕ್ಷಸ ... ಇತ್ಯಾದಿ.

೨. ಮಾನವವರ್ಗ :- ಅ. ಏಸು, ಬೈಬಲ್ಲಿನ ಪಾತ್ರಗಳು, ಸಾಧು-ಸಂತರು ಮೊದಲಾದ ಧಾರ್ಮಿಕ ಪುರುಷರು

ಆ. ಚಾರ್ಲ್‌ಮಾನೆ, ವರ್ಜಿಲ್, ಜಾನ್‌ಹೆನ್ರಿ - ಮುಂತಾದ ಲೌಕಿಕ ವೀರರು

ಇ. ದೇಶಭ್ರಷ್ಟ ಅಪರಾಧಿ, ಡಕಾಯಿತ, ಕಡಲುಗಳ್ಳರು

ಈ. ಮೋಹಿನಿ, ಮಾಟಗಾತಿ(ರ) - ಮುಂತಾದವರು.

ಉ. ದೈತ್ಯ, ನರಭಕ್ಷಕ ಮನುಷ್ಯ, ಕುಬ್ಜ - ಮೊದಲಾದ ವಿಕಾರ ರೂಪಿಗಳು.

ಊ.ಗೂನು ಬೆನ್ನಿನ ವ್ಯಕ್ತಿ, ಹೆಳವ, ಕುರುಡ, ಕಿವುಡ, ಮೂಗ, ಅಂಗವಿಕಲರು

ಎ. ದೇಹದ ವಿವಿಧ ಅಂಗಗಳು

೩. ಪ್ರಾಣಿವರ್ಗ :- ಸಸ್ತನಿ, ಪಕ್ಷಿ, ಮೀನು, ಕ್ರಿಮಿ-ಕೀಟ

೪. ಆಕಾಶ ಕಾಯಗಳು :- ಸೂರ್ಯ, ಚಂದ್ರ, ಗ್ರಹ, ನಕ್ಷತ್ರ, ಧೂಮಕೇತು - ಇತ್ಯಾದಿ.

೫. ಪ್ರಕೃತಿದತ್ತ ವಸ್ತು-ಅಂಶಗಳು:- ಗಾಳಿ, ಹವೆ, ಬೆಂಕಿ - ಇತ್ಯಾದಿ.

೬. ಭೂಮಿ :- ಜೌಗುನೆಲ, ಕಾಡು, ಪರ್ವತ, ಕಣಿವೆ, ಗುಹೆ, ದ್ವೀಪ ಮೊದಲಾದವುಗಳ ರಚನೆಯ ವೈಶಿಷ್ಟ್ಯ, ಖನಿಜ, ಸಸ್ಯ, ಕಣ್ಮರೆಯಾದ ನಗರ, ಪಾಳುಬಿದ್ದ ಮನೆ, ಸುಡುಗಾಡು, ಗುಪ್ತನಿಧಿ.................. ಇತ್ಯಾದಿ

೭. ನೀರು :- ಸಾಗರ - ಸಮುದ್ರಗಳಂತಹ ಬೃಹತ್ ವ್ಯಾಪ್ತಿ ಉಳ್ಳವು, ಸರೋವರ, ಹೊಂಡಗಳಂತಹ ಕಿರಿಯ ನೀರಿನ ನೆಲೆಗಳು, ಬಾವಿ-ಕೊಳಗಳಂತಹ ಮಾನವ ನಿರ್ಮಿತ ನೀರಿನ ನೆಲೆಗಳು, ಹರಿಯುವ ನೀರು, ಬೃಹತ್ ಪ್ರವಾಹಗಳು, ಕಾಲುವೆ-ಕಾರಂಜಿಗಳಂತಹ ಮನುಷ್ಯ ನಿರ್ಮಿತ ಪ್ರವಾಹಗಳು.[೨೦]

ಅಂತರಾಷ್ಟ್ರೀಯಮಟ್ಟದ ವಿಚಾರಸಂಕಿರಣವೊಂದರಲ್ಲಿ ಐತಿಹ್ಯಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಳ್ಳಲಾಯಿತು.

೧. ವಿವರಣಾತ್ಮಕ ಮತ್ತು ಅಂತಿಮಗತಿಶಾಸ್ತ್ರದ ಐತಿಹ್ಯಗಳು

೨. ಚಾರಿತ್ರಿಕ ಐತಿಹ್ಯಗಳು ಮತ್ತು ನಾಗರಿಕತೆಯ ಚರಿತ್ರೆಗೆ ಸಂಬಂಧಿಸಿದ ಐತಿಹ್ಯಗಳು

೩. ಅತಿಮಾನುಷ ಶಕ್ತಿಗಳ ಅಥವಾ ಪೌರಾಣಿಕ ಐತಿಹ್ಯಗಳು

೪. ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರುಗಳ ಪುರಾಣಗಳು.[೨೨]

ಈ ವರ್ಗೀಕರಣವು ಕ್ರೈಸ್ತ ತಾತ್ವಿಕತೆಯನ್ನು ಆಧರಿಸಿದ್ದು, ಮೊದಲ ವರ್ಗೀಕರಣದಲ್ಲಿ ಬರುವ ಅಂತಿಮಗತಿಶಾಸ್ತ್ರವು ಮಾನವ ಜೀವನದ ಅಂತಿಮಘಟ್ಟದಲ್ಲಿ ಬರುವ ಸಾವು, ತೀರ್ಪು ಮತ್ತು ಸ್ವರ್ಗ, ನರಕಗಳಿಗೆ ಸಂಬಂಧಿಸಿದೆ. ಎರಡನೆಯ ವರ್ಗೀಕರಣ ಗೊಂದಲಕಾರಿಯಾಗಿದೆ. ಏಕೆಂದರೆ ಚರಿತ್ರೆಯು ತನ್ನ ಪರಿಸರದ ಎಲ್ಲವನ್ನು ಒಳಗೊಂಡು ಪ್ರಬುದ್ಧವಾಗಿದೆ. ಇದರಲ್ಲಿ ನಾಗರಿಕತೆಯೂ ಅಡಗಿದೆ. ಚರಿತ್ರೆಯ ಕ್ರಿಯಾಶೀಲತೆಯು ಗುರುತರವಾದ ಆರ್ಥಿಕ ದಾಟುವಿಕೆಗಳನ್ನು ಹೊಂದಿದ್ದು ಅಂತಿಮಗತಿಶಾಸ್ತ್ರದ ತಾತ್ವಿಕತೆಯನ್ನು ರೂಪಿಸಿದೆ. ಮೂರು ಮತ್ತು ನಾಲ್ಕನೆಯ ವರ್ಗೀಕರಣದ ಅಂಶಗಳಲ್ಲಿ ಅಂಥ ವ್ಯತ್ಯಾಸ ಇಲ್ಲ. ಪುರಾಣ ಪುರುಷರಿಗೆ ಅತಿಮಾನುಷ ಶಕ್ತಿಗಳು ಪ್ರಾಪ್ತವಾಗುತ್ತವೆ. ಅವರೇ ದೇಶದ ಧಾರ್ಮಿಕ ಚಿಂತನೆಯ ಕೇಂದ್ರಗಳಾಗುತ್ತಾರೆ.

ಸಾಮಾಜಿಕ ನಾಯಕರುಗಳು ಪುರಾಣ ಪುರುಷರ ಆಕೃತಿ ಪಡೆಯುತ್ತಾರೆ. ಏನಿದ್ದರೂ ಈ ವರ್ಗೀಕರಣ ಯುರೋಪಿನ ಚಿಂತನೆಯನ್ನು ಆಧರಿಸಿದ್ದು, ಭಾರತದಂಥ ದೇಶಕ್ಕೆ ಅನ್ವಯವಾಗುವುದಿಲ್ಲ.

ಅಮೇರಿಕಾದ ಜಾನಪದ ವಿದ್ವಾಂಸರು ಅಲ್ಲಿ ಪ್ರಚಲಿತವಿರುವ ಐತಿಹ್ಯಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ.

೧. ಜನಪದ ಐತಿಹ್ಯಗಳು

೨. ಜನಪ್ರಿಯ ಐತಿಹ್ಯಗಳು

೩. ಸಾಹಿತ್ಯಿಕ ಐತಿಹ್ಯಗಳು

ಇದು ತುಂಬ ಸರಳವಾದ ವಿಧಾನ. ಇದರ ಪ್ರಧಾನ ದೋಷ ಮೊದಲ ಎರಡು ವರ್ಗೀಕರಣದಲ್ಲಿದೆ. ಜನಪದ ಐತಿಹ್ಯವೊಂದು ಜನಪ್ರಿಯವೂ ಆದಾಗ ವರ್ಗೀಕರಣದಲ್ಲಿ ಸಡಿಲತೆ ಕಾಣಿಸುತ್ತದೆ. ಕೊನೆಯದಾದ ಸಾಹಿತ್ಯಿಕ ಐತಿಹ್ಯಗಳಲ್ಲಿ ಜನಪದ ಸಾಹಿತ್ಯವೂ ಸೇರುವುದರಿಂದ ಪ್ರತ್ಯೇಕತೆಗೆ ಅರ್ಥವೇ ಉಳಿಯುವುದಿಲ್ಲ.

ಜಾನಪದ ತಜ್ಞರಲ್ಲಿ ದೊಡ್ಡ ಹೆಸರಾಗಿರುವ ರಿಚರ್ಡ್ ಡಾರ್ಸನ್ನರು ಐತಿಹ್ಯಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ.

೧. ವ್ಯಕ್ತಿ ಐತಿಹ್ಯಗಳು

೨. ಸ್ಥಳ ಐತಿಹ್ಯಗಳು

೩. ಘಟನಾ ಐತಿಹ್ಯಗಳು[೨೩]

ಜಾಗತಿಕ ಮಟ್ಟದ ಈ ವರ್ಗೀಕರಣದಲ್ಲಿ 'ಲೆಜೆಂಡ್' ಎಂಬ ಪದ ವಿಶಾಲಾರ್ಥವನ್ನು ಹೊಂದಿರುವಂಥದ್ದು. ನಮ್ಮಲ್ಲಿ ಅದಕ್ಕೆ ಸಂವಾದಿಯಾಗಿ ಐತಿಹ್ಯ ಎಂಬ ಪದ ಬಳಸುತ್ತಿದ್ದರೂ ಕೂಡ, ನಮ್ಮಲ್ಲಿಯ ದಂತಕಥೆಗಳು ಜಾಗತಿಕ ಮಟ್ಟದಲ್ಲಿ 'ಲೆಜೆಂಡ್' ವ್ಯಾಪ್ತಿಗೆ ಸೇರಿಕೊಳ್ಳುತ್ತವೆ. ಹೀಗಾಗಿ ಆರ್.ಎಸ್. ಬಾಗ್ಸ್ ವರ್ಗೀಕರಣದಲ್ಲಿ ನಮ್ಮಲ್ಲಿಯ ಕೆಲವು ಐತಿಹ್ಯಗಳನ್ನು ವರ್ಗೀಕರಿಸಿಕೊಳ್ಳಬಹುದಾದರೂ ಅಲ್ಲಿನ ಎಲ್ಲಾ ವರ್ಗ-ಉಪವರ್ಗಗಳಿಗೆ ಸರಿ ಹೊಂದುವ ಐತಿಹ್ಯಗಳು ನಮ್ಮಲ್ಲಿ ದೊರೆಯಲಾರವು. ಏಕೆಂದರೆ ಅಲ್ಲಿಯ ಕೆಲವು ಐತಿಹ್ಯಗಳು(ಅಂಶಗಳು) ನಮ್ಮಲ್ಲಿ ದಂತಕಥೆಗಳಾಗಿ ಮಾತ್ರ ಅನಾವರಣವಾಗಿರುವುದರಿಂದ.

ಗ್ರೀಮ್ ಸಹೋದರರ ವರ್ಗೀಕರಣದಲ್ಲಿಯ ವಸ್ತು-ವಿಷಯಗಳ ವಿಂಗಡಣೆ ನಮ್ಮಲ್ಲಿಯ ಐತಿಹ್ಯಗಳಿಗೆ ಸರಿ ಹೊಂದುವುದಿಲ್ಲ. ಏಕೆಂದರೆ ಸ್ಥಳೀಯ ಐತಿಹ್ಯಗಳು ಕೆಲವೊಮ್ಮೆ ವಿವರಣಾತ್ಮಕವಾಗಿಯೂ, ಚಾರಿತ್ರಿಕವಾಗಿಯೂ ಆಗಿರುವ ಸಾಧ್ಯತೆ ಇದೆ. ಅಮೇರಿಕಾದ ಜನಪದ ಐತಿಹ್ಯಗಳು ಜನಪ್ರಿಯವೂ, ಸಾಹಿತ್ಯಿಕವೂ ಆಗಿರುವುದರಿಂದ ಈ ಮೇಲಿನ ಜಾಗತಿಕ ಮಟ್ಟದ ಯಾವೊಂದು ವರ್ಗೀಕರಣವು ಸಂಪೂರ್ಣವಾಗಿ ನಮ್ಮಲ್ಲಿರುವ ಐತಿಹ್ಯಗಳಿಗೆ ಅನ್ವಯವಾಗುವುದಿಲ್ಲ.

ಆದರೆ ರಿಚರ್ಡ್ ಡಾರ್ಸನ್ನರು ಸ್ಪಷ್ಟಪಡಿಸಿದಂತೆ ವಸ್ತುವಿನ ನಿರ್ವಹಣೆಯಲ್ಲಿ ಇತರ ಅಂಶಗಳು ಸೇರ್ಪಡೆಯಾದರೂ ವಸ್ತುವಿನ ಪ್ರಧಾನ ಒತ್ತು ಒಬ್ಬ ವ್ಯಕ್ತಿ, ಒಂದು ಸ್ಥಳ ಅಥವಾ ಒಂದು ಘಟನೆಗೆ ಸಂಬಂಧಿಸಿರುತ್ತದೆ. ಭಾರತೀಯ ಸಂದರ್ಭದ ಐತಿಹ್ಯಗಳನ್ನು ಇದರಲ್ಲಿ ಒಂದಲ್ಲ ಒಂದು ವರ್ಗಕ್ಕೆ ಸೇರಿಸಬಹುದಾದರೂ ಅದನ್ನು ಇನ್ನಷ್ಟು ವಿಸ್ತರಿಸಿಕೊಳ್ಳಬೇಕಾಗುತ್ತದೆ.

ಐತಿಹ್ಯಗಳ ಬಗೆಗೆ ಕನ್ನಡ ನಾಡಿನಲ್ಲಿ ಅಧ್ಯಯನ ಪ್ರಾರಂಭವಾದಾಗ ಅಧ್ಯಯನದ ಅನುಕೂಲಕ್ಕಾಗಿ ವಿವಿಧ ವಿದ್ವಾಂಸರು ಈ ಕೆಳಗಿನಂತೆ ಐತಿಹ್ಯಗಳನ್ನು ವರ್ಗೀಕರಿಸಿಕೊಂಡಿದ್ದಾರೆ.

ವಸ್ತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಕನ್ನಡ ವಿಶ್ವಕೋಶದಲ್ಲಿ ಐತಿಹ್ಯಗಳನ್ನು ಮೂರು ರೀತಿಯಿಂದ ವರ್ಗೀಕರಿಸಿದ್ದಾರೆ.

೧. ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು.

೨. ಅತಿಮಾನುಷ ವ್ಯಕ್ತಿಗಳ ಕುರಿತ ಐತಿಹ್ಯಗಳು.

೩. ಐತಿಹಾಸಿಕ ಅಥವಾ ಮಿಥ್ಯೆತಿಹಾಸಿಕ ಐತಿಹ್ಯಗಳು.

ಮೊದಲನೆಯ ಗುಂಪಿನಲ್ಲಿ : ಪುರಾಣ ಸಂಪರ್ಕ ಹೊಂದಿದ ಮತ್ತು ಧಾರ್ಮಿಕ ಐತಿಹ್ಯಗಳನ್ನು ಸೇರಿಸಲಾಗಿದೆ.

ಎರಡನೆಯ ಗುಂಪಿನಲ್ಲಿ : ಕಿನ್ನರಕತೆ, ದೆವ್ವ, ಪಿಶಾಚಿಗಳ ಕತೆಯನ್ನು ಸೇರಿಸಲಾಗಿದೆ.

ಮೂರನೆಯ ಗುಂಪಿನಲ್ಲಿ : ಐತಿಹಾಸಿಕ ಗಣ್ಯವ್ಯಕ್ತಿಗಳನ್ನು, ಭ್ರಾಂತಿ ಮೂಲ ವ್ಯಕ್ತಿಗಳನ್ನು ಸೇರಿಸಲಾಗಿದೆ.

ಈ ವರ್ಗೀಕರಣವು ಕೇವಲ ಕ್ರೈಸ್ತ ಮೂಲ ತಾತ್ವಿಕತೆಯೊಡನೆ ಮಾತ್ರ ಸಂಬಂಧ ಹೊಂದಿರುವಂಥದ್ದು. ಅಲ್ಲದೆ ಐತಿಹ್ಯಗಳಿಂದ ಬೇರೆಯೇ ಆದ ಸ್ವರೂಪವುಳ್ಳ ಕತೆಗಳನ್ನು, ಪುರಾಣಗಳನ್ನು ಒಳಗೊಂಡು ಸಂಕೀರ್ಣವಾಗುತ್ತ ಅಭಿವ್ಯಕ್ತಿ ಹೊಂದುತ್ತದೆ.

ವಿತರಣೆಯ ದೃಷ್ಟಿಯಿಂದ ಐತಿಹ್ಯಗಳನ್ನು ಇದೇ ವಿಶ್ವಕೋಶದಲ್ಲಿ ಎರಡು ರೀತಿಯಿಂದ ವರ್ಗೀಕರಿಸಲಾಗಿದೆ.

೧. ಸ್ಥಳೀಯ ಐತಿಹ್ಯಗಳು

೨. ವಲಸೆಯ ಐತಿಹ್ಯಗಳು

ಮೊದಲನೆಯದಾದ ಸ್ಥಳೀಯ ಐತಿಹ್ಯಗಳಲ್ಲಿ ಮತ್ತೆ ಆರು ಒಳಪ್ರಕಾರಗಳನ್ನು ಗುರುತಿಸಲಾಗಿದೆ.

೧. ಪ್ರವಾಹ ಐತಿಹ್ಯ

೨. ಬಲಿಗಳ ಐತಿಹ್ಯ

೩. ಕೌಟುಂಬಿಕ ಐತಿಹ್ಯ

೪. ಚಾರಿತ್ರಿಕ ಐತಿಹ್ಯ

೫. ಜನಪದ ನಿರುಕ್ತಿಯ ಐತಿಹ್ಯ

೬. ವಿವರಣಾತ್ಮಕ ಐತಿಹ್ಯ[೨೪]

ಈ ವರ್ಗೀಕರಣ ಐತಿಹ್ಯಗಳ ವಿತರಣೆ ಅಥವಾ ಪ್ರಸಾರದ ದೃಷ್ಟಿಯಿಂದ ಮಹತ್ವವಾದುದೇನೋ ನಿಜ. ಆದರೆ ಇವು ಐತಿಹ್ಯಗಳ ಅಗತ್ಯ ಗುಣಗಳನ್ನು ವಿವರಿಸುವುದಿಲ್ಲ. ಏಕೆಂದರೆ ಎಷ್ಟೋ ಬಾರಿ ವಲಸೆಯ ಐತಿಹ್ಯ ಮತ್ತು ಸ್ಥಳೀಯ ಐತಿಹ್ಯಗಳು ಒಂದಕ್ಕೊಂದು ಬೆರೆತು ಹೊಸ ರೂಪವನ್ನು ಪಡೆಯುವುದರಿಂದ.

ಜೀ.ಶಂ.ಪರಮಶಿವಯ್ಯ ಅವರು ಐತಿಹ್ಯಗಳನ್ನು ವಸ್ತುವಿನ ಬಾಳಿಕೆಯ ಆಧಾರದ ಮೇಲೆ ಎರಡು ರೀತಿಯಿಂದ ವರ್ಗೀಕರಿಸಿದ್ದಾರೆ.

೧. ಸ್ಥಿರ ಐತಿಹ್ಯಗಳು

೨. ಅಸ್ಥಿರ ಐತಿಹ್ಯಗಳು

ಮುಂದುವರೆದು ಐತಿಹ್ಯಗಳ ಗುಣ ಸ್ವಭಾವದ ಆಧಾರದ ಮೇಲೆ ಮತ್ತೆ ಎರಡು ರೀತಿಯಾಗಿ ವರ್ಗೀಕರಿಸಿದ್ದಾರೆ.

೧. ಸ್ಥಳೀಯ ಐತಿಹ್ಯಗಳು

೨. ಸಂಚಾರಿ ಐತಿಹ್ಯಗಳು[೨೫]

ಯಾವ ವಸ್ತುಗಳೆಲ್ಲಾ ಸ್ಥಿರವಾಗಿ ಉಳಿಯುವವೋ ಅಂಥವುಗಳ ಮೇಲೆ ಹುಟ್ಟಿಕೊಂಡು, ಪ್ರಸಾರವಾಗುವ ಐತಿಹ್ಯಗಳು ಸ್ಥಿರ ಐತಿಹ್ಯಗಳೆನಿಸುತ್ತವೆ.

ಉದಾ:- ಬೆಟ್ಟ, ಗುಡ್ಡ, ಹೆಬ್ಬಂಡೆ, ನದಿ, ಸರೋವರ, ಸಮುದ್ರ, ಆಕಾಶ... ಇತ್ಯಾದಿ.

ಯಾವ ವಸ್ತುಗಳೆಲ್ಲಾ ದೀರ್ಘಕಾಲ ಉಳಿಯದೆ ನಾಶವಾಗಿ ಹೋಗುತ್ತವೆಯೋ ಅಂಥವುಗಳ ಮೇಲೆ ಹುಟ್ಟಿ, ಬೆಳೆಯುವ ಐತಿಹ್ಯಗಳು ಅಸ್ಥಿರ ಐತಿಹ್ಯಗಳೆನಿಸುತ್ತವೆ.

ಉದಾ:- ಮರ, ಕಟ್ಟಡ, ಕೆರೆ-ಕಟ್ಟೆಗಳು, ಮನುಷ್ಯ ಸಂಬಂಧಿ ಐತಿಹ್ಯಗಳು... ಇತ್ಯಾದಿ..

ದೇ. ಜವರೇಗೌಡ ಅವರು ಐತಿಹ್ಯಗಳನ್ನು ಎರಡು ರೀತಿಯಾಗಿ ವರ್ಗೀಕರಿಸಿದ್ದಾರೆ.

೧. ಸ್ಥಳೀಯ ಅಥವಾ ಪ್ರಾದೇಶಿಕ ಐತಿಹ್ಯ

೨. ಪ್ರವಾಸಿ ಐತಿಹ್ಯ[೨೬]

ಸ್ಥಳೀಯ ಐತಿಹ್ಯಗಳು ಘಟನಾ ಪ್ರಧಾನವಾಗಿದ್ದು, ಸ್ವರೂಪದಲ್ಲಿ ಸಣ್ಣವಿರುತ್ತವೆ. ಅವುಗಳಲ್ಲಿ ಆಶಯಗಳು ಕಡಿಮೆ. ಅವು ಒಂದು ನಿರ್ದಿಷ್ಟ ಪ್ರದೇಶಕ್ಕೆ ಸಂಬಂಧಿಸಿರುತ್ತವೆ. ಇಂಥದ್ದೇ ಘಟನೆ ಮತ್ತಾವುದೋ ಪ್ರದೇಶದಲ್ಲಿ ನಡೆದಾಗ ಸ್ಥಳೀಯ ಐತಿಹ್ಯಗಳ ಆಶಯಗಳು ವಲಸೆಗೊಳ್ಳುತ್ತವೆ

ಅಥವಾ ಸಂಚಾರಿ ಐತಿಹ್ಯಗಳು ಪಾಠಾಂತರಗಳಿಂದ ಕೂಡಿ ಬೇರೆ ಬೇರೆ ಪ್ರದೇಶಗಳಲ್ಲಿ ಸ್ಥಳೀಯ ಎನ್ನುವಂತೆ ಲಭ್ಯವಾಗುತ್ತವೆ. ಹೀಗಾಗಿ ಇವುಗಳಲ್ಲಿನ ಆಶಯಗಳ ಸಂಕೀರ್ಣತೆ ಮತ್ತು ಗಾತ್ರ ವಿಸ್ತಾರತೆಯಿಂದಾಗಿ ಯಾವುದು ಸ್ಥಳೀಯ, ಯಾವುದು ಪ್ರವಾಸಿ ಐತಿಹ್ಯವೆಂದು ನಿರ್ಧರಿಸುವುದು ಕಷ್ಟ ಸಾಧ್ಯವಾದುದು.

ಜಿ.ವಿ. ದಾಸೇಗೌಡ ಅವರು ಐತಿಹ್ಯಗಳನ್ನು ಸ್ಥಳ ಮತ್ತು ವಸ್ತು ಆಧರಿಸಿ ಎರಡು ರೀತಿಯಲ್ಲಿ ವರ್ಗೀಕರಿಸಿದ್ದಾರೆ.

೧. ಸ್ಥಳೀಯ ಐತಿಹ್ಯಗಳು

೨. ಸಂಚಾರಿ ಐತಿಹ್ಯಗಳು[೨೬]

ಎ. ಸುಬ್ಬಣ್ಣ ರೈ ಅವರು 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' ಎಂಬ ತಮ್ಮ ಸಂಶೋಧನಾ ಪ್ರಬಂಧದಲ್ಲಿ ಐತಿಹ್ಯಗಳನ್ನು ವಸ್ತುದೃಷ್ಟಿಯಿಂದ ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಅಧ್ಯಯನ ಮಾಡಿದ್ದಾರೆ.

೧. ವ್ಯಕ್ತಿ ಐತಿಹ್ಯಗಳು

೨. ಘಟನಾ ಐತಿಹ್ಯಗಳು

೩. ಸ್ಥಳ ಐತಿಹ್ಯಗಳು

೪. ಪ್ರಾಣಿ-ಪಕ್ಷಿ ಐತಿಹ್ಯಗಳು

೫. ಪ್ರಕೃತಿ ವೈಚಿತ್ರ್ಯಗಳಿಗೆ ಮತ್ತು ಸೃಷ್ಟಿ ವಿಶೇಷಗಳಿಗೆ ಸಂಬಂಧಪಟ್ಟ ಐತಿಹ್ಯಗಳು

೬. ಇತರ ವಸ್ತು ಐತಿಹ್ಯಗಳು

ಈ ಮೇಲಿನ ವರ್ಗೀಕರಣವನ್ನೇ ವಿಸ್ತರಿಸಿ, ಮುಂದುವರೆದು ಐತಿಹ್ಯಗಳನ್ನು ಆಶಯದ ಆಧಾರದ ಮೇಲೆ ವರ್ಗೀಕರಿಸಿಕೊಳ್ಳಬಹುದೆಂದು ಹೇಳಿದ್ದಾರೆ.

೧. ವೀರತನದ ಐತಿಹ್ಯ, ೨. ಸಾಹಸ ಗುಣದ ಐತಿಹ್ಯ, ೩. ತ್ಯಾಗ ಗುಣದ ಐತಿಹ್ಯ, ೪. ಪ್ರಾಮಾಣಿಕತೆಯ ಐತಿಹ್ಯ, ೫. ಜಾಣತನದ ಐತಿಹ್ಯ, ೬. ಮುಗ್ಧತೆಯ ಐತಿಹ್ಯ, ೭. ಹೆಡ್ಡತನದ ಐತಿಹ್ಯ, ೮. ಛಲಗುಣದ ಐತಿಹ್ಯ, ೯. ಅಹಂಕಾರತನದ ಐತಿಹ್ಯ, ೧೦. ಜಿಪುಣತನದ ಐತಿಹ್ಯ, ೧೧. ಮಾತ್ಸರ್ಯದ ಐತಿಹ್ಯ, ೧೨. ಒರಟುತನದ ಐತಿಹ್ಯ, ೧೩. ಪ್ರತೀಕಾರ ಗುಣದ ಐತಿಹ್ಯ, ೧೪. ಸೋಮಾರಿತನದ ಐತಿಹ್ಯ, ೧೫. ಮರೆಗುಳಿತನದ ಐತಿಹ್ಯ, ೧೬. ದಿಟ್ಟತನದ ಐತಿಹ್ಯ, ೧೭. ಶೋಷಣೆಯ ಐತಿಹ್ಯ, ೧೮. ಪರೋಪಕಾರ ಗುಣದ ಐತಿಹ್ಯ[೨೮]

ತಾಳ್ತಜೆ ವಸಂತಕುಮಾರ ಅವರು ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳ ಕುರಿತ ವಿಶ್ಲೇಷಣಾತ್ಮಕ ಸಂಪ್ರಬಂಧದಲ್ಲಿ ರಿಚರ್ಡ್ ಡಾರ್ಸನ್ನರ ವರ್ಗೀಕರಣವನ್ನೇ ಆಶ್ರಯಿಸಿ ಐತಿಹ್ಯಗಳನ್ನು ಮೂರು ರೀತಿಯಾಗಿ ವರ್ಗೀಕರಿಸಿದ್ದಾರೆ.

೧. ವ್ಯಕ್ತಿಪ್ರಧಾನ ಐತಿಹ್ಯಗಳು

೨. ಸ್ಥಳಪ್ರಧಾನ ಐತಿಹ್ಯಗಳು

೩. ಘಟನಾಪ್ರಧಾನ ಐತಿಹ್ಯಗಳು[೨೫]

ಕನ್ನಡದ ಸಂದರ್ಭದಲ್ಲಿ ಮೇಲಿನ ವರ್ಗೀಕರಣವು ಸಮರ್ಪಕವಾಗಿ ಹೊಂದಿಕೆಯಾಗುವುದರಿಂದ ಅದೇ ಕ್ರಮವನ್ನು ಉಳಿಸಿಕೊಳ್ಳಬಹುದು. ತನ್ನೆಲ್ಲ ಮಿತಿಗಳ ಮಧ್ಯೆಯೂ ಡಾರ್ಸನ್ನರ ವರ್ಗೀಕರಣವೇ ನಮಗೆ ಮಾದರಿಯಾಗಬಹುದು.

**೨.೨.೧. ವ್ಯಕ್ತಿಪ್ರಧಾನ ಐತಿಹ್ಯಗಳು**

ಎಲ್ಲ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಬದಲಾಗಿ ಯಾವ ವ್ಯಕ್ತಿ ಅಸಾಮಾನ್ಯ ಸಾಧನೆಗಳನ್ನೆಸಗಿರುತ್ತಾನೋ, ತನ್ನ ತಾಳ್ಮೆ-ಸನ್ನಡತೆಗಳಿಂದಾಗಿ ಯಾರು ಪ್ರಖ್ಯಾತರಾಗಿರುತ್ತಾರೋ ಅಂಥವರ ಮೇಲೆ ಒಂದಿಲ್ಲಾದರೊಂದು ಐತಿಹ್ಯ ಹುಟ್ಟಿಕೊಳ್ಳುತ್ತದೆ. ಸಮಾಜ ಸೇವೆ, ಪರೋಪಕಾರ, ಸಾಹಸಕಾರ್ಯ, ಶೌರ್ಯ ಪ್ರದರ್ಶನ ಮೊದಲಾದ ಕಾರ್ಯಗಳನ್ನೆಸಗಿ ಪ್ರಖ್ಯಾತರಾದವರ ಬಗೆಗೂ; ಕಳ್ಳತನ, ಕೊಲೆ, ಸುಲಿಗೆ, ದರೋಡೆ, ವಿಧ್ವಂಸಕ ಕೃತ್ಯಗಳು - ಇತ್ಯಾದಿಗಳನ್ನೆಸಗಿ ಕುಖ್ಯಾತರೆನಿಸಿದವರ ಬಗೆಗೂ ಐತಿಹ್ಯಗಳು ಹುಟ್ಟಿಕೊಳ್ಳುವುದು ಸ್ವಾಭಾವಿಕ.

ಈ ಐತಿಹ್ಯಗಳಲ್ಲಿ ಅಸಾಮಾನ್ಯವಾದ ಅಥವಾ ಉತ್ತಮ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆ ಇರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳು ಈ ವ್ಯಕ್ತಿಯ ಸಾಧನೆಗೆ ಪೋಷಕವಾಗಿಯೇ ಬರುತ್ತವೆ. ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಅಲ್ಲಿ ಸ್ಥಳದ ಮಹತ್ವಿಕೆಯನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಲೂಬಹುದು.

ಇಂಥ ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳನ್ನು ಮತ್ತೆ ಎರಡು ರೀತಿಯಿಂದ ವರ್ಗೀಕರಿಸಬಹುದು.

೧. ಪೌರಾಣಿಕ ವ್ಯಕ್ತಿ ಐತಿಹ್ಯಗಳು

೨. ಐತಿಹಾಸಿಕ ವ್ಯಕ್ತಿ ಐತಿಹ್ಯಗಳು

**೨.೨.೧.೧. ಪೌರಾಣಿಕ ವ್ಯಕ್ತಿ ಐತಿಹ್ಯಗಳು:-** ಐತಿಹಾಸಿಕ ವ್ಯಕ್ತಿಗಳಾಗಿ ರೂಪು ತಳೆದು ವರ್ತಮಾನದ ವಿವರಣೆಯನ್ನು ನಿಯಂತ್ರಿಸುತ್ತಾರೆ. ಕರ್ನಾಟಕದಾದ್ಯಂತ ಕಂಡುಬರುವ ಭೀಮ, ರಾಮ, ಸೀತೆ, ರಾವಣ, ವಾಲಿ, ಸುಗ್ರೀವ, ಶಿವ-ಪಾರ್ವತಿ, ವೀರಭದ್ರ, ಕೃಷ್ಣ, ಪರಶುರಾಮ ಮೊದಲಾದವರ ಐತಿಹ್ಯವನ್ನು ಈ ವರ್ಗಕ್ಕೆ ಸೇರಿಸಬಹುದು.

**೨.೨.೧.೨. ಐತಿಹಾಸಿಕ ವ್ಯಕ್ತಿ ಐತಿಹ್ಯಗಳು:-** ಕುಮಾರರಾಮ, ವಿಕ್ರಮಾದಿತ್ಯ, ಕುಮಾರವ್ಯಾಸ, ರಾಘವಾಂಕ, ಮಧ್ವಾಚಾರ್ಯರು, ಕೃಷ್ಣದೇವರಾಯ ಮೊದಲಾದವರು ಸೇರ್ಪಡೆಯಾಗುತ್ತಾರೆ. ಇಂಥ ಅಧ್ಯಯನಗಳ ಅಭ್ಯಾಸಕ್ಕೆ ನಾವು ಅನ್ಯಶಿಸ್ತುಗಳ ಜ್ಞಾನವನ್ನು ಪಡೆಯಬೇಕಾಗುತ್ತದೆ. ಏಕೆಂದರೆ ಪೌರಾಣಿಕ ಮತ್ತು ಐತಿಹಾಸಿಕ ವ್ಯಕ್ತಿಗಳ ಮೂಲ ಸ್ವರೂಪವನ್ನು ಪತ್ತೆ ಹಚ್ಚುವುದು

ತ್ರಾಸದಾಯಕ ಕೆಲಸ. ಭಾರತದಲ್ಲಿ ಇತಿಹಾಸ ಮತ್ತು ಪುರಾಣ ಒಂದರಂತೆ ನಿರೂಪಿತ ವಾಗಿರುವುದೇ ಇದಕ್ಕೆ ಕಾರಣ.

**೨.೨.೨. ಸ್ಥಳಪ್ರಧಾನ ಐತಿಹ್ಯಗಳು**

ಇವು ಪ್ರಧಾನವಾಗಿ ವ್ಯಕ್ತಿನಿಷ್ಠವಾದುವುಗಳು. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ, ಸ್ಥಳಕ್ಕೆ ಹೆಚ್ಚಿನ ಮಹತ್ವ ಸಂದಾಯವಾಗುತ್ತದೆ. ಸ್ಥಳದ ಪ್ರತ್ಯೇಕತೆ ಅಥವಾ ಅಸಾಧಾರಣತ್ವವೇ ಐತಿಹ್ಯಗಳಿಗೆ ಬುನಾದಿಯಾಗಿ ಕೆಲಸ ಮಾಡುತ್ತದೆ. ಒಂದು ಸ್ಥಳಕ್ಕೆ ಇರುವ ಹೆಸರಿನ ಹುಟ್ಟನ್ನು ಇಂತಹ ಐತಿಹ್ಯಗಳು ಶೋಧಿಸುವಂತೆ ಮಾಡುತ್ತವೆ. ದೊಡ್ಡದಾದ ಬೆಟ್ಟ, ಗುಡ್ಡಗಳು, ದಿಬ್ಬಗಳು, ವಿಶಾಲವಾದ ಕೆರೆ, ಆಳವಾದ ಬಾವಿ, ಸರೋವರ, ಅಸಂಖ್ಯಾತ ವಸ್ತುಗಳು ಇದರಲ್ಲಿ ಅಡಕವಾಗುತ್ತವೆ. ಸಂಖ್ಯಾ ದೃಷ್ಟಿಯಿಂದ ಇದಕ್ಕೆ ಮೊದಲ ಸ್ಥಾನ ನೀಡಬೇಕಾಗುತ್ತದೆ.

**೨.೨.೩. ಘಟನಾಪ್ರಧಾನ ಐತಿಹ್ಯಗಳು**

ಇಲ್ಲಿ ಒಂದು ನಿರ್ದಿಷ್ಟ ಘಟನೆ ಪ್ರಧಾನವಾಗಿದ್ದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಎಷ್ಟೋ ಬಾರಿ ಒಬ್ಬ ವ್ಯಕ್ತಿ ಇರುವುದರ ಬದಲು, ಜನರ ಗುಂಪು ಅಥವಾ ಜನಸಮೂಹವೇ ಇರುತ್ತದೆ. ಶೃಂಗೇರಿಯ ದೇವಸ್ಥಾನವನ್ನು ಹೊಳೆಯಾಚೆಗೆ ಎಳೆಯಲು ಮಾಡಿದ ಪ್ರಯತ್ನವೊಂದನ್ನು ಹೇಳುವ ಐತಿಹ್ಯ ಇದಕ್ಕೆ ಮಾದರಿ ಉದಾಹರಣೆ. ಇದೇ ರೀತಿ ಶಿವಲಿಂಗವನ್ನು ಆನೆಯಿಂದ ಕಟ್ಟಿ ಎಳೆಸಿದಾಗ ಶಿವಲಿಂಗದಲ್ಲಿ ರಕ್ತ ಬಂದದ್ದು, ಮೇಯುತ್ತಿದ್ದ ಕೋಣಗಳು ಇದ್ದಕ್ಕಿದ್ದಂತೆ ಕಲ್ಲಾದದ್ದು, ಶಿವಲಿಂಗಕ್ಕೆ ಬಿಳಿಯ ದನ ಹಾಲುಣಿಸಿದ್ದು, ಸರ್ಪಗಳು ಹೂಳಿಟ್ಟ ನಿಧಿಯನ್ನು ಕಾಯುತ್ತಾ ಮಲಗಿದ್ದು, ಹರಿಹರನು ರಾಘವಾಂಕನ ಹಲ್ಲು ಮುರಿದದ್ದು... ಇತ್ಯಾದಿಗಳು ಈ ವರ್ಗದಲ್ಲಿ ಬರುತ್ತವೆ. ಒಂದು ನಿರ್ದಿಷ್ಟ ಘಟನೆಯೊಂದು ಇಲ್ಲಿ ಸಮೂಹದ ಮೇಲೆ ಪರಿಣಾಮ ಬೀರುತ್ತವೆ.

ಹೀಗೆ ಐತಿಹ್ಯಗಳು ಬಹು ವಿಧವಾಗಿರುತ್ತವೆ. ಆದ್ದರಿಂದಲೆ ಚಿದಾನಂದಮೂರ್ತಿ ಅವರು 'ಐತಿಹ್ಯವು ಚರಿತ್ರೆಯ ರಹಸ್ಯ ಸತ್ಯವೊಂದನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡು ಜನರನ್ನು ಸಂಜ್ಞೆಯ ಮೂಲಕ ಆಳುತ್ತಿರುತ್ತದೆ. ಐತಿಹ್ಯದ ಆಶ್ರಯವಿಲ್ಲದೇ ಜನಪದರ ಜೀವನ ಕ್ರಮ ಸುಗಮವಾಗಿ ಸಾಗಲಾರದು'[೩೦] ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದು.

**ಉಲ್ಲೇಖ ಹಾಗೂ ಟಿಪ್ಪಣಿಗಳು**

೧. ಶಂಕರನಾರಾಯಣ.ತೀ.ನಂ.(ಸಂ), ೨೦೦೪. **ಜನಪದ ಸಾಹಿತ್ಯ ಪ್ರಕಾರಗಳು,** ಪುಟ ೧೦೫-೧೦೬.

೨. ಕಿಟ್ಟೆಲ್.ಆರ್.ಎಫ್.(ಸಂ). ೧೯೮೩. **ಎ ಕನ್ನಡ-ಇಂಗ್ಲೀಷ್ ಡಿಕ್ಷನರಿ,** ಪುಟ ೨೯೫.

೩. ಬಸವರಾಧ್ಯ.ಎನ್.(ಪ್ರ.ಸಂ.). ೨೦೧೧. **ಸಂಕ್ಷಿಪ್ತ ಕನ್ನಡ ನಿಘಂಟು(ಪರಿಷ್ಕೃತ),** ಪುಟ ೧೮೩.

೪. ಶಿವರಾಮಕಾರಂತ(ಸಂ). ೧೯೬೭. **ಸಿರಿಗನ್ನಡ ಅರ್ಥಕೋಶ,** ಪುಟ ೭೭

೫. ನಾಯಕ.ಹಾ.ಮಾ.(ಪ್ರ.ಸಂ.). ೧೯೭೧. **ಕನ್ನಡ ವಿಶ್ವಕೋಶ, ಸಂಪುಟ-೩,** ಪುಟ ೨೫೭

೬. ಚಂದ್ರಶೇಖರ ಕಂಬಾರ(ಸಂ). ೧೯೮೫. **ಕನ್ನಡ ಜಾನಪದ ವಿಶ್ವಕೋಶ,** ಪುಟ ೨೫೦.

೭. **ಇಂಗ್ಲೀಷ್-ಕನ್ನಡ ನಿಘಂಟು,** ೧೯೮೫, ಪುಟ ೬೬೦.

೮. ಜವರೇಗೌಡ.ದೇ., ೨೦೦೧, **ಜಾನಪದ ಅಧ್ಯಯನ,** ಪುಟ ೧೮೧.

೯. ಪರಮಶಿವಯ್ಯ ಜೀ.ಶಂ.(ಸಂ), ೧೯೮೮, **ಕನ್ನಡ ಜನಪದ ಕಥೆಗಳು,** ಪುಟ ೩೧.

೧೦. ಪುರುಷೋತ್ತಮ ಬಿಳಿಮಲೆ, ೧೯೯೦, **ಕರಾವಳಿ ಜಾನಪದ,** ಪುಟ ೭೪.

೧೧. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪುಟ ೧೦.

೧೨. ಸಂಪದ್ಗಿರಿರಾವ್(ಸಂ), ೨೦೦೬, **ಕರ್ನಾಟಕದ ಪರಂಪರೆ(ಸಂಪುಟ-೧ ಆದಿಕಾಲ),** ಪುಟ ೧೧೧.

೧೩. ಶಂಕರನಾರಾಯಣ.ತೀ.ನಂ.(ಸಂ), ೨೦೦೪, **ಜನಪದ ಸಾಹಿತ್ಯ ಪ್ರಕಾರಗಳು,** ಪುಟ ೧೧೩-೧೧೪.

೧೪. ಅದೇ., ಪುಟ ೧೨೬-೧೩೦.

೧೫. ಅದೇ., ಪುಟ ೧೩೭.

೧೬. ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು, ೧೯೯೬, **ಹಂಪಿ ಜಾನಪದ,** ಪುಟ ೨೪.

೧೭. ಅದೇ., ಪುಟ ೫೫.

೧೮. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪುಟ ೧೦-೧೪.

೧೯. ಲಕ್ಕಪ್ಪಗೌಡ.ಎಚ್.ಜೆ.(ಪ್ರ.ಸಂ.)., ಪುರುಷೋತ್ತಮ ಬಿಳಿಮಲೆ(ಸಂ), ೧೯೯೭, **ಜಾನಪದ ಕೈಪಿಡಿ,** ಪುಟ ೩೩.

೨೦. ಅದೇ., ಪುಟ ೩೪.

೨೧. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪುಟ ೧೭-೧೮.

೨೨. ಪುರುಷೋತ್ತಮ ಬಿಳಿಮಲೆ, ೧೯೯೦, **ಕರಾವಳಿ ಜಾನಪದ,** ಪುಟ ೮೦-೮೧.

೨೩. ಅದೇ., ಪುಟ ೮೨.

೨೪. ನಾಯಕ.ಹಾ.ಮಾ.(ಪ್ರ.ಸಂ.), ೧೯೭೧, **ಕನ್ನಡ ವಿಶ್ವಕೋಶ ಸಂಪುಟ-೩,** ಪುಟ ೨೫೭.

೨೫. ಪರಮಶಿವಯ್ಯ.ಜೀ.ಶಂ.(ಸಂ), ೧೯೮೮, **ಕನ್ನಡ ಜನಪದ ಕಥೆಗಳು,** ಪುಟ ೩೨-೩೩.

೨೬. ಜವರೇಗೌಡ.ದೇ., ೨೦೦೧, **ಜಾನಪದ ಅಧ್ಯಯನ,** ಪುಟ ೧೮೧.

೨೭. ದಾಸೇಗೌಡ.ಜಿ.ವಿ., ೨೦೦೩, **ಕನ್ನಡ ಐತಿಹ್ಯಗಳು,** ಪುಟ ೫.

೨೮. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪುಟ ೨೧.

೨೯. ತಾಳ್ತಜೆ ವಸಂತಕುಮಾರ, ೧೯೮೫, **ಸಾರಸ,** ಪುಟ ೧೨೧.

೩೦. ಚಿದಾನಂದಮೂರ್ತಿ ಎಂ., ೧೯೯೮, **ಹೊಸತು ಹೊಸತು,** ಪುಟ ೩೫೮.



## ಅಧ್ಯಾಯ : ಮೂರು

# ಸ್ಥಳಪ್ರಧಾನ ಐತಿಹ್ಯಗಳು

ಪ್ರಾಕೃತ, ಭೌಗೋಳಿಕ ಇಲ್ಲವೆ ಪ್ರಾದೇಶಿಕ ವೈಶಿಷ್ಟ್ಯ - ಸ್ವರೂಪಗಳೇ ಕಾರಣವಾಗಿ ಒಂದು ಸ್ಥಳಕ್ಕೆ ಅನ್ವರ್ಥನಾಮವು ಸಿದ್ಧಿಸುವುದುಂಟು. ವ್ಯಕ್ತಿ, ಪ್ರಾಣಿ-ಪಕ್ಷಿಗಳ ಕಾರಣದಿಂದಾಗಿ ನಿರ್ದಿಷ್ಟ ಸ್ಥಳವೊಂದರಲ್ಲಿ ಘಟಿಸಿದ ವಿಶಿಷ್ಟ ಘಟನೆಗಳಿಂದಲೂ ಆ ಸ್ಥಳಕ್ಕೆ ಹೆಸರಾಗುವುದುಂಟು. ಒಂದು ನಿರ್ದಿಷ್ಟ ಸ್ಥಳಕ್ಕೆ ಸಂಬಂಧಪಟ್ಟ ವ್ಯಕ್ತಿಗಳು ಶೌರ್ಯ, ಸಾಹಸ, ಸಮಾಜಸೇವೆ, ಪ್ರಾಮಾಣಿಕತೆಗಳಿಂದ ಪ್ರಸಿದ್ಧರಾಗಿದ್ದರೆ ಅಂಥವರ ಹೆಸರುಗಳಿಂದಲೇ ಆ ಸ್ಥಳವು ಗುರುತಿಸಲ್ಪಡುವುದೂ ಉಂಟು. ಇವು ಪ್ರಧಾನವಾಗಿ ವ್ಯಕ್ತಿನಿಷ್ಠವಾದವುಗಳು. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ, ಸ್ಥಳಕ್ಕೆ ಹೆಚ್ಚಿನ ಮಹತ್ವ ಸಂದಾಯವಾಗುತ್ತದೆ. ಸ್ಥಳದ ಪ್ರತ್ಯೇಕತೆ ಅಥವಾ ಅಸಾಧಾರಣತ್ವವೇ ಐತಿಹ್ಯಗಳಿಗೆ ಬುನಾದಿಯಾಗಿ ಕೆಲಸ ಮಾಡುತ್ತದೆ. ಒಂದು ಸ್ಥಳಕ್ಕಿರುವ ಹೆಸರಿನ ಹುಟ್ಟನ್ನು ಇಂತಹ ಐತಿಹ್ಯಗಳು ಶೋಭಿಸುವಂತೆ ಮಾಡುತ್ತವೆ.

ಈ ಬಗೆಯ ಅನೇಕ ಅಂಶಗಳ ಹಿನ್ನೆಲೆಯಲ್ಲಿ ಹೊಸಪೇಟೆ ತಾಲೂಕಿನ ಐತಿಹ್ಯಗಳನ್ನು ಈ ಕೆಳಗಿನಂತೆ ಸ್ಥಳಪ್ರಧಾನ ಐತಿಹ್ಯಗಳಾಗಿ ವಿಭಜಿಸಿಕೊಳ್ಳಲಾಗಿದೆ.

೧. ಕೋಟಿಲಿಂಗ

೨. ಗಗನಮಹಲ್

೩. ದುರ್ಗಾದೇವಿ ಬೆಟ್ಟ ಅಥವಾ ಘಟ್ಟಿಕೋಟೆ

೪. ಕನ್ನೇರಮ್ಮನ ಬಾವಿ

೫. ಶಬರಿಗುಹೆ

೬. ಸುಗ್ರೀವಗುಹೆ

೭. ಪಂಪಾ ಸರೋವರ

೮. ಹೇಮಕೂಟ

೯. ವಾಲಿಭಂಡಾರ

೧೦. ವಾಲಿಕಾಷ್ಟ

೧೧. ಧರ್ಮರಗುಡ್ಡ

೧೨. ಅಂಜನಾದ್ರಿ ಪರ್ವತ

೧೩. ಮಾಲ್ಯವಂತ ಪರ್ವತ

೧೪. ಋಷ್ಯಮೂಕ ಪರ್ವತ

೧೫. ಮಾತಂಗ ಪರ್ವತ

೧೬. ಮಾಸ್ಲಯ್ಯನಗುಡ್ಡ

೧೭. ಕೋತಿ ಇನಾಮ್

೧೮. ಕಮಲಾಪುರ ಕೆರೆ ಏರಿ

೧೯. ಸೂಳೆ ಬಜಾರು(ಅಚ್ಯುತ ಬಜಾರು)

೨೦. ಪಾನ್‌ಸುಪಾರಿ ಬಜಾರು

೨೧. ವಿರೂಪಾಕ್ಷ ಬಜಾರು

೨೨. ವಿಠ್ಠಲ ಬಜಾರು

೨೩. ಕೃಷ್ಣ ಬಜಾರು

೨೪. ವರದರಾಜಮ್ಮನ ಬಜಾರು

೨೫. ನವವೃಂದಾವನ

೨೬. ಚಿಂಚಲಕೋಟೆ

೨೭. ೬೪ ಕಾಲಿನ ಮಂಟಪ

೨೮. ಇನಾಮು ಭೂಮಿಗಳು

೨೯. ಕಲ್ಲಿನರಥ

೩೦. ಕಾವಲುಗಾರರ ಗೋಪುರ

೩೧. ಆನೆಲಾಯ(ಗಜಶಾಲೆ)

೩೨. ಕುದುರೆಲಾಯ(ಅಶ್ವಶಾಲೆ)

೩೩. ಪುಷ್ಕರಣಿ(ಮೆಟ್ಟಿಲುಗಳ ಕೊಳ)

೩೪. ನೆಲಮಾಳಗಿ(ಗುಪ್ತ ವಿಚಾರ ಚರ್ಚೆಯ ಸ್ಥಳ)

೩೫. ಕಲ್ಲಿನ ಸೇತುವೆ

೩೬. ಭೋಜನಶಾಲೆ

೩೭. ಮಹಾನವಮಿದಿಬ್ಬ

೩೮. ದಣಾಯಕನ ನಿವಾಸ

೩೯. ಭೀಮನ ಹೆಬ್ಬಾಗಿಲು

೪೦. ಬೇಟೆಕಾರರ ಹೆಬ್ಬಾಗಿಲು

೪೧. ಹೂವಿನಬಾಗಿಲು

೪೨. ಗೆಜ್ಜಲು ಮಂಟಪ(ಪರಾಂಕುಶ ಮಂಟಪ)

೪೩. ಮಹಮ್ಮದೀಯರ ಗೋರಿಗಳು

೪೪. ರಾಣಿಯರ ಸ್ನಾನಗೃಹ

೪೫. ಸೂಳೆಬಾವಿ(ಕೂಪರಾಮ ವಾಟಿಕ)

೪೬. ಹೊನ್ನಿನ ವೆಂಕಟಾಪುರ

೪೭. ಅನಂತಶಯನಗುಡಿ

೪೮. ನಂದಿಬಂಡೆ

೪೯. ಕಡ್ಡಿರಾಂಪುರ

೫೦. ಚಿಕ್ಕಜಾಯಿಗನೂರು

೫೧. ಕಾಳಗಟ್ಟ

೫೨. ತಿಮಲಾಪುರ

೫೩. ಸಂಕ್ಲಾಪುರ

೫೪. ಗುಡಿ ಓಬಳಾಪುರ

೫೫. ವಡ್ಡರಹಳ್ಳಿ

೫೬. ಜೋಗಪ್ಪನ ಗುಡ್ಡ

೫೭. ಇಂಗಳಗಿ

೫೮. ಸಣಾಪುರ

೫೯. ಗಡ್ಡದಯ್ಯನಗವಿ

೬೦. ಉಮಾ ಮಹೇಶ್ವರ ದೇವಸ್ಥಾನ

೬೧. ತಿಮ್ಮಪ್ಪ ದೇವರಪಾದ

೬೨. ಕೋಣ ಕಟ್ಟೋಕಲ್ಲು

೬೩. ಕೋಟೆ ಆಂಜನೇಯ

೬೪. ಕಂಪ್ಲಿ ಬಂಡೆ

೬೫. ಸಪ್ತಸ್ವರಗಳ ಕಂಬಗಳು

೬೬. ಕುಮಾರರಾಮ ಜಲಪಾತ

**೧. ಕೋಟಿಲಿಂಗ**

ಹಂಪಿಯ ಕೋದಂಡರಾಮ ದೇವಾಲಯದ ಎದುರಿನಲ್ಲಿ ಕಂಡುಬರುವ ಚಕ್ರತೀರ್ಥದ ತೀರದಲ್ಲಿ ವಿಶಾಲವಾದ ಬಂಡೆಯೊಂದರ ಮೇಲೆ ಕೆತ್ತಲ್ಪಟ್ಟ ಸಣ್ಣ ಸಣ್ಣ ನೂರಾರು ಲಿಂಗಗಳನ್ನು 'ಕೋಟಿಲಿಂಗ'ವೆಂದು ಕರೆಯುತ್ತಾರೆ. ಇದರ ಬಗೆಗೆ ಕಂಡು ಬರುವ ಕೆಲವು ಐತಿಹ್ಯಗಳು ಈ ಕೆಳಗಿನಂತಿವೆ.

ಈ ಪುಟ್ಟ ಲಿಂಗಗಳನ್ನು ಹಿಂದೆ ಕೋತಿಗಳು ಪೂಜಿಸುತ್ತಿದ್ದವಂತೆ. ನದಿಯಿಂದ ಬಾಯಿಯಲ್ಲಿ ನೀರು ತುಂಬಿಕೊಂಡು ಬಂದು ಲಿಂಗದ ಮೇಲೆ ಹಾಕಿ, ವಿವಿಧ ಹೂ, ಪತ್ರೆಗಳನ್ನು ಕಿತ್ತು ತಂದು ಲಿಂಗಗಳನ್ನು ಪೂಜಿಸುತ್ತಿದ್ದವಂತೆ. ಆದ್ದರಿಂದ ಇದಕ್ಕೆ 'ಕೋಟಿಲಿಂಗ' ಎಂಬ ಹೆಸರು ಬಂತು. ಕೋತಿಗಳು ಪೂಜಿಸುತ್ತಿದ್ದುದರಿಂದ ಇವು 'ಕೋತಿಲಿಂಗ'ವೇ ಹೊರತು 'ಕೋಟಿಲಿಂಗ' ಅಲ್ಲ ಎಂದು ನಿರೂಪಕರು ತಿಳಿಸುತ್ತಾರೆ.

ಅಲೆಮಾರಿಗಳಾಗಿ ಜೀವಿಸುವ ದೊಕ್ಕಲರು, ವೇಷಗಾರರು, ಕಿಳ್ಳೆಕ್ಯಾತರು ಈ ಲಿಂಗಗಳ ಬಗೆಗೆ ಹೇಳುವ ಕಥೆಯೊಂದು ಹೀಗಿದೆ: ಹಿಂದೆ ದಕ್ಷಪತಿ ಎಂಬ ರಾಜನಿದ್ದ. ಅವನಿಗೆ ಅರವತ್ತು ಮಂದಿ ಹೆಣ್ಣುಮಕ್ಕಳಿದ್ದರು. ಆದರೆ ವಂಶೋದ್ಧಾರಕನಾದ ಒಂದೇ ಒಂದು ಗಂಡು ಸಂತಾನ ಕೂಡ ಇರಲಿಲ್ಲ. ಇದರಿಂದ ದಕ್ಷಪತಿಗೆ ತುಂಬ ದುಃಖವಾಯಿತು. ಹೀಗಿರುವಾಗ ಒಮ್ಮೆ ಇವನ ರಾಜ್ಯವು ಕ್ಷಾಮಕ್ಕೆ ತುತ್ತಾಯಿತು. ಇವನ ರಾಜ್ಯದಲ್ಲಿ ಇಬ್ಬರು ಅಣ್ಣ-ತಮ್ಮಂದಿರು ಇದ್ದರು. ಕ್ಷಾಮದಿಂದಾಗಿ ತಮ್ಮ ತಂದೆ-ತಾಯಿಗಳನ್ನು ಕಳೆದುಕೊಂಡರು. ಅವರಲ್ಲಿ ತಮ್ಮನೂ ಸಹ ತೀರಿಕೊಂಡ. ಆಗ ಅಣ್ಣನು ಗೊತ್ತು-ಗುರಿಯಿಲ್ಲದೆ ತಮ್ಮನ ಹೆಣವನ್ನು ಹೆಗಲ ಮೇಲೆ ಹಾಕಿಕೊಂಡು ಅಲೆದಾಡುತ್ತಿದ್ದನು. ಒಮ್ಮೆ ಶಿವ-ಪಾರ್ವತಿಯರು ಆಕಾಶ ಮಾರ್ಗವಾಗಿ ಹೋಗುತ್ತಿರುವಾಗ ಪಾರ್ವತಿಯು ಈ ದೃಶ್ಯವನ್ನು ಕಂಡಳು. ಆವಳಿಗೆ ಅಣ್ಣನ ಮೇಲೆ ಕರುಣೆ ಮೂಡಿ, ಸತ್ತ ತಮ್ಮನನ್ನು ಬದುಕಿಸಿಕೊಡುವಂತೆ ಶಿವನಲ್ಲಿ ಪ್ರಾರ್ಥಿಸಿದಳು. ಶಿವ ಆಕೆಯ

ಮಾತಿಗೆ ಒಪ್ಪಿಗೆ ಸೂಚಿಸಿ ಅದರಂತೆ ತಮ್ಮನಿಗೆ ಜೀವದಾನ ಮಾಡುತ್ತಾನೆ ಮತ್ತು ಸತ್ತು ಬದುಕಿದ ಆವನನ್ನು ಗಂಡು ಸಂತಾನವಿಲ್ಲದೆ ದುಃಖದಲ್ಲಿದ್ದ ದಕ್ಷಪತಿ ರಾಜನಿಗೆ ನೀಡುತ್ತಾನೆ. ದಕ್ಷಪತಿಯು ತಮ್ಮನಿಗೆ ದಕ್ಕಮುನಿಯೆಂದು ಹೆಸರಿಡುತ್ತಾನೆ. ಶಿವನ ಆಜ್ಞೆಯಂತೆ ದಕ್ಕ ಮುನಿಯು ದಕ್ಷಪತಿಯೊಡಗೂಡಿ ದೇವತೆಗಳ ಸೇವೆಯನ್ನು ಮಾಡುತ್ತಾನೆ. ಅವರು ಪೂಜಿಸಿದ ದೇವತೆಗಳ ಕುರುಹಾಗಿ 'ಕೋಟಿಲಿಂಗ' ಎಂಬ ಕಲ್ಪನೆ ಮೂಡಿದೆ ಎನ್ನಲಾಗುತ್ತಿದೆ.[೧]

ಸಂಖ್ಯಾದೃಷ್ಟಿಯಲ್ಲಿ ಈ ಲಿಂಗಗಳು ಕೋಟಿಸಂಖ್ಯೆಯಲ್ಲಿ ಇಲ್ಲದಿದ್ದರೂ ಜನಪದರು ಈ ಲಿಂಗಗಳ ಮಹತ್ವ ಹೆಚ್ಚಿಸಲು, ಜನರಲ್ಲಿ ಧಾರ್ಮಿಕ ಮನೋಭಾವನೆಯನ್ನು ಮೂಡಿಸಲು 'ಕೋಟಿಲಿಂಗ'ವೆಂದು ಕರೆದರು.

### ೨. ಗಗನ ಮಹಲ್

ಆನೆಗೊಂದಿಯ ಇತಿಹಾಸ ಪ್ರಸಿದ್ಧ ರಂಗನಾಥಸ್ವಾಮಿ ದೇವಾಲಯದ ಎದುರಿಗೆ ಈ ಕಟ್ಟಡ ಕಂಡುಬರುತ್ತದೆ. ಹಿಂದೆ ರಾಜಮಹಾರಾಜರುಗಳು ಏರ್ಪಡಿಸುತ್ತಿದ್ದ ಮನರಂಜನೆ ಹಾಗೂ ಸಾಹಸಮಯ ಸ್ಪರ್ಧೆಗಳನ್ನು ವೀಕ್ಷಿಸಲು ರಾಣಿಯರು ಈ 'ಗಗನ ಮಹಲ್' ಕಟ್ಟಡವನ್ನು ಉಪಯೋಗಿಸುತ್ತಿದ್ದರು. ಅರಮನೆಯಿಂದ ಈ ಕಟ್ಟಡಕ್ಕೆ ನೇರವಾಗಿ ಬರಲು ಒಳದಾರಿಗಳಿದ್ದವು ಎಂದು ಜನ ಹೇಳುತ್ತಾರೆ.[೨] ಈ ಕಟ್ಟಡದ ಮುಂದಿನ ಮೈದಾನದಲ್ಲಿ ಕೋಳಿಕಾಳಗ, ಟಗರುಕಾಳಗ, ಗೂಳಿಕಾಳಗ, ಮಲ್ಲಯುದ್ಧ, ದೃಷ್ಟಿಯುದ್ಧ ಮತ್ತು ದೊಂಬರಾಟದ ಸಾಹಸಗಳು ನಡೆಯುತ್ತಿದ್ದವು. ಇವುಗಳನ್ನು ಆನೆಗೊಂದಿ ಸಂಸ್ಥಾನದ ರಾಣಿಯರು ಹಾಗೂ ಪಟ್ಟಣದ ಹೆಂಗಸರೂ ಸಹ ಆಸಕ್ತಿಯಿಂದ ನೋಡುತ್ತಿದ್ದರೆಂದು ತಿಳಿದುಬರುತ್ತದೆ. ಅಂದು ನಡೆಯುತ್ತಿದ್ದ ಪಂದ್ಯಗಳಲ್ಲಿ ವಿಜಯಗಳಿಸಿದವರನ್ನು ಮದುವೆ ಮಾಡಿಕೊಳ್ಳುವಂತಹ ಅವಕಾಶಗಳನ್ನು ರಾಜರು ಒದಗಿಸಿಕೊಡುತ್ತಿದ್ದರು ಎಂದು ಹೇಳಲಾಗುತ್ತದೆ. ಸದ್ಯ ಈ ಗಗನಮಹಲ್ ಕಟ್ಟಡವು ಸುಸ್ಥಿತಿಯಲ್ಲಿದ್ದು ಇದನ್ನು ಗ್ರಾಮ ಪಂಚಾಯತ್ ಕಾರ್ಯಾಲಯವನ್ನಾಗಿ ಮಾಡಿಕೊಂಡಿದ್ದಾರೆ.

### ೩. ದುರ್ಗಾದೇವಿಬೆಟ್ಟ ಅಥವಾ ಘಟ್ಟಕೋಟೆ

ಹಂಪಿಯಿಂದ ತಳವಾರಘಟ್ಟದ ಮೂಲಕ ಆನೆಗೊಂದಿಗೆ ಪ್ರವೇಶ ಮಾಡುವಾಗ ಎಡಭಾಗದಲ್ಲಿ ಕಂಡುಬರುವ ಬೆಟ್ಟಕ್ಕೆ 'ದುರ್ಗಾದೇವಿಬೆಟ್ಟ' ಅಥವಾ 'ಘಟ್ಟಿಕೋಟೆ' ಎಂದು ಕರೆಯಲಾಗುತ್ತದೆ. ಇಲ್ಲಿ ಬಲವಾದ ಕಲ್ಲಿನಕೋಟೆಯಿದ್ದು ಇದನ್ನು ಆನೆಗೊಂದಿ ಅರಸರು ಕಟ್ಟಿಸಿದರು ಎಂದು ತಿಳಿದುಬರುತ್ತದೆ. ಈ ಕೋಟೆಯ ರಕ್ಷಕ ದೈವ 'ದುರ್ಗಾಮಾತೆ'. ಈ ದುರ್ಗಾಮಾತೆಯು ಆನೆಗೊಂದಿ ರಾಜರ ಮನೆದೇವರು ಹೌದು. ಕೋಣಗಳನ್ನು ಬಲಿ ಕೊಡುವುದರ ಮೂಲಕ ಈಕೆಯ ಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸುತ್ತಿದ್ದರಂತೆ. ವಿಜಯದಶಮಿಯ ಕಾಲದಲ್ಲಿ ಇಲ್ಲಿ ಈಗಲೂ ವಿಶೇಷ ಪೂಜೆ ನಡೆಯುತ್ತದೆ. ಈ ಬೆಟ್ಟದಲ್ಲಿ ದುರ್ಗಾದೇವಿ ನೆಲೆಸಿದ್ದರಿಂದ ದುರ್ಗಾದೇವಿಬೆಟ್ಟವೆಂದು ಹೆಸರು ಬಂತೆಂದು ಜನರು ಹೇಳುತ್ತಾರೆ.

೧. ವಿಜಯನಗರ ಕಾಲದಲ್ಲಿನ ಹೇರಳವಾದ ಸಂಪತ್ತು, ಬೇರೆ ರಾಜರ ದಾಳಿಯಿಂದ ಹಾಳಾಗುವ ಭಯ ಇದ್ದುದರಿಂದ, ಸಂಪತ್ತನ್ನು ದುರ್ಗಾದೇವಿ ಬೆಟ್ಟದಲ್ಲಿ ಕೂಡಿ ಹಾಕಿಡಲಾಗುತ್ತಿತ್ತೆಂದು ಜನ ನಂಬಿದ್ದಾರೆ. ಜೊತೆಗೆ ಆಪತ್ತಿನ ನಿಧಿಯಾಗಿ ಇಲ್ಲಿನ ಯಾವುದೋ ಒಂದು ಸ್ಥಳದಲ್ಲಿ ಚಿನ್ನ, ಬೆಳ್ಳಿ, ವಜ್ರದಂತಹ ಅಮೂಲ್ಯ ವಸ್ತುಗಳನ್ನು ಗೋಪ್ಯವಾಗಿ ಇಡಲಾಗಿತ್ತಂತೆ. ಹೀಗೆ ಇಟ್ಟ ವಿಷಯ ಅಂದಿನ ಮಂತ್ರಿಯಾಗಿದ್ದ ತಿಮ್ಮಣ್ಣನಿಗೆ ಮಾತ್ರ ಗೊತ್ತಿತ್ತು. ಯಾವುದೋ ಕಾರಣದಿಂದ ತಿಮ್ಮಣ್ಣನ ಕಣ್ಣುಗಳನ್ನು ಕೀಳಿಸಲಾಯಿತು. ಪರಿಣಾಮವಾಗಿ ತಿಮ್ಮಣ್ಣನಿಗೂ ಸಂಪತ್ತನ್ನು ಕೂಡಿಟ್ಟ ಸ್ಥಳವನ್ನು ತೋರಿಸಲಾಗಲಿಲ್ಲ. ಹೀಗಾಗಿ ಆ ಸಂಪತ್ತು ಯಾರ ಕೈಗೂ ಸಿಗಲಿಲ್ಲ. ಸಂಪತ್ತನ್ನು ಕೂಡಿಡುವ ಸ್ಥಳವಾದುದರಿಂದ ಇದಕ್ಕೆ 'ಘಟ್ಟಕೋಟೆ' ಎಂಬ ಹೆಸರು ಬಂತು. ಹಿಂದೆ ಕೂಡಿಟ್ಟ ಸಂಪತ್ತು ಈ ಕೋಟೆಯೊಳಗೆ ಈಗಲೂ ಇದೆಯೆಂದು ಸ್ಥಳೀಯರು ನಂಬುತ್ತಾರೆ. ಕೋಟೆಯೊಳಗೆ ಇರುವ ಸುರಂಗ ಮಾರ್ಗವನ್ನು ಕ್ರಮಿಸಲು ಸಾಧ್ಯವಾದರೆ ಆ ಸಂಪತ್ತು ಸಿಗುತ್ತದೆ ಎಂದು ಸ್ಥಳೀಯರು ಹೇಳುತ್ತಾರೆ.

೨. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಉತ್ತುಂಗ ಶಿಖರವನ್ನು ತಲುಪಿತ್ತು. ಇದು ಅನ್ಯರಾಜ್ಯಗಳ ರಾಜರಿಗೆ ಸಹಿಸಲು ಅಸಾಧ್ಯವಾಗಿತ್ತು. ಯಾವ ಸಮಯದಲ್ಲಾದರೂ ಅವರು ವಿಜಯನಗರದ ಮೇಲೆ ದಂಡೆತ್ತಿ ಬರಬಹುದೆಂಬ ಭೀತಿ ರಾಜನಿಗಿತ್ತು. ಆದುದರಿಂದ ಕೃಷ್ಣದೇವರಾಯನು ಈ ಕೋಟೆಯಲ್ಲಿ ಹೆಚ್ಚಿನ ಸೈನಿಕರನ್ನು ಜಮಾವಣೆ ಮಾಡುತ್ತಿದ್ದನೆಂದು ಇಲ್ಲಿನ ಸ್ಥಳೀಯರು ವಿವರಣೆಯನ್ನು ನೀಡುತ್ತಾರೆ.[೩]

## ೪. ಕನ್ನೇರಮ್ಮನ ಬಾವಿ

ಆನೆಗೊಂದಿಯ ದುರ್ಗಾದೇವಿಯ ಬೆಟ್ಟದಲ್ಲಿರುವ ಸುಂದರವಾದ ಬಾವಿಯೊಂದನ್ನು 'ಕನ್ನೇರಮ್ಮನ ಬಾವಿ' ಎಂದು ಕರೆಯುತ್ತಾರೆ. ಕಲಾತ್ಮಕವಾದ ಈ ಬಾವಿಯಲ್ಲಿ ಸದಾ ನೀರಿರುತ್ತದೆ. ಈ ಬಾವಿಯ ನೀರನ್ನು ದುರ್ಗಾದೇವಿಯ ಪೂಜೆಗೆ ಮಾತ್ರ ಬಳಸುತ್ತಿದ್ದರಂತೆ. ಸಾರ್ವಜನಿಕರು ಇದರ ನೀರನ್ನು ಬಳಸಬಾರದೆಂಬ ನಂಬಿಕೆ ಇತ್ತು. ದುರ್ಗಾದೇವಿಯನ್ನು ಪ್ರತಿ ಯುಗಾದಿ ಹಬ್ಬದಂದು ಮತ್ತು ವಿಜಯದಶಮಿಯಂದು ಈ ಬಾವಿಯಲ್ಲಿ ಸ್ನಾನ ಮಾಡಿಸಿ ಪೂಜಿಸುತ್ತಿದ್ದರಂತೆ. ಈ ಬಾವಿಯ ನೀರನ್ನು ಬಳಸಿದರೆ ಸಕಲ ವ್ಯಾಧಿಗಳೂ ನಿವಾರಣೆಯಾಗುತ್ತವೆ ಎಂಬ ನಂಬಿಕೆಯೊಂದಿಗೆ ಈ ಬಾವಿಯ ಪಾವಿತ್ರ್ಯವನ್ನು ಕುರಿತು ಹೇಳುವ ಕಥೆಯೊಂದು ಹೀಗಿದೆ.

ಹಿಂದೆ ದಿನವೂ ಸೂರ್ಯ ಮೂಡುವ ಮುನ್ನ ಮತ್ತು ಸೂರ್ಯ ಮುಳುಗಿದ ಅನಂತರ ಹಲವಾರು ದೇವಕನ್ಯೆಯರು ಹಾಗೂ ಗಂಧರ್ವಕನ್ಯೆಯರು ಇಲ್ಲಿಗೆ ಬಂದು ಸ್ನಾನ ಮಾಡಿಕೊಂಡು ಹೋಗುತ್ತಿದ್ದರಂತೆ. ಆದ್ದರಿಂದ ಈ ಬಾವಿಗೆ 'ಕನ್ನೇರಮ್ಮನಬಾವಿ' ಎಂದು ಹೆಸರು ಬಂದಿದೆ.

ಒಮ್ಮೆ ಒಬ್ಬ ಯುವಕ ಇದನ್ನು ಪರೀಕ್ಷಿಸಲು ಅಲ್ಲಿನ ಗವಿಯೊಂದರಲ್ಲಿ ಅಡಗಿ ಕುಳಿತನು. ಸುಮಾರು ಮಧ್ಯರಾತ್ರಿ ವೇಳೆಗೆ ಆಕಾಶದಿಂದ ಹಲವಾರು ದೇವಕನ್ಯೆಯರು ಮತ್ತು

ಗಂಧರ್ವಕನ್ಯೆಯರು ಗುಂಪಾಗಿ ಬಂದಿಳಿದು ಸುತ್ತಲೂ ನೋಡಿ ತಮ್ಮ ಉಡುಗೆಗಳನ್ನು ತೆಗೆದು ಬದಿಗಿರಿಸಿ ಜಲಕ್ರೀಡೆಯಾಡಿದರು. ಆಗ ಈ ಯುವಕ ಗವಿಯಿಂದ ಹೊರಬಂದು ಅವರು ಉಡುಗೆಗಳಿಟ್ಟಿದ್ದ ಸ್ಥಳಕ್ಕೆ ಬಂದು ಅವುಗಳನ್ನು ಕೈಗೆತ್ತಿಕೊಂಡು ದೇವಕನ್ಯೆಯರ ಬಳಿಗೆ ಹೋಗುವ ಪ್ರಯತ್ನ ಮಾಡಿದನು. ಇದನ್ನು ಗಮನಿಸಿದ ದೇವಕನ್ಯೆಯರು ಅವನ ಕೈಗೆ ಸಿಗದಂತೆ ಪಾರಾಗಿ, ಅವನು ಅಲ್ಲೇ ರಕ್ತ ಕಕ್ಕಿ ಸಾಯುವಂತೆ ಶಾಪವಿತ್ತರು. ಹಾಗೆಯೇ ಆ ಯುವಕ ಅಲ್ಲೇ ರಕ್ತ ಕಕ್ಕಿ ಸತ್ತನು. ದೇವಕನ್ಯೆಯರ ಬಟ್ಟೆಗಳೆಲ್ಲವೂ ಕಲ್ಲಾದವು. ಇಂದಿಗೂ ಆ ಬಟ್ಟೆಗಳು ದುರ್ಗಾದೇವಿ ಬೆಟ್ಟದ ಗವಿಯೊಂದರಲ್ಲಿ ಇವೆಯೆಂದೂ ಜನ ನಂಬುತ್ತಾರೆ.[೪]

### ೫. ಶಬರಿ ಗುಹೆ

ಪಂಪಾಸರೋವರದ ಹತ್ತಿರ 'ಶಬರಿ ಗುಹೆ' ಕಂಡುಬರುತ್ತದೆ. ರಾಮನು ವನವಾಸದಲ್ಲಿದ್ದಾಗ ಶಬರಿಯು ರಾಮನ ಬರುವಿಕೆಗಾಗಿ ಈ ಗುಹೆಯಲ್ಲಿ ಕಾಯುತ್ತ ಕುಳಿತಳಂತೆ. ರಾಮನು ಕಿಷ್ಕಿಂಧೆಗೆ ಬಂದಾಗ ಶಬರಿ ಇರುವಲ್ಲಿಗೆ ಬರುತ್ತಾನೆ. ಆಗ ಶಬರಿಯು ರಾಮನ ಆಗಮನವನ್ನು ಕಂಡು, ಸಂತೋಷಗೊಂಡು ನನ್ನ ಜನ್ಮ ಸಾರ್ಥಕವಾಯಿತೆಂದು ಹೇಳುತ್ತಾಳೆ. ರಾಮನು ಅವಳ ಆದರ, ಆಥಿತ್ಯವನ್ನು ಸ್ವೀಕರಿಸಿ ಅವಳಿಗೆ ಆಶೀರ್ವದಿಸಿದನಂತೆ. ಹೀಗೆ ಶಬರಿಯು ರಾಮನದರ್ಶನದಿಂದಾಗಿ ಮೋಕ್ಷವನ್ನು ಹೊಂದಿದಳು ಎಂದು ಜನ ತಿಳಿಸುತ್ತಾರೆ.[೫] ಈ ಗುಹೆಯಲ್ಲಿ ರಾಮನು ಸ್ವಲ್ಪ ಸಮಯ ತಂಗಿದ್ದನಂತೆ.

### ೬. ಸುಗ್ರೀವ ಗುಹೆ

ಕೋದಂಡ ರಾಮನ ಗುಡಿಯಿಂದ ವಿಜಯವಿಠ್ಠಲ ದೇವರಗುಡಿಗೆ ಹೋಗುವ ಹಾದಿಯಲ್ಲಿ ಎಡಭಾಗಕ್ಕೆ ಕಂಡುಬರುವ ಈ ಗುಹೆಯನ್ನು 'ಸುಗ್ರೀವಗುಹೆ' ಎಂದು ಕರೆಯಲಾಗುತ್ತದೆ. ಸುಗ್ರೀವನು ಈ ಗುಹೆಯಲ್ಲಿ ವಾಸಿಸುತ್ತಿದ್ದುದ್ದರಿಂದ ಈ ಗುಹೆಯನ್ನು 'ಸುಗ್ರೀವ ಗುಹೆ' ಎಂದು ಕರೆಯುತ್ತಾರೆ ಎಂಬುದಾಗಿ ಜನರು ಹೇಳುತ್ತಾರೆ. ವನವಾಸದ ಸಮಯದಲ್ಲಿ ರಾಮ, ಲಕ್ಷ್ಮಣ, ಸೀತೆಯರು ಈ ಗುಹೆಯಲ್ಲಿ ವಾಸವಾಗಿದ್ದರಂತೆ. ಅದರ ಕುರುಹಾಗಿ ಈ ಗುಹೆಯಲ್ಲಿ ರಾಮ, ಲಕ್ಷ್ಮಣ, ಸೀತೆಯರ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ವಾಲಿಯೂ ಕೆಲವು ಕಾಲ ಈ ಗುಹೆಯಲ್ಲಿ ಇದ್ದನಂತೆ. ರಾವಣನು ಸೀತೆಯನ್ನು ಈ ಗುಹೆಯಿಂದಲೇ ಅಪಹರಿಸಿಕೊಂಡು ಹೋದನೆಂದು ನಿರೂಪಕರು ತಿಳಿಸುತ್ತಾರೆ.[೬]

### ೭. ಪಂಪಾ ಸರೋವರ

ಹಂಪಿಯ ಪ್ರಮುಖ ಪುಣ್ಯಕ್ಷೇತ್ರಗಳಲ್ಲಿ ಇದೂ ಒಂದು. ದಕ್ಷಬ್ರಹ್ಮನ ಮಗಳಾದ ಪಂಪಾದೇವಿ, ಶಿವನನ್ನು ಮದುವೆಯಾಗಲು ಹೇಮಕೂಟದ ಉತ್ತರಕ್ಕಿರುವ ಅರ್ಧಕೋಶ ದೂರದಲ್ಲಿ ವಿಪ್ರಕೂಟವೆಂಬ ಪರ್ವತ ಬಳಿಯ ಸರೋವರದ ದಡದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸುತ್ತಾಳೆ. ಅವಳ ತಪಸ್ಸಿಗೆ ಮೆಚ್ಚಿದ ಶಿವ ಅವಳ ಇಚ್ಛೆಯಂತೆ ವಿವಾಹವಾಗಿ ಪಂಪಾಪತಿ ಎನಿಸಿಕೊಳ್ಳುತ್ತಾನೆ. ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದು, ಅವಳು ತಪಸ್ಸು ಮಾಡಿದ ಸರೋವರವನ್ನು

ಪಂಪಾಸರೋವರವೆಂದು ಖ್ಯಾತಿಯಾಗಲೆಂದು ವರ ಕೊಡುತ್ತಾನೆ.[೭] ನಂತರ ಇದು ಪಂಪಾದೇವಿ. ಪಂಪಾಪತಿ, ಪಂಪಾಕ್ಷೇತ್ರ, ಪಂಪಾಸರೋವರ, ಪಂಪಾಪುರವೆಂಬ ಮೊದಲಾದ ಹೆಸರಿನಿಂದ ಪ್ರಖ್ಯಾತಿಯಾಯಿತೆಂಬ ಐತಿಹ್ಯವಿದೆ.

### ೮. ಹೇಮಕೂಟ

ವಿರೂಪಾಕ್ಷ ಗುಡಿಯ ಪಕ್ಕದಲ್ಲಿರುವ ಎತ್ತರವಾದ ಗುಡ್ಡಕ್ಕೆ 'ಹೇಮಕೂಟ' ಎಂದು ಕರೆಯುತ್ತಾರೆ. ಇಲ್ಲಿ ಜೈನ ದೇವಾಲಯ, ಮೂಲ ವಿರೂಪಾಕ್ಷ, ನಾಗಲಿಂಗನ ಗವಿ, ಗಾಯತ್ರಿ ಮಠ ಹಾಗೂ ಶಿವರಾಮ ಅವಧೂತರ ಮಠಗಳಿವೆ. ದಕ್ಷಯಜ್ಞದಲ್ಲಿ ಪಾರ್ವತಿಯು ಬೆಂದು ಹೋದ ನಂತರ, ಶಿವನು ಘೋರ ತಪಸ್ಸನ್ನು ಮಾಡಿ, ಪಾರ್ವತಿಯನ್ನು ಮರಳಿ ಪಡೆದ ಸ್ಥಳ ಇದಾಗಿತ್ತು ಎಂದು ಜನರು ಹೇಳುತ್ತಾರೆ.

ವಿಜಯನಗರದ ಸ್ಥಾಪನೆಗೆ ಶಕ್ತಿ ನೀಡಲೆಂದು ವಿದ್ಯಾರಣ್ಯರು ಭುವನೇಶ್ವರಿ ದೇವಿಯನ್ನು ಕುರಿತು ತಪಸ್ಸು ಮಾಡಿದರಂತೆ. ಆಗ ಭುವನೇಶ್ವರಿ ದೇವಿಯು ವಿದ್ಯಾರಣ್ಯರ ತಪಸ್ಸಿಗೆ ಒಲಿದು ಕೆಲವು ಗಳಿಗೆಯ ಕಾಲ ಚಿನ್ನದ ಮಳೆ ಸುರಿಸಿದಳಂತೆ. ಹೀಗೆ ಚಿನ್ನದ ಮಳೆ ಬಂದ ಪ್ರದೇಶವನ್ನು 'ಹೇಮಕೂಟ' ಎಂದು ಕರೆಯುತ್ತಾರೆ ಎಂಬುದಾಗಿ ಇಲ್ಲಿನ ಸ್ಥಳೀಯರು ತಿಳಿಸುತ್ತಾರೆ.[೮] ಸಂಗಮ ವಂಶದ ದೊರೆ ಒಂದನೇ ಹರಿಹರನ ಪಟ್ಟಾಭಿಷೇಕ ಕೂಡ ಇಲ್ಲಿಯೇ ನಡೆದದ್ದು ಎಂಬ ವಿವರಣೆಯನ್ನು ನೀಡುತ್ತಾರೆ.

### ೯. ವಾಲಿಭಂಡಾರ

ಆನೆಗೊಂದಿಯಿಂದ ಪಂಪಾಸರೋವರಕ್ಕೆ ಹೋಗುವ ಮಾರ್ಗದಲ್ಲಿ ದುರ್ಗಾದೇವಿ ಬೆಟ್ಟದ ತುದಿಯೊಂದು ಎಡಭಾಗಕ್ಕೆ ಕಂಡುಬರುತ್ತದೆ. ಈ ಭಾಗದ ಸ್ಥಳವನ್ನು 'ವಾಲಿಭಂಡಾರ' ಎಂದು ಕರೆಯುತ್ತಾರೆ.

ಈ ವಾಲಿಭಂಡಾರದ ಬಗೆಗಿರುವ ಐತಿಹ್ಯವೇನೆಂದರೆ, ಆನೆಗೊಂದಿ ಗೌಡರ ಮನೆಯ ಹಸುವೊಂದು ಕರು ಹಾಕಿತ್ತು. ಆದರೆ ಅದರ ಕೆಚ್ಚಲಿನಲ್ಲಿ ಒಂದು ತೊಟ್ಟು ಹಾಲು ಸಹ ಬರುತ್ತಿರಲಿಲ್ಲ. ಗೌಡರಿಗೆ ಈ ವಿಷಯ ತಿಳಿಯಿತು. ಅವರು ತಮ್ಮ ಮನೆಯ ದನಗಳನ್ನು ಕಾಯುತ್ತಿದ್ದ ಜೀತದ ಆಳನ್ನು ಕರೆದು 'ನೀನೇ ಎಲ್ಲೋ ಹಾಲು ಕರೆದು ಮಾರಿಕೊಳ್ಳುತ್ತಿದ್ದೀಯ' ಎಂದು ಬೈಯ್ದು, ಕೆಲವು ದಿನಗಳವರೆಗೆ ಅವನಿಗೆ ಊಟ ಕೊಡದೇ ಹಾಗೆಯೇ ದನ ಕಾಯಲು ಕಳುಹಿಸಿದರು. 'ನನಗೆ ಇಲ್ಲದ ಅಪವಾದವನ್ನು ಹೊರಿಸಿ, ಊಟ ಇಲ್ಲದಂತೆ ಮಾಡಿತಲ್ಲ ಈ ಹಸು' ಎಂದು ದನಕಾಯುವ ಹುಡುಗ ಆ ದಿವಸ ಹಸುವನ್ನು ಕಣ್ಣಲ್ಲಿ ಕಣ್ಣಿಟ್ಟು ಕಾದನು. ಸಂಜೆ ಹೊತ್ತು ಹೊಟ್ಟೆ ತುಂಬ ಮೇಯ್ದು ಹಸು ತನ್ನ ಜೊತೆಯ ದನಗಳನ್ನು ಬಿಟ್ಟು ಬಿರಬಿರನೆ ವಾಲಿಭಂಡಾರದ ಗವಿಯ ಬಾಗಿಲ ಮಾರ್ಗವಾಗಿ ಒಳಗೆ ಹೋಗುತ್ತಿದ್ದಂತೆಯೇ, ಅದರ ಬಾಲವನ್ನು ಹಿಡಿದು ದನಕಾಯುವ ಹುಡುಗನೂ ಗವಿಯೊಳಗೆ

ಹೋದನು. ಹಸು ಗವಿಯೊಳಗಿನ ಶಿವಲಿಂಗಕ್ಕೆ ಹಾಲನ್ನು ಸುರಿಸುವುದನ್ನು ಕಂಡು ವಿಸ್ಮಯಗೊಂಡನು. ಹಸು ಹಾಲನ್ನು ಸುರಿಸಿ ವಾಪಸ್ಸಾಯಿತು. ಅದರೊಂದಿಗೆ ಹಿಂದಿರುಗಿದ ಹುಡುಗನಿಗೆ ಒಬ್ಬ ಮುದುಕ ಕಾಣಿಸಿಕೊಂಡು 'ಈ ವಿಷಯವನ್ನು ಯಾರಿಗೂ ಹೇಳಕೂಡದು. ಹೇಳಿದರೆ ನಿನ್ನ ತಲೆ ಒಡೆದು ಹೋಳಾಗುತ್ತದೆ' ಎಂದು ಹೇಳಿ, ಚಿನ್ನ, ವಜ್ರ, ವೈಢೂರ್ಯಗಳಿರುವ ದ್ರವ್ಯದ ಗಂಟೊಂದನ್ನು ಕೊಟ್ಟನಂತೆ. ಅದಕ್ಕೆ ಆಯಿತು ಎಂಬಂತೆ ತಲೆಯಾಡಿಸಿದ ಹುಡುಗನು ಮನೆಗೆ ಬಂದು ತನ್ನ ಕೈಯಲ್ಲಿರುವ ದ್ರವ್ಯದ ಗಂಟನ್ನು ತನ್ನ ತಂದೆ-ತಾಯಿಗಳಿಗೆ ಕೊಟ್ಟನು. ಪರಿಣಾಮವಾಗಿ ಆ ಹುಡುಗನ ಕುಟುಂಬವು ದಾರಿದ್ರ್ಯದಿಂದ ಮುಕ್ತಿ ಹೊಂದಿದರು. ಮಗನನ್ನು ದನ ಕಾಯುವ ಕೆಲಸದಿಂದ ಬಿಡಿಸಿದರು. ಕ್ರಮೇಣವಾಗಿ ಇವರು ಅನುಕೂಲವಾದದ್ದನ್ನು ಕಂಡ ಊರಿನ ಜನರು ಸಂಶಯ ಪಡಲು ಶುರುಮಾಡಿದರು. ಈ ವಿಚಾರವಾಗಿ ತಂದೆ-ತಾಯಿಗಳನ್ನು ಕೇಳಿದರೆ ಏನೂ ಉತ್ತರ ದೊರಕಲಿಲ್ಲ. ಹುಡುಗನನ್ನು ಕೇಳಿದರೆ ಆತನೂ ಏನೂ ಹೇಳಲಿಲ್ಲ. ಕೊನೆಗೆ ಅವನಿಗೆ ಶಿಕ್ಷೆ ಕೊಟ್ಟರು. ಆಗ ಹುಡುಗನು ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ತಕ್ಷಣ ಅವನ ತಲೆ ಒಡೆದು ಹೋಳುಗಳಾದವು. ಈ ಹೋಳುಗಳು ಕಲ್ಲಾದವು. ಈಗಲೂ ಸಹ ವಾಲಿಭಂಡಾರದ ಸುತ್ತಮುತ್ತ ಅವುಗಳನ್ನು ಕಾಣಬಹುದು ಎಂದು ಜನ ಹೇಳುತ್ತಾರೆ.[೯]

## ೧೦. ವಾಲಿಕಾಷ್ಟ

ಕಮಲಾಪುರ ಹೋಬಳಿ ವೆಂಕಟಾಪುರ ಗ್ರಾಮದ, ನವ ವೃಂದಾವನಕ್ಕೆ ಹೋಗುವ ದಾರಿಯಲ್ಲಿ ಮಾಣಿಕ್ಯಪ್ಪ ಎಂಬುವವರಿಗೆ ಸೇರಿದ ಗದ್ದೆಯಲ್ಲಿ ಸುಮಾರು ಐದು ಗುಂಟೆ ವಿಸ್ತೀರ್ಣ ಹೊಂದಿರುವ ಎತ್ತರವಾದ 'ಬೂದಿದಿಬ್ಬ'ವನ್ನು 'ವಾಲಿಕಾಷ್ಟ' ಎಂದು ಕರೆಯುತ್ತಾರೆ.

ಈ ಪ್ರದೇಶದಲ್ಲಿರುವ 'ಚಿಂತಾಕಲ್ಲು' ಬಂಡೆಯ ಮೇಲೆ ನಿಂತು ಶ್ರೀರಾಮನು ವಾಲಿಯನ್ನು ಕೊಂದನಂತೆ. ಹೀಗೆ ಕೊಲ್ಲಲ್ಪಟ್ಟ ವಾಲಿಯ ಶವವನ್ನು ಹೊಳೆದಾಟಿಸಿ ತಂದು ಈ ಸ್ಥಳದಲ್ಲಿ ಸುಡಲಾಯಿತಂತೆ. ಹೀಗೆ ಸುಟ್ಟ ವಾಲಿಯ ಶವ ಬೂದಿಯಾಗಿ ದೊಡ್ಡ ದಿಬ್ಬವಾಗಿ ಹಾಗೆಯೇ ಉಳಿಯಿತಂತೆ. ಈ ಬೂದಿದಿಬ್ಬದಲ್ಲಿ ವಾಲಿಯ ಶರೀರದ ಎಲುಬುಗಳು ಈಗಲೂ ಕಂಡುಬರುತ್ತವೆ ಎಂದು ಜನರು ಹೇಳುತ್ತಾರೆ.[೧೦] ಈಗಲೂ ಸಹ ಹಲವಾರು ಸಂತರು ಮತ್ತು ಭಕ್ತರು ಈ ಸ್ಥಳಕ್ಕೆ ಭೇಟಿ ನೀಡಿ ಪೂಜೆ ಸಲ್ಲಿಸುತ್ತಾರೆ.

ಪುರಾತತ್ವಶಾಸ್ತ್ರಜ್ಞರ ಅಭಿಪ್ರಾಯದಂತೆ ಇಂತಹ ಬೂದಿದಿಬ್ಬವು ದನ-ಕರುಗಳ ಸಾಕಣೆಯನ್ನು ಕಸುಬನ್ನಾಗಿಸಿಕೊಂಡಿದ್ದ ನೂತನ ಶಿಲಾಯುಗದ ಜನರು ಆಗಾಗ್ಗೆ ಹಬ್ಬದೋಪಾದಿಯಲ್ಲಿ ಕೊಟ್ಟಿಗೆಯಲ್ಲಿ ಸಂಗ್ರಹವಾದ ಸಗಣಿಯನ್ನು ಸುಟ್ಟಿದ್ದರಿಂದ, ಇಲ್ಲವೆ ಬೃಹತ್‌ಶಿಲಾ ಸಂಸ್ಕೃತಿಯ ಜನರು ಕಬ್ಬಿಣ ಅದಿರನ್ನು ಕರಗಿಸಿ ಲೋಹ ಮಾಡಿದ ಭಟ್ಟಿಯಿಂದ ಇಂತಹ ಬೂದಿದಿಬ್ಬಗಳಾಗಿವೆ ಎಂಬುದು ವಿದ್ವಾಂಸರ ಅಭಿಪ್ರಾಯ. ಒಟ್ಟಿನಲ್ಲಿ ಈ ಬೂದಿದಿಬ್ಬವು ಯಾವುದೇ ವ್ಯಕ್ತಿಯ ಶವಸಂಸ್ಕಾರದಿಂದ ಆದುದಲ್ಲ ಎಂಬುದನ್ನು ಖಚಿತವಾಗಿ ಹೇಳಬಹುದು.

## ೧೧. ಧರ್ಮರಗುಡ್ಡ

ಹೊಸಪೇಟೆ ಹೋಬಳಿಯ 'ನಾಗೇನಹಳ್ಳಿ' ಹಾಗೂ 'ಬಸವನದುರ್ಗ' ಗ್ರಾಮಗಳ ಸಮೀಪದ ಹೊಳೆ ಬದಿಯಲ್ಲಿ 'ಧರ್ಮರಗುಡ್ಡ'ವಿದೆ. ಇಲ್ಲಿ ಅನೇಕ ಗವಿಗಳು ಹಾಗೂ ಸಣ್ಣಪುಟ್ಟ ಗುಡಿಗಳು ಕಂಡುಬರುತ್ತವೆ. ದಸರಾ ಹಾಗೂ ಯುಗಾದಿ ಹಬ್ಬಗಳಂದು ಈ ಸ್ಥಳಕ್ಕೆ ಸುತ್ತಮುತ್ತಲಿನ ಗ್ರಾಮಸ್ಥರು ತಮ್ಮ ಊರ ಗ್ರಾಮದೇವತೆಗಳನ್ನು ಪಲ್ಲಕ್ಕಿಯಲ್ಲಿ ತಂದು, ಇಲ್ಲಿನ ಚೆನ್ನಬಸವೇಶ್ವರ ಮತ್ತು ನಿಜಲಿಂಗಮ್ಮ ದೇವಸ್ಥಾನದಲ್ಲಿ ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಈ 'ಧರ್ಮರಗುಡ್ಡ'ದ ಬಗೆಗಿನ ಐತಿಹ್ಯವೊಂದು ಹೀಗಿದೆ:

ಪಾಂಡವರು ವನವಾಸದ ಕಾಲದಲ್ಲಿ ಈ ಪ್ರದೇಶಕ್ಕೆ ಬಂದು ಸ್ವಲ್ಪ ಕಾಲ ಇಲ್ಲಿ ನೆಲೆಸಿದ್ದರು. ಅಂದು ಹಂಪಿ ಹೊಳೆ ತುಂಬಿ ಹರಿಯುತ್ತಿತ್ತು. ಪಾಂಡವರಿಗೆ ಹೊಳೆ ದಾಟಿ ಹೋಗಲು ತುಂಬ ಕಷ್ಟವಾಯಿತು. ಆಗ ಧರ್ಮರಾಯನು ತಮ್ಮಂದಿರನ್ನು ಹಿಂದಿನಿಂದ ಸಾಲಾಗಿ ಬರುವಂತೆ ಹೇಳಿ ಇಂದಿನ ಧರ್ಮರಗುಡ್ಡದ ಬುಡದಲ್ಲಿರುವ ಒಂದು ಗವಿಯ ಮೂಲಕ ಸುರಂಗ ಮಾರ್ಗ ಮಾಡಿಕೊಂಡು ನದಿಯ ಇನ್ನೊಂದು ದಡದಲ್ಲಿನ ಗುಡ್ಡದ ಬುಡದಲ್ಲಿನ ಗುಹೆಯ ಮೂಲಕ ಹೊರಬಂದ. ಹೀಗಾಗಿ ಧರ್ಮರಾಯ ತನ್ನ ತಮ್ಮಂದಿರೊಂದಿಗೆ ಬಂದು ನೆಲೆಸಿದ್ದ ಈ ಗುಡ್ಡಕ್ಕೆ 'ಧರ್ಮರಗುಡ್ಡ' ಎಂದು ಹೆಸರಾಯಿತು.[೧೧] ಈಗಲೂ ಸಹ ಇಲ್ಲಿನ ಧರ್ಮರಾಯನ ಗವಿಗೆ ಪೂಜೆ ನಡೆಯುತ್ತದೆ.

## ೧೨. ಅಂಜನಾದ್ರಿ ಪರ್ವತ

ಅಂಜನಾದೇವಿ ಈ ಪರ್ವತದಲ್ಲಿ ವಾಸವಾಗಿದ್ದುದರಿಂದ ಈ ಪರ್ವತಕ್ಕೆ 'ಅಂಜನಾದ್ರಿ ಪರ್ವತ' ಎಂಬ ಹೆಸರು ಬಂತೆಂಬ ನಂಬಿಕೆ ಸಾರ್ವತ್ರಿಕವಾಗಿದೆ. ಹಂಪಿಯ ಹೊಳೆಯ ಎಡದಂಡೆಗೆ ಕಂಡುಬರುವ ಹನುಮನಹಳ್ಳಿಯ ಸಮೀಪದ ಈ ಪರ್ವತದಲ್ಲಿ ಹನುಮಂತನ ತಾಯಿ ಅಂಜನಾದೇವಿಯು ವಾಸವಾಗಿದ್ದಳೆಂದು ಜನರು ಹೇಳುತ್ತಾರೆ. ಈ ಪರ್ವತದಲ್ಲಿ ಇಂದು ಅನೇಕ ಸಾಧು-ಸಂತರು ನೆಲೆಸಿದ್ದು, ಹನುಮ ಜಯಂತಿಯನ್ನು ವಿಶೇಷವಾಗಿ ನಡೆಸುತ್ತಾರೆ.

ಅಂಜನಾದೇವಿ ಹನುಮಂತನಿಗೆ ಇದೇ ಪರ್ವತದಲ್ಲಿ ಜನ್ಮ ನೀಡಿದ್ದಳು. ಅವಳಿಗೆ ನೀರಿನ ಅವಶ್ಯಕತೆ ಬೇಕಾದಾಗ ಬಾಲಹನುಮಂತನು ಹಂಪಿ ಹೊಳೆಗೆ ಕೈ ಅಡ್ಡ ಮಾಡಿ ಈ ಪರ್ವತಕ್ಕೆ ನೀರು ಹರಿದು ಹೋಗುವಂತೆ ಮಾಡಿದ್ದನು ಎಂದು ಜನ ಹೇಳುತ್ತಾರೆ.[೧೨]

## ೧೩. ಮಾಲ್ಯವಂತ ಪರ್ವತ

ಕಂಪ್ಲಿಗೆ ಹೋಗುವ ದಾರಿಯಲ್ಲಿ ಕಮಲಾಪುರ ಹಾಗೂ ವೆಂಕಟಾಪುರ ಗ್ರಾಮಗಳ ನಡುವೆ ರಸ್ತೆಯ ಎಡಬದಿಗೆ 'ಮಾಲ್ಯವಂತ ಪರ್ವತ'ವಿದೆ. ಹಂಪಿಯ ಸಪ್ತ ಪರ್ವತಗಳಲ್ಲಿ ಮಾಲ್ಯವಂತ ಪರ್ವತವೂ ಒಂದು. ಇದರ ಬಗೆಗೆ ಎರಡು ರೀತಿಯ ಐತಿಹ್ಯಗಳು ಕಂಡುಬರುತ್ತವೆ.

೧. ಕೇರಳದಲ್ಲಿ ಮಾಲ್ಯವಂತನೆಂಬ ಹೂಗಾರನಿದ್ದ. ಈತನ ಕೆಲಸ ರಾಜನಿಗೆ ಪೂಜೆಗಾಗಿ ಹೂ ಮಾಲೆಗಳನ್ನು ನೀಡುವುದಾಗಿತ್ತು. ಒಂದು ದಿನ ಹೂ ಮಾಲೆಯಲ್ಲಿ ಸ್ತ್ರೀಯ ಕೂದಲು

ದೊರೆತಿದ್ದುದರಿಂದ ರಾಜನು ಸಿಟ್ಟಾಗಿ ಮಾಲ್ಯವಂತನನ್ನು ತನ್ನ ರಾಜ್ಯದಿಂದ ಹೊರ ಹಾಕುತ್ತಾನೆ. ಮಾಲ್ಯವಂತನು ದೇಶ ಸಂಚಾರ ಮಾಡುತ್ತಾ ಪಂಪಾಕ್ಷೇತ್ರಕ್ಕೆ ಬರುತ್ತಾನೆ. ಅವನು ಗಿರಿಯಲ್ಲಿ ವಾಸ ಮಾಡುತ್ತಾ(ಮಾಲ್ಯವಂತಗಿರಿ) ಹೂ ಮಾಲೆಗಳನ್ನು ಅಲ್ಲಿನ ಋಷಿಮುನಿಗಳಿಗೆ ಅರ್ಪಿಸುತ್ತಿದ್ದನು. ಇವನ ನಿಸ್ವಾರ್ಥಸೇವೆಯಿಂದ ಸಂತುಷ್ಟರಾದ ಋಷಿಮುನಿಗಳು ಇವನಿಗೆ 'ಶಿವ ಪಂಚಾಕ್ಷರಿ' ಮಂತ್ರೋಪದೇಶ ಮಾಡಿದರು. ಮಾಲ್ಯವಂತ ಆ ಮಂತ್ರವನ್ನು ಉಚ್ಚರಿಸುತ್ತಾ ಶಿವನನ್ನು ಕುರಿತು ಬಹು ಕಠಿಣ ತಪಸ್ಸನ್ನು ಮಾಡುತ್ತಾನೆ. ಇವನ ಕಠಿಣ ತಪಸ್ಸಿಗೆ ಮೆಚ್ಚಿದ ಶಿವನು ಇವನ ಮುಂದೆ ಪ್ರತ್ಯಕ್ಷನಾಗಿ, ವರವನ್ನು ಬೇಡೆಂದು ಹೇಳಲು, ಈತನು 'ನಿನ್ನ ಭಕ್ತಿ ನನ್ನಲ್ಲಿ ನೆಲೆಸಲಿ. ಈ ಶಿಲಾತಲವೇ ನನಗೆ ಮಂಚವಾಗಲಿ, ಅರಣ್ಯವೇ ಮಹಾಮನೆಯಾಗಲೀ, ಹಣ್ಣು-ಹಂಪಲುಗಳೇ ಉತ್ತಮವಾದ ಉಣ್ಣುವ ಮೃಷ್ಟಾನ್ನವಾಗಲೀ, ಇಲ್ಲಿರುವ ಜಲವೇ ಅಮೃತವಾಗಲೀ' ಎಂದು ಬೇಡುತ್ತಾನೆ. ಅದರಂತೆ ಶಿವನು 'ಈ ಗಿರಿಯು ಇಂದಿನಿಂದ ನಿನ್ನ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧವಾಗಲಿ' ಎಂದು ವರ ನೀಡುತ್ತಾನೆ. ಅಂದಿನಿಂದ ಮಾಲ್ಯವಂತ ಎಂಬ ಹೆಸರಿನಿಂದ ಈ ಬೆಟ್ಟ ಪ್ರಸಿದ್ಧವಾಯಿತು ಎಂಬ ಐತಿಹ್ಯವಿದೆ.

೨. ಜನರು ನೀಡುವ ವಿವರಣೆಯ ಪ್ರಕಾರ ವನವಾಸದ ಸಮಯದಲ್ಲಿ ಶ್ರೀರಾಮನು ಈ ಪರ್ವತದಲ್ಲಿದ್ದಾಗ ತನ್ನ ತಂದೆ ದಶರಥನ ಶ್ರಾದ್ಧ ಮಾಡಬೇಕಾಯಿತಂತೆ. ಈ ಪರ್ವತದಲ್ಲಿ ಶಿವಲಿಂಗ ಆಕಾರದ ದುಂಡನೆಯ ಕಲ್ಲುಗಳಿವೆ. ಶ್ರೀರಾಮನು ತನ್ನ ತಂದೆಯ ಶ್ರಾದ್ಧಕ್ಕಾಗಿ ಇಟ್ಟ ಪಿಂಡಗಳೇ ಮುಂದೆ ಕಲ್ಲುಗಳಾದವೆಂದು ಹೇಳುತ್ತಾರೆ. ಈ ಗುಡಿಯ ಹಿಂದೆ ಎರಡು ಕಲ್ಲಿನ ದೋಣಿಗಳಿದ್ದು ಅವನ್ನು ರಾಮ-ಲಕ್ಷ್ಮಣರ ದೋಣಿ ಎಂದು ಕರೆಯುತ್ತಾರೆ. ತಮ್ಮ ತಂದೆಯ ಶ್ರಾದ್ಧವನ್ನು ನೆರವೇರಿಸಲು ರಾಮ-ಲಕ್ಷ್ಮಣರು ಬಂಡೆಗೆ ಬಾಣ ಹೂಡಿ ನೀರು ಬರಿಸಿದರಂತೆ. ವನವಾಸದ ಕಾಲದಲ್ಲಿ ಸೀತೆ, ರಾಮ-ಲಕ್ಷ್ಮಣರು ಇಲ್ಲಿ ಕೆಲ ದಿನಗಳು ಉಳಿದಿದ್ದರು ಮತ್ತು ಶ್ರೀರಾಮನಿಗೆ ಹನುಮಂತನ ಭೇಟಿಯಾದುದೂ ಇಲ್ಲೇ ಎಂಬ ನಂಬಿಕೆ ಸಾರ್ವತ್ರಿಕವಾಗಿದೆ.[೧೩] ಈ ಬೆಟ್ಟದಲ್ಲಿ ರಾಮನವಮಿಯನ್ನು ಬಹು ವಿಜೃಂಭಣೆಯಿಂದ ಮತ್ತು ವಿಶೇಷವಾಗಿ ಆಚರಿಸುತ್ತಾರೆ.

### ೧೪. ಋಷ್ಯಮೂಕ ಪರ್ವತ

ಹಂಪಿಯ ಪವಿತ್ರ ಪರ್ವತ ಕ್ಷೇತ್ರಗಳಲ್ಲಿ 'ಋಷ್ಯಮೂಕ ಪರ್ವತ'ವೂ ಒಂದು. ಈ ಪವಿತ್ರ ಸ್ಥಳದಲ್ಲಿ ಸಪ್ತಋಷಿಗಳಾದ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠರು ತಪಸ್ಸು ಮಾಡಿ ಜ್ಞಾನ ಪಡೆದರಂತೆ. ಈ ಪರ್ವತಗಳಲ್ಲಿರುವ ಗುಹೆಗಳಲ್ಲಿ ಇಂದಿಗೂ ಅನೇಕ ಸಾಧು-ಸಂತರು ವಾಸ ಮಾಡುತ್ತಿದ್ದಾರೆ.[೧೪] ಹಂಪಿ ಹೊಳೆಯು ಈ ಪರ್ವತದಿಂದಲೇ ಎರಡು ಭಾಗವಾಗಿ ಹರಿಯುವುದನ್ನು ನಾವು ಕಾಣಬಹುದಾಗಿದೆ. ಈ ಸಪ್ತಋಷಿ ಮುನಿಗಳಿಂದಾಗಿ ಹಂಪಿಯ ಸಪ್ತ ಪರ್ವತಗಳ ಪರಿಕಲ್ಪನೆ ಹುಟ್ಟಿಕೊಂಡಿರಬೇಕು ಎಂದು ತಿಳಿದು ಬರುತ್ತದೆ.

### ೧೫. ಮಾತಂಗ ಪರ್ವತ

ಹಂಪಿಯ ವಿರೂಪಾಕ್ಷ ದೇವಾಲಯದ ಎದುರಿಗಿರುವ ಬಸವಣ್ಣನ ಬಲಭಾಗಕ್ಕೆ ಕಂಡುಬರುವ ಎತ್ತರವಾದ ಬೆಟ್ಟವನ್ನು 'ಮಾತಂಗ ಪರ್ವತ' ಎಂದು ಕರೆಯುತ್ತಾರೆ. ಈ ಪರ್ವತದ ಬಗ್ಗೆ ಜನರು ಈ ರೀತಿಯ ವಿವರಣೆ ನೀಡುತ್ತಾರೆ:

ಮಾತಂಗ ಋಷಿಯು ಶಿವನನ್ನು ಕುರಿತು ಉಗ್ರ ತಪಸ್ಸು ಮಾಡಿ ಶಿವನನ್ನು ಸಾಕ್ಷಾತ್ಕರಿಸಿ ಕೊಂಡು ಒಬ್ಬ ಮಗನನ್ನು ದಯಪಾಲಿಸಲು ಕೋರಿದಾಗ, ಶಿವನು ಮೂಢನಾದ ಮಗನೊಬ್ಬ ಹುಟ್ಟಲೆಂದು ಆಶೀರ್ವದಿಸಲು ಅದಕ್ಕೆ ಋಷಿಯು ಒಪ್ಪದೇ ಪಾರ್ವತಿಯ ಅಂಶವಿರುವ ಸುಂದರವಾದ ಮಗಳೊಬ್ಬಳನ್ನು ಕೇಳಿ ಆಕೆಗೆ ನೀನೇ ವರನಾಗಬೇಕೆಂದು ಬಿನ್ನವಿಸಿದನು. ಇದಕ್ಕೆ ಶಿವನು ಒಪ್ಪಿ, ಪಾರ್ವತಿ ಅಂಶವಿರುವ ಮಗಳನ್ನು ಕರುಣಿಸಿದನು. ಮಾತಂಗ ಋಷಿಯು ಅವಳಿಗೆ 'ಮಾತಂಗಿ' ಎಂಬ ಹೆಸರು ಇಟ್ಟನು. ಶಿವನು ಮಾತಂಗ ಋಷಿಯ ಕೋರಿಕೆಯಂತೆ, ಈ ಕ್ಷೇತ್ರದಲ್ಲಿ 'ಕನ್ನೇಶ್ವರ'ನಾಗಿ ಅವತರಿಸಿ ಮಾತಂಗಿಯನ್ನು ವರಿಸಿದನೆಂಬ ಐತಿಹ್ಯವಿದೆ. ಮಾತಂಗ ಋಷಿಯು ಈ ಪರ್ವತದಲ್ಲಿ ವಾಸಿಸುತ್ತಿದ್ದುದರಿಂದ 'ಮಾತಂಗ ಪರ್ವತ' ಎಂಬ ಹೆಸರು ಬಂದಿತೆಂದು ಹೇಳುತ್ತಾರೆ.[೧೫]

ಇನ್ನೂ ಕೆಲವರ ಪ್ರಕಾರ ಈ ಬೆಟ್ಟದಲ್ಲಿ ಮಾತಂಗಿ ಇದ್ದಳು. ಆದುದರಿಂದ ಇದು 'ಮಾತಂಗಿ ಪರ್ವತ'ವೇ ಹೊರತು ಮಾತಂಗ ಪರ್ವತ ಅಲ್ಲ. ಬೆಟ್ಟದ ತುದಿಯಲ್ಲಿದ್ದ ಮಾತಂಗಿ ವಿಗ್ರಹವನ್ನು ಬೇರೆ ಕಡೆಗೆ ಸ್ಥಳಾಂತರಿಸಿ ಅಲ್ಲಿ ವೀರಭದ್ರ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ ಎಂದೂ ಜನ ಹೇಳುತ್ತಾರೆ. ಇದು ಮಾದಿಗ ಜನಾಂಗಕ್ಕೆ ಪವಿತ್ರ ಸ್ಥಳವಾಗಿತ್ತು. ಏಕೆಂದರೆ ಮಾತಂಗಿ ಮಾದಿಗ ಜನಾಂಗಕ್ಕೆ ಸೇರಿದ ಹೆಣ್ಣು ಮಗಳು(ದೇವತೆ) ಎಂದು ವಿವರಣೆ ನೀಡುತ್ತಾರೆ.

### ೧೬. ಮಾಸ್ಲಯ್ಯನಗುಡ್ಡ

ಹಂಪಿಗೆ ಇರುವ ಮತ್ತೊಂದು ಹೆಸರು 'ಮಾಸ್ಲಯ್ಯನಗುಡ್ಡ'. ಏಕೆ ಹೀಗೆ ಕರೆಯುತ್ತಾರೆ ಎಂದು ವಿಚಾರಿಸಿದಾಗ, ಮೊದಲು ಮಾಸ್ಲಯ್ಯ ಎಂಬ ವ್ಯಕ್ತಿ ಒಬ್ಬನೇ ವಿಜಯವಿಠ್ಠಲ ದೇವಸ್ಥಾನದ ಪಕ್ಕದ ಗುಡ್ಡದಲ್ಲಿ ವಾಸಿಸುತ್ತಿದ್ದನಂತೆ. ಇಂದಿನ ಹೇಮಕೂಟ, ರತ್ನಕೂಟದ ಗುಡ್ಡದ ಬಳಿಯಲ್ಲಿ ಸುತ್ತಾಡುತ್ತಿದ್ದನಂತೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತ ಮುಂಚಿತವಾಗಿ ವಾಸಿಸುತ್ತಿದ್ದ ಕಾರಣದಿಂದಾಗಿ ಈ ಗುಡ್ಡಕ್ಕೆ 'ಮಾಸ್ಲಯ್ಯನ ಗುಡ್ಡ', 'ಮೊಸಳಯ್ಯನಗುಡ್ಡ' ಎಂಬ ಹೆಸರು ಬಂತೆಂದು ಹೇಳುತ್ತಾರೆ.[೧೬]

ಮೊಸಳಯ್ಯನ ಗುಡ್ಡದಲ್ಲಿ ಕೇಂದ್ರ ಪುರಾತತ್ವ ಇಲಾಖೆಯವರು ಆದಿಹಳೆಯ ಶಿಲಾಯುಗದ ಅವಶೇಷಗಳನ್ನು ಪತ್ತೆ ಹಚ್ಚಿದ್ದಾರೆ. ಇದರಿಂದ ಈ ನೆಲೆಯು ಆದಿಇತಿಹಾಸ ಕಾಲದವರೆಗಿನ ಮುಂದುವರೆದ ಸಾಂಸ್ಕೃತಿಕ ಭಾಗವಾಗಿತ್ತು ಎಂಬುದಾಗಿ ತಿಳಿದುಬರುತ್ತದೆ. ಪುರಾತತ್ವಶಾಸ್ತ್ರಜ್ಞರಾದ ಅ. ಸುಂದರ ಅವರು ಮೊಸಳಯ್ಯನ ಗುಡ್ಡದಲ್ಲಿ ಉತ್ಖನನ ನಡೆಸಿ, ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ವಸತಿ ಮತ್ತು ಸಮಾಧಿಗಳಲ್ಲದೆ ಅವರು ಬಳಸುತ್ತಿದ್ದ ಕೆಂಪು-ಕಪ್ಪು ಮಡಿಕೆಯ ಅವಶೇಷಗಳನ್ನೂ ಬೆಳಕಿಗೆ ತಂದಿದ್ದಾರೆ.

### ೧೭ ಕೋತಿ ಇನಾಮ್

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಅಕ್ಕ-ತಂಗಿಯರ ಗುಂಡುಗಳ ಎಡಭಾಗದಲ್ಲಿರುವ ಕೃಷಿ ಭೂಮಿ ಮತ್ತು ವಿರೂಪಾಕ್ಷ ದೇವಾಲಯದ ಹಿಂದಿನ ಕೃಷಿ

ಭೂಮಿಯನ್ನು 'ಕೋತಿ ಇನಾಮ್' ಎಂದು ಕರೆಯುತ್ತಾರೆ. ಈ ಕೃಷಿ ಭೂಮಿಗಳನ್ನು ಕೋತಿಗಳ ಊಟಕ್ಕೆಂದೇ ಮೀಸಲಿಡಲಾಗಿತ್ತಂತೆ. 'ಈ ವಾನರರು ನಮಗಿಂತಲೂ ಮೊದಲು ಇಲ್ಲಿ ಸಾಮ್ರಾಜ್ಯ ಸ್ಥಾಪಿಸಿದ್ದರಿಂದ ನ್ಯಾಯವಾಗಿ ಇದು ಅವರಿಗೆ ಸಲ್ಲಬೇಕಾದದ್ದು ಎಂದು ಹಿಂದಿನವರು ಆಲೋಚಿಸಿ ಹೀಗೆ ಮಾಡಿದರು' ಎಂದು ಜನರು ಹೇಳುತ್ತಾರೆ.[೧೭] ಇಂಥದ್ದೇ ಉದ್ದೇಶವಿರುವ ಕೃಷಿ ಭೂಮಿಗಳನ್ನು ಕೋತಿ ಕೊಡುಗೆ, ಕೋತಿ ಭೂಮಿ, ಕೋತಿ ಮಾನ್ಯ, ಕೋತಿ ಮಾನೇವು ಎಂಬ ಹೆಸರುಗಳಿಂದ ಕರೆಯುವುದು ಹಂಪಿಯ ಪರಿಸರದಲ್ಲಿ ಕಂಡುಬರುತ್ತವೆ.

## ೧೮. ಕಮಲಾಪುರ ಕೆರೆ ಏರಿ

ಕಮಲಾಪುರ ಕೆರೆ ಏರಿಗೆ ಸಂಬಂಧಿಸಿದಂತೆ ಒಂದು ಐತಿಹ್ಯವಿದೆ. ಈ ಕೆರೆಯು ಗ್ರಾಮದ ಪಶ್ಚಿಮಕ್ಕೆ ಇದೆ. ಹೊಸಪೇಟೆಗೆ ಈ ಕೆರೆ ಏರಿಯ ರಸ್ತೆಯ ಮೂಲಕ ಹಾದು ಹೋಗಬೇಕು. ಈ ಕೆರೆ ಏರಿಯು ಸುಮಾರು ೨ ಕಿ.ಮೀ. ಉದ್ದವನ್ನು ಹೊಂದಿದೆ. ವಿಜಯನಗರದ ಅರಸು ಸಂಗಮ ವಂಶದ ಅಚ್ಯುತರಾಯ ಮಹಾರಾಜನ ಮಗನಾದ ಪ್ರೌಢದೇವರಾಯ ಮಹಾರಾಜನು ತನ್ನ ತಾಯಿಯ ನೆನಪಿಗಾಗಿ ಈ ಕೆರೆಯನ್ನು ನಿರ್ಮಿಸಿದನು. ಈ ಕೆರೆಗೆ ಏರಿಯನ್ನು ನಿರ್ಮಿಸಿದಾಗಲೆಲ್ಲಾ ಬಿದ್ದು ಹೋಗುತ್ತಿತಂತೆ. ಚಿಂತಿತನಾದ ದೇವರಾಯನು ಇದರ ಬಗ್ಗೆ ಪಂಡಿತರಲ್ಲಿ ವಿಚಾರಿಸಲಾಗಿ, ಪಂಡಿತರು ೧೦೦ ಜನರನ್ನು ಬಲಿ ನೀಡಿದರೆ, ಏರಿಯು ಬಿದ್ದು ಹೋಗದೆ ದೃಢವಾಗಿ ನಿಲ್ಲುತ್ತದೆ ಎಂದರಂತೆ. ತಕ್ಷಣ ದೇವರಾಯನು ೧೦೦ ಜನ ಗುಲಾಮರು ಮತ್ತು ಯುದ್ಧ ಖೈದಿಗಳನ್ನು ಬಲಿ ನೀಡಿದನಂತೆ. ಇದರಿಂದಾಗಿ ಈ ಕೆರೆಯ ಏರಿಯು ಬಿದ್ದು ಹೋಗದೇ ಅಂದಿನಿಂದ ಇಂದಿನವರೆಗೂ ದೃಢವಾಗಿ ನಿಂತಿದೆ ಎಂದು ಜನರು ವಿವರಿಸುತ್ತಾರೆ.[೧೮]

## ೧೯. ಸೂಳೆ ಬಜಾರು(ಅಚ್ಯುತ ಬಜಾರು)

ತಿರುವೆಂಗಳನಾಥ ಗುಡಿಯ ಎದುರಿನ ವಿಶಾಲವಾದ ಸ್ಥಳಕ್ಕೆ 'ಸೂಳೆ ಬಜಾರು' ಅಥವಾ 'ಅಚ್ಯುತ ಬಜಾರು' ಎಂದು ಕರೆಯುತ್ತಾರೆ. ಗುಡಿಯ ಎದುರಿನ ವಿಶಾಲವಾದ ಸ್ಥಳದ ಇಕ್ಕೆಲಗಳಲ್ಲಿ ಸೂಳೆಯರು ವಾಸಿಸುತ್ತಿದ್ದರು. ಇವರಿಗೆ ಯಾವುದೇ ರೀತಿಯ ಕಟ್ಟುಪಾಡುಗಳಿರಲಿಲ್ಲ. ಇದರಿಂದಾಗಿ ಸೂಳೆಯರು ಅತ್ಯಂತ ವೈಭವಯುತ ಜೀವನ ಸಾಗಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಸೂಳೆ ಬಜಾರು ಕುರಿತಂತೆ ವಿದೇಶಿ ಪ್ರವಾಸಿಗನಾದ **ಅಬ್ದುಲ್ ರಜಾಕ್** ಈ ರೀತಿ ಹೇಳುತ್ತಾನೆ: "ದರಬ್‌ಖಾನೆಯ ಹಿಂಭಾಗದಲ್ಲಿ ಮುನ್ನೂರು ಗಜಕ್ಕಿಂತಲೂ ಹೆಚ್ಚು ಉದ್ದವಾದ, ಇಪ್ಪತ್ತು ಗಜಕ್ಕಿಂತಲೂ ಅಗಲವಾದ ಒಂದು ತರಹ ಅಂಗಡಿ ಬೀದಿಯಿದೆ. ಯಾರೂ ಬೇಕಾದರೂ ಈ ಬೀದಿಗೆ ಬಂದು ತನಗೆ ಮೆಚ್ಚುಗೆಯಾದ ವೇಶ್ಯೆಯರನ್ನು ಆರಿಸಿಕೊಂಡು ಅವಳೊಡನೆ ಕಾಲ ಕಳೆಯಬಹುದು".[೧೯] ವಿದೇಶಿಯರಿಗೆ ಇಲ್ಲಿಂದ ಸೂಳೆಯರನ್ನು ದೊರಕಿಸಿಕೊಡಲಾಗುತ್ತಿತ್ತು ಎಂಬ ನಂಬಿಕೆಯಿದೆ. ಇವರು ಯಾವ ರೀತಿಯ ವೈಭವ ಜೀವನ ನಡೆಸುತ್ತಿದ್ದರೆಂದರೆ ಇವರು ನೀಡುವ ತೆರಿಗೆಯಿಂದಲೇ ಒಂದು ಸೈನ್ಯ ತುಕಡಿಯ ಮಾಸಿಕ ವೇತನ ಸಂದಾಯವಾಗುತ್ತಿತ್ತು ಎಂದು ತಿಳಿದುಬರುತ್ತದೆ.

ಸಾಂಸ್ಕೃತಿಕವಾಗಿಯೂ ಈ ಬಜಾರು ಮಹತ್ವವನ್ನು ಹೊಂದಿತ್ತು. ಎಲ್ಲ ದೇವಾಲಯಗಳಲ್ಲಿ ನಡೆಸುತ್ತಿದ್ದ ಹಬ್ಬಗಳು, ರಥೋತ್ಸವಗಳು, ಉತ್ಸವಗಳನ್ನು ಇಲ್ಲಿಯೂ ಏರ್ಪಡಿಸಲಾಗುತ್ತಿದ್ದಿತು. 'ತಿರುವೆಂಗಳನಾಥನ ತೇರುಬೀದಿ'ಯೆಂದು ಶಾಸನದಲ್ಲಿ ಕರೆದಿರುವುದು ಇಲ್ಲಿ ರಥೋತ್ಸವ ನಡೆಯುತ್ತಿದ್ದುದಕ್ಕೆ ಸ್ಪಷ್ಟ ಸೂಚನೆ. ಈ ಬಜಾರಿನ ವಿಶೇಷತೆಯೆಂದರೆ ನೃತ್ಯಕ್ಕಾಗಿಯೇ ಇಲ್ಲಿ ಪ್ರತ್ಯೇಕವಾದ ಮಂಟಪವಿರುವುದು. ಇದು ಅಂದಿನ ನೃತ್ಯ ಶಾಲೆಯಾಗಿತ್ತು. ರಾಜರು ಇದನ್ನು ಪ್ರತ್ಯೇಕವಾಗಿ ಕಟ್ಟಿಸಿರುವುದನ್ನು ನೋಡಿದರೆ, ನೃತ್ಯ, ಸಂಗೀತಗಳಿಗೆ ಅರಸರು ನೀಡಿದ ಪ್ರೋತ್ಸಾಹ ವ್ಯಕ್ತವಾಗುತ್ತದೆ.

## ೨೦. ಪಾನ್‌ಸುಪಾರಿ ಬಜಾರು

ರಾಜ ಪರಿವಾರದವರು ವಾಸಿಸುತ್ತಿದ್ದರು ಎಂದು ಗುರುತಿಸಲಾಗಿರುವ, ರಾಜ ಪ್ರಾಂಗಣದ 'ಹಜಾರರಾಮಚಂದ್ರ' ದೇವಾಲಯದ ಈಶಾನ್ಯಕ್ಕೆ ಶೃಂಗಾರದ ಹೆಬ್ಬಾಗಿಲಿನವರೆಗೂ ವಿಸ್ತರಿಸಿದ್ದ ವಿಶಾಲವಾದ ಬೀದಿಯನ್ನು 'ಪಾನ್‌ಸುಪಾರಿ ಬಜಾರು' ಎಂದು ಕರೆಯುತ್ತಿದ್ದರು. ಇದಕ್ಕೆ ಪೆದ್ದಂಗಡಿಬೀದಿ, ರಾಜಬೀದಿ ಎಂತಲೂ ಕರೆಯುತ್ತಿದ್ದರು.

ಹೆಸರೇ ಸೂಚಿಸುವಂತೆ 'ಪಾನ್‌ಸುಪಾರಿ' ಎಂದರೆ ಎಲೆ, ಅಡಿಕೆ. ಇಲ್ಲಿ ಎಲೆ, ಅಡಿಕೆ ವ್ಯಾಪಾರವಲ್ಲದೇ ಹೂವು, ಹಣ್ಣು, ತರಕಾರಿ, ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ವಜ್ರ-ವೈಢೂರ್ಯ, ಕುದುರೆ, ಆನೆ, ಕುರಿ ಇತ್ಯಾದಿಗಳ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಈ ಬಜಾರಿನಲ್ಲಿ ದೇಶೀಯ ವಸ್ತುಗಳ ಜೊತೆಗೆ ವಿದೇಶೀ ವಸ್ತುಗಳ ವ್ಯಾಪಾರ ನಡೆಯುತ್ತಿತ್ತು ಎಂದು ನಿರೂಪಕರು ವಿವರಣೆಯನ್ನು ನೀಡುತ್ತಾರೆ.[೨೦]

## ೨೧. ವಿರೂಪಾಕ್ಷ ಬಜಾರು

ವಿರೂಪಾಕ್ಷ ದೇವಾಲಯದ ಪೂರ್ವಗೋಪುರದ ಮುಂಭಾಗದಿಂದ ಬಸವಣ್ಣ ಮಂಟಪದವರೆಗೆ ಇರುವ ವಿಶಾಲವಾದ ಬೀದಿಯನ್ನು 'ವಿರೂಪಾಕ್ಷ ಬಜಾರು' ಎಂದು ಕರೆಯಲಾಗಿದೆ. ಈ ಬಜಾರನ್ನು ವಿರೂಪಾಕ್ಷಪುರ, ಪಂಪಾರಥ ವೀದಿ, ಹಂಪೆ ಬಜಾರು, ತೇರುಬೀದಿ ಎಂಬಿತ್ಯಾದಿ ಹೆಸರುಗಳಿಂದ ಕರೆಯಲಾಗಿದೆ.

ಈ ಬಜಾರು ವಿರೂಪಾಕ್ಷ ದೇವಾಲಯದಷ್ಟೇ ಹಳೆಯದು ಎಂದು ನಿರೂಪಕರು ಹೇಳುತ್ತಾರೆ. ಆರಂಭದಲ್ಲಿ ಈ ಬಜಾರು ಕೇವಲ ತೇರುಬೀದಿಯಾಗಿ ಮಾತ್ರ ಕಾರ್ಯನಿರ್ವಹಿಸುತ್ತಿತ್ತು. ಈಗ ನಾವು ಕಾಣುವ ವಿಶಾಲವಾದ ಬೀದಿಯು ಮೊದಲು ಕಲ್ಲು, ಮುಳ್ಳುಗಳಿಂದ ತುಂಬಿತ್ತಂತೆ. ಇದನ್ನು ಸಂಗಮ ವಂಶದ ದೊರೆ ಪ್ರೌಢದೇವರಾಯನು ಕಲ್ಲು, ಮುಳ್ಳುಗಳನ್ನು ತೆಗೆಸಿ ಸ್ವಚ್ಛಗೊಳಿಸಿ ವಿಶಾಲವಾಗಿಸಿದನಂತೆ.[೨೧] ಈ ಬಜಾರು ನಿರ್ಮಾಣಗೊಂಡಿದ್ದು ಧಾರ್ಮಿಕ ಆಚರಣೆಗಳಿಗಾಗಿಯೇ. ಕೇವಲ ದೇವಾಲಯಕ್ಕೆ ಅವಶ್ಯಕತೆಯಿರುವ ವಸ್ತುಗಳ ಸಂಬಂಧದಿಂದ. 'ಹಂಪಿ' ವಿಜಯನಗರ ಅರಸರ ರಾಜಧಾನಿಯಾದ ಮೇಲೆ ವಸತಿ ಪ್ರದೇಶಗಳು ನಿರ್ಮಾಣವಾಗಿ, ಹೆಚ್ಚು ಹೆಚ್ಚು ಜನರು ರಾಜಧಾನಿಯಲ್ಲಿ ವಾಸಿಸಲಾರಂಭಿಸಿದರು. ಜನರಿಗೆ ಅವಶ್ಯಕವಾದ

ಆಹಾರ ವಸ್ತುಗಳನ್ನು ಪೂರೈಸಲು ಈ ಬಜಾರು ನಿರ್ಮಾಣಗೊಂಡಿತೆಂದು ತಿಳಿದುಬರುತ್ತದೆ. ಇಂದು ಕಾಣಸಿಗುವ ಸಾಲು ಮಂಟಪಗಳನ್ನು ಅಂದು ವ್ಯಾಪಾರದ ಉದ್ದೇಶಕ್ಕಾಗಿಯೇ ಕಟ್ಟಿಸಲಾಗಿತ್ತೆಂದು ತಿಳಿದುಬರುತ್ತದೆ. ಈ ಸಾಲು ಮಂಟಪಗಳು ವ್ಯಾಪಾರ ಉದ್ದೇಶಕ್ಕಲ್ಲದೇ, ಹಬ್ಬ, ರಥೋತ್ಸವಗಳ ಸಂದರ್ಭಗಳಲ್ಲಿ ಯಾತ್ರಿಕರು ಉಳಿದುಕೊಳ್ಳಲು ಮತ್ತು ರಥೋತ್ಸವವನ್ನು ವೀಕ್ಷಿಸಲು ಅನುಕೂಲವಾಗಿದ್ದವೆಂದು ನಿರೂಪಕರು ತಿಳಿಸುತ್ತಾರೆ.[೨೨]

ಈ ವಿರೂಪಾಕ್ಷ ಬಜಾರು ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳ ಕೇಂದ್ರವಾಗಿ ಹಿಂದಿನಂತೆಯೇ ಇಂದಿಗೂ ಜೀವಂತವಾಗಿರುವುದನ್ನು ನಾವು ಕಾಣಬಹುದಾಗಿದೆ. ಈ ಮಾತಿಗೆ ಪುಷ್ಟಿ ನೀಡುವಂತೆ ಇಂದು ನಾವು ಈ ಬಜಾರಿನ ಇಕ್ಕೆಲಗಳಲ್ಲಿ ಕಾಣುವ ವ್ಯಾಪಾರ ಮಳಿಗೆಗಳೇ ಸಾಕ್ಷಿ ಎಂದು ಹೇಳಬಹುದು. ಈ ಬಜಾರು ಹಿಂದಿನ ವೈಭವಪೂರ್ಣ ಸಂದರ್ಭವನ್ನು ನೆನಪಿಗೆ ತರುವುದಿಲ್ಲವಾದರೂ ಇಂದಿನ ಪರಿಸ್ಥಿತಿಯ ಮಟ್ಟಿಗೆ ಈ ಬಜಾರು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ ಎಂದೇ ಹೇಳಬಹುದು.

### ೨೨. ವಿಠ್ಠಲ ಬಜಾರು

'ವಿಠ್ಠಲ ಬಜಾರು' ತುಂಗಭದ್ರಾ ನದಿಯ ಬಲದಂಡೆಯ ವಿಶಾಲ ಬಯಲಿನಲ್ಲಿ ನಿರ್ಮಾಣಗೊಂಡಿತ್ತು. ವಿಠ್ಠಲ ದೇವಾಲಯದ ಪೂರ್ವ ಗೋಪುರದ ಮುಂಭಾಗದಿಂದ, ಪರಾಂಕುಶ ಮಂಟಪದವರೆಗೆ ವಿಸ್ತಾರವಾಗಿ ನೆಲೆಗೊಂಡಿರುವ ಬೀದಿಯೇ ವಿಠ್ಠಲ ಬಜಾರು. ಇದನ್ನು ವಿಠ್ಠಲ ದೇವರ ತೇರು ಬೀದಿಯೆಂತಲೂ, ವಿಠ್ಠಲಾಪುರವೆಂತಲೂ ಕರೆಯಲಾಗಿದೆ.

ವಿಠ್ಠಲ ಬಜಾರು ಸಹ ಇತರ ಬಜಾರುಗಳಂತೆ ಮಾರುಕಟ್ಟೆ ಪ್ರದೇಶವಾಗಿತ್ತು. ಸರಕು-ಸಾಮಗ್ರಿಗಳು ಬೇರೆ ಬೇರೆ ಕಡೆಗಳಿಂದ ಇಲ್ಲಿಗೆ ಬರುತ್ತಿದ್ದವು. ವಿಠ್ಠಲ ಬಜಾರದ ವಾಯುವ್ಯಕ್ಕೆ ತುಂಗಭದ್ರಾ ನದಿಯಲ್ಲಿ ಕಲ್ಲಿನ ಸೇತುವೆಯನ್ನು ಎರಡನೇ ಹರಿಹರನ ಸಹೋದರ ಕಂಪಭೂಪನು ಕಟ್ಟಿಸಿದನೆಂದು ತಿಳಿದುಬರುತ್ತದೆ.[೨೩] ಉತ್ತರದಲ್ಲಿದ್ದ ಪ್ರದೇಶಗಳಿಗೆ ನೇರ ಸಂಪರ್ಕವನ್ನು ಕಲ್ಪಿಸುವುದರ ಜೊತೆಗೆ ವಿಠ್ಠಲ ಬಜಾರು ಹಾಗೂ ಹಂಪೆಯ ಇತರ ಬಜಾರುಗಳಿಗೆ ಉತ್ತರದಿಂದ ಸರಕು-ಸಾಮಗ್ರಿಗಳ ಸಾಗಣೆಗೆ ಅನುಕೂಲ ಕಲ್ಪಿಸುವುದು ಇದರ ಉದ್ದೇಶವಾಗಿದ್ದಿತು. ಈ ಬಜಾರಿನ ವ್ಯಾಪಾರಿಗಳು ಇಲ್ಲಿನ ವಿಠ್ಠಲ ದೇವರಿಗೆ ನಿತ್ಯ ನೈವೇದ್ಯ ಮತ್ತು ಪೂಜಾಕಾರ್ಯಗಳಿಗಾಗಿ ಅನೇಕ ದಾನ-ದತ್ತಿಗಳನ್ನು ನೀಡುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ.[೨೪]

### ೨೩. ಕೃಷ್ಣ ಬಜಾರು

ಹಂಪೆಯ ಬಜಾರುಗಳಲ್ಲಿ 'ಕೃಷ್ಣ ಬಜಾರು' ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಬಾಲಕೃಷ್ಣ ದೇವಾಲಯದ ಎದುರುಗಡೆ ಇರುವ ವಿಶಾಲವಾದ ಬೀದಿಯನ್ನು 'ಕೃಷ್ಣ ಬಜಾರು' ಎಂದು ಕರೆಯುತ್ತಿದ್ದರು. ಇದು ಹಂಪಿಯಿಂದ ಕಮಲಾಪುರಕ್ಕೆ ಹೋಗುವ ರಸ್ತೆಯಲ್ಲಿ ಕಂಡುಬರುತ್ತದೆ. ಈ ಬಜಾರವನ್ನು 'ಕೃಷ್ಣಾಪುರಪೇಟೆ', 'ಬಾಲಕೃಷ್ಣ ದೇವರ ತೇರುಬೀದಿ'ಯೆಂದು ಕರೆಯುತ್ತಿದ್ದರು.

ಕೃಷ್ಣದೇವರಾಯನು ಕ್ರಿ.ಶ. ೧೫೧೩ರಲ್ಲಿ ಒರಿಸ್ಸಾದ ದೊರೆ ಗಜಪತಿಯನ್ನು ಸೋಲಿಸಿ, ತನ್ನ ವಿಜಯದ ನೆನಪಿಗಾಗಿ ಬಾಲಕೃಷ್ಣನ ಪ್ರತಿಮೆಯನ್ನು ಉದಯಗಿರಿಯಿಂದ ತಂದು, ರಾಜಧಾನಿ ಹಂಪೆಯಲ್ಲಿ ಕ್ರಿ.ಶ. ೧೫೧೯ರಲ್ಲಿ ಬೃಹತ್ ದೇವಾಲಯವನ್ನು ನಿರ್ಮಿಸಿ ಬಾಲಕೃಷ್ಣನನ್ನು ಪ್ರತಿಷ್ಠಾಪಿಸಿದನು. ದೇವಾಲಯದ ನಿರ್ಮಾಣದ ನಂತರ ಕೃಷ್ಣ ಬಜಾರು ನಿರ್ಮಾಣಗೊಂಡಿತು.[೨೫] ಈ ಬಜಾರಿನಲ್ಲಿ ಮುಖ್ಯವಾಗಿ ದವಸ-ಧಾನ್ಯಗಳನ್ನು ಮಾರಾಟ ಮಾಡುವ ಮಾರುಕಟ್ಟೆಗಳಿದ್ದವು. ಇವುಗಳ ಜೊತೆಗೆ ರೇಷ್ಮೆ ಮತ್ತು ಕಿಂಕಾಪು ಬಟ್ಟೆಗಳು, ಇತರೇ ವಸ್ತುಗಳ ವ್ಯಾಪಾರಗಳು ಕೂಡ ನಡೆಯುತ್ತಿದ್ದವು. ಕೃಷ್ಣದೇವರಾಯನಿಂದ ನಿರ್ಮಾಣಗೊಂಡ ಈ ಬಜಾರು, ಉಳಿದ ಅರಸರ ಪ್ರೋತ್ಸಾಹಗಳಿಂದ ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಚಟುವಟಿಕೆಗಳಲ್ಲಿ ಮುಖ್ಯ ಪಾತ್ರ ನಿರ್ವಹಿಸಿತು.

## ೨೪. ವರದರಾಜಮ್ಮನ ಬಜಾರು

ಕಮಲಾಪುರ ಗ್ರಾಮದ ಪೂರ್ವದಿಕ್ಕಿನಲ್ಲಿ ಪಟ್ಟಾಭಿರಾಮ ದೇವಾಲಯ ಕಂಡುಬರುತ್ತದೆ. ಈ ದೇವಾಲಯದ ಪೂರ್ವಕ್ಕೆ ವರದರಾಜಮ್ಮನ ಪಟ್ಟಣ ಇದೆ. ಶಾಸನಗಳಲ್ಲಿ ಈ ಪಟ್ಟಣವನ್ನು ವರದಾದೇವಿ ಅಮ್ಮನವರ ಪಟ್ಟಣ, ವರದರಾಜಮ್ಮನ ಪಟ್ಟಣ, ವರದರಾಜಮ್ಮನ ಪೇಟೆ ಎಂದು ಕರೆದಿವೆ. ಈ ಪಟ್ಟಣವನ್ನು ಅಚ್ಯುತರಾಯನ ಪಟ್ಟದ ರಾಣಿಯಾದ ವರದಾದೇವಿಯ ನೆನಪಿಗಾಗಿ ಈ ಪಟ್ಟಣವನ್ನು ಕಟ್ಟಿಸಲಾಯಿತು. ಈ ಪಟ್ಟಣವು ಪ್ರಮುಖ ವ್ಯಾಪಾರ ಕೇಂದ್ರವೂ ಆಗಿತ್ತು. ಈ ಬಜಾರು ಪಟ್ಟಣದಿಂದ ಇಂದಿನ ಸಣ್ಣಕ್ಕೆಪ್ಪನ ಅಗಸಿಯವರೆಗೂ ವಿಸ್ತರಿಸಿರುವುದನ್ನು ಕಾಣಬಹುದು.[೨೬] ಇದಕ್ಕೆ ಪುಷ್ಠಿಯಾಗಿ ವರದರಾಜಮ್ಮನ ಬಜಾರದಲ್ಲಿ ಸಾಲುಮಂಟಪಗಳಿದ್ದುದನ್ನು ಇಕ್ಕೆಲುಗಳಲ್ಲಿ ಬಿದ್ದಿರುವ ಮಂಟಪಗಳ ಅವಶೇಷಗಳಿಂದ ಸ್ಪಷ್ಟವಾಗಿ ಗುರುತಿಸಬಹುದು. ಆದರೆ ಅಂದಿನ ಬಜಾರಿನ ಪರಿಸರವನ್ನು ಇಂದು ತೋಟಗಳಾಗಿ, ಹೊಲ-ಗದ್ದೆಗಳನ್ನಾಗಿ ಮಾರ್ಪಡಿಸಿ ರುವುದು ಕಂಡುಬರುತ್ತದೆ.

ವಿಜಯನಗರದ ರಾಜಧಾನಿ ಹಂಪಿಯಲ್ಲಿದ್ದ ಬಜಾರುಗಳಂತೆ, ವರದಾರಜಮ್ಮನ ಬಜಾರು ಕೂಡ ಆರ್ಥಿಕವಾಗಿ ಮಹತ್ವವನ್ನು ಹೊಂದಿತ್ತು. ಇಲ್ಲಿಯೂ ಕೂಡ ವಿವಿದೆಡೆಗಳಿಂದ ತಂದಂತಹ ವಸ್ತುಗಳ ವ್ಯಾಪಾರ ನಡೆಯುತ್ತಿತ್ತು. ವರದರಾಜಮ್ಮನ ಬಜಾರಿನ ಮೇಲುಸ್ತುವಾರಿ ಪಟ್ಟಣಸ್ವಾಮಿಯದಾಗಿತ್ತು. ಇವರು ಬಜಾರಿಗೆ ಬರುತ್ತಿದ್ದ ವ್ಯಾಪಾರ ವಸ್ತುಗಳ ಮೇಲೆ ತೆರಿಗೆ ವಸೂಲಿ ಮಾಡುವ ಹಕ್ಕನ್ನು ಹೊಂದಿದ್ದರು.

## ೨೫. ನವ ವೃಂದಾವನ

'ನವ ವೃಂದಾವನ'ವು ಆನೆಗೊಂದಿಯ, ತುಂಗಾಭದ್ರ ನದಿಯ ನಡುಗಡ್ಡೆ ಪ್ರದೇಶದಲ್ಲಿದೆ. ಇದಕ್ಕೆ 'ಕಲ್ಪಾದ್ರಿ', 'ಕಾಲಾದ್ರಿ ಪರ್ವತ'ವೆಂದೂ ಕರೆಯಲಾಗುತ್ತದೆ. ಈ ಸುಂದರ ಸ್ಥಳದಲ್ಲಿ ಒಂಬತ್ತು ಯತಿವರ್ಯರು ವೃಂದಾವನಸ್ಥರಾಗಿರುವುದರಿಂದ ಇದು 'ನವ ವೃಂದಾವನ'ವೆಂದು ಕರೆಯಲ್ಪಟ್ಟಿದೆ. ಈ ಯತಿಗಳಲ್ಲಿ ಪ್ರಥಮರು ಮಧ್ವಾಚಾರ್ಯರ ಶಿಷ್ಯರಾಗಿದ್ದ ಪದ್ಮನಾಭತೀರ್ಥರು, ನಂತರ ಕ್ರಮವಾಗಿ ಕವೀಂದ್ರತೀರ್ಥರು, ವಾಗೀಶತೀರ್ಥರು, ಗೋವಿಂದ ಒಡೆಯರು,

ವ್ಯಾಸರಾಯರು, ರಘುವರ್ಯರು, ಶ್ರೀನಿವಾಸತೀರ್ಥರು, ಶ್ರೀರಾಮತೀರ್ಥರು, ಸುಧೀಂದ್ರತೀರ್ಥರು. ಇವರಲ್ಲಿ ನಾಲ್ವರು ವ್ಯಾಸರಾಜ ಮಠಕ್ಕೂ, ನಾಲ್ವರು ಉತ್ತರಾಧಿ ಮಠಕ್ಕೂ ಮತ್ತು ಒಬ್ಬರು ರಾಯರ ಮಠಕ್ಕೆ ಸಂಬಂಧಪಟ್ಟವರಾಗಿದ್ದವರು. ಗೋವಿಂದ ಒಡೆಯರೊಬ್ಬರನ್ನು ಬಿಟ್ಟು ಉಳಿದವರೆಲ್ಲರೂ ಮಠಾಧಿಪತಿಗಳಾಗಿದ್ದರೆಂದು ಜನ ತಿಳಿಸುತ್ತಾರೆ.[೨೭] ರಾಮನು ಇಲ್ಲಿಯೇ ಯಜ್ಞ ಮಾಡಿದನೆಂತಲೂ, ಕಾಲಕೂಟಾದ್ರಿ ವಿಷ ಕುಡಿದ ಶಿವ ಇಲ್ಲಿಗೆ ಬಂದು ಉರಿಶಮನ ಮಾಡಿಕೊಂಡು ನೀಲಕಂಠನಾದನೆಂದೂ, ಇಲ್ಲಿ ಸಪ್ತಋಷಿಗಳು ಆರು ದಿನಗಳವರೆಗೆ ತಲೆಕೆಳಗೆ ಮಾಡಿಕೊಂಡು ಧ್ಯಾನ ಮಾಡಿದ ಸ್ಥಳವೆಂದೂ, ಮಂತ್ರಾಲಯದ ರಾಘವೇಂದ್ರಸ್ವಾಮಿಗಳು ಅವರ ಗುರುಗಳಾದ ಸುಧೀಂದ್ರ ತೀರ್ಥರ ಆರಾಧನೆಗೆ ಆಗಮಿಸಿದ್ದರೆಂದು ತಿಳಿದುಬರುತ್ತದೆ. ಈ ರೀತಿಯ ಬಗೆ ಬಗೆಯ ಐತಿಹ್ಯಗಳು ನವ ವೃಂದಾವನ ಸ್ಥಳದ ಬಗ್ಗೆ ಮಾಹಿತಿಯನ್ನು ನೀಡುತ್ತವೆ.

**೨೬. ಚಂಚಲ ಕೋಟೆ**

ನವವೃಂದಾವನ ಸಮೀಪದ ನದಿ ತೀರದ ಮೇಲೆ ಒಂದು ಕೋಟೆಯ ತೆರನಾದ ಪ್ರಕೃತಿದತ್ತವಾದ ಕಟ್ಟಡವಿದ್ದು ಅದಕ್ಕೆ ಚಂಚಲಕೋಟೆ ಎಂದು ಕರೆಯುತ್ತಾರೆ. ಇದಕ್ಕೆ ಈ ಹೆಸರು ಬಂದ ಬಗೆಗೆ ಒಂದು ಐತಿಹ್ಯವಿದೆ. ವಾಲಿಗೆ ಹೆದರಿದ ಸುಗ್ರೀವ, ಹನುಮಂತಾದಿಗಳು ಈ ಸ್ಥಳದಲ್ಲಿ ಆತಂಕದಿಂದ ಕಾಲ ಕಳೆಯುತ್ತಿರಲು ಆ ಸಮಯದಲ್ಲಿಯೇ ರಾಮ, ಲಕ್ಷ್ಮಣರು - ಸೀತೆಯನ್ನು ಹುಡುಕುತ್ತಾ ಬರುತ್ತಿದ್ದರು. ಇವರನ್ನು ಕಂಡ ಸುಗ್ರೀವಾದಿಗಳಿಗೆ ಇವರು ವಾಲಿಯ ಕಡೆಯವರೆಂಬ ಅನುಮಾನದಿಂದ ಮನಸ್ಸು ಚಂಚಲವಾಯಿತಂತೆ. ಅದಕ್ಕೆ ಈ ಕೋಟೆಗೆ ಚಂಚಲಕೋಟೆ, ಚಿಂತಲಕೋಟೆ ಎಂಬ ಹೆಸರು ಬಂದಿತೆಂದು ಜನರು ತಿಳಿಸುತ್ತಾರೆ.[೨೮] ಈಗಲೂ ಈ ಕೋಟೆಯ ಹತ್ತಿರ ಯಾರಾದರೂ ಹೋದರೆ ಅವರಿಗೆ ಏನೋ ಚಿಂತೆ, ಆತಂಕ, ಚಂಚಲತೆ, ಶುರುವಾಗುವುದಂತೆ. ಅಣ್ಣ ತಮ್ಮಂದಿರು ಈ ಕೋಟೆಯ ಪ್ರದೇಶದ ಹತ್ತಿರ ಇರುವತನಕ ವೈರಿಗಳಂತೆ ವರ್ತಿಸುತ್ತಾರೆಂಬುದು ಇಲ್ಲಿನ ಸ್ಥಳೀಯರ ನಂಬಿಕೆಯಾಗಿದೆ.

**೨೭. ೬೪ ಕಾಲಿನ ಮಂಟಪ**

ಆನೆಗೊಂದಿಯ ಪೂರ್ವ ಭಾಗದಲ್ಲಿ ತುಂಗಭದ್ರಾ ನದಿಯು ಇದ್ದು, ಈ ನದಿಯ ಮಧ್ಯದಲ್ಲಿ ನಿರ್ಮಾಣಗೊಂಡಿರುವ ಮಂಟಪ ಇದಾಗಿದೆ. ಇದನ್ನು ಕೃಷ್ಣದೇವರಾಯನ ಸಮಾಧಿ ಸ್ಥಳ ಎಂತಲೂ ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಇದರ ಬಗೆಗಿರುವ ಐತಿಹ್ಯವೇನೆಂದರೆ ೬೪ ಕಲ್ಲಿನ ಕಂಬಗಳನ್ನು ಉಪಯೋಗಿಸಿ ಮಂಟಪವನ್ನು ಕಟ್ಟಲಾಗಿದೆ. 'ಬಲಿಷ್ಠ' ವಿಜಯನಗರ ಸಾಮ್ರಾಜ್ಯಕ್ಕೆ ರಾಜರಾಗುವವರು ೬೪ ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಪಡೆದಿರಬೇಕೆಂಬುದು ಈ ಮಂಟಪದ ೬೪ ಕಂಬಗಳ ಪ್ರತೀಕ' ಎಂದು ಸ್ಥಳೀಯರು ವಿವರಿಸುತ್ತಾರೆ.[೨೯] ಶ್ರೀಕೃಷ್ಣದೇವರಾಯನು ೬೪ ವಿದ್ಯೆಗಳಲ್ಲಿ ಪರಾಂಗತನಾಗಿದ್ದನಂತೆ.

## ೨೮. ಇನಾಮು ಭೂಮಿಗಳು

ವಿಜಯನಗರದ ಅರಸರು ಅರಮನೆಯ ಮತ್ತು ದೇವಸ್ಥಾನಗಳ ಬಹುತೇಕ ನಿಷ್ಠಾವಂತ ಕೆಲಸಗಾರರಿಗೆ ಭೂಮಿಯನ್ನು ದಾನವಾಗಿ ಅಥವಾ ಸಂಭಾವನೆ ರೂಪದಲ್ಲಿ 'ಇನಾಮು' ಕೊಡುತ್ತಿದ್ದರು. ರಾಜ-ರಾಣಿಯರಿಗೆ ಎಲೆ, ಅಡಿಕೆ ಕೊಡುವ ಕೆಲಸ ಮಾಡುವವರಿಗೆ 'ಎಲೆ, ಅಡಿಕೆ ಮಾನೇವು' ಎಂದು, ತಳವಾರಿಕೆ ಕೆಲಸ ಮಾಡಿದವರಿಗೆ 'ತಳವಾರಿಕೆ ಮಾನೇವು', ಅರಮನೆಯಲ್ಲಿ ಅಡುಗೆ ಮಾಡುವವರಿಗೆ 'ತಪಾಲಿ ಮಾನೇವು' ಎಂದು, ಅರಮನೆ ಮತ್ತು ಮಂದಿರಗಳಿಗೆ ಹೂವಿನ ಸರಬರಾಜು ಮಾಡುವವರಿಗೆ 'ಜೀರಪಟ್ಟಿ' ಎಂದು, ಅರಮನೆ ಮತ್ತು ಮಂದಿರಗಳಿಗೆ ವಾದ್ಯಗಳನ್ನು ನುಡಿಸುವವರಿಗೆ 'ಸನಾದಿಪಟ್ಟಿ' ಎಂದು, ನೃತ್ಯ ಮಾಡುವವರಿಗೆ 'ಪಾತ್ರದವರ ಗದ್ದೆ' ಎಂದು, ಪ್ರಸಿದ್ಧ ಗುಡಿಗಳ ಖರ್ಚು-ವೆಚ್ಚದ ನಿರ್ವಹಣೆಗಳಿಗಾಗಿ 'ಗುಡಿ ಮಾನೇವು' ಎಂದು ಸಂಭಾವನೆ ರೂಪದಲ್ಲಿ ಹಂಪಿ ಪರಿಸರದ ಕೆಲವು ಭೂಮಿಗಳನ್ನು ಇನಾಮು ಕೊಡುತ್ತಿದ್ದರಂತೆ.[೩೦] ಈ ಉದ್ದೇಶಗಳಿಗಾಗಿ ಕೊಟ್ಟ ನಿದರ್ಶನವಾಗಿ ಈ ಭೂಮಿಗಳಿಗೆ ಈಗಲೂ ಇದೇ ಹೆಸರುಗಳಿಂದ ಕರೆಯುತ್ತಾರೆ.

## ೨೯. ಕಲ್ಲಿನರಥ

ಕಲ್ಲಿನರಥವು ವಿಜಯವಿಠ್ಠಲ ದೇವಸ್ಥಾನದ ಆವರಣದಲ್ಲಿ ಕಂಡು ಬರುತ್ತದೆ. ಹಿಂದೂ ಸಂಸ್ಕೃತಿಯ ಪ್ರಕಾರ ಶಿವನ ದೇವಾಲಯವಿದ್ದಲ್ಲಿ ನಂದಿಯನ್ನು ಶಿವನ ಎದುರಿನಲ್ಲಿ ಕಡ್ಡಾಯವಾಗಿ ನಿರ್ಮಿಸಿರುತ್ತಾರೆ. ಏಕೆಂದರೆ ನಂದಿ ಶಿವನ ವಾಹನ. ಹಾಗೆಯೇ ವಿಜಯವಿಠ್ಠಲ ದೇವಾಲಯದ ಎದುರಿಗೆ ಗರುಡವಿರುವುದು ಸಹಜ. ವಿಠ್ಠಲ ಅಂದರೆ ವಿಷ್ಣು. ವಿಷ್ಣುವಿನ ವಾಹನ ಗರುಡ. ಆದ್ದರಿಂದ ವಿಜಯ ವಿಠ್ಠಲ ದೇವಾಲಯದ ಎದುರಿಗೆ ಕಲ್ಲಿನ ರಥವನ್ನು ನಿರ್ಮಿಸಿ ಅದರಲ್ಲಿ ಗರುಡ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಕಲ್ಲಿನ ರಥವು ಏಕಶಿಲೆಯಲ್ಲಿ ಕೆತ್ತಲ್ಪಟ್ಟಿದ್ದು, ೬ ಅಡಿ ಎತ್ತರವನ್ನು ಹೊಂದಿದೆ. ವಿಠ್ಠಲ ಮತ್ತು ರುಕ್ಮಿಣಿದೇವಿಯ ವಿಶಿಷ್ಟ ಪೂಜೆ ನಡೆಯುವ ಸಂದರ್ಭದಲ್ಲಿ ಈ ರಥದ ಗಾಲಿಗಳನ್ನು ಭಕ್ತರು ತಿರುಗಿಸುತ್ತಿದ್ದರಂತೆ. ಈಗಲೂ ಗಾಲಿಗಳನ್ನು ತಿರುಗಿಸುತ್ತಿದ್ದರು. ಆದರೆ ಪುರಾತತ್ವ ಸಂರಕ್ಷಣ ಇಲಾಖೆಯವರು ರಥಕ್ಕೆ ಧಕ್ಕೆ ಬರಬಹುದೆಂಬ ದೃಷ್ಟಿಯಿಂದ ಸಿಮೆಂಟ್ ಮಾಡಿಸಿ ಗಾಲಿಗಳನ್ನು ತಿರುಗದ ಹಾಗೆ ಮಾಡಿದ್ದಾರೆ.[೩೧]

ಭಾರತದಲ್ಲಿ ಈ ರೀತಿಯ ಕಲ್ಲಿನ ರಥವನ್ನು ಮೂರು ಕಡೆಗಳಲ್ಲಿ ಇರುವುದನ್ನು ನೋಡಬಹುದಾಗಿದೆ:

೧. ಒರಿಸ್ಸಾದ ಕೊನಾರ್ಕ ಸೂರ್ಯದೇವಾಲಯದಲ್ಲಿ.

೨. ತಮಿಳುನಾಡಿನ ಮಹಾಬಲಿಪುರಂನಲ್ಲಿ.

೩. ಕರ್ನಾಟಕದ ಹೊಸಪೇಟೆ ತಾಲೂಕಿನ ಹಂಪಿಯಲ್ಲಿ.

ಹಂಪಿಯಲ್ಲಿರುವ ಕಲ್ಲಿನ ರಥವು ಒರಿಸ್ಸಾ ಮತ್ತು ತಮಿಳುನಾಡಿನ ರಥಗಳಿಗಿಂತ ವಿಶಿಷ್ಟ ರೀತಿಯಲ್ಲಿದೆ ಎಂಬುದನ್ನು ವಿವಿದೆಡೆಗಳಿಂದ ಬಂದ ಪ್ರವಾಸಿಗರ ಅಭಿಪ್ರಾಯದಿಂದ ತಿಳಿದುಬರುತ್ತದೆ.

ರಥದ ಮೇಲೆ ಇಟ್ಟಿಗೆಯಿಂದ ನಿರ್ಮಿಸಿದ ಗೋಪುರವಿತ್ತೆಂದು ನಿರೂಪಕರು ಹೇಳುತ್ತಾರೆ. ಈ ಮಾತಿಗೆ ಪುಷ್ಟಿ ನೀಡುವಂತೆ ೧೮೬೫ರಲ್ಲಿ ಪ್ರಸಿದ್ಧ ಛಾಯಾಚಿತ್ರಗಾರರಾದ ಅಲೆಕ್ಸಾಂಡರ್ ಗ್ರೀನ್ ಲಾ ಅವರು ತೆಗೆದಿರುವ ಛಾಯಾಚಿತ್ರದಿಂದ ರಥದ ಮೇಲೆ ಇಟ್ಟಿಗೆಯಿಂದ ನಿರ್ಮಿಸಿರುವ ಗೋಪುರ ಇತ್ತೆಂದು ತಿಳಿದುಬರುತ್ತದೆ.

### ೩೦. ಕಾವಲುಗಾರರ ಗೋಪುರ

ರಾಣಿಯರ ಅಂತಃಪುರವನ್ನು ಕಾವಲು ಕಾಯಲಿಕ್ಕಾಗಿ ಇದ್ದಂತಹ ಎತ್ತರವಾದ ಗೋಪುರವಿರುವ ಸ್ಥಳಗಳನ್ನು 'ಕಾವಲುಗಾರರ ಗೋಪುರ' ಎಂದು ಕರೆಯುತ್ತಾರೆ ಈ ಕಾವಲು ಕಾಯುವ ವೃತ್ತಿಯನ್ನು ಸ್ತ್ರೀ ಸೈನ್ಯದಳವು ಮಾಡುತ್ತಿತ್ತೆಂದು ತಿಳಿದುಬರುತ್ತದೆ. ಈ ಕಾವಲು ಗೋಪುರಗಳನ್ನು ದೂರದಲ್ಲಿ ಬರುವ ಮತ್ತು ಹೋಗುವವರನ್ನು ನೋಡಲು, ಅವರ ಮೇಲೆ ನಿಗಾ ಇಡಲು ಅನುಕೂಲವಾಗಲಿ ಎಂದು ಅಂದಿನ ಅರಸರು ಕಟ್ಟಿಸಿದ್ದಾರೆ ಎಂದು ತಿಳಿದುಬರುತ್ತದೆ. ಈ ಕಾವಲು ಗೋಪುರಗಳು ರಾಣಿಯರ ಸುರಕ್ಷತೆಗಾಗಿದ್ದು, ಶತ್ರು ಸೈನ್ಯವು ಗುಪ್ತವಾಗಿ ಕೋಟೆಯ ಒಳಗಡೆ ನುಗ್ಗಬಹುದೆಂಬ ಭೀತಿಯಿಂದ ಸ್ತ್ರೀ ಸೈನಿಕರು ಹಗಲು, ರಾತ್ರಿ ಎನ್ನದೇ ಈ ಕಾವಲು ಗೋಪುರದಲ್ಲಿ ಸದಾ ಎಚ್ಚರಿಕೆಯಿಂದ ಇರುತ್ತಿದ್ದರೆಂದು ನಿರೂಪಕರು ಮಾಹಿತಿ ನೀಡುತ್ತಾರೆ.[೩೨] ಕಾವಲುಗಾರರ ಗೋಪುರಗಳು ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದಿಂದ ನಿರ್ಮಿಸಿರುವುದರಿಂದ ಈ ಗೋಪುರಗಳಿಗೆ ಯಾವುದೇ ರೀತಿಯ ಧಕ್ಕೆಗೆ ಗುರಿಯಾಗದೇ ಉಳಿದುಕೊಂಡು ಬಂದಿರುವುದನ್ನು ನಾವು ಈಗಲೂ ಕಾಣಬಹುದು.

### ೩೧. ಆನೆಲಾಯ(ಗಜಶಾಲೆ)

ರಾಣಿಯರು ಅಂತಃಪುರ ಕೋಟೆಯ ಹೊರಭಾಗದಲ್ಲಿ 'ಆನೆಲಾಯ' ಕಂಡುಬರುತ್ತದೆ. ಈ ಆನೆಲಾಯವು ೧೧ ಕೊಠಡಿಗಳಿಂದ ಕೂಡಿದ್ದಾಗಿದೆ. ವಿಜಯನಗರದ ಅರಸರು 'ವಿಜಯದಶಮಿಹಬ್ಬ'ವನ್ನು ಅತ್ಯಂತ ವಿಜೃಂಭಣೆಯಿಂದ ಮಹಾನವಮಿದಿಬ್ಬ ಪ್ರದೇಶದಲ್ಲಿ ಆಚರಿಸುತ್ತಿದ್ದರು. ಈ ಉತ್ಸವಗಳಲ್ಲಿ ಆನೆಗಳನ್ನು ಬಳಸುತ್ತಿದ್ದರು. ಆನೆಗಳ ವಾಸಕ್ಕಾಗಿ ಆನೆಲಾಯವನ್ನು ಅಂದಿನ ಅರಸರು ಕಟ್ಟಿಸಿದರೆಂದು ತಿಳಿದುಬರುತ್ತದೆ.[೩೩] ಈ ಆನೆಲಾಯದ ಎಡಭಾಗದಲ್ಲಿ ೫ ಪಟ್ಟದ ಆನೆ, ಬಲಭಾಗದಲ್ಲಿ ೫ ಪಟ್ಟದ ಆನೆ, ಮಧ್ಯದಲ್ಲಿ ಅಂಬಾರಿಯನ್ನು ಹೋರುವ ಆನೆಯನ್ನು ಕಟ್ಟುತ್ತಿದ್ದರಂತೆ.[೩೪] ಈ ಆನೆಲಾಯವು ಇಂದಿಗೂ ಸುಸ್ಥಿತಿಯಲ್ಲಿರುವುದನ್ನು ನಾವು ಕಾಣಬಹುದು.

### ೩೨. ಕುದುರೆಲಾಯ(ಅಶ್ವಶಾಲೆ)

ಆನೆಲಾಯದ ಎದುರುಗಡೆ ಸಾಲುಮಂಟಪಗಳಿಂದ ನಿರ್ಮಿಸಲ್ಪಟ್ಟಿದ್ದ ಸ್ಥಳವನ್ನು 'ಕುದುರೆಲಾಯ' ಎಂದು ಕರೆಯುತ್ತಾರೆ. ಈ ಕುದುರೆಲಾಯದಲ್ಲಿ ಕೃಷ್ಣದೇವರಾಯನು ಯುದ್ಧಕ್ಕೆ ಬಳಸಲ್ಪಡುವ ಮುಖ್ಯವಾದ ಕುದುರೆಗಳನ್ನು ಕಟ್ಟುತ್ತಿದ್ದರಂತೆ. ಕೃಷ್ಣದೇವರಾಯನ ಕಾಲದಲ್ಲಿ ೩,೦೦೦ ಆನೆಗಳು, ೫,೦೦೦ ಕುದುರೆಗಳಿದ್ದವಂತೆ. ಆದರೆ ಈ ಕುದುರೆಲಾಯವು ಸಂಪೂರ್ಣ

ನಾಶವನ್ನು ಹೊಂದಿದೆ. ಆನೆಲಾಯವನ್ನು ನಾಶ ಮಾಡದೇ ಈ ಕುದುರೆಲಾಯವನ್ನು ಏಕೆ ಸಂಪೂರ್ಣವಾಗಿ ನಾಶ ಮಾಡಿರುವರು ಎಂಬ ಪ್ರಶ್ನೆಗೆ ನಿರೂಪಕರು ಬಹಮನಿ ಸುಲ್ತಾನರ ದಾಳಿಗೆ ಸಿಕ್ಕು ವಿಜಯನಗರವು ಮುಸ್ಲಿಂ ಶೈಲಿಯ ಕಟ್ಟಡಗಳನ್ನು ನಾಶ ಮಾಡದೇ, ಹಿಂದೂ ಶೈಲಿಯ ಕಟ್ಟಡಗಳನ್ನು ಮಾತ್ರ ನಾಶ ಮಾಡಿದರು. ಇಲ್ಲಿ ಆನೆಲಾಯವು ಮುಸ್ಲಿಂ ಶೈಲಿಯ ಕಟ್ಟಡವನ್ನು ಹೊಂದಿದೆ. ಕುದುರೆಲಾಯವು ಹಿಂದೂ ಶೈಲಿಯ ಕಟ್ಟಡವನ್ನು ಹೊಂದಿರುವುದೇ ಇದಕ್ಕೆ ಕಾರಣ[೩೫] ಎಂದು ಮಾಹಿತಿ ನೀಡುತ್ತಾರೆ.

### ೩.೩. ಪುಷ್ಕರಣಿ(ಮೆಟ್ಟಿಲುಗಳಕೊಳ)

ಪುಷ್ಕರಣಿಯು 'ಮಹಾನವಮಿದಿಬ್ಬ'ದ ಹಿಂದೆ ಕಂಡುಬರುತ್ತದೆ. ಈ ಕೊಳವು ಮುಚ್ಚಿ ಹೋಗಿತ್ತು. ಇದನ್ನು ಕೇಂದ್ರ ಪುರಾತತ್ವ ಇಲಾಖೆಯವರು ೧೯೮೪-೮೫ರಲ್ಲಿ ಉತ್ಖನನದ ಮೂಲಕ ಶೋಧಿಸಿದ್ದಾರೆ. ಪುಷ್ಕರಣಿಯ ಒಟ್ಟು ಆಳವು ೬.೬೫ ಮೀಟರ್ ಇದ್ದು, ಐದು ಹಂತಗಳಲ್ಲಿದೆ. ಐದು ಹಂತಗಳಲ್ಲಿ ೩೬೬ ಮೆಟ್ಟಿಲುಗಳನ್ನು ಒಳಗೊಂಡಿದೆ. ಈ ಪುಷ್ಕರಣಿಯು ರಾಜ ಪರಿವಾರದವರ ಧಾರ್ಮಿಕ ಉದ್ದೇಶಗಳಿಗಾಗಿ ನಿರ್ಮಿಸಿರಬೇಕೆಂಬ ಪ್ರತೀತಿ ಇದೆ.[೩೬] ಈ ಪುಷ್ಕರಣಿಗೆ ಕಪ್ಪುಶಿಲೆಯನ್ನು ಬಳಸಿ ನಿರ್ಮಿಸಿರುವುದರಿಂದ ಇದನ್ನು 'ಕರೆಕಲ್ಲಿನ ಪುಷ್ಕರಣಿ' ಎಂದು ಸ್ಥಳೀಯರು ಕರೆಯುತ್ತಾರೆ.[೩೭] ಈ ಕೊಳಕ್ಕೆ ನೀರನ್ನು ಬಾವಿಯಿಂದ, ಕಲ್ಲಿನ ತೊಟ್ಟಿಯ ಕಾಲುವೆಗಳ ಮೂಲಕ ಸರಬರಾಜು ಮಾಡಲಾಗುತ್ತಿತ್ತು.

ವಿಜಯದಶಮಿ ಉತ್ಸವವನ್ನು ವಿಜಯನಗರದ ಅರಸರು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಈ ವಿಜೃಂಭಣೆಯ ಉತ್ಸವವನ್ನು ವೀಕ್ಷಿಸಲು ಬೇರೆ ಬೇರೆ ಪ್ರಾಂತ್ಯಗಳಿಂದ ಅರಸರು, ಸಾಮಂತರು, ಪ್ರವಾಸಿಗರು ಬರುತ್ತಿದ್ದರು. ಅವರಿಗೆಲ್ಲಾ ನೀರಿನ ಸೌಕರ್ಯವನ್ನು ಕಲ್ಪಿಸುವುದಕ್ಕಾಗಿ ಈ 'ಪುಷ್ಕರಣಿ'ಯನ್ನು ನಿರ್ಮಿಸಿರಬೇಕೆಂಬ ನಂಬಿಕೆ ಇದೆ.

### ೩.೪. ನೆಲಮಾಳಗಿ(ಗುಪ್ತ ವಿಚಾರ ಚರ್ಚೆಯ ಸ್ಥಳ)

ರಾಜನ ಅಂತಃಪುರದ ಆವರಣದಲ್ಲಿ ಈ ನೆಲಮಾಳಿಗೆ ಕಂಡುಬರುತ್ತದೆ. ಈ ನೆಲಮಾಳಿಗೆಯನ್ನು ಶ್ರೀಕೃಷ್ಣದೇವರಾಯನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ನೆಲಮಾಳಿಗೆಯಲ್ಲಿ ರಾಜರು ಮತ್ತು ಮಂತ್ರಿಗಳು ಗುಪ್ತ ವಿಚಾರಗಳನ್ನು ಚರ್ಚಿಸುತ್ತಿದ್ದರಂತೆ. ಈ ನೆಲಮಾಳಿಗೆಯು ಸುಸಜ್ಜಿತವಾಗಿದ್ದು, ಈಗಲೂ ಸುಸ್ಥಿತಿಯಲ್ಲಿರುವುದನ್ನು ಕಾಣಬಹುದು. ನೆಲಮಾಳಿಗೆಯು ಸುರಂಗ ಮಾರ್ಗದ ರೀತಿಯಲ್ಲಿ ರಚನೆಗೊಂಡಿದ್ದು ಒಳಗಡೆ ಕತ್ತಲಿನಿಂದ ಕೂಡಿದೆ. ಇಂತಹ ನೆಲಮಾಳಿಗೆಗಳು ಹಂಪಿ ಪರಿಸರದಲ್ಲಿ ಸಾಕಷ್ಟು ಇದ್ದು ಅವು ಮುಚ್ಚಿಕೊಂಡು ಹೋಗಿವೆಯಂತೆ ಎಂದು ನಿರೂಪಕರು ತಿಳಿಸುತ್ತಾರೆ.[೩೮]

### ೩.೫. ಕಲ್ಲಿನ ಸೇತುವೆ

ಪುರಂದರದಾಸರ ಮಂಟಪದ ಮುಂದೆ ತುಂಗಭದ್ರಾ ನದಿಯಲ್ಲಿ ಸಾಲು ಕಲ್ಲಿನ ಕಂಬಗಳು ನಿಂತಿರುವುದನ್ನು ಕಾಣುತ್ತೇವೆ. ಇವು ಗ್ರಾನೈಟ್ ಕಲ್ಲುಗಳಾಗಿದ್ದು ಇದನ್ನು 'ಕಲ್ಲಿನ ಸೇತುವೆ'

ಎಂದು ಕರೆಯಲಾಗಿದೆ. ಈ ಸೇತುವೆಯು ೧ ಕಿ.ಮೀ.ನಷ್ಟು ವಿಸ್ತೀರ್ಣವನ್ನು ಹೊಂದಿದೆ. ಈ ಸೇತುವೆಯನ್ನು ಎರಡನೇ ಹರಿಹರನ ಸಹೋದರ ಕಂಪಭೂಪನು ನಿರ್ಮಿಸಿದನೆಂಬುದಾಗಿ[೩೯] ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರವು ವ್ಯಾಪಾರದಿಂದ ಆರ್ಥಿಕವಾಗಿ ದೇಶ-ವಿದೇಶಗಳಿಗೆ ಚಿರಪರಿಚಿತವಾಗಿತ್ತು. ಸಹಜವಾಗಿ ವ್ಯಾಪಾರಿಗಳು ವಿಜಯನಗರಕ್ಕೆ ಬಂದು ವ್ಯಾಪಾರ ಮಾಡುತ್ತಿದ್ದರು. ಆದರೆ ಅವರಿಗೆ ಬರಲು ತುಂಗಭದ್ರಾ ನದಿ ಅಡ್ಡವಾಗಿತ್ತು. ಬಹಳಷ್ಟು ವ್ಯಾಪಾರಿಗಳು ಇದರಿಂದ ನಿರಾಸೆಗೊಂಡು ರಾಜನಿಗೆ ಸೇತುವೆ ನಿರ್ಮಿಸಲು ಮನವಿ ಮಾಡಿಕೊಂಡರು. ಉತ್ತರದಲ್ಲಿದ್ದ ಪ್ರದೇಶಗಳಿಗೆ ನೇರ ಸಂಪರ್ಕವನ್ನು ಕಲ್ಪಿಸುವುದರೊಡನೆ ಉತ್ತರದಿಂದ ಸರಕು ಸಾಮಗ್ರಿಗಳ ಸಾಗಣೆಗೆ ಅನುಕೂಲ ಕಲ್ಪಿಸುವುದು ಈ ಸೇತುವೆಯ ಉದ್ದೇಶವಾಗಿದ್ದರಿಂದ ವ್ಯಾಪಾರಿಗಳ ಮನವಿಯಂತೆ ರಾಜನು ಈ ಕಲ್ಲಿನ ಸೇತುವೆಯನ್ನು ನಿರ್ಮಿಸಿದನು ಎಂಬ ನಂಬಿಕೆ ಒಂದೆಡೆ ಯಾದರೆ, ಶ್ರೀಕೃಷ್ಣದೇವರಾಯನು ತನ್ನ ಪಟ್ಟದರಸಿಯರೊಂದಿಗೆ ಕಿಷ್ಕಿಂಧಾ ಕ್ಷೇತ್ರದ 'ಅಂಜನಾದ್ರಿ ಪರ್ವತಕ್ಕೆ' ತ್ರಿಕಾಲ ಪೂಜೆ ಮಾಡಿಸಿಕೊಂಡು ಬರುತ್ತಿದ್ದನಂತೆ. ಅರಸನು ತನ್ನ ರಾಣಿಯರೊಂದಿಗೆ ಅಲ್ಲಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬರಬೇಕಾದರೆ ತುಂಗಭದ್ರಾ ನದಿಯನ್ನು ದಾಟ ಬೇಕಾಗಿತ್ತು. ಈ ಅಡಚಣೆಯನ್ನು ಸರಿದೂಗಿಸುವ ಕಾರಣದಿಂದ ಕಲ್ಲಿನ ಸೇತುವೆಯನ್ನು ನಿರ್ಮಿಸಿದನೆಂಬ ನಂಬಿಕೆ ಇದೆ.[೪೦] ಈ ಸೇತುವೆಯು ಅತ್ಯಂತ ಗಟ್ಟಿಯಾಗಿತ್ತೆಂಬುದಕ್ಕೆ ಆನೆ, ಕುದುರೆಗಳ ಮೇಲೆ ರಾಜನು ಸವಾರಿ ಮಾಡುತ್ತಿದ್ದನಂತೆ.

### ೩.೬. ಭೋಜನಶಾಲೆ

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ನೀರಿನ ಅರವಟ್ಟಿಗೆಯ ಎದುರಿನ ತೋಟದ ಸಣ್ಣ ಕಾಲುವೆಯೊಂದರ ಇಕ್ಕೆಲಗಳಲ್ಲಿ ಕಲ್ಲಿನ ತಟ್ಟೆಗಳು ಕಂಡು ಬರುತ್ತವೆ. ಇದನ್ನು 'ಭೋಜನ ಶಾಲೆ'ಯ ಪ್ರದೇಶವೆಂದು ಕರೆಯುತ್ತಾರೆ. ಈ ಕಲ್ಲಿನ ತಟ್ಟೆಗಳ ಕುರಿತು ಬಗೆಬಗೆಯ ನಿರೂಪಣೆಗಳಿವೆ.

ಕೆಲವರ ಪ್ರಕಾರ, ಈ ಕಲ್ಲಿನ ತಟ್ಟೆಗಳನ್ನು ಯುದ್ಧ ಖೈದಿಗಳ ಊಟಕ್ಕಾಗಿ ಬಳಸಲಾಗುತ್ತಿತ್ತಂತೆ. ವಿಜಯನಗರದ ಅರಸರು ಯುದ್ಧಗಳಲ್ಲಿ ಗೆದ್ದು ಬರುವಾಗ ಜೊತೆಗೆ ಕರೆ ತರುವ ಖೈದಿಗಳನ್ನು ಹಂಪಿಯಲ್ಲಿ ವಿವಿಧ ಕೆಲಸಗಳಿಗಾಗಿ ಉಪಯೋಗಿಸುತ್ತಿದ್ದರು. ಇಂಥ ಖೈದಿಗಳಿಗೆ ಸಾಮೂಹಿಕವಾಗಿ ಈ ಕಲ್ಲಿನ ತಟ್ಟೆಗಳಲ್ಲಿ ಊಟ ಹಾಕಲಾಗುತ್ತಿತ್ತೆಂದು ಹೇಳುತ್ತಾರೆ.

ಎರಡನೇ ನಿರೂಪಣೆ ಪ್ರಕಾರ, ಆ ತಟ್ಟೆಗಳನ್ನು ಕೋತಿಗಳ ಊಟಕ್ಕಾಗಿ ಬಳಸುತ್ತಿದ್ದರಂತೆ. ಕೋತಿಗಳ ಊಟಕ್ಕಾಗಿ ಮೀಸಲಾಗಿದ್ದ ಕೃಷಿ ಭೂಮಿಗಳನ್ನು ಕೃಷಿ ಮಾಡುವ ಯಾರೇ ಆದರೂ ದಿನಂಪ್ರತಿ ಮಧ್ಯಾಹ್ನ ಕೋತಿಗಳಿಗೆ ಈ ತಟ್ಟೆಗಳಲ್ಲಿ ಊಟ ಹಾಕುತ್ತಿದ್ದರಂತೆ. ಈ ಕೋತಿಗಳಿಗೆ ನೀರನ್ನು ಕುಡಿಯಲು ತಟ್ಟೆಯ ಮುಂದಿನ ಭಾಗದಲ್ಲಿ ಸಣ್ಣ ಕಾಲುವೆಯನ್ನು ತೋಡಿಸಿದ್ದರು. ಕೋತಿಗಳು ಊಟವಾದ ನಂತರ ಆ ಕಾಲುವೆಯ ನೀರನ್ನು ಕುಡಿಯುತ್ತಿದ್ದವಂತೆ.[೪೧]

ಮೂರನೇ ನಿರೂಪಣೆ ಪ್ರಕಾರ, 'ಇವುಗಳು ಸತ್ತವರಿಗೆ ಎಡೆ ಇಡಲಾಗುತ್ತಿದ್ದ ತಟ್ಟೆಗಳು'. ಯುದ್ಧಗಳಲ್ಲಿ ಸತ್ತವರಿಗಾಗಿ ಮತ್ತು ಹಾಗೆ ಸತ್ತವರ ಹೆಂಡತಿಯರು ಮಹಾಸತಿಯರಾದಾಗ

ಅವರಿಗೆಲ್ಲ ಸಾಮೂಹಿಕವಾಗಿ ಅವರ ಮನೆಯವರು ಮತ್ತು ಬಂಧುಬಾಂಧವರು ಸೇರಿ ಸಾಮೂಹಿಕವಾಗಿ ಎಡೆ ಇಡುತ್ತಿದ್ದರಂತೆ. ಈ ಆಚರಣೆಯನ್ನು ದಸರಾ, ದೀಪಾವಳಿ, ಯುಗಾದಿಯಂತಹ ದೊಡ್ಡ ಹಬ್ಬಗಳಂದು ಮಾಡುತ್ತಿದ್ದರು. ಸತ್ತವರ ಆತ್ಮಗಳು ತಟ್ಟೆಯ ಮೇಲಿರಿಸಿದ ಊಟವನ್ನು ಮಾಡುತ್ತಿದ್ದವು ಎಂಬ ನಂಬಿಕೆ ಪ್ರಚಲಿತದಲ್ಲಿದೆ. ಹೀಗಾಗಿ ಈ ತಟ್ಟೆಗಳು ಸತ್ತವರಿಗಾಗಿ ಇರುವ ಊಟದ ತಟ್ಟೆಗಳು ಎಂಬ ನಿರೂಪಣೆಯನ್ನು ನಿರೂಪಕರು ನೀಡುತ್ತಾರೆ.[೪೨]

## ೩.೭. ಮಹಾನವಮಿದಿಬ್ಬ

'ಮಹಾನವಮಿದಿಬ್ಬ' ಎಂದರೆ ಎತ್ತರವಾದ ಸಭಾ ಪೀಠವನ್ನು ಹೊಂದಿರುವ ಸ್ಥಳ. ಇದು ರಾಜ ಪ್ರಾಂಗಣ ಸ್ಥಳದಲ್ಲಿ ಕಂಡುಬರುತ್ತದೆ. ಕೃಷ್ಣದೇವರಾಯನು ಉದಯಗಿರಿಯ ದಿಗ್ವಿಜಯದ ಸ್ಮರಣಾರ್ಥವಾಗಿ ೧೫೧೩ರಲ್ಲಿ ಮಹಾನವಮಿದಿಬ್ಬವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ವಿಜಯನಗರದ ಕಾಲಕ್ಕೆ ಮಹಾನವಮಿ ಹಬ್ಬವನ್ನು ಬಹಳ ವಿಜೃಂಭಣೆಯಿಂದ ೯ ದಿನಗಳ ಕಾಲ ಆಚರಿಸುತ್ತಿದ್ದರು. ಇದು ಅವರಿಗೆ ನಾಡಹಬ್ಬವಾಗಿತ್ತು. ವಿದೇಶಿ ಯಾತ್ರಿಕರು ಈ ಹಬ್ಬದ ವೈಭವವನ್ನು ಮುಕ್ತಕಂಠದಿಂದ ವರ್ಣಿಸಿದ್ದಾರೆ. ಈ ಹಬ್ಬದ ಉತ್ಸವದ ಆಚರಣೆಯ ಉದ್ದೇಶಕ್ಕಾಗಿ ಈ ಸಭಾ ಪೀಠವನ್ನು ನಿರ್ಮಿಸಲಾಗಿತ್ತು.[೪೩] ಇದು ಸುಮಾರು ೨೨ ಅಡಿ ಎತ್ತರವಾಗಿದ್ದು, ಈ ಸಭಾ ಪೀಠದ ಮೇಲೆ ಮಹಾನವಮಿಯ ದಿನ ಅರಸನು, ಸಾಮಂತ ಮಾಂಡಲೀಕರು, ವಿಶೇಷ ಆಹ್ವಾನಿತರು ಮತ್ತು ರಾಜಪರಿವಾರದೊಡನೆ ಕುಳಿತು ಎದುರುಗಡೆ ನಡೆಯುತ್ತಿದ್ದ ಸಾಂಸ್ಕೃತಿಕ ಉತ್ಸವಗಳು, ಕುಸ್ತಿ, ನಾಟ್ಯ, ಆನೆಗಳ ಕಾಳಗ ಮುಂತಾದ ಕ್ರೀಡಾ ಉತ್ಸವಗಳನ್ನು ವೀಕ್ಷಿಸುತ್ತಿದ್ದನು. ಈ ಸಭಾ ಪೀಠವು ೯ ಅಂತಸ್ತುಗಳನ್ನು ಹೊಂದಿತ್ತು. ಅತ್ಯಂತ ಮೇಲಿನ ವೇದಿಕೆಯನ್ನು ಅರಸನು ಅಲಂಕರಿಸಿದ್ದರೆ, ೭ನೇ ಅಂತಸ್ತಿನಲ್ಲಿ ವಿದೇಶಿಯರಿಗೆ ಸ್ಥಾನಾವಕಾಶ ಮಾಡಿಕೊಡಲಾಗಿತ್ತೆಂದು ತಿಳಿದುಬರುತ್ತದೆ.

ಮಹಾನವಮಿದಿಬ್ಬದಲ್ಲಿ ನಡೆಯುತ್ತಿದ್ದ ಈ ವಿಜೃಂಭಣೆಯ ಹಬ್ಬವನ್ನು ಕುರಿತು ವಿದೇಶಿ ಯಾತ್ರಿಕನಾದ **ಅಬ್ದುಲ್‌ರಜಾಕ್** ಹೀಗೆ ಹೇಳುತ್ತಾನೆ: "ಮಹಾನವಮಿ ಹಬ್ಬವು ವಿಜಯನಗರ ಅರಸರ ಪ್ರತಿಷ್ಠೆಯನ್ನು ಪ್ರದರ್ಶಿಸುವ ಹಬ್ಬವಾಗಿತ್ತು"[೪೪] ಎಂದು ತಿಳಿಸಿದ್ದಾನೆ.

**ನ್ಯೂನಿಜ್**:- "ದಂಡನಾಯಕರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಲೆಂದೇ ಈ ಹಬ್ಬವನ್ನು ವಿಜಯನಗರದ ಅರಸರು ಆಚರಿಸುತ್ತಿದ್ದರು"[೪೫] ಎಂದು ತಿಳಿಸಿದ್ದಾನೆ.

ಮಹಾನವಮಿದಿಬ್ಬವು ವಿಶಾಲವಾದ, ಬೃಹತ್ ಪ್ರಮಾಣದ ಮತ್ತು ೧೦೦ ಸ್ತಂಭಗಳನ್ನು ಹೊಂದಿದ್ದ ಭವ್ಯವಾದ ಸಭಾಮಂಟಪವಾಗಿತ್ತು. ಬಹಮನಿ ಸುಲ್ತಾನರ ದಾಳಿ, ಸುಲಿಗೆ, ವಿಧ್ವಂಸಕ ಕೃತ್ಯಗಳಿಗೆ ಗುರಿಯಾದ ವಿಜಯನಗರದ ಈ ಭವ್ಯವಾದ ಸಭಾಮಂಟಪ ಹಾಳಾಗಿ, ಸುಟ್ಟು, ನಾಶವಾಗಿ ಹೋಯಿತು. ಸಭಾಮಂಟಪದ ಖಚಿತತೆಯ ಬಗ್ಗೆ ಸಾರಿ ಹೇಳುವ ಕುರುಹುಗಳನ್ನು ನಾವು ಈಗಲೂ ಕಾಣಬಹುದು.

ಈ ಸಭಾ ಪೀಠವನ್ನು ಮಹಾನವಮಿದಿಬ್ಬ, ವಿಜಯಸೌಧ, ವಿಜಯಮಂಟಪ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ.



### ೩೮. ದಣ್ಣಾಯಕನ ನಿವಾಸ

ಹಜಾರರಾಮ ದೇವಾಲಯದ ಪಶ್ಚಿಮಕ್ಕಿರುವ ಬೃಹತ್ ಗೋಡೆಗಳ ಆವರಣದ ಹಿಂದೆ ವಿಜಯನಗರದ ಮುಖ್ಯ ಸೇನಾಪತಿಯ ಅಂದರೆ ಡಣ್ಣಾಯಕನ ನಿವಾಸವಿತ್ತು. ಈ ಆವರಣದಲ್ಲಿ ಉತ್ತರ ಮತ್ತು ಪಶ್ಚಿಮಾಭಿಮುಖವಾಗಿರುವ ಎರಡು ಅರಮನೆಗಳಿದ್ದವು.[೪೬] ಆದರೆ ಇಂದು ಅಲ್ಲಿ ಹೇಳಿಕೊಳ್ಳುವಂಥ ಅವಶೇಷಗಳು ಉಳಿದಿಲ್ಲ. ಪೂರ್ವಾಭಿಮುಖವಾಗಿರುವ ಈ ನಿವಾಸದ ಪ್ರವೇಶದ್ವಾರದ ಬಲಕ್ಕೆ ಮುಸ್ಲಿಂ ಶೈಲಿಯ ಎರಡಂತಸ್ತಿನ ಕಾವಲುಗೋಪುರ, ಒಳಗಡೆ ಮುಂಭಾಗದಲ್ಲಿ ಕಮಾನುಗಳಿರುವ ವಿಶಾಲಮಂಟಪ ಮತ್ತು ಅದರ ಪಕ್ಕಕ್ಕೆ ಕಾವಲುಗೋಪುರವಿದೆ.

### ೩೯. ಭೀಮನ ಹೆಬ್ಬಾಗಿಲು 

ಕಮಲಾಪುರದಿಂದ ಕಂಪ್ಲಿಗೆ ಹೋಗುವ ರಸ್ತೆ ಬದಿಯಲ್ಲಿ ಬರುವ ಗಾಣಗಿತ್ತಿ ದೇವಾಲಯದ ಆಗ್ನೇಯ ದಿಕ್ಕಿಗೆ ಈ ಹೆಬ್ಬಾಗಿಲು ಕಂಡುಬರುತ್ತದೆ. ಈ ಹೆಬ್ಬಾಗಿಲು ಸುಮಾರು ೨೦ ಅಡಿ ಎತ್ತರ ಹಾಗೂ ೧೫ ಅಡಿ ಅಗಲವಾಗಿದೆ. ಇದರ ಆಕಾರದ ಕಾರಣದಿಂದಾಗಿಯೇ ಇದಕ್ಕೆ ಭೀಮನ ಹೆಬ್ಬಾಗಿಲೆಂದು ಹೆಸರು ಬಂದಿರಬಹುದು.[೪೭]

ವನವಾಸದಲ್ಲಿದ್ದ ಪಾಂಡವರು ಈ ಪರಿಸರಕ್ಕೆ ಬಂದಾಗ ಪಾಂಡವರಿಗೆ ಕೀಚಕನು ಹೆಚ್ಚಿನ ಉಪದ್ರವ ನೀಡಿದನಂತೆ. ಇದನ್ನು ಸಹಿಸದ ಭೀಮನು ಕೀಚಕನನ್ನು ಸಂಹಾರ ಮಾಡಿದನೆಂಬ ನಂಬಿಕೆ ಇದೆ. ಹೆಬ್ಬಾಗಿಲಿನ ಮುಂಭಾಗದ ಆವರಣದಲ್ಲಿ ಭೀಮನ ೮ ಅಡಿ ಎತ್ತರದ ಬಿಡಿ ಶಿಲ್ಪವಿದೆ. ಹತ್ತಿರದ ಗೋಡೆಯಲ್ಲಿ ಕೀಚಕನನ್ನು ಸಂಹಾರ ಮಾಡುವ ದೃಶ್ಯವನ್ನು ಕೆತ್ತಲಾಗಿದೆ. ಮಹಾಭಾರತಕ್ಕೆ ಸಂಬಂಧಿಸಿದ ಚಿತ್ರಗಳು ಕಂಡುಬರುವುದು ಈ ಹೆಬ್ಬಾಗಿಲಿನ ವಿಶೇಷತೆ.

### ೪೦. ಬೇಟೆಕಾರರ ಹೆಬ್ಬಾಗಿಲು

ಮಾಲ್ಯವಂತ ರಘುನಾಥಸ್ವಾಮಿ ದೇವಾಲಯದ ಉತ್ತರ ದಿಕ್ಕಿಗೆ ಬೇಟೆಕಾರರ ಹೆಬ್ಬಾಗಿಲು ಕಂಡುಬರುತ್ತದೆ. ವಿಜಯನಗರ ಕಾಲದಲ್ಲಿ ಬೇಟೆಗೆ ಪ್ರಧಾನ ಪಾತ್ರವಿತ್ತು. ಅಂತೆಯೇ ಅರಸರು ತಮ್ಮ ಮನೋರಂಜನೆಗಾಗಿ ಬೇಟೆಯಾಡುವುದನ್ನು ಅಭ್ಯಾಸ ಮಾಡಿಕೊಂಡಿದ್ದರು. ಅಡವಿಯಲ್ಲಿ ಬೇಟೆಯಾಡಿ ಈ ದ್ವಾರದ ಮೂಲಕ ನಗರದೊಳಗೆ ಪ್ರವೇಶ ಮಾಡಲಾಗುತ್ತಿತ್ತು. ಹಾಗಾಗಿ ಇದನ್ನು 'ಬೇಟೆಕಾರರ ಹೆಬ್ಬಾಗಿಲು' ಎಂದು ಕರೆಯುತ್ತಾರೆ.[೪೮]

ವಿದೇಶಿ ಪ್ರವಾಸಿಗರಾದ ಅಬ್ದುಲ್‌ರಜಾಕ್ ಮತ್ತು ನ್ಯೂನಿಜ್‌ರು ತಮ್ಮ ಪ್ರವಾಸಿ ಕಥನಗಳಲ್ಲಿ ಬೇಟೆಯ ಸಂದರ್ಭಗಳನ್ನು ದಾಖಲಿಸಿದ್ದಾರೆ. ಇದರಿಂದ ಅಂದಿನ ವಿಜಯನಗರದ ಅರಸರು ಬೇಟೆಗೆ ನೀಡಿದ್ದ ಪ್ರಾಮುಖ್ಯತೆಯನ್ನು ಹಾಗೂ ಬೇಟೆಕಾರರಿಗೆ ಹೆಬ್ಬಾಗಿಲು ನಿರ್ಮಿಸಿರುವ ಬಗ್ಗೆ ಮಾಹಿತಿ ಸಿಗುತ್ತದೆ.

### ೪೧. ಹೂವಿನಬಾಗಿಲು

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದ ಎಡಬದಿಗೆ 'ಹೂವಿನಬಾಗಿಲು' ಕಂಡುಬರುತ್ತದೆ. ಇಲ್ಲಿ ಹೂವನ್ನು ಹೆಚ್ಚು ಬೆಳೆಯುತ್ತಿದ್ದರು. ಇಲ್ಲಿನ ಹೂವನ್ನು ರಾಜನ ಅಂತಃಪುರ ಹಾಗೂ ಹಂಪಿಯ ಪ್ರಮುಖ ದೇವಾಲಯಗಳಿಗೆ ಸರಬರಾಜು ಮಾಡಲಾಗುತ್ತಿತ್ತು.[೪೯] ಅಂದಿನ ವಿಜಯನಗರದ ಅರಸರು ಮತ್ತು ಪ್ರಜೆಗಳು ಹೂವಿನ ಬಗ್ಗೆ ಎಷ್ಟು ವ್ಯಾಮೋಹ ಇರಿಸಿಕೊಂಡಿದ್ದರು ಎಂಬುದನ್ನು **ಅಬ್ದುಲ್‌ರಜಾಕ್** ಎಂಬ ವಿದೇಶಿ ಪ್ರವಾಸಿಗ ಈ ರೀತಿ ಹೇಳುತ್ತಾನೆ: 'ಈ ಜನಗಳು ಗುಲಾಬಿ ಹೂಗಳು ಇಲ್ಲದಿದ್ದರೆ ಬದುಕುವಂತೆಯೇ ಕಾಣುವುದಿಲ್ಲ. ಹೊಟ್ಟೆಗೆ ಹಿಟ್ಟು ಎಷ್ಟು ಅವಶ್ಯಕವೋ ಜುಟ್ಟಿಗೆ ಗುಲಾಬಿಯೂ ಅಷ್ಟೇ ಅವಶ್ಯಕವೆಂದು ಭಾವಿಸುತ್ತಾರೆ'[೫೦] ಎಂಬುದಾಗಿ ತನ್ನ ಪ್ರವಾಸಿ ಕಥನದಲ್ಲಿ ಹೇಳಿಕೊಳ್ಳುತ್ತಾನೆ.

### ೪೨. ಗೆಜ್ಜಲಮಂಟಪ(ಪರಾಂಕುಶ ಮಂಟಪ)

ಈ ಮಂಟಪವು ತಳವಾರಘಟ್ಟ ರಸ್ತೆಯ ವಿಜಯವಿಠ್ಠಲ ದೇವರ ಗುಡಿಗೆ ಹೋಗುವ ಮಾರ್ಗದ ಪ್ರಾರಂಭದಲ್ಲಿ ಕಂಡುಬರುತ್ತದೆ. ಇದನ್ನು 'ಗೆಜ್ಜಲುಮಂಟಪ' ಅಥವಾ 'ಪರಾಂಕುಶ ಮಂಟಪ'ವೆಂದು ಕರೆಯುತ್ತಾರೆ. ವಿಠ್ಠಲ ದೇವರ ರಥೋತ್ಸವ ಮತ್ತು ಇತರ ಉತ್ಸವಗಳಂದು ವಿಠ್ಠಲದೇವರ ಉತ್ಸವ ಮೂರ್ತಿಯನ್ನು ತೇರುಬೀದಿಯ ತುದಿಯಲ್ಲಿರುವ ಪರಾಂಕುಶ ಮಂಟಪದವರೆಗೆ ಒಯ್ಯುತ್ತಿದ್ದರು ಎಂಬ ಮಾಹಿತಿ ಲಿಖಿತ ಮೂಲಗಳಿಂದ ತಿಳಿದುಬರುತ್ತದೆ.[೫೧] ಆದರೆ ಆಡುಮಾತಿನಲ್ಲಿ ಈ ಮಂಟಪವನ್ನು 'ಗೆಜ್ಜಲು ಮಂಟಪ' ಎಂದು ಕರೆಯುತ್ತಾರೆ. 'ಗೆಜ್ಜಲು' ಎಂಬ ಪದವು ತೆಲುಗು ಪದವಾಗಿದ್ದು ಅದಕ್ಕೆ 'ಗೆಜ್ಜೆ' ಎಂಬ ಅರ್ಥ ಬರುತ್ತದೆ. ಕನ್ನಡದಲ್ಲಿ 'ಕಿರುಗಂಟೆ' ಎಂಬ ಅರ್ಥವಿದೆ. ಅಂದರೆ ಅಂದಿನ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯಾವೃತ್ತಿ ಎನ್ನುವುದು ಯಾವುದೇ ಅಡೆತಡೆಗಳಿಲ್ಲದೆ ರಾಜರುಗಳ ಪ್ರೋತ್ಸಾಹದಿಂದ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಇಂತಹ ವೇಶ್ಯಾವೃತ್ತಿಗೆ ಬರುವ ಮೊದಲು 'ಗೆಜ್ಜೆಪೂಜೆ' (ವೇಶ್ಯಾವೃತ್ತಿಯನ್ನು ಪ್ರಾರಂಭಿಸುವಾಗ ಮಾಡುವ ಸಮಾರಂಭ) ಎಂಬ ಧಾರ್ಮಿಕ ಆಚರಣೆಯನ್ನು ಮಾಡಿ ಅವರನ್ನು ವೇಶ್ಯಾವೃತ್ತಿಗೆ ಕಳುಹಿಸುವ ಸಂಪ್ರದಾಯವನ್ನು ಈ ಮಂಟಪದಲ್ಲಿ ಮಾಡುತ್ತಿದ್ದರೆಂದು ತಿಳಿದುಬರುತ್ತದೆ.[೫೨] ಆದ್ದರಿಂದ ಇದನ್ನು 'ಗೆಜ್ಜೆಲುಮಂಟಪ' ಎಂದು ಕರೆಯುತ್ತಾರೆಂದು ನಿರೂಪಕರು ತಿಳಿಸುತ್ತಾರೆ.

### ೪೩. ಮಹಮ್ಮದೀಯರ ಗೋರಿಗಳು

ಕಡ್ಡಿರಾಂಪುರದ ಹೊರ ವಲಯದಲ್ಲಿರುವ ಈ ಕಟ್ಟಡಗಳ ಬಗ್ಗೆ ಖಚಿತ ದಾಖಲೆಗಳಾವವೂ ಇಲ್ಲ. ಇಲ್ಲಿ ಸುತ್ತಲೂ ನೂರಾರು ಮುಸ್ಲಿಂ ಸಮಾಧಿ ಕಲ್ಲುಗಳು ಹರಡಿರುವುದರಿಂದ ಇದು ವಿಜಯನಗರ ಕಾಲದ ಮುಸ್ಲಿಂ ಸ್ಮಶಾನವೆಂಬುದರಲ್ಲಿ ಸಂಶಯವಿಲ್ಲ. ಇಲ್ಲಿರುವ ಎರಡು ಕಟ್ಟಡಗಳು ಯಾರೋ ಅನಾಮಿಕ ದೊಡ್ಡ ವ್ಯಕ್ತಿಗಳ ಸ್ಮಾರಕಗಳಾಗಿವೆ.[೫೩] ದೊಡ್ಡ ಕಟ್ಟಡ ತಳದಲ್ಲಿ ಚೌಕಾಕಾರವಾಗಿದ್ದು ಮೇಲೆ ವರ್ತುಲಾಕಾರವಾಗಿ ಮುಗಿದಿದೆ. ಬಹುಶಃ ಮೊದಲು ಈ ಕಟ್ಟಡದ ಮೇಲೆ ಗುಮ್ಮಟ ಇದ್ದಿರಬೇಕು. ಈಗ ಛಾವಣಿ ಇಲ್ಲದೆ ತೆರೆದುನಿಂತಿದೆ.

ಗೋಡೆಗಳಲ್ಲಿ ಅಚ್ಚ ಮುಸ್ಲಿಂ ಶೈಲಿಯ ಕಮಾನುಗಳಿವೆ. ಮಧ್ಯದಲ್ಲಿ ಮೂರು ಸಮಾಧಿಗಳಿವೆ. ಇವು ಕೊಠಡಿಯಂತಿದ್ದು ಮೇಲೆ ಗುಮ್ಮಟವಿದೆ. ಆದರೆ ಪ್ರಸ್ತುತ ಈ ಸಮಾಧಿಗಳ ಕುರುಹು ಏನೂ ಉಳಿದಿಲ್ಲ.

ಈ ಗೋರಿಗಳ ಹತ್ತಿರದ ಗುಂಡಿನ ಮೇಲಿರುವ ಕ್ರಿ.ಶ. ೧೫೦೫ರ ಶಾಸನವು ತಿಳಿಸುವಂತೆ ಹಸ್ತಿನಾವತಿ ವಳಿತದ ರುಂಭಾವೇಂಟೆಯ ಕಡೆರಾಮಪುರದಲ್ಲಿನ ಕನ್ನೆಕಟ್ಟೆ ಬಳಿಯ ಹರಳು ತಿಪ್ಪೆ ಗುಡ್ಡದಲ್ಲಿ ಸೈದುಫೀರು ಆಲಿ ಎಂಬುವವನು ಗುಮ್ಮಟವನ್ನು ಕಟ್ಟಿಸಿದಂತೆ ಈ ಶಾಸನ ತಿಳಿಸುತ್ತದೆ. ಅಲ್ಲಿ ತೋಟ ಮತ್ತು ಬಾವಿಯನ್ನು ಮಾಡಿಸಿದಂತೆಯೂ ತಿಳಿಯುತ್ತದೆ. ಅಬು, ಅಬುವಿನ ಮಗ ಮುರದ ಮುಂತಾದವರ ಉಲ್ಲೇಖವಿದೆ.[೫೪]

## ೪೪. ರಾಣಿಯರ ಸ್ನಾನಗೃಹ

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದ ಬಲಭಾಗದಲ್ಲಿ ರಾಣಿಯರ ಸ್ನಾನಗೃಹ ಕಂಡುಬರುತ್ತದೆ. ಈ ಸ್ನಾನಗೃಹ ಕಟ್ಟಡವು ಚೌಕಾಕಾರವಾಗಿದ್ದು, ಅದರ ಸುತ್ತಲೂ ನೀರಿನ ಕಾಲುವೆ ಇದೆ. ಪೂರ್ವಭಾಗದಲ್ಲಿರುವ ಸಣ್ಣ ಕಾಲುವೆಯ ಮೂಲಕ ಸ್ನಾನಗೃಹಕ್ಕೆ ನೀರಿನ ಪೂರೈಕೆಯನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಈ ಕಟ್ಟಡದ ಮಧ್ಯದಲ್ಲಿರುವ ಚೌಕಾಕಾರದ ತೊಟ್ಟಿಯ ಸುತ್ತ ಸುಮಾರು ೪ ಮೀಟರ್ ಅಗಲದ ಪ್ರಾಂಗಣವಿದೆ. ಇಲ್ಲಿ ೨೪ ಕಮಾನಿನ ಚಾವಣಿ ಹಾಗೂ ಕಂಬಗಳಿವೆ. ಪ್ರತಿ ಅಂಕಣದ ತುದಿಯಲ್ಲಿರುವ ಹೊರಗೋಡೆಯಲ್ಲಿ ಸಣ್ಣ ಕಮಾನುಗಳ ಕಿಟಕಿಗಳನ್ನು ನಿರ್ಮಿಸಲಾಗಿದೆ. ಪೂರ್ವ, ಪಶ್ಚಿಮ, ಉತ್ತರ ಗೋಡೆಗಳ ಮಧ್ಯಭಾಗದಲ್ಲಿ ದೊಡ್ಡದಾದ ತೆರೆದ ಕಮಾನುಗಳಿವೆ. ಈ ಸ್ನಾನಗೃಹದ ಮಧ್ಯದ ನೀರಿನ ತೊಟ್ಟಿಗೆ ಇಳಿಯಲು ಉತ್ತರ ಭಾಗದಲ್ಲಿ ಮೆಟ್ಟಿಲುಗಳಿವೆ.[೫೫] ಇತ್ತೀಚಿನ ಸಂಶೋಧನೆಯ ಪ್ರಕಾರ ಈ ಸ್ನಾನಗೃಹವನ್ನು ಅಚ್ಯುತರಾಯನ(೧೫೨೯-೧೫೪೨) ಆಳ್ವಿಕೆಯ ಕಾಲದಲ್ಲಿ ನಿರ್ಮಾಣ ಮಾಡಲಾಯಿತು ಎಂಬ ಅಂಶ ತಿಳಿದುಬರುತ್ತದೆ.

ವಿಜಯನಗರ ರಾಜ್ಯದ ರಾಣಿಯರು ಮತ್ತು ರಾಜ್ಯದ ಉನ್ನತಾಧಿಕಾರಿಗಳ ಮನೆಯ ಮಹಿಳೆಯರು ಈ ಸ್ನಾನಗೃಹವನ್ನು ಬಳಸುತ್ತಿದ್ದರಂತೆ. ಆಗಾಗ ರಾಜರೂ ಸಹ ತಮ್ಮ ರಾಣಿಯರ ಜೊತೆ ಜಲಕ್ರೀಡೆಯಾಡುತ್ತಿದ್ದರಂತೆ. ರಾಣಿಯರು ಜಲಕ್ರೀಡೆಯಾಡುವ ಸಂದರ್ಭದಲ್ಲಿ ಅಂದಿನ ಅರಸರು ರಾಣಿಯರ ಕಾವಲಿಗಾಗಿ ನಪುಂಸಕರನ್ನು ನೇಮಿಸಿದ್ದರಂತೆ. ರಾಣಿಯರು ಸ್ನಾನವಾದ ನಂತರ ಸ್ನಾನಗೃಹದ ಪೂರ್ವಕ್ಕಿರುವ ಚಂದ್ರಶೇಖರ ದೇವಸ್ಥಾನಕ್ಕೆ ಪೂಜೆ ಸಲ್ಲಿಸಿ ಬರುತ್ತಿದ್ದರಂತೆ.[೫೬] ರಾಣಿಯರ ಸ್ನಾನಗೃಹಕ್ಕೆ ಕಾಲುವೆಯಿಂದ ನೀರಿನ ಪೂರೈಕೆಯನ್ನು ಮಾಡುತ್ತಿದ್ದರಲ್ಲದೇ, ಸ್ನಾನವಾದ ನಂತರ ಸ್ನಾನದ ನೀರನ್ನು ಹೊರಹೋಗುವಂತೆ ಮಾಡಲು ಚೌಕಾಕಾರದ ತೊಟ್ಟಿಗೆ ಒಂದು ರಂಧ್ರವನ್ನು ಸಹ ಮಾಡಿದ್ದರು. ಈ ಸ್ನಾನಗೃಹವು ಹಿಂದೂ-ಮುಸ್ಲಿಂ ವಾಸ್ತುಶೈಲಿಯನ್ನು ಹೊಂದಿದ್ದು, ಯಾವುದೇ ಧಕ್ಕೆಗೆ ಗುರಿಯಾಗದೇ ಈಗಲೂ ಉಳಿದುಕೊಂಡು ಬಂದಿರುವುದು ಕಂಡುಬರುತ್ತದೆ.

### ೪೫ ಸೂಳೆಬಾವಿ(ಕೂಪರಾಮ ವಾಟಿಕ)

ಈ 'ಸೂಳೆಬಾವಿ'ಯು ಮಲಪನಗುಡಿ ಗ್ರಾಮದ ಬಳಿ ಕಂಡುಬರುತ್ತದೆ. ಇದನ್ನು ಸುಳೆಬಾವಿ ಎಂತಲೂ ಕರೆಯುತ್ತಾರೆ. ಸಂಗಮವಂಶದ ದೊರೆ ಒಂದನೇ ದೇವರಾಯನ(ಕ್ರಿ.ಶ. ೧೪೧೨) ಕಾಲದಲ್ಲಿ ಬಿಸಿಲಹಳ್ಳಿಯ ಕಣಿವೆ ಮತ್ತು ಬಡವಲಿಯ ಕಣಿವೆ ಹಾದಿ ಕೂಡಿದ ಮಹಾಪಥದಲ್ಲಿ ಬುಳ್ಳೆನಾಯ್ಕನ ಮಗ ಹೆಗ್ಗಡೆ ಸೋವಣ್ಣ ಅಣ್ಣ ಅರವಟಿಗೆಯನ್ನಿಕ್ಕಿಸಿ ಮಾಳಿಗೆ ಕೂಪಾರಾಮವನ್ನು ಮಾಡಿಸಿದನು ಎಂಬುದಾಗಿ ಆ ಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಮುಂದಿರುವ ಶಾಸನದಿಂದ ಮಾಹಿತಿಯು ಸಿಗುತ್ತದೆ.[೫೭]

ಆದರೆ ಸ್ಥಳೀಯರು ಈ ಬಾವಿಯನ್ನು 'ಸೂಳೆಬಾವಿ' ಎಂತಲೇ ಕರೆಯುತ್ತಾರೆ. ಅಂದಿನ ಸೂಳೆಯರು ಅವರು ಮಾಡುವ ವೃತ್ತಿಯಿಂದ ಎಲ್ಲರೂ ಕೂಡಿಕೊಂಡು ದುಡ್ಡು ಹಾಕಿ ಈ ಬಾವಿಯನ್ನು ತೋಡಿಸಿದ್ದರು. ಸಮಾಜ ಗೌರವ ನೀಡದಿದ್ದರೂ, ಗೌರವಕ್ಕೆ ಯೋಗ್ಯವಾದ ಕೆಲಸವನ್ನು ವಿಜಯನಗರ ಕಾಲದ ಅಂದಿನ ಸೂಳೆಯರು ಈ ಬಾವಿಯನ್ನು ನಿರ್ಮಿಸುವುದರ ಮೂಲಕ ತೋರಿಸಿಕೊಟ್ಟಿದ್ದಾರೆ. ಆದ್ದರಿಂದ ಇದನ್ನು 'ಸೂಳೆಬಾವಿ' ಎಂದೇ ಕರೆಯುತ್ತಾರೆ ಎಂಬ ವಿವರಣೆಯನ್ನು ನೀಡುತ್ತಾರೆ.[೫೮]

ಈ ಬಾವಿಯು ಸುಂದರ ಕೆತ್ತನೆಗಳಿಂದ ಕೂಡಿದ್ದು ಮುಸ್ಲಿಂ ಶೈಲಿಯ ಕಮಾನುಗಳನ್ನು, ಉಬ್ಬುಕೆತ್ತನೆಯಲ್ಲಿ ಆಂಜನೇಯ ಮುಂತಾದ ದೇವರ ಮೂರ್ತಿಗಳನ್ನು ಕಾಣಬಹುದಾಗಿದೆ. ಬಾವಿಯ ಕೆಳಭಾಗ ಚೌಕಾಕಾರವಾಗಿದ್ದು, ಮೇಲ್ಭಾಗ ಅಷ್ಟಭುಜಾಕಾರವಾಗಿದೆ. ಆಳವಾದ ಬಾವಿಗೆ ಇಳಿಯಲು ಪೂರ್ವಕ್ಕೆ ಮೆಟ್ಟಿಲುಗಳನ್ನು ಮಾಡಲಾಗಿದೆ. ಈ ಬಾವಿಯು ಅಂದಿನ ಪ್ರಯಾಣಿಕರಿಗೆ, ಪ್ರವಾಸಿಗರಿಗೆ, ಸ್ಥಳೀಯರಿಗೆ ಊಟ ಮಾಡಿ, ನೀರು ಕುಡಿದು ವಿಶ್ರಾಂತಿ ಪಡೆಯಲು ಅನುಕೂಲಕರವಾಗಿತ್ತೆಂದು ತಿಳಿದುಬರುತ್ತದೆ.

### ೪೬. ಹೊನ್ನಿನ ವೆಂಕಟಾಪುರ

ಇದು ಕಮಲಾಪುರ ಹೋಬಳಿಯ ಗ್ರಾಮವಾಗಿದ್ದು, ಕಮಲಾಪುರದಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಕಂಡುಬರುತ್ತದೆ. ಹೊನ್ನಿನ ವೆಂಕಟಾಪುರ ಈಗಿನ ನದಿಯಲ್ಲಿ ಮುಳುಗಡೆಯಾಗಿರುವ ಪ್ರದೇಶ. ೨೦೦ ವರ್ಷಗಳ ಹಿಂದೆ ಹೊನ್ನಿನ ವೆಂಕಟಾಪುರದಿಂದ ಈಗಿನ ವೆಂಕಟಾಪುರಕ್ಕೆ ಜನವಸತಿ ಬದಲಾಯಿಸಲಾಯಿತು.

ಹಿಂದೆ ವಿಜಯನಗರ ಕಾಲದಲ್ಲಿ ವಿದ್ಯಾರಣ್ಯರು ತಮ್ಮ ತಪೋಶಕ್ತಿಯಿಂದ ಹೊನ್ನಿನ ಮಳೆ ಸುರಿಸಿದಾಗ, ಅದು ಈ ಊರಿನಲ್ಲೂ ಸುರಿದಿತ್ತಂತೆ. ಈಗಲೂ ಅಲ್ಲಲ್ಲಿ ಹೊನ್ನಿನ ನಾಣ್ಯ, ಪಾತ್ರೆಗಳು ಸಿಗುತ್ತಿರುವುದರಿಂದ ಅಲ್ಲಿಗೆ 'ಹೊನ್ನಿನ ವೆಂಕಟಾಪುರ'ವೆಂದು[೫೯] ಕರೆಯಲಾಗುತ್ತದೆ ಎಂಬ ಐತಿಹ್ಯವಿದೆ.

### ೪೭. ಅನಂತಶಯನಗುಡಿ

ಅನಂತಶಯನಗುಡಿ ಗ್ರಾಮವು ಹೊಸಪೇಟೆ ಹೋಬಳಿಯ ಗ್ರಾಮವಾಗಿದೆ. ಕೃಷ್ಣದೇವರಾಯನು ತನ್ನ ಮಗನಾದ ತಿರುಮಲರಾಯನ ನೆನಪಿಗಾಗಿ ಕ್ರಿ.ಶ. ೧೫೨೪ರಲ್ಲಿ ಅನಂತ ಪದ್ಮನಾಭ

ದೇವರ ದೇವಾಲಯವನ್ನು ನಿರ್ಮಿಸಿದನು.[೬೦] ಈ ದೇವಾಲಯ ನಿರ್ಮಾಣದ ಬಗೆಗೆ ಎರಡು ರೀತಿಯ ಐತಿಹ್ಯಗಳು ಕಂಡುಬರುತ್ತವೆ.

೧. ದೇವಸ್ಥಾನ ನಿರ್ಮಾಣವಾದ ನಂತರ ಅನಂತಶಯನ ಮೂರ್ತಿಯನ್ನು ಪ್ರತಿಷ್ಠಾಪಿಸಲು ಹೊಳಲು ಗ್ರಾಮದಿಂದ ತರಬೇಕಾದರೆ, ದೇವರ ಮುಂದೆ ಬರುವ ತಳವಾರನು ತಿರುಗಿ ನೋಡಬಾರದೆಂಬ ನಿಯಮವಿತ್ತು. ಆ ವೇಳೆಯಲ್ಲಿ ಹೊಲದಲ್ಲಿ ಕುಳ್ಳು(ಒಣಗಿದ ಸಗಣಿ) ಆರಿಸುವ ಮುದುಕಿಯು, ತಳವಾರನಿಗೆ 'ನಿನ್ನ ಹಿಂದಿಂದೆ ಏನೋ ಗಡಗಡ ಅನ್ನುತ್ತಿದೆ ತಮ್ಮಾ' ಅಂದಾಗ, ನಿಯಮವನ್ನು ಮರೆತು ತಳವಾರನು ತಿರುಗಿ ನೋಡಿದಾಗ ವಿಗ್ರಹ ಮುಂದಕ್ಕೆ ಚಲಿಸದೇ ನಿಂತಲ್ಲಿಯೇ ನಿಂತಿತು. ತಳವಾರ ಮತ್ತು ಮುದುಕಿಯು ಕೂಡ ಅಲ್ಲಿಯೇ ಕಲ್ಲಾದ ಕುರುಹುಗಳಿವೆ(ಇದು ಹಡಗಲಿ ತಾಲೂಕು ಹೊಳಲು ಗ್ರಾಮದ ಹತ್ತಿರವಿದೆ).

೨. ಕೃಷ್ಣದೇವರಾಯನು ಅನಂತಶಯನ(ಅನಂತ-ಸರ್ಪ, ಶಯನ-ಹಾಸಿಗೆ) ಗುಡಿಯನ್ನು ಕಟ್ಟಿಸಿದಾಗ, ವಿಷ್ಣು ಈಗಿನ ಹೊಳಲು ಗ್ರಾಮದಲ್ಲಿ ಕಾಣಿಸಿಕೊಳ್ಳುತ್ತಾನೆ. ಆಗ ಒಬ್ಬ ತಳವಾರನನ್ನು ಕಳುಹಿಸಿ ಕರೆದುತರಲು ಹೇಳುತ್ತಾರೆ. ಕರೆದು ತರುವಾಗ, ವಿಷ್ಣು ತಳವಾರನಿಗೆ ನನ್ನನ್ನು ಹೊರಳಿ ನೋಡಬೇಡವೆಂದು, ಒಂದು ವೇಳೆ ಹೊರಳಿ ನೋಡಿದರೆ ನೀನು ಹೊರಳಿ ನೋಡಿದ ಸ್ಥಳದಲ್ಲೇ ನಾನು ತಟಸ್ಥನಾಗಿ ನೆಲೆಸಿಬಿಡುತ್ತೇನೆ ಎಂಬ ಷರತ್ತನ್ನು ವಿಧಿಸುತ್ತಾನೆ. ಹೀಗೆ ಬರುತ್ತಿರುವಾಗ ದಾರಿಯಲ್ಲಿ ಸಗಣಿ ಆಯುವ ಮುದುಕಿ, ತಳವಾರನಿಗೆ 'ತಮ್ಮಾ ಹಿಂದೆ ಗುಂಡು ಉರುಳಿ ಬರಾಕ ಹತ್ತೈತಿ ಅದಕ್ಕ ಸಿಕ್ಕ ಸತ್ತಿ' ಎಂದಾಗ ತಳವಾರ ಭೀತನಾಗಿ ಹೊರಳಿ ನೋಡಿದನಂತೆ. ತಕ್ಷಣ ಅನಂತಶಯನ ಅಲ್ಲಿಯೇ(ಹೊಳಲು) ಕಲ್ಲಾಗಿರುವನೆಂಬ ಪ್ರತೀತಿ ಇದೆ.[೬೧]

ಆದರೆ, ದೇವಾಲಯದ ಬಲಗೋಡೆಯ ಮೇಲಿರುವ ಕ್ರಿಶ. ೧೫೨೪ರ ಕೃಷ್ಣದೇವರಾಯನ ಶಾಸನ ಮತ್ತು ಕ್ರಿಶ. ೧೫೪೯ರ ಸದಾಶಿವರಾಯನ ಶಾಸನಗಳು ಅನಂತಶಯನ ದೇವರ ದೇವತಾಕಾರ್ಯಗಳಿಗೆ ಮತ್ತು ದೇವಾಲಯದ ನಿರ್ವಹಣೆಗೆ ಸಂಬಂಧಿಸಿದಂತೆ ದಾನ ನೀಡಿರುವುದರ ಬಗ್ಗೆ ತಿಳಿಸುತ್ತವೆ.[೬೨] ಅಂದರೆ ದೇವಸ್ಥಾನದಲ್ಲಿ ದೇವತಾಮೂರ್ತಿ ಇತ್ತು. ಕಾಲಾನಂತರದಲ್ಲಿ ಮೂರ್ತಿ ಹಾಳಾಗಿರಬೇಕು. ಇದಕ್ಕೆ ಶೈವ ಮತ್ತು ವೈಷ್ಣವ ಸಂಘರ್ಷಗಳೂ ಕಾರಣವಾಗಿರಬಹುದು ಎಂಬುದಾಗಿ ತಿಳಿಯುತ್ತದೆ.

### ೪೮. ನಂದಿಬಂಡೆ

ನಂದಿಬಂಡೆ ಗ್ರಾಮ ಮರಿಯಮ್ಮನಹಳ್ಳಿ ಹೋಬಳಿ ಸೇರಿದ ಗ್ರಾಮವಾಗಿದೆ. ಮರಿಯಮ್ಮನ ಹಳ್ಳಿಯಿಂದ ಹಗರಿಬೊಮ್ಮನಹಳ್ಳಿಗೆ ಹೋಗುವ ಮಾರ್ಗದಲ್ಲಿ ಕಂಡುಬರುತ್ತದೆ. ಹಿಂದೆ ಈ ಊರಿನ ನಂದಿಯೊಂದು ಮುಂಡರಿಗೆ ಹೋಗಿ ಕದ್ದು ಮೇಯುತ್ತಿತ್ತಂತೆ. ರೈತರು ಬೆಳೆದ ಬೆಳೆಯನ್ನು ದಿನಾಲೂ ತಿಂದು ನಾಶ ಮಾಡುತ್ತಿದ್ದುದ್ದರಿಂದ, ಅಲ್ಲಿನ ರೈತರು ರೋಸಿ ಹೋಗಿ

ಬೆಳೆಯನ್ನು ತಿಂದು ನಷ್ಟವನ್ನುಂಟು ಮಾಡುತ್ತಿದ್ದ ನಂದಿಯ ತಲೆ ಕಡಿದರಂತೆ. ಆಗ ಅದರ ರುಂಡ ಅಲ್ಲೇ ಉಳಿದು ಮುಂಡ ಮಾತ್ರ ಈ ಊರಿಗೆ ಬಂದಿತಂತೆ. ಹಾಗಾಗಿ ಈ ಊರಿಗೆ ನಂದಿಬಂಡೆ(ನಂದಿಮುಂಡ) ಎಂದು ಹೆಸರಾಯಿತಂತೆ.[೬೨]

ನಂದಿಬಂಡೆ ಗ್ರಾಮವು ಕ್ರಿ.ಶ. ೧೫೪೯ರ ಶಾಸನದಲ್ಲಿ 'ನಂದಿಯಬಂಡೆ' ಎಂದು ಉಲ್ಲೇಖಗೊಂಡಿದೆ.[೬೩] ಸ್ಥಳೀಯರು ತಿಳಿಸುವಂತೆ ಗ್ರಾಮದ ಪೂರ್ವ ದಿಕ್ಕಿನಲ್ಲಿ ನಂದಿಯಾಕಾರದ ಬಂಡೆಯೊಂದಿದೆ. ಅದನ್ನು 'ಬಸವಣ್ಣನ ಗುಡ್ಡ' ಎಂದು ಕರೆಯುತ್ತಾರೆ. ಆದರಿಂದಾಗಿಯೇ ಈ ಊರಿಗೆ ನಂದಿಬಂಡೆ ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ. ಈ ಹೆಸರು ಬಹುಶಃ ಅಲ್ಲಿನ ಬೆಟ್ಟ, ಗುಡ್ಡಗಳ ಆಕೃತಿ ಅಥವಾ ಲಕ್ಷಣವನ್ನು ಆಧರಿಸಿ ಬಂದಿರಬೇಕು.

## ೪೯. ಕಡ್ಡಿರಾಂಪುರ

ಕಡ್ಡಿರಾಂಪುರ ಗ್ರಾಮವು ಕಮಲಾಪುರ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಹೊಸಪೇಟೆಯಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಕಡ್ಡಿರಾಂಪುರ ಗ್ರಾಮ ಕಂಡುಬರುತ್ತದೆ. ಈ ಗ್ರಾಮಕ್ಕಿರುವ ಐತಿಹ್ಯವೇನೆಂದರೆ,

೧. ವಿಜಯನಗರ ಕಾಲದಲ್ಲಿ ಈ ಗ್ರಾಮವನ್ನು 'ರಾಮಪುರ' ಎಂದು ಕರೆಯುತ್ತಿದ್ದರು. ಇಲ್ಲಿ ಯುದ್ಧಕ್ಕೆ ಬೇಕಾದ ಖಡ್ಗಗಳನ್ನು ತಯಾರಿಸುತ್ತಿದ್ದರಂತೆ. ಖಡ್ಗಗಳನ್ನು ತಯಾರಿಸುತ್ತಿದ್ದುದರಿಂದ ರಾಮಪುರವನ್ನು 'ಖಡ್ಗರಾಮಪುರ' ಎಂದು ಕರೆಯಲಾಯಿತು. ನಂತರ ಇದು 'ಕಡ್ಡಿರಾಮಪುರ' ಎಂಬ ಹೆಸರನ್ನು ಪಡೆದುಕೊಂಡಿತು.[೬೪]

೨. ವನವಾಸದ ಸಮಯದಲ್ಲಿ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದಾಗ ರಾಮನು ಸೀತೆಯನ್ನು ಹುಡುಕುತ್ತಾ ಈ ಸ್ಥಳಕ್ಕೆ ಬಂದಾಗ ಚಿಂತೆಯಿಂದ ಸೊರಗಿ ಕಡ್ಡಿಯಂತಾಗಿದ್ದ ರಿಂದ ಈ ಊರಿಗೆ ಕಡ್ಡಿರಾಮನಪುರ, ಕಡ್ಡಿರಾಂಪುರ ಎಂಬ ಹೆಸರು ಬಂದಿತೆಂದು ನಿರೂಪಕರು ಮಾಹಿತಿಯನ್ನು ನೀಡುತ್ತಾರೆ.[೬೫] ಬಹುಶಃ ರಾಂಪುರ ಎಂಬ ಹೆಸರಿನ ಗ್ರಾಮಗಳು ವಿಜಯನಗರ ಕಾಲದಲ್ಲಿ ಎರಡು ಇದ್ದ ಕಾರಣ ಗುರುತಿಗಾಗಿ ಈ ರೀತಿ ಕರೆಯುವ ರೂಢಿ ಮೊದಲಿನಿಂದಲೂ ಗ್ರಾಮನಾಮ ಅಧ್ಯಯನದಲ್ಲಿ ಗಮನಿಸಬಹುದಾಗಿದೆ.

ಕಡ್ಡಿರಾಂಪುರವು ಕ್ರಿ.ಶ. ೧೩೬೬ರ ಬುಕ್ಕರಾಯನ ಶಾಸನದಲ್ಲಿ 'ರಾಮಾಪುರ'ವೆಂದು, ಕ್ರಿ.ಶ. ೧೫೦೫ರ ಶಾಸನದಲ್ಲಿ 'ಕಡೆರಾಮಾಪುರ'ವೆಂದು ಉಲ್ಲೇಖಗೊಂಡಿದೆ.[೬೬] ಈ ಕಡೆರಾಮಾಪುರವು ಕಡೀರಾಂಪುರವಾಗಿ, ನಂತರ ಕಡ್ಡಿರಾಂಪುರ ಎಂಬ ರೂಪವನ್ನು ಪಡೆದಿದೆ.

## ೫೦. ಚಿಕ್ಕಜಾಯಿಗನೂರು

ಈ ಗ್ರಾಮವು ಕಂಪ್ಲಿ ಹೋಬಳಿಯ ಗ್ರಾಮವಾಗಿದೆ. ವಿಜಯನಗರ ಕಾಲದಲ್ಲಿ ಈ ಗ್ರಾಮವು 'ಜೇನುಕೃಷಿ'ಗೆ ಪ್ರಸಿದ್ಧಿ ಪಡೆದ ಗ್ರಾಮವಾಗಿತ್ತು. ಚಿಕ್ಕ ಜೇನು ಹೆಚ್ಚು ಸಿಗುತ್ತಿದ್ದುದರಿಂದ ಈ ಗ್ರಾಮವನ್ನು 'ಚಿಕ್ಕಜಾಯಿಗನೂರು' ಎಂದು ಕರೆಯುತ್ತಾರೆ.[೬೭] ವಿಜಯನಗರದ ರಾಜರುಗಳಿಗೆ

ಹಾಗೂ ಪ್ರಮುಖ ದೇವಾಲಯಗಳಿಗೆ ಇಲ್ಲಿಂದಲೇ ಜೇನು ಸರಬರಾಜು ಮಾಡಲಾಗುತ್ತಿತ್ತು ಎಂಬ ಮಾಹಿತಿ ಸಿಗುತ್ತದೆ.

### ೫೧. ಕಾಳಗಟ್ಟ

ಕಮಲಾಪುರ ಹೋಬಳಿಗೆ ಸೇರಿದ ಕಾಳಗಟ್ಟ ಗ್ರಾಮವನ್ನು ಕುರಿತಂತೆ ಈ ರೀತಿಯ ಐತಿಹ್ಯ ಸಿಕ್ಕುತ್ತದೆ: ವನವಾಸದ ಸಮಯದಲ್ಲಿ ೫ ಮಂದಿ ಪಾಂಡವರು ಈ ಊರಿಗೆ ಬಂದಿದ್ದರಂತೆ. ಈ ಗ್ರಾಮವು ಹಿಂದಕ್ಕೆ ಆನೆಗೊಂದಿ ಸಂಸ್ಥಾನಕ್ಕೆ ಸೇರಿತ್ತು. ಇಲ್ಲಿ ಯುದ್ಧದ ಕೌಶಲ್ಯತೆಯ ಬಗ್ಗೆ ತರಬೇತಿ ನೀಡಲಾಗುತ್ತಿತ್ತು. ಆದ್ದರಿಂದ ಈ ಊರಿಗೆ 'ಕಾಳಗಟ್ಟ' ಎಂಬ ಹೆಸರು ಬಂದಿತು.[೬೯] ಈ ಗ್ರಾಮದ ಉತ್ತರಕ್ಕೆ ವಿಶಾಲವಾದ ಬಯಲಿನಲ್ಲಿ 'ಆಂಜನೇಯಸ್ವಾಮಿ'ಯ ದೇವಸ್ಥಾನ ಕಂಡುಬರುತ್ತದೆ ಇದನ್ನು ಬಯಲು ಆಂಜನೇಯ ಎಂದೇ ಕರೆಯುತ್ತಾರೆ. ಈ ಆಂಜನೇಯಸ್ವಾಮಿಯನ್ನು ವಿದ್ಯಾರಣ್ಯರು ಪ್ರತಿಷ್ಠಾಪಿಸಿ, ಪೂಜಿಸಿದರೆಂಬ ಮಾಹಿತಿ ಸಿಗುತ್ತದೆ.

### ೫೨. ತಿಮಲಾಪುರ

ತಿಮಲಾಪುರವು ಮರಿಯಮ್ಮನಹಳ್ಳಿ ಹೋಬಳಿಗೆ ಸೇರಿದ ಗ್ರಾಮವಾಗಿದೆ. ವಿಜಯನಗರದ ಪ್ರಖ್ಯಾತ ದೊರೆ ಕೃಷ್ಣದೇವರಾಯನ ಪ್ರಧಾನಮಂತ್ರಿಯಾದ ತಿಮ್ಮರಸಯ್ಯನು ತನ್ನ ಹೆಂಡತಿ ತಿರುಮಲಾಂಬೆಯ ಹೆಸರಿನಲ್ಲಿ ತಿರುಮಲಾಪುರ ಎಂಬ ಗ್ರಾಮವನ್ನು ಕಟ್ಟಿದ. ಮುಂದೆ ಅದೇ ತಿಮ್ಮಾಪುರ, ತಿಮಲಾಪುರವಾಯಿತು[೭೦] ಎಂಬ ಐತಿಹ್ಯವಿದೆ.

### ೫೩. ಸಂಕ್ಲಾಪುರ

ಸಂಕ್ಲಾಪುರವು ಹೊಸಪೇಟೆ ಹೋಬಳಿಯ ಗ್ರಾಮವಾಗಿದೆ. ವಿಜಯನಗರ ಕಾಲದಲ್ಲಿ ಸಂಕ್ಲಾಪುರದಲ್ಲಿ ಸುಂಕವನ್ನು ಸಂಗ್ರಹಿಸುತ್ತಿದ್ದು, ಸುಂಕಕ್ಕೆ ಸಂವಾದಿಯಾಗಿ ಸಂಕ್ಲಾಪುರ ಎಂಬ ಹೆಸರು ಬಂತೆಂದು ಸ್ಥಳೀಯರು ತಿಳಿಸುತ್ತಾರೆ.[೭೧] ಶಾಸನದಲ್ಲಿ ಈ ಊರನ್ನು ಕೋಟಾ ವಿನಾಯಕಪುರ, ಕೋಟಾ ವಿಘ್ನೇಶಪುರ ಎಂಬ ಹೆಸರಿನಿಂದ ಕರೆಯಲಾಗಿದೆ. ಆದರೆ ಕ್ರಿ.ಶ. ೧೫೧೩ರ ಶಾಸನದಲ್ಲಿ ಸಂಕಲಾಪುರವೆಂದೇ[೭೨] ಉಲ್ಲೇಖಗೊಂಡಿದೆ.

### ೫೪. ಗುಡಿ ಓಬಳಾಪುರ

ಗುಡಿ ಓಬಳಾಪುರ ಗ್ರಾಮವು ಹೊಸಪೇಟೆ ಹೋಬಳಿಗೆ ಸೇರಿದ ಗ್ರಾಮವಾಗಿದೆ. ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದಲ್ಲಿ ಓಬಳೇಶ್ವರ ಎನ್ನುವ ವ್ಯಕ್ತಿ ಬಿಲ್ವಿದ್ಯೆ ಮತ್ತು ಬೇಟೆಯನ್ನಾಡುವುದರಲ್ಲಿ ತುಂಬ ಪ್ರಸಿದ್ಧನಾಗಿದ್ದ. ಬೇಟೆಯಲ್ಲಿ ನಿಷ್ಣಾತನಾಗಿದ್ದ ಅವನಿಗೆ ಈ ಪ್ರದೇಶ ಉಂಬಳಿಯಾಗಿ ದೊರೆತಿರಬೇಕು. ಅವನಿಂದಾಗಿಯೇ ಈ ಊರಿಗೆ ಓಬಳಾಪುರ ಎಂಬ ಹೆಸರು ಬಂದಿತೆಂಬುದಾಗಿ ತಿಳಿಯುತ್ತದೆ.[೭೩] ನಂತರ ಅಲ್ಲಿ ನಿರ್ಮಾಣವಾದ ಗುಡಿಯಿಂದಾಗಿ ಇದನ್ನು ಗುಡಿ ಓಬಳಾಪುರ ಎಂಬುದಾಗಿ ಕರೆಯುತ್ತಾರೆಂಬ ಐತಿಹ್ಯವಿದೆ.

**೫೫. ವಡ್ಡರಹಳ್ಳಿ**

ವಡ್ಡರಹಳ್ಳಿ ಗ್ರಾಮವು ಕಮಲಾಪುರ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಹೊಸಪೇಟೆಯಿಂದ ಬಳ್ಳಾರಿಗೆ ಹೋಗುವ ರಾಜ್ಯ ಹೆದ್ದಾರಿಯ ಮಾರ್ಗದಲ್ಲಿ ಕಂಡುಬರುತ್ತದೆ. ಹಿಂದೆ ಇದೇ ಊರಿನ ಪಕ್ಕದಲ್ಲಿ ನಾಗನಿಂಗನಹಳ್ಳಿ ಎಂಬ ಗ್ರಾಮವಿತ್ತು. ಆ ಗ್ರಾಮದಲ್ಲಿ ಪ್ಲೇಗ್ ಮತ್ತು ಕಾಲರಾ ರೋಗ ಬಾಧಿಸಲು ಅಲ್ಲಿದ್ದ ಜನರೆಲ್ಲಾ ಈ ಊರಿನಲ್ಲಿ ಬಂದು ನೆಲೆಸಿದರು.[೭೪] ಅವರಲ್ಲಿ ವಡ್ಡ ಜನಾಂಗ ಹೆಚ್ಚಿದ್ದುದರಿಂದ ಇಲ್ಲಿಗೆ 'ವಡ್ಡರಹಳ್ಳಿ' ಎಂಬ ಹೆಸರು ಬಂತೆಂಬ ಐತಿಹ್ಯವಿದೆ.

**೫೬. ಜೋಗಪ್ಪನಗುಡ್ಡ**

ವಡ್ಡರಹಳ್ಳಿ ಗ್ರಾಮದ ದಕ್ಷಿಣಕ್ಕೆ 'ಜೋಗಪ್ಪನಗುಡ್ಡ' ಎಂಬ ಸ್ಥಳ ಕಂಡುಬರುತ್ತದೆ. ಈ ಸ್ಥಳದಲ್ಲಿ ಅನೇಕ ಗುಹೆಗಳು ಕಂಡುಬರುತ್ತವೆ. ಈ ಗುಹೆಗಳಲ್ಲಿ ಸಾಧು, ಸನ್ಯಾಸಿ, ಜೋಗಿಗಳು ವಾಸಿಸುತ್ತಿದ್ದರಂತೆ. ಆದ್ದರಿಂದ ಆ ಸ್ಥಳಕ್ಕೆ 'ಜೋಗಪ್ಪನಗುಡ್ಡ' ಎಂದು ಕರೆಯುತ್ತಾರೆ. ಈ ಜೋಗಪ್ಪನ ಗುಡ್ಡಕ್ಕೆ ಯಾರೂ ಹೋಗುವಂತಿಲ್ಲ. ಏಕೆಂದರೆ, ಜೋಗಿಗಳು ರುದ್ರನ ಆರಾಧಕರಾಗಿ ರುವುದರಿಂದ ಉಗ್ರಕೋಪಿಗಳಾಗಿರುತ್ತಾರೆ. ಅವರ ಭಕ್ತಿಗೆ, ಆರಾಧನೆಗೆ ಭಂಗ ಉಂಟಾಗಬಾರದೆಂಬ ಕಾರಣಕ್ಕೆ ಜೋಗಿಗಳು ಈ ಗುಡ್ಡದಲ್ಲಿ ವಾಸಿಸುತ್ತಿದ್ದರಂತೆ.[೭೫]

**೫೭. ಇಂಗಳಗಿ**

ಈ ಗ್ರಾಮವು ಕಮಲಾಪುರ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಈ ಗ್ರಾಮವನ್ನು ಕುರಿತಂತೆ ಈ ರೀತಿಯ ಐತಿಹ್ಯವಿದೆ:

ಹಿಂದೆ ಆನೆಗೊಂದಿ ರಾಜರು ಪರಿವಾರ ಸಮೇತ ಈ ಪ್ರದೇಶಕ್ಕೆ ಬೇಟೆಗೆ ಬರುತ್ತಿದ್ದರಂತೆ. ಹಾಗೆ ಬಂದಾಗ ಬೆಳಿಗ್ಗೆಯ ಹೊತ್ತು ಈ ಊರಿನ ಹೆಂಗಳೆಯರು ಹಾಲು-ಮೊಸರು ಕಡೆಯುವ ಸದ್ದು ಅವರಿಗೆ ಕೇಳಿಸಿತಂತೆ. ಅದನ್ನು ಕೇಳಿಸಿಕೊಂಡ ರಾಜರು, ಆ ಶಬ್ದವನ್ನು ಆಧರಿಸಿ ಈ ಊರನ್ನು 'ಹೊನ್ನಿಂಗಳಿಗಿ' ಎಂದು ಕರೆದರಂತೆ.[೭೬]

ಈಗಿನ ಇಂಗಳಗಿ ಗ್ರಾಮವನ್ನು, ಸಂಕಲಾಪುರದ ಕ್ರಿ.ಶ. ೧೫೧೩ರ ಶಾಸನದಲ್ಲಿ 'ಅಂಗುಳಿಕ'ವೆಂದು ಕರೆಯಲಾಗಿದೆ.[೭೭] ಅದು ಕಾಲಕ್ರಮೇಣ ಇಂಗಳಗಿ ಎಂಬ ರೂಪವನ್ನು ಪಡೆದಿದೆ.

**೫೮. ಸಣಾಪುರ**

ಸಣಾಪುರ ಗ್ರಾಮವು ಕಂಪ್ಲಿ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಈ ಗ್ರಾಮದ ಪ್ರಸಿದ್ಧ ವೀರಭದ್ರ ಉದ್ಭವಗೊಂಡ ಬಗೆಗೆ ಐತಿಹ್ಯವೊಂದಿದೆ.

ಮೊದಲು ಈ ಪ್ರದೇಶದಲ್ಲಿ ಜನವಸತಿ ಇರಲಿಲ್ಲ. ಬರೀ ಜಾಲಿ ಮರಗಳಷ್ಟೇ ಇದ್ದವಂತೆ. ಪರ ಊರಿನಿಂದ ಜಾನುವಾರುಗಳನ್ನು ಮಾರಾಟ ಮಾಡುವ ಸಲುವಾಗಿ ಕೆಲಜನರು ಇಲ್ಲಿ

ತಂಗಿದ್ದರಂತೆ. ಅವರು ಸಮೀಪದಲ್ಲಿದ್ದ ಕಲ್ಲುಗಳನ್ನು ಒಲೆಗಳನ್ನಾಗಿ ಮಾಡಿಕೊಂಡು ಅಡುಗೆ ತಯಾರಿಸಿ ಊಟ ಮಾಡಿ ಮಲಗಿದರಂತೆ. ರಾತ್ರಿ ಹೊತ್ತು ಕನಸಿನಲ್ಲಿ ಅವರಿಗೆ 'ವೀರಭದ್ರ' ಕಾಣಿಸಿಕೊಂಡು ಅವರು ಅಡುಗೆ ಮಾಡಲು ಬಳಸಿದ ಕಲ್ಲಿನಲ್ಲಿ ತಾನಿರುವುದಾಗಿಯೂ, ಒಲೆ ಉರಿಸಿ ನನಗೆ ಅನ್ಯಾಯ ಮಾಡಿರುವುದಾಗಿಯೂ ಹೇಳಿದನಂತೆ. ಅದನ್ನು ಕೇಳಿದ ಅವರು ಕಂಗಾಲಾಗಿ ವೀರಭದ್ರನಲ್ಲಿ ನಮ್ಮಿಂದ ತಪ್ಪಾಗಿದೆ, ನಮ್ಮ ತಪ್ಪನ್ನು ಮನ್ನಿಸಬೇಕೆಂದು ಕ್ಷಮೆಯಾಚಿಸಿ, ಮುಂದೆ ಅದೇ ಜಾಗದಲ್ಲಿ ಗರ್ಭಗುಡಿ ಕಟ್ಟಿಸಿ ಆತನನ್ನು ಆರಾಧಿಸಿದರಂತೆ. ಆಮೇಲೆ ಅವರಿಗೆ ಚೆನ್ನಾಗಿ ವ್ಯಾಪಾರ ಕುದುರಿತಂತೆ.[೭೮]

### ೫೯. ಗಡ್ಡದಯ್ಯನ ಗವಿ

ಈ ಗವಿಯು ಕಂಪ್ಲಿ ಹೋಬಳಿಯ ಗ್ರಾಮವಾದ ರಾಮಸಾಗರ ಗ್ರಾಮದ ಹೊರವಲಯದ ಗುಡ್ಡದಲ್ಲಿ ಕಂಡುಬರುತ್ತದೆ. ಈ ಗವಿಯಲ್ಲಿ ಹಿಂದೆ ಗಡ್ಡಧಾರಿ ಸ್ವಾಮಿಯೊಬ್ಬ ವಾಸವಾಗಿದ್ದನಂತೆ. ದೈವಸ್ವರೂಪಿಯಂತಿದ್ದ ಸ್ವಾಮಿಯು ತನ್ನ ದಿವ್ಯ ತೇಜಸ್ಸಿನಿಂದ ಗ್ರಾಮಕ್ಕೆ ಬಂದೊಂದಗಿದ್ದ, ಬಂದೊದಗಬಹುದಾದ ಅನೇಕ ವಿಪತ್ತುಗಳನ್ನು ಪರಿಹರಿಸಿದ್ದನಂತೆ. ಅವನಿಂದಾಗಿಯೇ ಜನ ಇದನ್ನು ಈ ಹೆಸರಿನಿಂದ ಕರೆಯತೊಡಗಿದರೆಂಬ ವಿವರಣೆಯಿದೆ.[೭೯]

### ೬೦. ಉಮಾಮಹೇಶ್ವರ ದೇವಸ್ಥಾನ

ಈ ದೇವಸ್ಥಾನವು ರಾಮಸಾಗರ ಗ್ರಾಮದ ಮುಖ್ಯಬೀದಿಯಲ್ಲಿ ಕಂಡುಬರುತ್ತದೆ. ಈ ದೇವಸ್ಥಾನ ಕುರಿತಾಗಿ ಈ ರೀತಿಯ ಐತಿಹ್ಯವಿದೆ:

ಹಿಂದೆ ವಿಜಯನಗರದಲ್ಲಿ ಅಗರ್ಭ ಶ್ರೀಮಂತ ವ್ಯಕ್ತಿಯೊಬ್ಬ ತನ್ನ ಆಸ್ತಿಯನ್ನು ಕಳ್ಳಕಾಕರಿಂದ ರಕ್ಷಿಸೆಂದು ಹಂಪಿಯ ವಿರೂಪಾಕ್ಷನಲ್ಲಿ ಮೊರೆ ಇಟ್ಟನಂತೆ. ವಿರೂಪಾಕ್ಷನು ಶ್ರೀಮಂತ ವ್ಯಕ್ತಿಗೆ ಅಭಯ ನೀಡಿ ಅವನ ಆಸ್ತಿಯನ್ನು ರಕ್ಷಿಸಿದನಂತೆ. ಇದರಿಂದ ಸಂತುಷ್ಟನಾದ ಆ ವ್ಯಕ್ತಿಯು ವಿರೂಪಾಕ್ಷ ಮತ್ತು ಹಂಪಮ್ಮರ ಪ್ರತಿರೂಪವಾದ ಉಮಾ-ಮಹೇಶ್ವರ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಗುಡಿ ಕಟ್ಟಿಸಿದನೆಂಬ ವಿವರಣೆಯಿದೆ.[೮೦]

### ೬೧. ತಿಮ್ಮಪ್ಪ ದೇವರ ಪಾದ

ಕಂಪ್ಲಿ ಹೋಬಳಿಯ ಗ್ರಾಮವಾದ ಜೀರಿಗನೂರು ಗ್ರಾಮದ ಸ್ಮಶಾನ ಪ್ರದೇಶದಲ್ಲಿ ತಿಮ್ಮಪ್ಪ ದೇವರ ಗುಡಿಯಿದ್ದು, ಅಲ್ಲೇ ಸಮೀಪದ ಬಂಡೆಯ ಮೇಲೆ ಕಿರಿಯ(ಮಗುವಿನ) ಹೆಜ್ಜೆಯ ಗುರುತೊಂದಿದೆ. ಅದನ್ನು 'ತಿಮ್ಮಪ್ಪ ದೇವರ ಪಾದ' ಎಂದು ಕರೆಯಲಾಗುತ್ತದೆ. ಹಿಂದೆ ತಿಮ್ಮಪ್ಪ ದೇವರನ್ನು ದೋಚಲು ಕಳ್ಳಕಾಕರು ಬಂದಾಗ ತಿಮ್ಮಪ್ಪನು ಅವಿತುಕೊಳ್ಳಲು ಓಡಿದಾಗ ಮೂಡಿದ ಹೆಜ್ಜೆ ಗುರುತೆಂದು ಅದನ್ನು ತಿಳಿಯಲಾಗುತ್ತದೆ. ಅಲ್ಲಿಂದ ಓಡಿದ ಆತ ಪಕ್ಕದಲ್ಲಿ ಹರಿಯುತ್ತಿದ್ದ ನೀರಲ್ಲಿ ಅವಿತುಕೊಂಡನೆಂದು ಹೇಳಲಾಗುತ್ತದೆ.[೮೧]

### ೬೨. ಕೋಣ ಕಟ್ಟೋ ಕಲ್ಲು

ಕಮಲಾಪುರ ಹೋಬಳಿಯ ಪಾಪಿನಾಯಕನಹಳ್ಳಿ ಗ್ರಾಮದ ಚಾವಡಿಯ ಹತ್ತಿರ ಈ ಕಲ್ಲು ಕಂಡುಬರುತ್ತದೆ. ಈ ಊರಿನ ಚಾವಡಿಯ ಹತ್ತಿರ ಶಿಲಾಶಾಸನವೊಂದಿದ್ದು ಇದನ್ನು

ಊರಿನ ಜನ 'ಕೋಣ ಕಟ್ಟುವ ಕಲ್ಲು' ಎಂದು ಕರೆಯುತ್ತಾರೆ. ಹಿಂದೆ ಊರಿನ ಗ್ರಾಮದೇವತೆ ಅಂಕಲಮ್ಮನಿಗೆ ಊರ ಜಾತ್ರೆ ಮಾಡುವ ಸಂದರ್ಭದಲ್ಲಿ ಕೋಣವನ್ನು ಬಲಿ ನೀಡುತ್ತಿದ್ದರಂತೆ. ಕೋಣವನ್ನು ಬಲಿ ಕೊಡುವ ಸಂದರ್ಭದಲ್ಲಿ ಈ ಕಲ್ಲಿಗೆ ಕೋಣವನ್ನು ಕಟ್ಟಿ ಬಲಿ ಕೊಡುತ್ತಿದ್ದರಂತೆ.[೮೨]

### ೬೩. ಕೋಟೆ ಆಂಜನೇಯ

ಕೋಟೆ ಆಂಜನೇಯ ದೇವಸ್ಥಾನವು ಕಂಪ್ಲಿಯಲ್ಲಿ ಕಂಡುಬರುತ್ತದೆ. ಈ ಶಿಲ್ಪದ ಬಗೆಗೆ ಐತಿಹ್ಯ ಲಭಿಸುತ್ತದೆ. ಹಿಂದೆ ಹೊಳೆದಂಡೆಯಲ್ಲಿ ಕವುಚಿ ಬಿದ್ದಿದ್ದ ಕಲ್ಲೊಂದರಲ್ಲಿ ಅಗಸರು ಬಟ್ಟೆ ಒಗೆಯುತ್ತಿದ್ದರಂತೆ. ಹೀಗಿರಲೊಂದು ದಿನ ಅಗಸನಿಗೆ ಆತ ಬಟ್ಟೆ ಒಗೆಯುತ್ತಿದ್ದ ಕಲ್ಲಿನ ಅಡಿ ಭಾಗದಲ್ಲಿ ಆಂಜನೇಯ ಉದ್ಭವವಾದಂತೆ ಸ್ವಪ್ನವಾಯಿತಂತೆ. ಅದರಂತೆ, ಮರುದಿನ ತಾವು ಒಗೆಯುತ್ತಿದ್ದ ಕಲ್ಲನ್ನು ಹೊರಳಿಸಿ ನೋಡಲಾಗಿ ಸ್ವಪ್ನದ ಮಾತು ನಿಜವಾಯಿತಂತೆ. ಆಮೇಲೆ ಅದನ್ನು ಸಮೀಪದಲ್ಲೇ ಪ್ರತಿಷ್ಠಾಪಿಸಿ, ಗುಡಿ ಕಟ್ಟಿಸಿ ಪೂಜಿಸಲಾಯಿತಂತೆ.[೮೩]

### ೬೪. ಕಂಪ್ಲಿ ಬಂಡೆ

ಕಮಲಾಪುರ ಹೋಬಳಿಯ ಕಾಕುಬಾಳು ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಬೃಹತ್ತಾದ ಹಾಸು ಬಂಡೆ ಕಂಡುಬರುತ್ತದೆ. ಇದನ್ನು ಸ್ಥಳೀಯರು 'ಕಂಪ್ಲಿ ಬಂಡೆ' ಎಂದು ಕರೆಯುತ್ತಾರೆ. ಕುಮ್ಮಟದ ದೊರೆ ಕಂಪಿಲರಾಯನು ತನ್ನ ಸೇನೆಯೊಡನೆ ಬೀಡುಬಿಡುತ್ತಿದ್ದ ಸ್ಥಳ ಇದಾಗಿತ್ತೆಂದು ತಿಳಿದುಬರುತ್ತದೆ.[೮೪] ಈ ಸ್ಥಳದಲ್ಲಿ ಬೀಡುಬಿಟ್ಟು ಮುಂದೆ ರಾಮಮಲೆದುರ್ಗ ಮತ್ತು ಕುಮ್ಮಟ ದುರ್ಗಗಳಿಗೆ ಪ್ರಯಾಣಿಸುತ್ತಿದ್ದರೆಂಬ ಮಾಹಿತಿ ಸಿಗುತ್ತದೆ.[೮೫]

### ೬೫. ಸಪ್ತ ಸ್ವರಗಳ ಕಂಬಗಳು

ವಿಜಯವಿಠ್ಠಲ ದೇವಸ್ಥಾನದ ಮಹಾಮಂಟಪದಲ್ಲಿ ಈ ಕಂಬಗಳು ಕಂಡುಬರುತ್ತವೆ. ಈ ಮಹಾಮಂಟಪವನ್ನು ೫೬ ಬೃಹತ್‌ಕಲ್ಲಿನ ಕಂಬಗಳಿಂದ ನಿರ್ಮಿಸಲಾಗಿದೆ. ಅದರಲ್ಲಿ ಕೆಲವನ್ನು ಒಂದು ಕಂಬದಲ್ಲಿ ೧೬ ಕಂಬಗಳು ಬರುವಂತೆ ಕೆತ್ತಲಾಗಿದೆ. ಒಂದೇ ಕಂಬದಲ್ಲಿ ಬರುವ ಹದಿನಾರು ಕಂಬಗಳಲ್ಲಿ ಕೆಲವನ್ನು ಬೆರಳಿನಿಂದ ಬಾರಿಸಿದಾಗ ಸಂಗೀತದ ಸಪ್ತ ಸ್ವರಗಳ ಧ್ವನಿ ಹೊರಡುವಂತೆ ನಿರ್ಮಿಸಿರುವುದು ಅಂದಿನ ಶಿಲ್ಪಿಗಳ ಜಾಣ್ಮೆಯ ಪ್ರತೀಕವಾಗಿದೆ. ಮಹಾಮಂಟಪದಲ್ಲಿ ನಡೆಯುತ್ತಿದ್ದ ಧಾರ್ಮಿಕ ಕ್ರಿಯೆಗಳ ಸಮಯದಲ್ಲಿ ಇವುಗಳ ಬಳಕೆ ಆಗುತ್ತಿತ್ತೆಂಬ ಮಾಹಿತಿ ಸಿಗುತ್ತದೆ.

### ೬೬. ಕುಮಾರರಾಮ ಜಲಪಾತ

ಕಮಲಾಪುರ ಹೋಬಳಿಯ ಬುಕ್ಕಸಾಗರ ಗ್ರಾಮದ ಕಾದಿಟ್ಟ ಅರಣ್ಯ ಪ್ರದೇಶದಲ್ಲಿ ಈ ಜಲಪಾತ ಕಂಡುಬರುತ್ತದೆ. ಕುಮಾರರಾಮನು ಕುಮ್ಮಟದುರ್ಗದಿಂದ ಬರಗಾಲ ಸಮಯದಲ್ಲಿ ತನ್ನ ಪ್ರಜೆಗಳು, ಸಾಕು ಪ್ರಾಣಿಗಳೊಂದಿಗೆ ಮೇವು ಹುಡುಕಿಕೊಂಡು ಸಂಡೂರಿನ ರಾಮಗಡಕ್ಕೆ ಹೋಗುವ ಸಮಯದಲ್ಲಿ ಈ ಜಲಪಾತವನ್ನು ಕಂಡನೆಂಬ ಐತಿಹ್ಯವಿದೆ. ಹಾಗಾಗಿ ಈ ಜಲಪಾತಕ್ಕೆ ಸ್ಥಳೀಯರು 'ಕುಮಾರರಾಮ ಜಲಪಾತ'[೮೬] ಎಂದು ಕರೆಯುತ್ತಾರೆ.

ಇಲ್ಲಿ ಕಲ್ಲು ಬಂಡೆಗಳೇ ಹೆಚ್ಚಾಗಿರುವುದರಿಂದ ಮಳೆಗಾಲದಲ್ಲಿ ಬಿದ್ದ ನೀರು ಹಲವು ತೊರೆಗಳಾಗಿ ಹರಿದು ಒಂದೆಡೆ ಸೇರುತ್ತದೆ. ಹೀಗೆ ಸೇರಿದ ನೀರು ತಗ್ಗಿನ ಪ್ರದೇಶದ ಕಡೆ ರಭಸದಿಂದ ಬಂದು ನೈಸರ್ಗಿಕವಾಗಿ ಜಲಪಾತ ಸೃಷ್ಟಿಯಾಗಿದೆ.

## ೩.೧. ಪವಾಡಗಳು

ಪವಾಡವನ್ನು ಇಂಗ್ಲೀಷಿನಲ್ಲಿ 'ಮಿರಾಕಲ್' ಎನ್ನುತ್ತಾರೆ. 'ಮಿರಾಕಲ್' ಲ್ಯಾಟಿನ್ ಭಾಷೆಯ 'ಮಿರಾಕುಲಮ್'ನಿಂದ ಬಂದಿದೆ. ಇದಕ್ಕೆ 'ಆಶ್ಚರ್ಯಕರ ಘಟನೆ', 'ಅತಿಮಾನುಷ ಕಾರ್ಯ' ಅನ್ನುವುದು ಸಾಮಾನ್ಯ ಅರ್ಥ. ಅಂದರೆ ಇಲ್ಲಿ ಹೇಳುವುದು ಮತ್ತು ಹೇಳಿದ್ದನ್ನು ಮಾಡಿ ತೋರಿಸುವುದು ಎರಡೂ ಕೆಲಸಗಳನ್ನು 'ಪವಾಡ' ಮಾಡುವವರು ಮಾಡಬೇಕಾಗುತ್ತದೆ.

ಪವಾಡಗಳ ಬಗೆಗೆ ಇರುವ ಆಸಕ್ತಿ ಹಾಗೂ ನಂಬಿಕೆಗಳು ಅತ್ಯಂತ ಪ್ರಾಚೀನವಾದವು. ಹಾಗೆಯೇ ಪವಾಡಗಳನ್ನು ಮಾಡಿ ಜನರಲ್ಲಿ ಆಸಕ್ತಿ ಮತ್ತು ನಂಬಿಕೆಗಳನ್ನು ಹುಟ್ಟಿಸುವ ಉತ್ತಮ ವ್ಯಕ್ತಿಗಳ ಪರಂಪರೆ ಕೂಡಾ ಪ್ರಾಚೀನವಾದದ್ದು. ಮೊದಮೊದಲು ಮಾಟ-ಮಂತ್ರಗಳನ್ನು ಮಾಡುತ್ತಾ, ಆದಿಕಾಲದ ಮಾನವ ಸಮಾಜವನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡ ಪೂಜಾರಿ ಮಾಂತ್ರಿಕ ವರ್ಗ, ಕಾಲ-ಕ್ರಮೇಣ ಧಾರ್ಮಿಕ ನಾಯಕರಿಂದ, ಸಾಧು-ಸಂತರಿಂದ ಅವರ ತತ್ವ-ಸಾಮರ್ಥ್ಯಗಳ ಕಾರಣದಿಂದ ಹಿಂದಕ್ಕೆ ಹೋಯಿತೆಂಬುದಾಗಿ ತಿಳಿದುಬರುತ್ತದೆ. ಯಾವ ವ್ಯಕ್ತಿಗಳು ಮುಖ್ಯವಾಗಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದಾರೋ ಅವರು, ಮೂಲತಃ ತಮ್ಮ ಅಪೌರುಷೇಯ ಎಂಬಂತಹ ಆತ್ಮ, ಶಕ್ತಿ-ಸಾಮರ್ಥ್ಯಾದಿಗಳ ಪ್ರದರ್ಶನದಿಂದ, ಜನರಿಗೆ ತಮ್ಮ ವ್ಯಕ್ತಿತ್ವದ ಮಹತ್ವವನ್ನು ಪ್ರಕಟಿಸುತ್ತಾ, ತಾವು ಹೇಳಲಿರುವ ತತ್ವ ಅಥವಾ ಉಪದೇಶಗಳ ಬಗ್ಗೆ ಜನರ ಶ್ರದ್ಧೆ, ಆಸಕ್ತಿಗಳನ್ನು ಉತ್ತೇಜಿಸಲು, ನಡೆಯಿಸಿ ತೋರಿಸಿದ ಅಘಟಿತ ಘಟನೆಗಳೆ 'ಪವಾಡ'ಗಳು ಎಂದು ಹೇಳಬಹುದು.

ಪವಾಡಗಳ ಉಲ್ಲೇಖ ಜಗತ್ತಿನ ಎಲ್ಲ ಭಾಷೆಯ ಸಾಹಿತ್ಯದಲ್ಲೂ, ಬಹು ಹಿಂದಿನಿಂದ ಇಂದಿನವರೆಗೆ ಕಾಣಿಸಿಕೊಳ್ಳುತ್ತವೆ. ಅದರಲ್ಲಿಯೂ ಧಾರ್ಮಿಕ ಮಹಾವ್ಯಕ್ತಿಗಳನ್ನು ಕುರಿತ ಕಥನಗಳಲ್ಲಿ ಇವು ಸಮೃದ್ಧವಾಗಿವೆ. ಜನರ ಕಷ್ಟ, ಸಂಕಟಗಳನ್ನು ನಿವಾರಿಸಲು, ತಮ್ಮ ವ್ಯಕ್ತಿ ಮಹಿಮೆಯನ್ನು ಪ್ರಕಟಪಡಿಸಲು, ಇಂಥ ಮಹಾವ್ಯಕ್ತಿಗಳು ಮಾಡಿ ತೋರಿಸಿದ ಹೆಚ್ಚಿನ ಗುಣ ಸಾಮರ್ಥ್ಯಗಳು 'ಪವಾಡ'ಗಳೆಂದು ನಿರೂಪಿತವಾಗಿವೆ. ಇಲ್ಲಿ ಮುಖ್ಯವಾಗಿ ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ವ್ಯಕ್ತಿಗಳನ್ನು ಮಾತ್ರ ಉದ್ದೇಶಿಸಿ, ಅವರ ಬಗೆಗಿನ ಚಿಂತನೆಗಳನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಏಕೆಂದರೆ, ಪವಾಡಗಳನ್ನು ಮಾಡಿದವರೆಂದು ಹೇಳಲಾಗಿರುವವರೆಲ್ಲ ಬಹುಮಟ್ಟಿಗೆ ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಪಟ್ಟವರಾಗಿದ್ದಾರೆ.

ಕನ್ನಡ ಭಾಷೆಯ ಮಟ್ಟಿಗೆ ಹೇಳುವುದಾದರೆ, ಪವಾಡಗಳು ದಾಖಲಾಗಿರುವುದು ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಕೆಲವರನ್ನು ಕುರಿತು ರಚಿತವಾಗಿರುವ ಕೃತಿ ಪರಂಪರೆಯಲ್ಲಿ. ಹನ್ನೆರಡನೆಯ ಶತಮಾನದ ನಂತರದ ಕವಿಗಳು ಚಾರಿತ್ರಿಕ ವ್ಯಕ್ತಿಗಳನ್ನು ತಮ್ಮ ಕೃತಿಯ

ಕಥಾನಾಯಕರನ್ನಾಗಿ ಯಾವಾಗ ಮಾಡಿಕೊಂಡರೋ, ಆಗ ಆ ವ್ಯಕ್ತಿಗಳನ್ನು ದೈವಾಂಶ ಸಂಭೂತರೆಂದೋ, ಅಲೌಕಿಕ ಮಹಿಮಾಶಾಲಿಗಳೆಂದೋ ವೈಭವೀಕರಿಸುವ ಉದ್ದೇಶದಿಂದ. ಅವರು ಅನೇಕ ಪವಾಡಗಳನ್ನು ಮಾಡಿದರೆಂಬಂತೆ ಕತೆಯನ್ನು ಕಲ್ಪಿಸಿದ್ದಾರೆ. ಇದಕ್ಕೆ ನಮ್ಮ ನಾಡಿನ ಕವಿಗಳಿಗೆ ಇರುವ ಚಾರಿತ್ರಿಕ ಪ್ರಜ್ಞೆಯ ಅಭಾವ ಒಂದು ಕಡೆಯಾದರೆ, ಜನಸಾಮಾನ್ಯರಿಗೆ ಪವಾಡಗಳ ಬಗೆಗೆ ಇರುವ ವಿಲಕ್ಷಣವಾದ ಆಸಕ್ತಿಯೂ ಒಂದು ಕಾರಣವೆನ್ನಬಹುದು. ಯಾವುದೇ ಮಹಾವ್ಯಕ್ತಿಯನ್ನು ಅವನಲ್ಲಿರಬಹುದಾದ ಶ್ರೇಷ್ಠ ಮಾನವೀಯ ಮೌಲ್ಯಗಳ ಕಾರಣಗಳಿಗಾಗಿ ಗೌರವಿಸುವುದಕ್ಕಿಂತ, ಅವನ ಅಲೌಕಿಕ ಅಪೌರುಷೇಯವೆಂಬಂಥ ಸಾಮರ್ಥ್ಯಗಳಿಗಾಗಿ ಮೆಚ್ಚಿಕೊಳ್ಳುವುದು ಎಲ್ಲ ಕಾಲದ ಜನಸಮೂಹಕ್ಕಿರುವ ದೌರ್ಬಲ್ಯವೋ, ಲಕ್ಷಣವೋ ಆಗಿದೆ.

ಕ್ಯಾಥೋಲಿಕ್ ಸಂಪ್ರದಾಯದಲ್ಲಿ ಒಂದು ಕಾಲಕ್ಕೆ ಸಂತರಾಗಬೇಕಾದರೆ ಅವರು ಪವಾಡಗಳನ್ನು ಮಾಡಿರಲೇಬೇಕೆಂಬ ನಿಯಮವಿತ್ತು. ಪ್ರಪಂಚದ ಬಹಳಷ್ಟು ಕಡೆ ಪವಾಡ ಪುರುಷರೆನಿಸಿ ಕೊಂಡವರೆಲ್ಲ ಸಂತರೋ, ಮಹಾತ್ಮರೋ, ಅಸಾಮಾನ್ಯರೋ ಆಗಿದ್ದು, ಇದರಲ್ಲಿ ಧರ್ಮ ಪ್ರಚಾರಕರೂ ಸೇರಿಕೊಳ್ಳುತ್ತಾರೆ. ಇದರಿಂದ ಸಾಮಾನ್ಯ ಮನುಷ್ಯ ಪವಾಡ ಪುರುಷನಾಗಲಾರನೆಂದೂ ಆಧ್ಯಾತ್ಮಿಕ ಬಲವುಳ್ಳ ಅಸಾಮಾನ್ಯರಿಂದ ಮಾತ್ರ ಪವಾಡಗಳು ಸಾಧ್ಯವಾಗಿವೆ ಎಂಬುದನ್ನು ತಿಳಿಯಬಹುದು. ಸಾಮಾನ್ಯ ಜನವರ್ಗಕ್ಕೆ ಪವಾಡಗಳನ್ನು ಮೆರೆಯದ ಧಾರ್ಮಿಕ ಮುಖಂಡ ತೀರಾ ಸಪ್ಪೆಯಾಗಿ ಕಾಣಿಸುತ್ತಾನೆ.

ವ್ಯಕ್ತಿ-ಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವುದು, ಮಹಾವ್ಯಕ್ತಿ ಎಂಬ ಕಲ್ಪನೆಯನ್ನು ಜನರಲ್ಲಿ ಮೂಡಿಸುವುದು, ದೇವರ ಇರುವಿಕೆಯ ಅರಿವನ್ನುಂಟು ಮಾಡುವುದು, ಧರ್ಮ ಅಥವಾ ಮತ ಪ್ರಚಾರಕ್ಕೆ ಬಳಸಿಕೊಳ್ಳುವುದು, ಜನರಲ್ಲಿ ನಂಬಿಕೆಯನ್ನು ಹುಟ್ಟಿಸುವುದು, ದುಷ್ಟರಿಗೆ ಭಯ ಹುಟ್ಟಿಸಿ ಸನ್ಮಾರ್ಗಕ್ಕೆ ತರುವುದು, ಸಮಾಜವನ್ನು ತಿದ್ದುವುದು ಮತ್ತು ಉದ್ಧರಿಸುವುದು ಪವಾಡಗಳ ಮುಖ್ಯ ಉದ್ದೇಶಗಳಾಗಿವೆ.

ಪವಾಡಗಳ ಸ್ವರೂಪದ ಬಗ್ಗೆ ಹೇಳುವಾಗ, ಕೆಲವೊಮ್ಮೆ ಅವುಗಳು ಹೇಗೆ ಜರುಗುತ್ತವೆ, ಅದರಲ್ಲಿ ಪವಾಡಪುರುಷನ ಪಾತ್ರವೆಷ್ಟು ಇತ್ಯಾದಿ ವಿಚಾರಗಳೂ ಮುಖ್ಯವಾಗುತ್ತವೆ. ಈ ದೃಷ್ಟಿಯಿಂದ ಪವಾಡಗಳನ್ನು ನಾಲ್ಕು ರೀತಿಯಾಗಿ ವರ್ಗೀಕರಿಸಬಹುದು.

೧. ಪ್ರತ್ಯಕ್ಷ ರೂಪದ ಪವಾಡಗಳು

೨. ಪರೋಕ್ಷ ರೂಪದ ಪವಾಡಗಳು

೩. ಭಕ್ತಿ ಮೂಲದ ಪವಾಡಗಳು

೪. ಸಂಕೀರ್ಣ ರೂಪದ ಪವಾಡಗಳು

**ಪ್ರತ್ಯಕ್ಷ ರೂಪದ ಪವಾಡಗಳು:-** ಇಂತಹ ಪವಾಡಗಳಲ್ಲಿ ಪುರುಷ ತಾನೇ ಅದ್ಭುತಗಳನ್ನು ಸೃಷ್ಟಿಸುವ ಕೇಂದ್ರಶಕ್ತಿಯಾಗಿರುತ್ತಾನೆ. ಕೃತಕ ಜಂಗಮರು ಕಟ್ಟಿಕೊಂಡು ಬಂದಿದ್ದ ಬದನೇಕಾಯಿ ಯನ್ನು ಬಸವಣ್ಣ ಲಿಂಗ ಮಾಡಿದ್ದು; ಯೇಸು ಐದುರೊಟ್ಟಿ, ಎರಡು ಮೀನುಗಳಿಂದ ತನ್ನ

ಐದು ಸಾವಿರ ಶಿಷ್ಯರಿಗೆ ಊಟ ಮಾಡಿಸಿದ್ದು; ರಾಘವೇಂದ್ರ ಸ್ವಾಮಿಗಳು ನವಾಬ ಕಳುಹಿಸಿದ್ದ ಮಾಂಸವನ್ನು ಹೂಗಳಾಗಿ ಮಾರ್ಪಡಿಸಿದ್ದು... ಇತ್ಯಾದಿ ಪವಾಡಗಳಲ್ಲಿ ಪವಾಡ ಪುರುಷನೇ ಘಟನೆಯ ಮುಖ್ಯ ಬಿಂದುವಾಗಿರುತ್ತಾನೆ.

**ಪರೋಕ್ಷ ರೂಪದ ಪವಾಡಗಳು:-** ಈ ರೀತಿಯ ಪವಾಡಗಳಲ್ಲಿ ಪವಾಡ ಪುರುಷ ನೇರವಾಗಿ ಘಟನೆಯಲ್ಲಿ ಪಾಲ್ಗೊಳ್ಳದೆ ತನ್ನ ಪವಾಡ ಶಕ್ತಿಯಿಂದಲೇ ಕುಳಿತಲ್ಲಿಂದ ದೂರದ ಸ್ಥಳವೊಂದರಲ್ಲಿ ಏನು ನಡೆಯುತ್ತದೆಂಬುದನ್ನು ತಿಳಿಯಬಲ್ಲ. ದೂರ ವಸ್ತುಗಳ ಮೇಲೆ ಹತೋಟಿ ಸಾಧಿಸಬಲ್ಲ. ಇದನ್ನು 'ಪರೋಕ್ಷ ರೂಪದ ಪವಾಡಗಳು' ಎಂದು ಕರೆಯಬೇಕಾಗುತ್ತದೆ. ಹರಿಹರ ಕವಿ ದೋರಸಮುದ್ರದಲ್ಲಿದ್ದುಕೊಂಡು ಕೈ ಬೀಸುತ್ತಾ ದೂರದ ಹಂಪೆಯ ವಿರೂಪಾಕ್ಷನ ಗುಡಿಯಲ್ಲಿ ಹೊತ್ತಿ ಉರಿಯುತ್ತಿದ್ದ 'ಬೆಂಕಿ'ಯನ್ನು ನಂದಿಸುವುದು, ಕಲ್ಯಾಣದ ಬೀದಿಯಲ್ಲಿ ಹಾಲು ಮಾರುವ ಬಾಲಕಿ ಕಾಲು ಜಾರಿ ಬೀಳುತ್ತಿರುವಾಗ 'ಬಸವಾ' ಎಂದೊಡನೆ ಬಸವಣ್ಣ ಮನೆಯಲ್ಲಿದ್ದುಕೊಂಡೇ ಬೀಳದಂತೆ ಮಾಡಿ ರಕ್ಷಿಸಿದ್ದು, ಇಂಥ ಮಾದರಿಯವು.

**ಭಕ್ತಿ ಮೂಲದ ಪವಾಡಗಳು:-** ಭಕ್ತನೊಬ್ಬನ ಮುದಿ ಎತ್ತುಗಳು ಕೆರೆಯೊಂದರಲ್ಲಿ ನೀರು ಕುಡಿದು ಕತ್ತೆತ್ತುವುದರೊಳಗಾಗಿ ಆಶ್ಚರ್ಯಕರ ರೀತಿಯಲ್ಲಿ ಎಳೆಯ ಕರುಗಳಾಗುವುದು, ನೀರಿನಲ್ಲಿ ಮುಳುಗಿ ಮೇಲೆದ್ದ ವಯಸ್ಸಾದ ದಂಪತಿಗಳು ಕೂಡಲೇ ನಡುವಯಸ್ಕರಾಗಿ ಹೊರಬರುವುದು, ರೋಗ-ರುಜಿನಗಳಿಗೆ ತುತ್ತಾಗಿ ತನ್ನ ಅಂತಿಮ ದಿನಗಳಿಗೆ ಹತ್ತಿರವಾಗಿದ್ದ ವ್ಯಕ್ತಿ ಇದ್ದಕ್ಕಿದ್ದಂತೆ ರೋಗ ಮುಕ್ತನಾಗುವುದು - ಈ ತೆರನಾದ ಪವಾಡಗಳು ಭಕ್ತನ ಭಕ್ತಿಗೆ ಸಂದಂತಹವುಗಳು. ಭಕ್ತನ ಭಕ್ತಿಯೇ ಪವಾಡ.

**ಸಂಕೀರ್ಣರೂಪದ ಪವಾಡಗಳು:-** ಇವು ಮಾನವ ಪ್ರವೇಶದಿಂದ ಹೊರತುಪಡಿಸಿ ನಡೆವ ಪವಾಡಗಳು. ಅಂದರೆ ದೇವರು ಇಲ್ಲವೇ ದೇವರಶಕ್ತಿ ವಸ್ತುಗಳ ಮೂಲಕವೋ, ಸ್ಥಳದಲ್ಲೋ, ಗುಪ್ತ ರೂಪದಲ್ಲಿ ಅಡಗಿಕೊಂಡು ಘಟನೆಗೆ ಕಾರಣೀಭೂತವಾಗುವುದು. ಇವನ್ನು 'ಪರಿಸರ ಸಂಬಂಧಿ' ಪವಾಡಗಳು ಎಂದೂ ಕರೆಯಬಹುದು. ಕುಮಾರರಾಮನ ಬೊಲ್ಲಕುದುರೆ, ಬೇವಿನಮರದಲ್ಲಿ ಸಿಹಿ ಹಾಲು ಸುರಿಯುವುದು, ಕಲ್ಲಿನ ಗಣಪ ಹಾಲು ಕುಡಿಯುವುದು, ಕಲ್ಲಿನಲ್ಲಿ ಉದ್ಭವ ಗಣಪ ಮೂಡುವುದು, ಕೊಳದ ನೀರು ಸರ್ವರೋಗಗಳಿಗೆ ಮದ್ದಾಗಿ ಪರಿಣಮಿಸಿ ಬಿಡುವುದು.

ಎಷ್ಟೋ ವರ್ಣಿತವಾದ 'ಪವಾಡ'ಗಳು ನಡೆದಂಥ ವಾಸ್ತವ ಸಂಗತಿಗಳಿಗೆ ಕೊಟ್ಟ ಅತಿಶಯವಾದ ರೂಪಗಳೋ, ಸಂಕೇತ ಪ್ರತೀಕಗಳೋ, ಉದ್ದೇಶಪೂರ್ವಕವಾಗಿ ಹೊಸೆದು ಸೇರಿಸಿದ ಪವಾಡಗಳೋ ಆಗಿರುವುದುಂಟು. ಈ ಪವಾಡಗಳಲ್ಲಿ ಆರೋಗ್ಯಕರವಾದವು ಮತ್ತು ಅನಾರೋಗ್ಯಕರವಾದವುಗಳೂ ಇವೆ. 'ಪವಾಡ' ಮಾಡುವವರು ಅಸಾಧಾರಣ ಮಹಿಮಾವಂತರೂ, ಲೋಕಾನುಕಂಪೆಯುಳ್ಳವರೂ, ಜನರನ್ನು ಸನ್ಮಾರ್ಗದಲ್ಲಿ ನಡೆಯಿಸುವವರೂ ಆಗಿದ್ದರೆಂಬುದನ್ನು ನಾವು ತಿಳಿಯಬೇಕು.

'ಪವಾಡ' ಪುರುಷರು ಮಾಡಿದರೆನ್ನಲಾದ ಪವಾಡಗಳಲ್ಲಿ ಸ್ವಾರ್ಥವಾಗಲಿ, ಮಂತ್ರವಿದ್ಯೆಗಳಲ್ಲಿರುವಂತೆ ಮಾಟದ ಅಂಶವಾಗಲಿ, ವ್ರತಾಚರಣೆಯ ನಿಯಮ, ನಿಬಂಧನೆಗಳಾಗಲೀ ಇರುವುದಿಲ್ಲ. ಧಾರ್ಮಿಕ ಪುರುಷರ ಹೆಚ್ಚಿನ ಪವಾಡಗಳೆಲ್ಲಾ ಮಕ್ಕಳಿಲ್ಲದವರಿಗೆ ಸಂತಾನ ಕೊಡುವುದು. ಕಾಯಿಲೆ ವಾಸಿ ಮಾಡುವುದು, ಸಾವಿನಿಂದ ಉಳಿಸುವುದು, ಮಳೆ ತರಿಸುವುದು. ಬರಗಾಲ ಓಡಿಸುವುದು, ದೆವ್ವ, ಪೀಡೆ-ಪಿಶಾಚಿಗಳಿಂದ ರಕ್ಷಿಸುವುದು, ನಂಬಿದ ಶುದ್ಧ ಮನಸ್ಸಿನ ಭಕ್ತರ ಬಡತನ ನಿವಾರಿಸುವುದು, ತನ್ನನ್ನು ನಿಂದಿಸಿದವರಿಗೆ ಕಡುಕಷ್ಟ ಕೊಡುವುದು - ಇತ್ಯಾದಿಗಳು ಭಕ್ತರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳಿಗೆ ಸಂಬಂಧಿಸಿದವುಗಳಾಗಿವೆ. 'ಪವಾಡಗಳು' ನಂಬಿಕೆಯನ್ನು ಒಳಗೊಂಡ ತಾರ್ಕಿಕತೆಯನ್ನು ಮೀರಿದ ಕ್ರಿಯೆಗಳಾಗಿ ಕಾಣಿಸಿಕೊಂಡಿವೆ. 'ಪವಾಡಗಳು' ಸಮುದಾಯದ ನಂಬಿಕೆಗಳನ್ನು ಆಧರಿಸಿರುವುದರಿಂದ ಅಂತಿಮವಾಗಿ ಅವು ಜೀವಪರ ಧೋರಣೆಯನ್ನು ಹೊಂದುವುದರಿಂದ ಸಮುದಾಯಗಳು ತಾರ್ಕಿಕತೆಯನ್ನು ಬೆಳೆಸದೆ ನಂಬುತ್ತವೆ.

'ಪವಾಡ ಪುರುಷ'ರನ್ನು ದೈವತ್ವಕ್ಕೇರಿಸುವ ಇನ್ನೊಂದು ಧಾರ್ಮಿಕ ಪ್ರಕ್ರಿಯೆಯೆಂದರೆ 'ಭವಿಷ್ಯ' ಹೇಳುವುದು. ಮುಂದೆ ಘಟಿಸಬಹುದಾದ ಘಟನೆಯನ್ನು, ವಸ್ತುವಿಷಯವನ್ನು ತಮ್ಮ ದಿವ್ಯದೃಷ್ಟಿಯ ಮುಖಾಂತರ ಹೇಳುವುದು. ಹಾಗೆಯೇ ಅವರ ಹುಚ್ಚು ಅಥವಾ ವಿಚಿತ್ರ ಘಟನೆಗಳನ್ನು ಮುಂದೆ ಘಟಿಸಬಹುದಾದ ಘಟನೆಗಳ ಸೂಚನೆಯೆಂದು ಭಾವಿಸುತ್ತಾರೆ. ಪವಾಡ ಪುರುಷರ ಇನ್ನೊಂದು ಭಾಗವೆಂದರೆ ಅವರ ವಿಚಿತ್ರ ವರ್ತನೆಗಳದ್ದು. ತಮ್ಮ ಹುಚ್ಚಿನ ಮೂಲಕ ಅವರು ಮಾಡಿದ ಚಟುವಟಿಕೆಗಳು ಅವರ ಜನಪ್ರಿಯತೆಯನ್ನು ಹೆಚ್ಚಿಸಿವೆ. ದೈವಿಕವಾದ ಈ ಹುಚ್ಚಿನ ಸ್ಥಿತಿಯಲ್ಲಿ ಅವರು ಧಾರ್ಮಿಕ, ಸಾಮಾಜಿಕ ಶಿಷ್ಟಾಚಾರಗಳನ್ನು ಮೀರಿ ನಿರಂಕುಶ ಮತಿಗಳಾಗಿ ದಾರ್ಶನಿಕ ಸ್ಥಿತಿಯನ್ನು ಪಡೆಯುತ್ತಿದ್ದರು.

ಪವಾಡಗಳಂತಹ ಸಿದ್ಧಿಯನ್ನು ಧಾರ್ಮಿಕ(ಪವಾಡ ಪುರುಷರು) ಪುರುಷರು ತಮ್ಮ ಹಠ ಯೋಗದಂತಹ ಸಾಧನೆಯಿಂದ ಪಡೆದುಕೊಂಡು ತಮ್ಮ ಅಂತಃಪ್ರೇರಣಾನುಗುಣವಾಗಿ ಎಲ್ಲಿ ಅವಶ್ಯಕವೆನಿಸುವುದೋ ಅಲ್ಲೆಲ್ಲಾ ಪ್ರಯೋಗಿಸುತ್ತಿದ್ದರು. ಡಂಭಾಚಾರಕ್ಕೆ, ಜಂಭಕ್ಕೆ, ಜೋರು, ಅಹಂಕಾರಗಳಿಗೆ, ದೊಡ್ಡಸ್ತಿಕೆಗೆ ಈ ಶಕ್ತಿಯನ್ನು ಪ್ರಯೋಗಿಸುತ್ತಿರಲಿಲ್ಲ. ಈ ಶಕ್ತಿ ಪರಮಾತ್ಮನಿಂದಲೇ ಪ್ರಾಪ್ತವಾದುದೆಂದು, ಲೋಕಕಲ್ಯಾಣಕ್ಕೆ, ಜನಹಿತಕ್ಕೆ ತಮ್ಮ ಕರ್ಮ ಮತ್ತು ದಕ್ಷತೆಗಳಿಗೆ ಅನುಗುಣವಾಗಿ ಉಪಯೋಗಿಸಿ ಮಹಾತ್ಮರಾಗಿದ್ದಾರೆ. ಅಂದರೆ ಪವಾಡ ಮಾಡುವವರೆಲ್ಲಾ ಮಹಾತ್ಮರಲ್ಲ. ಲೋಕಕಲ್ಯಾಣಕ್ಕೆ ತಮ್ಮ ಶಕ್ತಿ, ಸಾಮರ್ಥ್ಯವನ್ನು ಪವಾಡಗಳ ಮುಖಾಂತರ ವಿನಿಯೋಗಿಸುವವರು ಮಾತ್ರ ಮಹಾತ್ಮರು.

**೧. ಚಂದ್ರಶೇಖರ ಸ್ವಾಮಿಗಳ ಪವಾಡ**

ಕಮಲಾಪುರ ಹೋಬಳಿಯ ಗುಂಡ್ಲುವದ್ದಿಗೇರಿ ಗ್ರಾಮದಲ್ಲಿ ಚಂದ್ರಶೇಖರ ಸ್ವಾಮಿ ಎಂಬ ಪವಾಡ ಪುರುಷರು ೨೦೦ ವರ್ಷಗಳ ಹಿಂದೆ ಬೇರೆಡೆಯಿಂದ ಈ ಗ್ರಾಮಕ್ಕೆ ಬಂದು ಊರಿನ ಆಂಜನೇಯ ಕಟ್ಟೆಯ ಮೇಲೆ ಕುಳಿತಿದ್ದರು. ಊರಗೌಡರಾದ ಮಲ್ಲನಗೌಡರು ನಿಮ್ಮಂಥ

ಸನ್ಯಾಸಿಗಳು ಆ ಕಟ್ಟೆಯ ಮೇಲೆ ಕೂಡಬಾರದೆಂದು ಗದರಿಸಿ ಅಲ್ಲಿಂದ ಇಳಿಯಲು ಹೇಳಿದರು. ಹಾಗೆ ಅಲ್ಲಿಂದ ಕೆಳಗಿಳಿದ ಅವರು ಊರ ಸಮೀಪದ ಗುಡ್ಡದ ತುದಿಯಲ್ಲಿ ಹೋಗಿ ಕುಳಿತರು. ಇದರಿಂದ ಆ ಊರಲ್ಲಿ ಅನೇಕ ಅವಘಡಗಳು ಉಂಟಾದವು. ಬೆಳೆದ ಬೆಳೆಗಳೆಲ್ಲಾ ಒಣಗಲಾರಂಭಿಸಿದವು. ದನ-ಕರುಗಳು ಮೇವಿಲ್ಲದೆ ಸೊರಗಲಾರಂಭಿಸಿದವು. ಜನ ಸಾಂಕ್ರಮಿಕ ರೋಗಗಳಿಂದ ತತ್ತರಿಸತೊಡಗಿದರು. ಈ ರೀತಿಯ ಬೆಳವಣಿಗೆಗೆ ಕಾರಣವೇನೆಂದು ಚಿಂತಿಸತೊಡಗಿದ ಊರಗೌಡರು ತಾವು ಅವಮಾನಿಸಿದ್ದ ಸನ್ಯಾಸಿಯಿಂದ ಈ ರೀತಿಯ ಬೆಳವಣಿಗೆ ಆಗಿರಬಹುದೆಂಬುದನ್ನು ಮನಗಂಡರು. ಆಗ ಚಂದ್ರಶೇಖರ ಸ್ವಾಮಿಗಳ ಮಹಾತ್ಮೆ ಅರಿವಾಗಿ, ಊರವರೆಲ್ಲಾ ಸೇರಿ ತಮ್ಮ ತಪ್ಪನ್ನು ಮನ್ನಿಸಿ ಬೆಟ್ಟದಿಂದ ಇಳಿಯುವಂತೆ ಮತ್ತು ಊರಲ್ಲಿ ಬಂದು ನೆಲೆಸಬೇಕೆಂದು ಪರಿ, ಪರಿಯಾಗಿ ಕೇಳಿಕೊಂಡರು. ಇದರಿಂದ ಪ್ರಸನ್ನರಾದ ಸ್ವಾಮಿಗಳು ಬೆಟ್ಟದಿಂದ ಕೆಳಗಿಳಿದು ಊರನ್ನು ಪ್ರವೇಶಿಸಿದರು. ಅವರ ಪವಾಡದಿಂದಾಗಿ ಊರು ಮತ್ತೆ ಯಥಾಸ್ಥಿತಿಗೆ ಬಂದಿತು. ಇದರಿಂದ ಹರುಷಗೊಂಡ ಗ್ರಾಮಸ್ಥರು, ಸ್ವಾಮಿಗಳ ವಾಸಕ್ಕಾಗಿ ಮತ್ತು ತಪಸ್ಸು ಮಾಡುವುದಕ್ಕಾಗಿ ಗುಡಿಯೊಂದನ್ನು ಕಟ್ಟಿದರು. ಚಂದ್ರಶೇಖರ ಸ್ವಾಮಿಗಳು ಈ ಗುಡಿಯಲ್ಲೇ ತಪಸ್ಸು ಮಾಡುತ್ತಾ ಜೀವಸಮಾಧಿಗೊಂಡರು. ಚಂದ್ರಶೇಖರ ಸ್ವಾಮಿಗಳು ಜೀವಸಮಾಧಿಗೊಂಡ ನಂತರ, ಅವರ ಗದ್ದುಗೆ ನಿರ್ಮಿಸಿ ಪೂಜಿಸತೊಡಗಿದರು. ಚಂದ್ರಶೇಖರ ಸ್ವಾಮಿಗಳು ಬಳಸುತ್ತಿದ್ದ ಬೆತ್ತ ಹಾಗೂ ಅವರ ಪಾದುಕೆಗಳು ಈಗಲೂ ಆ ಗುಡಿಯಲ್ಲಿ ಕಂಡುಬರುತ್ತವೆ.

ಚಂದ್ರಶೇಖರ ಸ್ವಾಮಿಗಳು ಕರಿಕಂಬಳಿಯ ಮೇಲೆ ಕುಳಿತು ತುಂಗಭದ್ರಾ ನದಿಯನ್ನು ದಾಟುತ್ತಿದ್ದರಂತೆ. ಭಕ್ತರು ಚಂದ್ರಶೇಖರ ಸ್ವಾಮಿಗಳಿಗೆ, ದನ-ಕರುಗಳನ್ನು ದಾನ ಮಾಡುತ್ತಿದ್ದರು. ಅಸಹಾಯಕ ರೈತರಿಗೆ ತಮ್ಮ ಗೋಮಾಳದಲ್ಲಿರುವ ದನ-ಕರುಗಳನ್ನು ಬಳಸಿಕೊಂಡು ಉಳುಮೆ ಮಾಡಲು ಹೇಳುತ್ತಿದ್ದರು. ಸ್ವಾಮಿಗಳ ದನ-ಕರುಗಳನ್ನು ಉಳುಮೆಗೆ ಬಳಸಿಕೊಂಡ ಅನೇಕ ಅಸಹಾಯಕ ರೈತರು ಉತ್ತಮ ಫಸಲನ್ನು ಪಡೆಯುತ್ತಿದ್ದರು ಎಂಬುದಾಗಿ ನಿರೂಪಕರು ವಿವರಣೆಯನ್ನು ನೀಡುತ್ತಾರೆ.

**೨. ಮರಿಸ್ವಾಮಿಗಳ ಪವಾಡ**

ಮರಿಸ್ವಾಮಿ ಎಂಬ ಪವಾಡ ಪುರುಷರು ರಾಯಚೂರು ಜಿಲ್ಲೆಯ ಬಳಗಾನೂರಿನವರು. ಇವರು ಜನ್ಮ ತಾಳಿದ್ದು ನಾಡಗೌಡರ ಹಾಲಾಪುರ ಎಂಬಲ್ಲಿ. ಇವರು ಅಲ್ಲಿಂದ ವಲಸೆ ಬಂದು ಕಮಲಾಪುರ ಹೋಬಳಿಯ ಕಡ್ಡಿರಾಂಪುರ ಗ್ರಾಮದಲ್ಲಿ ನೆಲೆನಿಂತರು. ಈ ಗ್ರಾಮದಲ್ಲಿ ಅನೇಕ ಪವಾಡಗಳನ್ನು ಮಾಡಿ ಜನರ ಮನಸ್ಸಿನಲ್ಲಿ ದೈವೀ ಪುರುಷರೆನಿಸಿಕೊಂಡರು. ಅವರ ಹೆಸರಲ್ಲೇ ಇಲ್ಲಿ 'ಮರಿಸ್ವಾಮಿ ಮಠ' ಸ್ಥಾಪನೆಯಾಗಿರುವುದು ವಿಶೇಷ.

**ಅ. ಬ್ರಹ್ಮರಾಕ್ಷಸನಕಾಟ ಕೊನೆಗಾಣಿಸಿದ್ದು:-** ಈ ಹಿಂದೆ ಕಡ್ಡಿರಾಂಪುರ ಗ್ರಾಮ ಈಗ ಹಾಳೂರು ಎಂದು ಕರೆಯಲಾಗುವ ಸ್ಥಳದಲ್ಲಿತ್ತು. ಈ ಸ್ಥಳದಲ್ಲಿ ಬ್ರಹ್ಮರಾಕ್ಷಸ ದನ-ಕರುಗಳನ್ನು ತಿನ್ನುತ್ತಾ, ಜನರಿಗೆ ವಿಪರೀತ ಕಾಟ ಕೊಡಲಾರಂಭಿಸಿತು. ಅದರ ಕಾಟದಿಂದ ರೋಸಿ ಹೋದ

ಜನರು ಪವಾಡ ಪುರುಷರಾಗಿದ್ದ ಮರಿಸ್ವಾಮಿಗಳಲ್ಲಿ ತಮ್ಮ ಸಮಸ್ಯೆಯನ್ನು ಹೇಳಿಕೊಂಡು. ಅದರ ಕಾಟದಿಂದ ರಕ್ಷಿಸಬೇಕೆಂದು ಕೇಳಿಕೊಂಡರು. ಆಗ ಮರಿಸ್ವಾಮಿಗಳು ಬ್ರಹ್ಮ ರಾಕ್ಷಸನಿಗೆ ದಿಗ್ಬಂಧನ ಹಾಕಿ ಇನ್ಯಾವತ್ತು ಜನರಿಗೆ ತೊಂದರೆ ಕೊಡದಂತೆ ಮಾಡಿದರು. ಮರಿಸ್ವಾಮಿಗಳ ಸಲಹೆಯ ಮೇರೆಗೆ ಅಲ್ಲಿಂದ ಜನರೆಲ್ಲಾ ಈಗಿನ ಊರು ಇರುವ ಸ್ಥಳಕ್ಕೆ ವಲಸೆ ಬಂದರಂತೆ.

**ಆ. ತುಂಗಭದ್ರಾ ನದಿಯನ್ನು ಕಂಬಳಿ ಮೂಲಕ ದಾಟಿದ್ದು:-** ಬಳಗಾನೂರಿನಲ್ಲಿದ್ದ ಮರಿಸ್ವಾಮಿಗಳು ವಿರೂಪಾಕ್ಷೇಶ್ವರನ ದರ್ಶನ ಪಡೆಯಲು ಹಂಪಿಗೆ ಆಗಮಿಸಿದ್ದರು. ಹಂಪಿಗೆ ಹೋಗಲು ತುಂಗಭದ್ರಾ ನದಿಯನ್ನು ದಾಟಬೇಕಾಗಿತ್ತು. ನದಿಯನ್ನು ಹೇಗೆ ದಾಟಬೇಕೆಂದು ಯೋಚಿಸುತ್ತಿರುವಾಗ ಪಕ್ಕದಲ್ಲೇ ಕುರಿ ಮೇಯಿಸುತ್ತಿದ್ದ ಕುರಿಗಾಹಿಗಳಲ್ಲಿ ತಮ್ಮಾ, ನಿಮ್ಮ ಕಂಬಳಿಯನ್ನು ಕೊಡಿ ನಾನು ನದಿ ದಾಟಿ ಮತ್ತೆ ನಿಮ್ಮ ಕಂಬಳಿಯನ್ನು ಮರಳಿಸುತ್ತೇನೆ ಎಂದು ಕೇಳಿದಾಗ, ಕುರಿಗಾಹಿಗಳು. ಕಂಬಳಿ ಮೂಲಕ ಅದೇಗೆ ನದಿ ದಾಟುತ್ತಿ ಎಂದು ಹೀಯಾಳಿಸಿದರು. ಅದನ್ನು ಲೆಕ್ಕಿಸದ ಮರಿಸ್ವಾಮಿಗಳು ನಿಮ್ಮ ಎದುರಲ್ಲೇ ನದಿ ದಾಟಿ ತೋರಿಸುತ್ತೇನೆ ಕೊಡಿ ಎಂದು ಕೇಳಿದಾಗ ಕಂಬಳಿಯನ್ನು ಕೊಟ್ಟರು. ಆಗ, ಮರಿಸ್ವಾಮಿಗಳು ಕಂಬಳಿಯನ್ನು ಹಾಸಿ ಅದರ ಮೇಲೆ ಕುಳಿತು ನನ್ನನ್ನು ಆಚೆ ದಡಕ್ಕೆ ಮುಟ್ಟಿಸು ಎಂದು ಹೇಳಿದಾಗ ಕಂಬಳಿಯು ಅವರ ಮಾತಿನಂತೆ ಆಚೆ ದಡಕ್ಕೆ ಮುಟ್ಟಿಸಿತು. ನೀನು ವಾಪಸ್ಸು ಹೋಗು ಎಂದು ಹೇಳಿದಾಗ ಕಂಬಳಿಯು ಈಚೆ ದಡಕ್ಕೆ ಬಂದಿತು. ಈ ಸೋಜಿಗವನ್ನು ಕಂಡ ಕುರಿಗಾಹಿಗಳು ಮಂತ್ರ ಮುಗ್ಧರಾಗಿ ಮರಿಸ್ವಾಮಿಗಳಲ್ಲಿ ತಮ್ಮ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೊಂಡರು. ಆಗ ಮರಿಸ್ವಾಮಿಗಳು ಅವರಿಗೆ ಆಶೀರ್ವದಿಸಿ ಅವರ ತಪ್ಪನ್ನು ಮನ್ನಿಸಿದರು.

**ಇ. ಬಾವಿಯ ನೀರು ತುಪ್ಪಾದ ಪವಾಡ:-** ಒಮ್ಮೆ ಚಂದ್ರಪ್ಪ ಎಂಬ ಭಕ್ತ ಮರಿಸ್ವಾಮಿಗಳನ್ನು ಪಾದ ಪೂಜೆಗೆ ಕರೆದಿದ್ದ. ಪಾದಪೂಜೆಗೆ ಬರಲು ಒಪ್ಪಿದ ಮರಿಸ್ವಾಮಿಗಳು ಪ್ರಸಾದಕ್ಕೆ ಏನು ತಯಾರಿಸಿದ್ದೀರಿ ಎಂದು ಕೇಳಿದಾಗ, ಚಂದ್ರಪ್ಪ, ಹೋಳಿಗೆ, ಹಾಲು, ತುಪ್ಪ ತಯಾರಿಸಲಾಗಿದೆ ಮತ್ತು ಈ ಕಾರ್ಯಕ್ರಮಕ್ಕೆ ಇಡೀ ಊರಿನ ಜನರನ್ನೆಲ್ಲಾ ಕರೆದಿದ್ದೀನಿ ಎಂದು ಹೇಳಿದ. ನಿಗದಿತ ದಿನದಂದು ಮರಿಸ್ವಾಮಿಗಳ ಪಾದಪೂಜೆ ಕಾರ್ಯಕ್ರಮ ನಡೆಯಿತು. ನಂತರ ಪ್ರಸಾದ ರೂಪದಲ್ಲಿ ಇಡೀ ಊರಿನ ಜನರಿಗೆ ಹೋಳಿಗೆ, ಹಾಲು, ತುಪ್ಪ ಬಡಿಸಲಾಯಿತು. ಆದರೆ, ತುಪ್ಪ ಮುಗಿದು ಹೋಯಿತು. ಇದರಿಂದ ಚಿಂತಿತರಾದ ಭಕ್ತ ದಂಪತಿ ಮರಿಸ್ವಾಮಿಗಳಲ್ಲಿ ಈ ವಿಷಯವನ್ನು ಹೇಳಿದಾಗ, ತುಪ್ಪದ ಬಾವಿಯೇ ಇರುವಾಗ ನೀವು ಚಿಂತೆ ಮಾಡುವುದರಲ್ಲಿ ಅರ್ಥವಿಲ್ಲ ಎಂದು ಹೇಳಿ, ನಮ್ಮ ಮಠದ ಹಿಂದೆ ಇರುವ ಬಾವಿಗೆ ಹೋಗಿ ಬಿಂದಿಗೆಯಲ್ಲಿ ತೆಗೆದುಕೊಂಡು ಬಾ ಎಂದು ಹೇಳಿದರು. ಅವರ ಮಾತಿನಂತೆ ಬಾವಿಗೆ ಹೋಗಿ ಬಾವಿಯ ನೀರನ್ನು ಬಿಂದಿಗೆಯಲ್ಲಿ ತಂದು ಮರಿಸ್ವಾಮಿಗಳ ಎದುರಿನಲ್ಲಿ ಇರಿಸಿದಾಗ, ಮರಿಸ್ವಾಮಿಗಳು ಬಿಂದಿಗೆಯ ಮೇಲೆ ಕೈಯಿಟ್ಟು ಈಗ ಊಟಕ್ಕೆ ಬಡಿಸಿರಿ ಎಂದು ಹೇಳಿದಾಗ ಬಾವಿಯಿಂದ ತಂದ ನೀರು ತುಪ್ಪವಾಗಿತ್ತು.

ಈ ರೀತಿಯ ಪವಾಡಗಳಿಂದಾಗಿ ಮರಿಸ್ವಾಮಿಗಳು ಅವತಾರ ಪುರುಷ ಎನಿಸಿಕೊಂಡರು. ಅವರ ದೇಹ ತ್ಯಾಗದ ನಂತರ ಅವರ ಗದ್ದುಗೆ ನಿರ್ಮಿಸಿ ದಿನಾಲೂ ಪೂಜೆ ಮಾಡಲಾಗುತ್ತದೆ. ಪ್ರತೀ ವರ್ಷ ಗೌರಿ ಹುಣ್ಣಿಮೆ ಆದ ೭ ದಿನಕ್ಕೆ ರಥೋತ್ಸವ ಕೂಡ ನಡೆಯುತ್ತದೆ.

**೩. ಕಪೂರ್ ತಾತ ಮತ್ತು ಬಸಪ್ಪ ತಾತನವರ ಪವಾಡ**

ಕಮಲಾಪುರ ಹೋಬಳಿಯ ಕೊಟಗಿನಹಾಳ್ ಗ್ರಾಮದಲ್ಲಿ ಕಪೂರ್ ತಾತನವರ ಮಠ ಮತ್ತು ಬಸಪ್ಪ ತಾತನವರ ಸಮಾಧಿ(ದೇವಾಲಯ)ಗಳಿವೆ. ಕಪೂರ್ ತಾತನವರು ಸಾಗರದ ಮಳಲಗದ್ದೆಯವರು. ಇವರು ಸುಮಾರು ೫೦೦ ವರ್ಷಗಳ ಹಿಂದೆ ಕೊಟಗಿನಹಾಳು ಗ್ರಾಮದಲ್ಲಿ ಸಮಾಧಿಯಾಗಿದ್ದಾರೆ. ಬಸಪ್ಪ ತಾತ ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಪಡೇಸೂರಿನವರು. ಇವರು ಆಧ್ಯಾತ್ಮಿಕತೆಯಲ್ಲಿ ಹೆಚ್ಚು ಒಲವನ್ನು ಇರಿಸಿಕೊಂಡಿದ್ದರಿಂದ ಸಂಸಾರದಲ್ಲಿ ವೈರಾಗ್ಯ ಮೂಡಿ, ಮನೆ, ಹೆಂಡತಿ, ಮಕ್ಕಳನ್ನು ತೊರೆದು ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು ಊರಿಂದೂರಿಗೆ ಸಂಚರಿಸುತ್ತಾ ಸಾಗರದ ಮಳಲಗದ್ದೆಯಲ್ಲಿ ಬಂದು ತಪಸ್ಸು ಮಾಡಿದರು. ಆಗ ಕಪೂರ್ ತಾತ ಪ್ರತ್ಯಕ್ಷರಾಗಿ ಕೊಟಗಿನಹಾಳಿನಲ್ಲಿ ತನ್ನ ಸಮಾಧಿ ಇರುವುದಾಗಿ, ನೀನು ಅದನ್ನು ಮಠವನ್ನಾಗಿ ನಿರ್ಮಿಸಿ, ಅಲ್ಲೇ ನೆಲೆಸೆಂದು ಹೇಳಿ ಅದೃಶ್ಯರಾದರಂತೆ. ಆ ಮಾತಿನ ಮೇರೆಗೆ ಬಸಪ್ಪ ತಾತನವರು ಕೊಟಗಿನಹಾಳು ಗ್ರಾಮಕ್ಕೆ ಬಂದು ಕಪೂರ್ ತಾತನವರ ಸಮಾಧಿ ಸ್ಥಳವನ್ನು ಸ್ವಚ್ಛಗೊಳಿಸಿ, ಮಠವನ್ನು ನಿರ್ಮಿಸಿ ಇಲ್ಲೇ ನೆಲೆಸಿದರಂತೆ.

**೪. ಒಪ್ಪತ್ತೇಶ್ವರರ ಪವಾಡ**

ಮರಿಯಮ್ಮನಹಳ್ಳಿ ಹೋಬಳಿಯ ನಾಗಲಾಪುರ ಗ್ರಾಮದಲ್ಲಿ 'ಒಪ್ಪತ್ತೇಶ್ವರರ ಮಠ' ಕಂಡು ಬರುತ್ತದೆ. ಲೋಕಕಲ್ಯಾಣಕ್ಕಾಗಿ ಅನೇಕ ಸಂತರು, ಪವಾಡ ಪುರುಷರು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕಂಡುಬರುತ್ತಾರೆ. ಅಂಥ ಅವತಾರ ಪುರುಷರಲ್ಲಿ ಒಬ್ಬರಾದ ಶ್ರೀ ಗುರು ಒಪ್ಪತ್ತೇಶ್ವರರು ಕಲ್ಯಾಣ ಕಾರ್ಯ ಕೈಗೊಂಡು ಇಂದಿನ ನಾಗಲಾಪುರ(ಮ್ಯಾಸರಹಟ್ಟಿ) ಗ್ರಾಮಕ್ಕೆ ಬಂದರು. ದಿನವಿಡೀ ಈ ಭಾಗದಲ್ಲಿ ಸಂಚರಿಸುತ್ತಾ ವೇದ, ಪುರಾಣ, ಪ್ರವಚನಗಳ ಮೂಲಕ, ಜನರಲ್ಲಿ ಆಧ್ಯಾತ್ಮಿಕ ಜಾಗೃತಿ ಮೂಡಿಸುತ್ತಿದ್ದರು. ಪ್ರತಿ ದಿನ ಒಂದು ಬಾರಿ ಮಾತ್ರ ಪ್ರಸಾದ ಸೇವಿಸುತ್ತಿದ್ದುದ್ದರಿಂದಲೇ ಇವರನ್ನು 'ಒಪ್ಪತ್ತಯ್ಯ', 'ಒಪ್ಪತ್ತೇಶ್ವರ' ಎಂದು ಅವರ ಭಕ್ತ ಸಮೂಹ ಕರೆಯುತ್ತಿತ್ತು.

ಒಮ್ಮೆ ವಿಜಯನಗರ ಸಾಮ್ರಾಜ್ಯದ ದೊರೆ ಸದಾಶಿವರಾಯನು ತನ್ನ ರಾಣಿಯೊಂದಿಗೆ ವಿಹಾರಕ್ಕೆಂದು ಮ್ಯಾಸರಹಟ್ಟಿ ಅರಣ್ಯ ಪ್ರದೇಶಕ್ಕೆ ಬಂದಾಗ, ಮಹಾರಾಣಿಗೆ ಅನತಿ ದೂರದಲ್ಲಿ ಒಂದು ಜ್ಯೋತಿಯ ಪ್ರಖರತೆ ಕಂಡುಬಂದಿತು. ನಂತರ ಆ ಜ್ಯೋತಿಯು ರಾಣಿಯ ಸನಿಹ ಬಂದಿತು. ಮಹಾರಾಣಿ ತನ್ಮಯಳಾಗಿ ಜ್ಯೋತಿಯನ್ನು ಹಿಂಬಾಲಿಸುತ್ತಾ ನಡೆದಳು. ಆ ಜ್ಯೋತಿಯು ಒಪ್ಪತ್ತೇಶ್ವರರ ಸಮಾಧಿ ಸ್ಥಳಕ್ಕೆ ಬಂದು ಗದ್ದುಗೆಯಲ್ಲಿ ಲೀನವಾಯಿತು. ಗದ್ದುಗೆಯಿಂದ ಸಾಧುವೊಬ್ಬ ಕಾಣಿಸಿಕೊಂಡು ತಾನು ಒಪ್ಪತ್ತೇಶ್ವರ ಸ್ವಾಮಿ ಎಂದೂ ಬಹಳ ವರ್ಷಗಳ ಹಿಂದೆ ತಾನಿಲ್ಲಿ

ಸಮಾಧಿಗೊಂಡಿರುವುದನ್ನು ಹೇಳಿದನಂತೆ. ಸ್ವಲ್ಪ ಹೊತ್ತಲ್ಲೇ ಆತ ಅದೃಶ್ಯನಾಗಿ, ಜ್ಯೋತಿ ಮತ್ತೆ ಕಾಣಿಸಿಕೊಂಡು ಮಹಾರಾಣಿಯನ್ನು ಯಥಾಸ್ಥಾನಕ್ಕೆ ಕರೆದೊಯ್ದು ಮಾಯವಾಯಿತು. ಕೆಲಕ್ಷಣಗಳಲ್ಲಿ ನಡೆದ ಈ ಘಟನೆಯಿಂದ ಆಶ್ಚರ್ಯಚಕಿತಳಾದ ರಾಣಿಯು, ದೊರೆಗೆ ಈ ವಿಷಯ ತಿಳಿಸಿದಳು. ವಿಷಯ ಅರಿತ ಸದಾಶಿವರಾಯ ಸಮಾಧಿ ಸ್ಥಳದಲ್ಲಿ ಒಂದು ಸುಂದರವಾದ ಮಠ ನಿರ್ಮಿಸಿ ಅದನ್ನು 'ಒಪ್ಪತ್ತೇಶ್ವರ ಮಠ' ಎಂದು ಕರೆದ. ಅಲ್ಲದೇ ತನ್ನ ತಾಯಿ ನಾಗಲಾಂಬಿಕೆ ದೇವಿಯ ಸವಿ ನೆನಪಿಗಾಗಿ ಮ್ಯಾಸರಹಟ್ಟಿ ಗ್ರಾಮಕ್ಕೆ 'ನಾಗಲಾಪುರ'ವೆಂದು ನಾಮಕರಣ ಮಾಡಿದನೆಂಬ ಪ್ರತೀತಿ ಇದೆ.

ಅಲ್ಲದೇ, ಹರಪನಹಳ್ಳಿ ಪಾಳೆಯಗಾರ ಸೋಮಶೇಖರ ನಾಯಕ ಕೂಡಾ ಶ್ರೀ ಗುರು ಒಪ್ಪತ್ತೇಶ್ವರರ ಭಕ್ತನಾಗಿದ್ದ. ತನ್ನ ಎರಡನೇ ರಾಜಧಾನಿ ನಾರಾಯಣದೇವರಕೆರೆಗೆ ಭೇಟಿ ನೀಡಿದಾಗಲೆಲ್ಲಾ ನಾಗಲಾಪುರದ ಒಪ್ಪತ್ತೇಶ್ವರರ ಮಠಕ್ಕೆ ಭೇಟಿ ನೀಡಿ ತನ್ನ ಸೇವೆ ಸಲ್ಲಿಸುತ್ತಿದ್ದನೆಂಬ ಪ್ರತೀತಿ ಇದೆ.

ಇಂಥ ಪವಾಡ ಪುರುಷ, ಮಹಾತಪಸ್ವಿ ಶ್ರೀ ಗುರು ಒಪ್ಪತ್ತೇಶ್ವರರು ಪುರಾಣ, ಪ್ರವಚನಗಳ ಮೂಲಕ ಆಧ್ಯಾತ್ಮಿಕ ಜಾಗೃತಿ ಮೂಡಿಸುತ್ತಿದ್ದರಿಂದ ಸುತ್ತಲಿನ ಅನೇಕ ಗ್ರಾಮಗಳ ಜನರು ಇವರ ಶಿಷ್ಯರಾದರು. ದಟ್ಟ ಅಭಯಾರಣ್ಯದಂತಿದ್ದ ಮ್ಯಾಸರಹಟ್ಟಿ, ಒಪ್ಪತ್ತೇಶ್ವರರಿಂದಾಗಿ ಒಂದು ಸುಂದರ ಗ್ರಾಮವಾಗಿ ಮಾರ್ಪಟ್ಟಿತು. ಸುಮಾರು ೫೦೦ ವರ್ಷಗಳ ಹಿಂದೆ ಒಪ್ಪತ್ತೇಶ್ವರರು ತಮ್ಮ ಅಪಾರ ಶಿಷ್ಯರ ಸಮ್ಮುಖದಲ್ಲಿ ಜೀವಸಮಾಧಿಯಾದರು.

**೫. ಗಾದಿಲಿಂಗ ತಾತನ ಪವಾಡ**

ಕಮಲಾಪುರ ಹೋಬಳಿಯ ಗಾದಿಗನೂರು ಗ್ರಾಮದಲ್ಲಿ ಅವತಾರ ಪುರುಷ ಮತ್ತು ಪವಾಡ ಪುರುಷರಾದ ಗಾದಿಲಿಂಗೇಶ್ವರರು ಹುಟ್ಟಿ ಬಂದ ಅವತಾರ ಪುರುಷರಾಗಿದ್ದಾರೆ. ಇವರ ಜನನ ಕ್ರಿ.ಶ. ೧೭ನೇ ಶತಮಾನದಲ್ಲಿ ಆಯಿತು. ಸ್ವಾತಂತ್ರ್ಯಪೂರ್ವದಲ್ಲಿ ಕೊಪ್ಪಳ ಜಿಲ್ಲೆ ಹೈದರಾಬಾದ್ ನಿಜಾಮರ ಆಳ್ವಿಕೆಗೊಳಪಟ್ಟ ಪ್ರಾಂತ್ಯವಾಗಿತ್ತು. ಇಂದಿನ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೊಸಗೆರೆ ಎಂಬ ಗ್ರಾಮದಲ್ಲಿ ಹಾಲುಮತ ಧರ್ಮದ ಶಂಕರಪ್ಪ, ಶಾಂತಮ್ಮ ಎಂಬ ಸಾತ್ವಿಕ ದಂಪತಿಗಳ ಮಗನಾಗಿ ಜನಿಸಿದರು.

ಬಾಲ್ಯದಲ್ಲೇ ಗಾದಿಲಿಂಗಪ್ಪನದು ಅಲೌಕಿಕ ಬದುಕು. ಚಿಕ್ಕ ವಯಸ್ಸಿನಲ್ಲಿಯೇ ಲೌಕಿಕ ಬದುಕಿನಿಂದ ದೂರ ಉಳಿಯ ಹತ್ತಿದ ಮಗನಿಗೆ ತಂದೆ-ತಾಯಿಗಳು ವೃದ್ಧಾಪ್ಯದಲ್ಲಿ ತಮ್ಮನ್ನು ಸಾಕಿ ಸಲುಹುವ ಇದ್ದೊಬ್ಬ ಮಗ ಎಲ್ಲಿ ತಮ್ಮಿಂದ ದೂರಾಗುವನೋ ಎಂದು ಚಿಂತಿಸುತ್ತಾ, ಮದುವೆ ಎಂಬ ಬಂಧನಕ್ಕೆ ಒಳಪಡಿಸಿದರೆ ಸರಿ ಹೋಗಬಹುದೆಂದು ತೀರ್ಮಾನಿಸಿದರು. ಈ ವಿಷಯಗಳನ್ನು ತಿಳಿದ ಗಾದಿಲಿಂಗಪ್ಪ ತನ್ನ ವೈರಾಗ್ಯದ ಜೀವನಕ್ಕೆ ಎಲ್ಲಿ ಪೆಟ್ಟು ಬೀಳುವುದೋ ಎಂದು ಹೆತ್ತ ತಂದೆ-ತಾಯಿಗಳನ್ನು, ಮನೆಯನ್ನು ತೊರೆದು ಲೋಕಕಲ್ಯಾಣಾರ್ಥ ಧರ್ಮ ಪ್ರಚಾರ ಮಾಡುತ್ತಾ ಲೋಕ ಸಂಚಾರ ಮಾಡತೊಡಗಿದನು.

ಆಂಧ್ರಪ್ರದೇಶದ ಗೂಳ್ಯಂನ ಆದಿಶಕ್ತಿ ಗುಡಿಯಲ್ಲಿ ಧ್ಯಾನಾಸಕ್ತನಾಗಿ ಕುಳಿತುಕೊಂಡಿದ್ದ ಸಂದರ್ಭದಲ್ಲಿ ಮಧ್ಯರಾತ್ರಿ ನಾಲ್ಕು ಜನ ಕಳ್ಳರು ಮನೆಗಳಿಗೆ ಕನ್ನ ಹಾಕಿ ಬಂಗಾರ, ಬೆಳ್ಳಿ ಆಭರಣಗಳನ್ನು ಕದ್ದು ತಂದು ಹಂಚಿಕೊಳ್ಳಲು ಕೆಳಗೆ ಸುರುವಿದಾಗ, ಅವು ಅವರುಗಳ ಕಣ್ಣಿಗೆ ಹಾವು, ಚೇಳುಗಳಾಗಿ ಕಂಡವು. ಇದರಿಂದ ಬೆಚ್ಚಿ ಬಿದ್ದ ಕಳ್ಳರಿಗೆ, ಅಲ್ಲಿಯೇ ಒಂದು ಕಡೆಯಿಂದ 'ಓಂ ನಮಃ ಶಿವಾಯ' ಎಂಬ ಮಂತ್ರೋಚ್ಚಾರ ಕೇಳಿಸುವುದು. ದಿಗ್ಭ್ರಾಂತರಾದ ಕಳ್ಳರು, ಅತ್ತ ನೋಡಲು ಗಾದಿಲಿಂಗಪ್ಪನು ಇಹಪರದ ಪರಿವೇ ಇಲ್ಲದೇ ಶಿವನಾಮಸ್ಮರಣೆ ಮಾಡುತ್ತಿರುವನು. ಇದನ್ನು ನೋಡಿದ ಕಳ್ಳರ ಮನದಲ್ಲಿ ಪರಿವರ್ತನಾ ಭಾವನೆ ಉಂಟಾಗಿ, ಇವನಾರೋ ಮಹಾನುಭಾವನಿರಬೇಕು, ಅದಕ್ಕೆ ನಮ್ಮ ತಪ್ಪಿಗೆ ತಕ್ಕ ಶಿಕ್ಷೆಯಾಗಿರುವುದು ಎಂದು ಇವರ ಪಾದಕ್ಕೆ ಬಿದ್ದು ಗೋಳಾಡಿದರು. ಆಗ ಗಾದಿಲಿಂಗಪ್ಪನು ಕಳ್ಳರನ್ನು ಕುರಿತು "ತಾಯಿಯಂತೆ ಪರಸ್ತ್ರೀಯರನ್ನು, ಮಣ್ಣಿನಂತೆ ಪರರ ಸೊತ್ತನ್ನು, ತನ್ನಂತೆ ಎಲ್ಲಾ ಜೀವಿಗಳನ್ನು ಯಾರು ಕಾಣುತ್ತಾರೋ ಅವರೇ ಜ್ಞಾನಿಗಳು. ನಮ್ಮ ಕಾಯಕ ಸತ್ಯ, ಚಿತ್ತ ಶುದ್ಧಿ ಕಾಯಕವಾಗಿರಬೇಕು. ಅದು ಮತ್ತೊಬ್ಬರಿಗೆ ಮಾರಕವಾಗಬಾರದು ದುಡಿದು ಉಣ್ಣಿರಿ" ಎಂದು ಹೇಳಿ ಕಳ್ಳರ ಮನಪರಿರ್ವತಿಸಿ ಅವರು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ.

ಕೆಲವು ಜನ ಕಿಡಿಗೇಡಿಗಳು ಸಂಚು ಮಾಡಿ ಗಾದಿಲಿಂಗಪ್ಪನವರನ್ನು ಓರ್ವ ವೇಶ್ಯೆಯ ಮನೆಗೆ ಕಳಿಸುವರು. ಅಪೂರ್ವ ಸೌಂದರ್ಯದ ವೇಶ್ಯೆಯು ತನ್ನ ಒನಪು, ವಯ್ಯಾರಗಳಿಂದ ಇವರಿಗೆ ಕಾಮ ಪ್ರಚೋದನೆ ಮಾಡತೊಡಗಿದಳು. ವೈರಾಗ್ಯ ಮೂರ್ತಿಯಾದ ಗಾದಿಲಿಂಗಪ್ಪನವರು ತಾಯಿ ಎಂದಾದರೂ ಮಗನೊಂದಿಗೆ ಕಾಮಕ್ರೀಡೆ ಬಯಸುವಳೇ, ಮಗ ಎಂದಾದರೂ ತಾಯಿಯೊಂದಿಗೆ ಕಾಮ ಕ್ರೀಡೆಯಾಡುವನೇ? ನೀನು, ನನಗೆ ತಾಯಿ ಸ್ವರೂಪದಲ್ಲಿ ಕಾಣುತ್ತಿರುವಿ ಎಂದು ಹೇಳಿದರು. ಹೆಣ್ಣು ಕೇವಲ ಭೋಗ ವಸ್ತುವಲ್ಲ. ಅವಳು ತಾಯಿ, ಅಕ್ಕ-ತಂಗಿಯಾಗಿಯೂ ಇರಬೇಕಾಗುವುದು. ಕ್ಷಣಿಕ ಸುಖಕ್ಕಾಗಿ ಜಗದ ನಿಯಮಬಾಹಿರ ನಡೆ ನಡೆಯುವುದು ಸರಿಯಲ್ಲವೆಂದು ತಿಳಿ ಹೇಳಿದರು. ಇವರ ಮಾತು, ಸಹನೆ, ಹೆಣ್ಣನ್ನು ತಾಯಿ ಸ್ವರೂಪದಲ್ಲಿ ಕಾಣುವ ಭಾವನೆ ವೇಶ್ಯೆಯ ಮನಸ್ಸನ್ನು ಕಲಕಿದವು. ತನ್ನ ನಡೆಗೆ ನಾಚಿ ನೀರಾದಳು. ತನ್ನನ್ನು ತಾನೇ ಹಳಿದುಕೊಂಡು, ತನ್ನ ಗುಣ ಸ್ವಭಾವದಲ್ಲಿ ಬದಲಾವಣೆ ಮಾಡಿಕೊಳ್ಳಲು ನಿರ್ಧರಿಸಿದಳು. ತಾವು ಮಹಾಮಹಿಮರು ತಮ್ಮ ಪಾದ ಧೂಳಿಯಿಂದ ನಾನು ಪುನೀತಳಾದೆ. ಇನ್ನೆಂದೂ ನಾನು ಇಂತಹ ಕೀಳು ಕಾರ್ಯ ಮಾಡುವುದಿಲ್ಲ. ಸನ್ನಡತೆಯಿಂದ ಬಾಳುವೆನೆಂದೂ ಪಾದಕ್ಕೆ ಬಿದ್ದು ಕ್ಷಮೆಯಾಚಿಸಿದಳು. ಆಗ ಗಾದಿಲಿಂಗಪ್ಪ ಮನದ ಪ್ರಾಯಶ್ಚಿತ್ತಕ್ಕಿಂತ ಬೇರೆ ಶಿಕ್ಷೆಯಿಲ್ಲ. ನೀನು ಸುಖವಾಗಿ ಬಾಳು ಎಂದು ಹರಸಿ ಅವಳ ಮನೆಯಿಂದ ಹೊರ ನಡೆದರು.

ಗಾದಿಲಿಂಗಪ್ಪನವರು ಕಾಲ ನಡಿಗೆಯಿಂದ ಬಳ್ಳಾರಿಗೆ ಹೋಗುತ್ತಿರುವಾಗ ಮಾರ್ಗ ಮಧ್ಯೆ ಬರುವ ಗೋಟೂರ ಗ್ರಾಮದ ಶಿವಲಿಂಗಯ್ಯನವರ ಹೆಂಡತಿ, ಮನೆಯಲ್ಲಿಯ ಕಡುಬಡತನಕ್ಕೆ

ಜೇಸತ್ತು ಆತ್ಮಹತ್ಯೆ ಮಾಡಿಕೊಳ್ಳಲು ದಾರಿಯ ಪಕ್ಕದಲ್ಲಿದ್ದ ಬಾವಿಗೆ ಹಾರಲು ಆ ಶಬ್ದ ದಾರಿಯಲ್ಲಿ ಹೋಗುತ್ತಿದ್ದ ಗಾದಿಲಿಂಗಪ್ಪನವರಿಗೆ ಕೇಳಿತು. ಒಡನೆಯೆ ಗಾದಿಲಿಂಗಪ್ಪನವರು ಬಾವಿಗೆ ಹಾರಿ ಆ ಹೆಣ್ಣುಮಗಳನ್ನು ಕಾಪಾಡಿದರು. 'ಯಪ್ಪಾ, ಮನಿಯಾಗ ಕಿತ್ತು ತಿನ್ನುವ ಬಡತನ. ಹೆತ್ತ ಮಕ್ಕಳಿಗೆ ಒಪ್ಪತ್ತಿನ ಗಂಜಿ ಕೊಡುವುದು ಸಾಧ್ಯ ಇಲ್ಲ ಅಂದ ಮೇಲೆ ನಾನ್ಯಾಕೆ ಜೀವಿಸಿರಬೇಕು? ನನ್ನೇಕೆ ಬದುಕಿಸಿದಿರಿ?' ಎನ್ನುವಳು. ಆಗ ಗಾದಿಲಿಂಗಪ್ಪನವರು 'ಹುಚ್ಚಿ, ಬಡತನಕ್ಕೆ ಅಂಜಿ ಸಾಯಲಿಕ್ಕೆ ಹೊರಟದ್ದೀಯಲ್ಲಾ? ಹುಟ್ಟುವುದು, ಸಾಯುವುದು ನಮ್ಮ ಕೈಯಲ್ಲಿ ಇಲ್ಲ. ಭೂಮಿಗೆ ಕಳಿಸಿದಾತನಿಗೆ ಯಾವಾಗ ಕರೆದುಕೊಳ್ಳಬೇಕು ಎನ್ನುವುದು ಗೊತ್ತಿರುತ್ತದೆ. ಪ್ರಾಮಾಣಿಕವಾಗಿ ದುಡಿ ಭಗವಂತನ ಕೃಪೆಯಾಗುತ್ತೆ. ನೀನೇನು ಚಿಂತೆ ಮಾಡಬೇಡ. ದೇವರು ಇನ್ನು ಮುಂದೆ ಒಳ್ಳೇದು ಮಾಡುತ್ತಾನೆ' ಎಂದು ಹೇಳಿ ಕಳುಹಿಸಿದರು. ಮುಂದೆ ಆವರ ಮನೆತನ ಆಗರ್ಭ ಶ್ರೀಮಂತರಾದರು. ಆ ಮನೆತನ ಗೋಟೂರಲ್ಲಿ ಇಂದಿಗೂ ಕಂಡು ಬರುತ್ತದೆ.

ಜನರನ್ನು ಮೌಢ್ಯತೆಯಲ್ಲಿ ಮುಳುಗಿಸಿ, ನಂಜಿಸಿ ಹೊಟ್ಟೆ ಹೊರೆಯುವ ಪುರೋಹಿತಶಾಹಿ ವರ್ಗ ಇವರನ್ನು ದ್ವೇಷಿಸುತ್ತಿತ್ತು. ಒಮ್ಮೆ ಪುರೋಹಿತಶಾಹಿವರ್ಗ ಗಾದಿಲಿಂಗಪ್ಪನವರನ್ನು ಊಟಕ್ಕೆ ಕರೆದು, ಊಟದಲ್ಲಿ ವಿಷ ಹಾಕಿದರು. ಹೊಟ್ಟೆ ತುಂಬ ಊಟ ಮಾಡಿದ ಗಾದಿಲಿಂಗಪ್ಪನವರು ಮೂರು ದಿನ ಮೇಲೇಳದೇ ಮಲಗಿದರು. ಗಿಡಮೂಲಿಕೆ ಹಾಗೂ ಯೋಗದಿಂದ ವಿಷವು ಕಳೆಯುವಂತೆ ಮಾಡಿ ಬದುಕಿದರು. ಇವರು ಸತ್ತು ಹೋದರೆಂದು ಭಾವಿಸಿದ ಆ ಜನ ಇವರನ್ನು ನೋಡಿ ಇವರ ಲೀಲೆ ಅಗಾಧವಾದದ್ದು ಎಂದು ತಿಳಿದು ಇವರ ಭಕ್ತರಾದರು.

ಗಾದಿಲಿಂಗೇಶ್ವರರು ಆಂಧ್ರ, ಕರ್ನಾಟಕ ಎರಡು ಪ್ರಾಂತ್ಯಗಳಲ್ಲಿ ಪ್ರಸಿದ್ಧಿಯಾಗಿದ್ದರು. ಅವರು ಒಬ್ಬ ವ್ಯಕ್ತಿಯಾಗಿರಲಿಲ್ಲ, ಶಕ್ತಿಯಾಗಿದ್ದರು. ಗುರು ಅವಧೂತರ ಅಮೃತ ವಾಣಿಯಂತೆ ೨೦೦ ವರ್ಷ ಬಾಳಿ ಬದುಕಿದರು. ಅವರ ಕಾಯಕ್ಕೆ ವಯಸ್ಸಾದರೂ ಮನಸ್ಸಿಗೆ ವಯಸ್ಸಾಗಿರಲಿಲ್ಲ. ಸದಾ ಲಿಂಗಪೂರ್ಣ ನಿಷ್ಠರಾಗಿ ಬದುಕಿದರು. ಭಕ್ತರನ್ನುದ್ದೇಶಿಸಿ, ಭೂಮಿ, ಸೀಮೆ, ಹೊನ್ನು ಇವು ಮಾಯೆಯ ವಸ್ತುಗಳು. ಇವುಗಳಿಂದ ದೂರವಿದ್ದು, ಭಾವಶುದ್ಧಿ, ಆತ್ಮಶುದ್ಧಿ, ಅರಿವಿನ ಶುದ್ಧಿ ಮಾಡಿಕೊಳ್ಳಿ. ಲೋಭವೆಂಬ ಮೋಹವನ್ನು ಬಿಟ್ಟು, ದಾನ-ಧರ್ಮಗಳೆಂಬ ಬುತ್ತಿ ಬಿಚ್ಚಿರಿ. ಲೌಕಿಕದಲ್ಲಿ ದುಡಿಯುವುದು ಊಟಕ್ಕೆ, ಕೂಟಕ್ಕೆ ಹೊರೆತು ಬೇರಾವ ಪುರುಷಾರ್ಥಕ್ಕೂ ಅಲ್ಲ. ನಿಜ ಸ್ಮರಣೆಯಿಂದ ಶಿವನೊಲುಮೆಗೆ ಪಾತ್ರರಾಗಿರಿ ಎಂದು ಹೇಳುತ್ತಾ, ಶಿವಧ್ಯಾನ ಮಾಡುತ್ತಾ ಲಿಂಗೈಕ್ಯರಾದರು.

ಇಂತಹ ಅವತಾರ ಪುರುಷ, ವಿಭೂತಿ ಪುರುಷರಾದ ಗಾದಿಲಿಂಗೇಶ್ವರರಿಗೆ, ಗಾದಿಗನೂರು ಗ್ರಾಮದಲ್ಲಿ ಭವ್ಯವಾದ ದೇವಸ್ಥಾನ ನಿರ್ಮಿಸಿ, ಗಾದಿಲಿಂಗೇಶ್ವರರ ಶಿಲಾಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪ್ರತಿ ವರ್ಷ ಫಾಲ್ಗುಣ ಶುದ್ಧ ಪಂಚಮಿಯಂದು ಶ್ರೀಗುರು ರೇವಣಸಿದ್ಧೇಶ್ವರ ಹಾಗೂ ಶರಣ ಗಾದಿಲಿಂಗೇಶ್ವರರ ಜೋಡಿ ರಥೋತ್ಸವ ನಡೆಯುತ್ತವೆ.

## ೬. ಸುಡುಗಾಡೆಪ್ಪ ತಾತನ ಪವಾಡ

ಕಮಲಾಪುರ ಹೋಬಳಿಯ ಬೈಲುವದ್ದಿಗೇರಿ ಗ್ರಾಮದಲ್ಲಿ ಸುಡುಗಾಡೆಪ್ಪ ತಾತನವರ ದೇವಸ್ಥಾನ ಕಂಡುಬರುತ್ತದೆ. ಪ್ರತಿವರ್ಷ ಶಿವರಾತ್ರಿ ಅಮವಾಸ್ಯೆ ದಿನದಂದು ಇವರ ಹೆಸರಿನಲ್ಲಿ ರಥೋತ್ಸವ ಸಹ ನಡೆಯುತ್ತದೆ.

ಸುಡುಗಾಡೆಪ್ಪನವರು ಕುಂಬಾರ ಜಾತಿಗೆ ಸೇರಿದವರಾಗಿದ್ದರು. ಇವರು ಮಹಾಶರಣರಾಗಿದ್ದು, ೧೫೦ ವರ್ಷಗಳ ಹಿಂದೆ ತೀರಿಕೊಂಡರು. ಇವರು ಹೇಳಿದ ಮಾತು ಸಿದ್ಧಿಸುತ್ತಿತ್ತು. ವೈದ್ಯಕೀಯ ಕ್ಷೇತ್ರದಲ್ಲಿ ಸವಾಲಾಗಿರುವ ಅನೇಕ ರೋಗ-ರುಜಿನಗಳನ್ನು ಔಡಲಎಣ್ಣೆ ಮತ್ತು ಲೋಬಾನದಿಂದ ಗುಣಪಡಿಸುತ್ತಿದ್ದರು. ಈಗ ಇವರ ಸಮಾಧಿ ಸ್ಥಳ ದೇವಸ್ಥಾನವಾಗಿದ್ದು, ಪ್ರತಿ ಗುರುವಾರ, ಭಾನುವಾರ ಹಾಗೂ ಅಮವಾಸ್ಯೆಯ ರಾತ್ರಿ ಸುಡುಗಾಡೆಪ್ಪನ ಮುಂದೆ ಔಡಲಎಣ್ಣೆ ಮತ್ತು ಲೋಬಾನ ಇರಿಸಿ ಮರುದಿನ ಅದನ್ನು ಹಚ್ಚಿಕೊಂಡರೆ ಯಾವುದೇ ಕಾಯಿಲೆಯಾದರೂ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ.

## ೭. ಸಿದ್ದಯ್ಯ ತಾತನ ಪವಾಡ

ಕಮಲಾಪುರ ಗ್ರಾಮದಲ್ಲಿ ಸಿದ್ದಯ್ಯ ತಾತನವರ ಮಠ ಕಂಡು ಬರುತ್ತದೆ. ಸಿದ್ದಯ್ಯ ತಾತನವರು ಬೇರೆ ಪ್ರದೇಶದಿಂದ ಬಂದು ಇಲ್ಲೇ ನೆಲೆಸಿ, ಲಿಂಗೈಕ್ಯರಾದರು. ಇವರು ೧೦೦ ವರ್ಷಗಳ ಹಿಂದೆ ಜೀವಿಸಿದ್ದರು ಎಂದು ತಿಳಿದುಬರುತ್ತದೆ. ಅವರು ಹೇಳಿದ ಮಾತು ಸಿದ್ಧಿಸುತ್ತಿತ್ತು ಎಂದು ಈ ಊರಿನ ಜನ ನಂಬುತ್ತಾರೆ. ಸಿದ್ದಯ್ಯ ತಾತನವರು ಖಾವಿಧಾರಿಯಾಗಿ ಮನೆ, ಮನೆಗಳಿಗೆ ಹೋಗಿ ಭಿಕ್ಷೆ ಬೇಡುತ್ತಿದ್ದರು. ಭವತಿ ಭಿಕ್ಷಾಂ ದೇಹಿ ಎಂದು ಒಬ್ಬ ಶ್ರೀಮಂತರ ಮನೆಗೆ ಹೋಗಿ ಬೇಡಿದಾಗ ಅವರು ಮನೆಯಲ್ಲಿ ಏನೂ ಇಲ್ಲ ಮುಂದೆ ಹೋಗು ಎಂದು ಹೇಳಿ ಕಳುಹಿಸಿದರು. ನಂತರ, ಆ ಶ್ರೀಮಂತರ ಮನೆಯಲ್ಲಿ ಏನೂ ಇಲ್ಲದೇ ಖಾಲಿ ಮನೆಯಾಯಿತು. ಆಗ, ಆ ಶ್ರೀಮಂತರು, ತಾತನವರನ್ನು ಹುಡುಕಾಡಿ ಕರೆದುಕೊಂಡು ಬಂದು ನಮ್ಮದು ತಪ್ಪಾಯಿತು ಕ್ಷಮಿಸಿರಿ ಎಂದು ಹೇಳಿ ಪಾದಕ್ಕೆರಗಿದರು. ಆಗ, ತಾತನವರು ಶ್ರೀಮಂತರಿಗೆ ನಿಮ್ಮ ಮನೆಗೆ ದೇಹಿ ಎಂದು ಬಂದವರಿಗೆ ಯಾವೊತ್ತೂ ವಾಪಸ್ಸು ಕಳುಹಿಸಬೇಡಿ. ನಿಮ್ಮ ಕೈಲಾದ ಸಹಾಯ ಮಾಡಿ ಎಂದು ತಿಳಿಹೇಳಿ ಅವರ ಮನೆಯನ್ನು ಯಥಾಸ್ಥಿತಿಯಲ್ಲಿರುವಂತೆ ಮಾಡಿದರಂತೆ.

ಒಮ್ಮೆ ಯಾರೋ ಕಿಡಿಗೇಡಿಗಳು ಸೀಮೆಎಣ್ಣೆಯನ್ನು ಕೊಟ್ಟು ಇದು ದೇವರ ತೀರ್ಥ ಕುಡಿಯಿರಿ ಎಂದು ಹೇಳಿದಾಗ, ನಸುನಗುತ್ತಾ ಅದನ್ನು ಕುಡಿಯತೊಡಗಿದರು. ಇವರು ಕುಡಿಯುತ್ತಿರುವುದನ್ನು ನೋಡಿ, ಮತ್ತೇನಾಗುತ್ತದೋ ಎಂದು ಹೆದರಿ, ಸೀಮೆಎಣ್ಣೆಯನ್ನು ಆ ರೀತಿ ಕುಡಿಯುತ್ತಿರುವಿರಲ್ಲಾ ನಿಮಗೆಲ್ಲೊ ಹುಚ್ಚು ಹಿಡಿದಿರಬೇಕೆಂದು ಮೂದಲಿಸಿದರು. ಆಗ, ಸಿದ್ದಯ್ಯ ತಾತನವರು ಯಾರು ಹೇಳಿದರು ಇದು ಸೀಮೆಎಣ್ಣೆ ಎಂದು? ಇದು ನಿಜವಾಗಿಯೂ ದೇವರ ತೀರ್ಥವೇ ಬೇಕಿದ್ದರೇ ಕುಡಿದು ನೋಡಿ ಎಂದು ಅವರುಗಳ ಕೈಗೆ ಕೊಟ್ಟಾಗ ಅದು,

ನಿಜವಾಗಿಯೂ ದೇವರ ತೀರ್ಥವಾಗಿ ಬದಲಾಗಿತ್ತು. ಇವರ ಈ ಪವಾಡವನ್ನು ಅರಿತ ಕಿಡಿಗೇಡಿಗಳು ಅವರ ಭಕ್ತರಾದರು.

ಸಿದ್ದಯ್ಯ ತಾತನವರು ಮಳೆ ಯಾವಾಗ ಬರುತ್ತದೆ ಎಂಬುದನ್ನು ನಿಖರವಾಗಿ ಹೇಳುತ್ತಿದ್ದರು. ಅವರು ಹೇಳಿದ ದಿನದಂದೇ ಮಳೆ ಬರುತ್ತಿತ್ತು. ಕಲ್ಲುಗಳನ್ನು ಜನರಿಗೆ ನೀಡಿ ತಿನ್ನಿರಿ ಎಂದು ಕೊಟ್ಟಾಗ, ಕಲ್ಲು, ಕಲ್ಲು ಸಕ್ಕರೆಯಾಗಿರುವುದನ್ನು ಕಂಡ ಜನರು ಈಗಲೂ ಅವರ ಪವಾಡಗಳನ್ನು ಸ್ಮರಿಸುತ್ತಾರೆ.

**೮. ಚಕ್ರಸಾಲಿ ಲಿಂಗಪ್ಪರ ಪವಾಡ**

ಮರಿಯಮ್ಮನಹಳ್ಳಿ ಹೋಬಳಿಯ ನಂದಿಬಂಡೆ ಗ್ರಾಮದ ಚಕ್ರಸಾಲಿ ಲಿಂಗಪ್ಪ ಎಂಬ ವ್ಯಕ್ತಿ, ಕುಂಬಾರ ಜನಾಂಗದವನಾಗಿದ್ದು, ಮಣ್ಣಿನಿಂದ ಒಂದು ವಿಶಿಷ್ಟವಾದ ಆನೆಯನ್ನು ತಯಾರಿಸಿದ್ದನಂತೆ. ಆನೆಯ ಸೊಂಡಿಲಿನಲ್ಲಿ ನೀರನ್ನು ಹಾಕಿ, ಆನೆಯ ಕೆಳಭಾಗದಿಂದ ನೀರನ್ನು ತೆಗೆಯುತ್ತಿದ್ದರಂತೆ. ಈ ನೀರಿನಿಂದ ವ್ಯವಸಾಯ ಮಾಡಬಹುದಾಗಿತ್ತಂತೆ. ಈ ಚಮತ್ಕಾರವನ್ನು ಕಂಡ ಬ್ರಿಟಿಷರು, ಚಕ್ರಸಾಲಿ ಲಿಂಗಪ್ಪನವರಿಗೆ ೪೦ ಎಕರೆ ಭೂಮಿಯನ್ನು ಇನಾಮು ಆಗಿ ನೀಡಿದರಂತೆ. ಈಗಲೂ ಆ ಭೂಮಿಯನ್ನು ಅವರ ಕುಟುಂಬದವರು ರಕ್ಷಿಸಿಕೊಂಡು ಬಂದಿದ್ದಾರೆ ಎಂದು ನಿರೂಪಕರು ತಿಳಿಸುತ್ತಾರೆ.

**೯. ಜಡೆತಾತನ ಪವಾಡ**

ಕಮಲಾಪುರ ಹೋಬಳಿಯ ಕಾಕುಬಾಳು ಗ್ರಾಮದಲ್ಲಿ ಜಡೆತಾತನಮಠ ಕಂಡುಬರುತ್ತದೆ. ಈ ಮಠವನ್ನು ಇಲ್ಲಿನ ಆಧ್ಯಾತ್ಮಿಕ ವಿಶ್ವವಿದ್ಯಾಲಯವೆಂದೇ ಕರೆಯಲಾಗುತ್ತದೆ. ಇದು ಶಾಖಾ ಮಠವಾಗಿದ್ದು, ಇದರ ಮೂಲ ಮಠ ಸಿರುಗುಪ್ಪ ತಾಲೂಕಿನ ಎಮ್ಮಿಗನೂರಿನಲ್ಲಿ ಕಂಡುಬರುತ್ತದೆ.

ಒಮ್ಮೆ ಕಾಕುಬಾಳು ಗ್ರಾಮಕ್ಕೆ ಪ್ಲೇಗ್ ಬಂದು, ಊರಲ್ಲಿ ಸಾವು-ನೋವುಗಳು ಅಧಿಕಗೊಂಡವಂತೆ. ಆಗ ಜಡೆತಾತನವರು ಗ್ರಾಮಸ್ಥರನ್ನು ಪ್ಲೇಗ್‌ನಿಂದ ದೂರ ಮಾಡಲು ನಿರಂತರ ಶಿವಪಂಚಾಕ್ಷರಿ ಮಂತ್ರವನ್ನು ಪಠಿಸುತ್ತಾ, ಊರಿಗೆ ಹರಡಿದ್ದ ಪ್ಲೇಗ್ ಎಂಬ ಮಹಾಮಾರಿಯನ್ನು ದೂರ ಮಾಡಿದರಂತೆ. ಅಂದಿನಿಂದ ಪ್ಲೇಗ್ ಈ ಊರಿಗೆ ಕಾಲಿಡಲಿಲ್ಲವಂತೆ.

ಬೈಲುವದ್ದಿಗೇರಿ ಹಾಗೂ ಸುತ್ತ-ಮುತ್ತಲಿನ ಗ್ರಾಮಗಳಿಗೆ ಬ್ರಹ್ಮ ರಾಕ್ಷಸನ ಕಾಟ ವಿಪರೀತವಾಗಿತ್ತಂತೆ. ಇದರ ಉಪಟಳ ಎಷ್ಟಿತ್ತೆಂದರೇ ಮೇಯಲು ಹೋಗುವ ಸಾಕುಪ್ರಾಣಿಗಳಾವುವೂ ವಾಪಸ್ಸು ಬರುತ್ತಿರಲಿಲ್ಲ. ಅಡವಿಯಲ್ಲಿ ಏನೂ ಸಿಗದೇ ಇದ್ದಾಗ ಗ್ರಾಮಗಳಿಗೆ ನುಗ್ಗಿ ದಾಂಧಲೆ ಎಬ್ಬಿಸುತ್ತಿತ್ತು. ಇದರ ಉಪಟಳದಿಂದ ಬೇಸತ್ತ ಗ್ರಾಮಸ್ಥರು ಜಡೆತಾತನಲ್ಲಿ ಸಮಸ್ಯೆಯನ್ನು ನಿವೇದಿಸಿಕೊಂಡಾಗ, ಜಡೆತಾತನವರು, ವಿಪರೀತ ಕಾಲೇ ವಿನಾಶ ಬುದ್ಧಿ ಎನ್ನುವಂತೆ ಅದರ ಉಪಟಳ ಕೊನೆಗಾಣಲಿದೆ ನೀವೇನು ಚಿಂತಿಸದಿರಿ ಎಂದು ಗ್ರಾಮಸ್ಥರಿಗೆ ಅಭಯ ನೀಡಿದರು.

ನಂತರ, ಬ್ರಹ್ಮರಾಕ್ಷಸ ಇರುವಲ್ಲಿಗೆ ಹೋಗಿ, ಅದಕ್ಕೆ ಮುಕ್ತಿಯನ್ನು ಕೊಟ್ಟು, ಮತ್ತೆಂದೂ ಬ್ರಹ್ಮರಾಕ್ಷಸನ ಹಾವಳಿ ಬರದಂತೆ ಅದನ್ನು ಕೊನೆಗಾಣಿಸಿದರಂತೆ.

ಕಾಕುಬಾಳು ಗ್ರಾಮದಲ್ಲಿ ಮಳೆಬಾರದೇ ಬೆಳೆಗಳೆಲ್ಲಾ ಒಣಗಲಾರಂಭಿಸಿದವು. ಜನ-ಜಾನುವಾರುಗಳು ನೀರಿಲ್ಲದೇ ಪರದಾಡುವಂತಾಯಿತು. ಜಡೆತಾತನವರು ಗ್ರಾಮಸ್ಥರನ್ನು ಕರೆದು ಶಿವನಾಮ ಸ್ಮರಣೆ ಮಾಡುತ್ತಾ ಭಜನೆ ಮಾಡಿರಿ ಎಂದು ಹೇಳುತ್ತಿದ್ದರು. ಇಂತಿಷ್ಟು ದಿನ ಭಜನೆ ಮಾಡಿದರೆ ಮಳೆ ಬಂದೇ ಬರುತ್ತದೆ ಎಂದು ಹೇಳಿದರೆ, ಆ ದಿನದಂದು ಭೂಮಿ-ಮುಗಿಲು ಒಂದಾಗುವಂತೆ ಮಳೆ ಬಂದಿತ್ತು ಎಂದು ಗ್ರಾಮಸ್ಥರು ತಿಳಿಸುತ್ತಾರೆ. ಜಡೆತಾತನವರು ಲೋಕಕಲ್ಯಾಣಾರ್ಥವಾಗಿ ತಪಸ್ಸು ಮಾಡುತ್ತಾ, ಮೌನವ್ರತವನ್ನು ಆಚರಿಸುತ್ತಿದ್ದರು. ತ್ರಿಕಾಲ ಜ್ಞಾನಿಗಳಾಗಿದ್ದ ಅವರು, ಮುಂಬರುವ ಆಗು-ಹೋಗುಗಳ ಬಗ್ಗೆ ಜನರಿಗೆ ತಿಳುವಳಿಕೆ ನೀಡುತ್ತಿದ್ದರು.

### ೧೦. ಬಲಕುಂದೆಪ್ಪ ತಾತನ ಪವಾಡ

ಕಂಪ್ಲಿ ಹೋಬಳಿಯ ದೇವಸಮುದ್ರ ಗ್ರಾಮದಲ್ಲಿ ಬಲಕುಂದೆಪ್ಪ ತಾತನವರ ದೇವಸ್ಥಾನ ಕಂಡು ಬರುತ್ತದೆ. ಬಲಕುಂದೆಪ್ಪ ತಾತನವರು ಈ ಗ್ರಾಮದಲ್ಲಿ ನೆಲೆಸಿ, ಐಕ್ಯಗೊಂಡಿದ್ದಾರೆ. ಇವರು ಐಕ್ಯಗೊಂಡ ಸಮಾಧಿ ಸ್ಥಳದಲ್ಲಿ ದೇವಸ್ಥಾನವನ್ನು ನಿರ್ಮಿಸಿ ಪೂಜಿಸಲಾಗುತ್ತದೆ. ವರ್ಷಕ್ಕೊಮ್ಮೆ ಹೋಳಿ ಹುಣ್ಣಿಮೆ ನಂತರದ ಚಿತ್ತಾನಕ್ಷತ್ರದಂದು ಇವರ ಹೆಸರಿನಲ್ಲಿ ಜಾತ್ರೆ ನಡೆಯುತ್ತದೆ. ಪ್ರತಿ ಅಮವಾಸ್ಯೆಯಂದು ಪಲ್ಲಕ್ಕಿ ಉತ್ಸವ ಮತ್ತು ದಾಸೋಹ ನಡೆಯುತ್ತದೆ.

ಬಲಕುಂದೆಪ್ಪ ತಾತನವರು ತನ್ನ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತಿದ್ದರು. ಗ್ರಾಮಕ್ಕೆ ಮಳೆ-ಬೆಳೆ ಸಕಾಲದಲ್ಲಿ ಆಗದ ಸಮಯದಲ್ಲಿ ಮಳೆ ಬರಿಸುತ್ತಿದ್ದರು. ಈ ಭಾಗದ ರೈತರು ತಮ್ಮ ಹೊಲಗಳಲ್ಲಿ ಬಾವಿ ತೋಡಿಸಿ ನೀರು ಬರದೇ ಇದ್ದಾಗ ನೀರು ಬರಿಸಿ ಪವಾಡವನ್ನು ಮೆರೆದರು. ಈಗಲೂ ತಾತನವರು ಹಲವು ವಿಧಗಳಲ್ಲಿ ಕಾಣಿಸಿಕೊಂಡು ಊರಿಗೆ, ಜನರಿಗೆ ನೆರವಾಗುತ್ತಿದ್ದಾರೆ ಎಂದು ಸ್ಥಳೀಯರು ತಿಳಿಸುತ್ತಾರೆ.

### ೧೧. ಹಂಪಿಯ ಶಿವರಾಮವಧೂತರು

ಕಮಲಾಪುರ ಹೋಬಳಿಯ ಐತಿಹಾಸಿಕ ಸ್ಥಳ ಹಂಪಿಯ ಹೇಮಕೂಟ ಬೆಟ್ಟದಲ್ಲಿ ಶಿವರಾಮವಧೂತರ ಮಠ ಕಂಡುಬರುತ್ತದೆ. ಶಿವರಾಮವಧೂತರು ಇಲ್ಲೇ ನೆಲೆಸಿ, ಐಕ್ಯಗೊಂಡಿದ್ದಾರೆ. ಸಮಾಧಿಯ ಮೇಲೆ ಶಿವರಾಮವಧೂತರ ಅಮೃತಶಿಲೆಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ನಿತ್ಯಪೂಜೆ ಮತ್ತು ಅಮವಾಸ್ಯೆಯ ದಿನದಂದು ವಿಶೇಷ ಪೂಜೆಗಳು ನಡೆಯುತ್ತವೆ.

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಮೈಲಾರ ಎಂಬ ಹಳ್ಳಿಯಲ್ಲಿ ಬೇಡ ಜನಾಂಗದ ಮಾಳವ್ವ ಎಂಬ ಮಹಿಳೆಯು ತನಗೆ ಜನಿಸಿದ ಮಗನಿಗೆ, ಗ್ರಾಮದೇವತೆಯಾದ ಮೈಲಾರಲಿಂಗನ ಹೆಸರನ್ನು ಇಟ್ಟಿದ್ದಳು(ಈಕೆಯ ಗಂಡನ ಹೆಸರು ತಿಳಿದುಬಂದಿಲ್ಲ). ಸಾತ್ವಿಕ ಸ್ವಭಾವದ ಮಾಳವ್ವ ತನ್ನ ಮಗನನ್ನು ಒಳ್ಳೆಯ ಪರಿಸರದಲ್ಲಿ, ಒಳ್ಳೆಯ ಬುದ್ಧಿ, ಗುಣಗಳು

ಬೆಳೆಯಲೆಂದು ಬಯಸಿ ಅದರಂತೆ ಐದು ವರ್ಷದ ಮೈಲಾರನಿಗೆ ಊರಿನ ಮಠದ ಗುರುಗಳಿಂದ ವಿದ್ಯಾಭ್ಯಾಸವನ್ನು ಕಲಿಸಲು ಪ್ರಾರಂಭಿಸುತ್ತಾಳೆ. ಓದುವುದರಲ್ಲಿ, ಬರೆಯುವುದರಲ್ಲಿ ಎಲ್ಲಾ ಹುಡುಗರಿಗಿಂತ ಈತ ತುಂಬಾ ಆಸಕ್ತಿ ವಹಿಸುತ್ತಿದ್ದನು. ಗುರುಗಳ ಕೃಪೆಯಿಂದ ವಿದ್ಯಾಬುದ್ಧಿಯನ್ನು ಕಲಿತ ಮೈಲಾರನು, ಮನೆಯ ಪೂರ್ವಿಕರು ನಡೆಸುತ್ತಿದ್ದ ಕೃಷಿಕ ಜೀವನವನ್ನೇ ಮುನ್ನಡೆಸಿದನು. ಮೈಲಾರನು ಯೌವ್ವನಕ್ಕೆ ಬರಲು, ತಾಯಿಯು ಮಗನಿಗೆ ಮದುವೆ ಮಾಡಲು ನಿರ್ಧರಿಸಿ, ತನ್ನ ಸೋದರನ ಮಗಳಾದ ಯಮುನೆಯನ್ನು ತನ್ನ ಮಗನಿಗೆ ಮದುವೆ ಮಾಡಿಕೊಂಡಳು. ಸಂಸಾರಸ್ಥನಾದ ಮೈಲಾರನು ಕೃಷಿಕ ಜೀವನ ಸಾಗಿಸುತ್ತಾ, ಸಂಸಾರ ಸಾಗಿಸುತ್ತಿದ್ದನು. ಕಾಲ ಕಳೆದಂತೆ ಯಮುನೆಯು ಗರ್ಭವತಿಯಾಗಿ ಗಂಡು ಮಗುವಿಗೆ ಜನ್ಮ ನೀಡಿದಳು. ಆದರೆ ಮಗು ಬಾಲಗ್ರಹ ಪೀಡೆಯಿಂದ ಸತ್ತು ಹೋಯಿತು. ಇದೇ ರೀತಿ ನಾಲ್ಕು ಮಕ್ಕಳು ಹುಟ್ಟಿ ಸತ್ತವು. ಮೊಮ್ಮಕ್ಕಳು ಸಾಯುವ ಕೊರಗಿನಲ್ಲಿ ಮಾಳವ್ವಳೂ ಸಾವನ್ನಪ್ಪಿದಳು. ಈ ಆಘಾತದಿಂದ ಮೈಲಾರನಿಗೆ ಚೇತರಿಸಿಕೊಳ್ಳಲಾಗಲಿಲ್ಲ. ಜೀವನದಲ್ಲಿ ಜುಗುಪ್ಸೆ ಮೂಡಿ ಹೊಲ, ಮನೆ ಕೆಲಸಗಳಲ್ಲಿ ಆಸಕ್ತಿಯಿಲ್ಲದಾಯಿತು. ಬದುಕು ಬೇಸರವಾಗಿ ಮನದಲ್ಲಿ ಅತೃಪ್ತಿ, ಅಶಾಂತಿ ನೆಲೆಸಿತು.

ಮೈಲಾರನಿಗೆ ದುಡಿದು ತಿನ್ನುವ ಬದುಕು ಬೇಡವಾಯಿತು. ಇದರಿಂದ ಶ್ರಮಪಟ್ಟು ದುಡಿಯುವುದನ್ನು ನಿಲ್ಲಿಸಿದನು. ದುರ್ಜನರ ಸಹವಾಸ ಮಾಡಿ ಕುಡಿತ, ಜೂಜಾಟದಂತಹ ಕೆಲಸಗಳನ್ನು ಕಲಿತನು. ಮಿತಿ ಮೀರಿ ಸಾಲ ಮಾಡಿದ್ದರಿಂದ ಸಾಲ ಕೊಟ್ಟವರು ಗಂಡ-ಹೆಂಡಿರನ್ನು ಮನೆ ಬಿಡಿಸಿ, ಹೊರಗೆ ಹಾಕಿದರು. ಇದ್ದ ಹೊಲ, ಮನೆಯೆಲ್ಲಾ ಸಾಲಗಾರರ ವಶವಾಗಿ ನೆಲೆಯಿಲ್ಲದೆ ಹೆಂಡತಿಯನ್ನು ಕರೆದುಕೊಂಡು ಹಂಪನೂರು ಸೇರಿದನು. ಹಂಪನೂರು ಸೇರಿದ ಮೈಲಾರನು ಊರ ದೇವಾಲಯದಲ್ಲಿದ್ದು, ಮಕ್ಕಳಿಗೆ ಪಾಠ ಹೇಳಿ ಕೊಡುವುದರ ಜೊತೆಗೆ ಬಿಡುವಿನ ಸಮಯದಲ್ಲಿ ಮರಗಳನ್ನು ಕೊಯ್ಯುವ ಕೆಲಸ ಮಾಡುತ್ತಿದ್ದನು. ಕಾಯಕಕ್ಕೆ ಹೆಚ್ಚಿನ ಮಹತ್ವ ನೀಡಿದ್ದರಿಂದಾಗಿ ಮೈಲಾರನಿಗೆ ಕಲಿತ ದುಶ್ಚಟಗಳೆಲ್ಲಾ ಮರೆತು ಪೂಜೆ, ಧ್ಯಾನದಂತಹ ಆಧ್ಯಾತ್ಮಿಕ ಆಚರಣೆಗಳ ಬಗ್ಗೆ ಹೆಚ್ಚು ಆಸಕ್ತಿ ವಹಿಸಿದನು. ಊರಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುವುದರಿಂದ ಹಣ ಸಂಪಾದನೆಯಾಗಿ ಹಂಪನೂರಿನಲ್ಲೊಂದು ಸರಳವಾದ ಮಠವನ್ನು ಕಟ್ಟಿಕೊಂಡು ಸಾಧುವಿನಂತೆ ಜೀವನ ಸಾಗಿಸುತ್ತಿರುತ್ತಾನೆ. ಬಿಡುವಿನ ಸಮಯದಲ್ಲಿ ಮಠಕ್ಕೆ ಬಂದ ಭಕ್ತರಿಗೆ ಆಧ್ಯಾತ್ಮದ ಬಗ್ಗೆ ಪ್ರವಚನ ನೀಡುತ್ತಿರುತ್ತಾನೆ. ಹೀಗಿರಲು ಗ್ರಾಮದ ಕೆಲ ಜನರು ಅಸೂಯೆಯಿಂದ ಈತನ ವೃತ್ತಿ ಮತ್ತು ಪ್ರವೃತ್ತಿಗಳ ಬಗ್ಗೆ ನಿಂದನೆಯ ಮಾತುಗಳನ್ನಾಡುತ್ತಾ ಅಪಹಾಸ್ಯ ಮಾಡುತ್ತಾರೆ. ಇದರಿಂದ ತೀವ್ರ ನೊಂದ ಮೈಲಾರನು ಎಲ್ಲಿಗಾದರೂ ದೂರ ಹೋಗಲೇಬೇಕೆಂದು ತೀರ್ಮಾನಿಸಿ, ಅಂದು ರಾತ್ರಿಯೇ ಯಾರಿಗೂ ಹೇಳದೆ, ಹೆಂಡತಿಯನ್ನು ಬಿಟ್ಟು ಹಂಪಿಗೆ ಬಂದು ವಿರೂಪಾಕ್ಷ ದೇವಾಲಯದಲ್ಲಿ ಮಲಗಿರುತ್ತಾನೆ. ರಾತ್ರಿ ಮಲಗಿದ್ದಾಗ ಕನಸಿನಲ್ಲಿ ವಿರೂಪಾಕ್ಷೇಶ್ವರನು ಕಾಣಿಸಿ 'ಮೂರು ಗಾತ್ರಗಳುಳ್ಳ ಗುರುವಿಗೆ

ಶರಣಾಗತನಾಗಿ ತಾತನ ಸೇವೆಯನ್ನು ಎಡಬಿಡದೆ ಪ್ರತಿದಿನವೂ ಮಾಡುತ್ತಲಿರು. ನಿನಗೆ ಒಳ್ಳೆಯದಾಗುತ್ತದೆ' ಎಂದು ಹೇಳಿದಂತಾಯಿತು. ಈ ರೀತಿ ರಾತ್ರಿ ಕನಸು ಕಂಡಂತವನಾಗಿ ಮುಂಜಾನೆ ಎದ್ದವನೇ ಗುರುವನ್ನು ಹುಡುಕಲು ಪ್ರಾರಂಭಿಸಿದನು. ಲೋಕದ ಪರಿವೇ ಇಲ್ಲದೆ ಅನ್ನ, ನೀರು, ಸ್ನಾನಗಳಿಲ್ಲದೆ ಹುಚ್ಚನಂತೆ ಅಲೆದಾಡುತ್ತಾ, ಊರೂರು ಸುತ್ತುತ್ತಾ ಪರಮವಿರಾಗಿಯಾಗಿ ಹುಬ್ಬಳ್ಳಿಯ ಸಿದ್ಧಾರೂಢರಲ್ಲಿಗೆ ಬಂದನು. ಮೈಲಾರನ ವಿಲಕ್ಷಣ ವೇಷವನ್ನು, ವಿಚಿತ್ರ ನಡೆ, ನುಡಿಯನ್ನು, ಅವನ ಮನದ ಅಂತರಾಳವನ್ನು ಅರಿತ ಸಿದ್ಧಾರೂಢರು ಮಠದಲ್ಲೇ ಕೆಲವು ದಿನ ಉಳಿಸಿಕೊಂಡು, ಸ್ತಿಮಿತಕ್ಕೆ ಬಾರದ ಅವನ ಸ್ವಭಾವವನ್ನು ಕಂಡು "ಅಯ್ಯಾ, ನಿನ್ನ ಗುರು ನಿನ್ನ ಆಗಮನದಲ್ಲೇ ಇರುವನು. ಆ ಗುರು ದಕ್ಷಿಣಾಮೂರ್ತಿ. ನೀನು ಆ ಮಹಾತ್ಮರ ಸನ್ನಿಧಿಗೆ ತೆರಳು, ಅವರ ಅನುಗ್ರಹಕ್ಕೆ ಪಾತ್ರನಾಗು. ಆ ಮಹಾಮಹಿಮನ ಗುರು ಬೋಧೆಯಿಂದ ನಿನ್ನ ಜನ್ಮ ಸಾರ್ಥಕವಾಗುವುದು" ಎಂದು ಹೇಳಿ ಆಶೀರ್ವದಿಸಿ, ಕಳುಹಿಸಿಕೊಟ್ಟರು. ಅಲ್ಲಿಂದ ಹೊರಟ ಮೈಲಾರನು ಸಿದ್ಧ ಪರ್ವತಕ್ಕೆ ಬಂದನು. ಅಲ್ಲಿ ದೇವಿ ಬಗಳಾಂಬಿಕೆಯನ್ನು ನೆನೆದು, ಮನದಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾ, ಬಾಹ್ಯ ಪ್ರಪಂಚದ ಪರಿವೇ ಇಲ್ಲದೆ ಯೋಗದಲ್ಲಿ ಮಗ್ನನಾಗುತ್ತಾನೆ. ಹಲವು ದಿನಗಳ ಕಾಲ ಯೋಗದಲ್ಲಿದ್ದು, ಅಂತರಂಗದಲ್ಲಿ ದೇವಿಯನ್ನು ಸಾಕ್ಷಾತ್ಕರಿಸಿಕೊಂಡು ಎಚ್ಚೆತ್ತವನಂತೆ ತನ್ನ ಪ್ರಯಾಣ ಮುಂದುವರೆಸುತ್ತಾನೆ. ಅಲ್ಲಿಂದ ಚೇಳಗುರ್ಕಿ ಕ್ಷೇತ್ರದ ಎರ್ರಿತಾತನವರ ಸನ್ನಿಧಿಗೆ ಬರುವಾಗ, ಮಾರ್ಗ ಮಧ್ಯದಲ್ಲಿ ಚಾಕುಬಂಡೆ ಎಂಬ ಗ್ರಾಮಕ್ಕೆ ಬರುತ್ತಾನೆ. ಅಲ್ಲಿ ರಾಮಣ್ಣ ಎಂಬುವವರ ಮನೆಯ ಹತ್ತಿರದ ಬಾವಿಯ ಕಟ್ಟೆಯ ಮೇಲೆ ಒಬ್ಬಂಟಿಗನಾಗಿ, ಯಾರೊಂದಿಗೂ ಮಾತನಾಡದೆ ಕುಳಿತಿರುತ್ತಾನೆ. ಸರ್ವಸಂಗ ಪರಿತ್ಯಾಗಿಯಾಗಿ, ದಿಗಂಬರನಾಗಿ, ನೋಡುಗರಿಗೆ ಹುಚ್ಚನಂತೆ ಕಾಣುತ್ತಿದ್ದ ಮೈಲಾರನನ್ನು ಯಾರೂ ಮಾತನಾಡಿಸುವುದಿಲ್ಲ. ಹೀಗೆ ಹಲವು ದಿನಗಳು ಹಸಿವೆ, ನಿದ್ರೆ, ಬಾಯಾರಿಕೆ, ಚಳಿ, ಮಳೆಯನ್ನದೆ ಧ್ಯಾನ ಮಗ್ನನಾಗಿ ಕುಳಿತಿರಲು, ಊರಲ್ಲಿ ಕೆಲವರು ಅನ್ನ, ನೀರು ತಂದು ಕೊಡುತ್ತಾರೆ. ತಾವಾಗಿಯೇ ಬಂದು ಈ ರೀತಿ ಸೇವೆ ಮಾಡುತ್ತಿದ್ದ ಜನಗಳಿಗೆ ಮಾನವ ಜನ್ಮದ ಮಹತ್ವವನ್ನು ಅದರ ಸಾರ್ಥಕತೆಯನ್ನು ಉಪದೇಶಿಸುತ್ತಾನೆ. ಆಧ್ಯಾತ್ಮದ ನಡೆ-ನುಡಿಯುಳ್ಳ ಈತನ ಸ್ವಭಾವವನ್ನು ಅರಿತ ಜನರಿಗೆ ಭಯ-ಭಕ್ತಿಯ ಗೌರವ ಮೂಡಿ, ಸೇವೆ ಮಾಡತೊಡಗುತ್ತಾರೆ. ಹೀಗೆ ಸುಮಾರು ಎರಡು ವರ್ಷಗಳ ಕಾಲ ಚಾಕುಬಂಡೆಯಲ್ಲಿದ್ದು, ನಂಬಿ ಬಂದ ಭಕ್ತ ಜನತೆಗೆ ಭಕ್ತಿ, ಜ್ಞಾನ, ವೈರಾಗ್ಯವನ್ನು ಬೋಧಿಸುತ್ತಿದ್ದನು. ಹೀಗಿರಲು ಒಮ್ಮೆ ಯಾರಿಗೂ ತಿಳಿಯದ ಹಾಗೆ ಮನಸ್ಸಿನ ಮಾರ್ಗದಂತೆ ಚೇಳಗುರ್ಕಿ ಗ್ರಾಮಕ್ಕೆ ಬರುತ್ತಾನೆ.

ಚೇಳಗುರ್ಕಿ ಗ್ರಾಮಕ್ಕೆ ಬಂದಾಗ ಮಠದಲ್ಲಿದ್ದವರು ಈತನಾರೋ ಹುಚ್ಚನೆಂದು, ಮಠದ ಒಳಗಡೆ ಬಿಡದೆ ಕುಹಕದ ಮಾತುಗಳನ್ನಾಡುತ್ತಾರೆ. ಮಠದ ಬಾಗಿಲಿನಲ್ಲೇ ಇದ್ದು, ಮಠದ ಆವರಣವನ್ನೆಲ್ಲಾ ಸ್ವಚ್ಛಗೊಳಿಸಿ, ತಾತನವರನ್ನು ನೆನೆಯುತ್ತಾ ಧ್ಯಾನ ಮಾಡುತ್ತಿದ್ದನು. ಮಠದಲ್ಲಿ

ಎಲ್ಲರೂ ಮಲಗಿದ್ದಾಗ, ತಾನೊಬ್ಬನೇ ತಾತನ ಬಳಿ ಹೋಗಿ ಅವರ ಪಾದ ಸೇವೆ ಮಾಡಿ ಬರುತ್ತಿದ್ದನು. ಹೀಗೆ ಹಲವಾರು ದಿನಗಳು ಕಳೆದವು. ಮಠದ ಆವರಣದ ಕಸವೆಲ್ಲವನ್ನು ಗುಡಿಸಿ, ಆ ವ್ಯಕ್ತಿ ತಾನಿರುವ ಸ್ಥಳದಲ್ಲಿ ಹೋಗಿ ಮಲಗುತ್ತಿದ್ದನು. ಈತನು ಮಾಡುವ ಸೇವೆ ಯಾರಿಗೂ ತಿಳಿಯದಿದ್ದರೂ, ಮಠದ ಆವರಣ ಮಾತ್ರ ಸ್ವಚ್ಛವಾಗುತ್ತಿರುವುದು ಕಾಣುತ್ತಿತ್ತು. ಇದು ಯಾರಿಂದ ಎಂದು ಪರೀಕ್ಷಿಸಿದಾಗ ಈತನಿಂದಲೇ ಆ ಮಠದ ಸೇವೆ ನಡೆಯುತ್ತಿದೆಯೆಂದು ತಿಳಿದುಬಂದಿತು. ಇದರಿಂದ ಮಠದ ಒಳಗಡೆ ಹೋಗಲು ಅವಕಾಶವನ್ನು ಕೊಟ್ಟರು. ಯಾವಾಗಲೂ ಗುರುಸೇವೆಯನ್ನು ಮಾಡಲು ಹಾತೊರೆಯುತ್ತಿದ್ದ ಈತ, ತನ್ನ ಹೆಸರನ್ನು, ಊರನ್ನು ಹೇಳದೆ, ತಾತನ ಮತ್ತು ಮಠದ ಸೇವೆಯನ್ನು ಮಾಡುತ್ತಿದ್ದ. ವಿಚಿತ್ರ ಆಕಾರದ, ವಿಚಿತ್ರ ವೇಷದ ಈ ವ್ಯಕ್ತಿಯನ್ನು ಎಲ್ಲರೂ 'ಹುಚ್ಚುಲಿಂಗಪ್ಪ' ಎಂದು ಕರೆಯಲಾರಂಭಿಸಿದರು. ಮುಂದೆ ಈ ವ್ಯಕ್ತಿ ಹುಬ್ಬಳ್ಳಿಯ ಸಿದ್ಧಾರೂಢರಲ್ಲಿಂದ ಬಂದವನೆಂದು ತಿಳಿದಾಗ ಎಲ್ಲರೂ ಗೌರವ, ಮನ್ನಣೆ ನೀಡತೊಡಗಿದರು.

ತಾತನವರ ಸೇವೆಗೆ ಸಂಪೂರ್ಣ ತನ್ನನ್ನು ತೊಡಗಿಸಿಕೊಂಡು ಗುರು ಅನುಗ್ರಹಕ್ಕಾಗಿ ಶ್ರದ್ಧೆ, ನಿಷ್ಠೆಯಿಂದ ಸೇವೆ ಮಾಡುತ್ತಿರುವ ಈತನ ಸೇವಾ ಮನೋಭಾವನೆಯನ್ನು ಪರೀಕ್ಷಿಸಲು ಕಾಲ ಸನ್ನಿಹಿತವಾಯಿತು. ಹೀಗೆ ಸೇವೆ ಮಾಡುತ್ತಿರುವಾಗ ಈತನನ್ನು ಹತ್ತಿರಕ್ಕೆ ಕರೆದ ತಾತನು, 'ಏನಯ್ಯ ತುಮಕೂರಿಗೆ ಹೋಗಿ ಚಕ್ಕುಲಿ ತಾರಯ್ಯ ತಿನ್ನುತ್ತೇನೆ' ಎನ್ನುತ್ತಾರೆ. ಸೇವೆಗೆಂದೇ ಮೀಸಲಾಗಿದ್ದ ಶಿಷ್ಯ, ತಾತನವರ ಈ ಬಯಕೆಯನ್ನು ಕೇಳಿದ ತಕ್ಷಣವೇ ರಾತ್ರೋ ರಾತ್ರಿ ತುಮಕೂರಿಗೆ ಪ್ರಯಾಣ ಆರಂಭಿಸುತ್ತಾನೆ. ಗುರುವಿನ ಮನೋಬಯಕೆಯನ್ನು ಈಡೇರಿಸುವುದಕ್ಕಾಗಿ ಆತುರ, ಆತುರವಾಗಿ ಹೋಗುತ್ತಿರಲು, ಮಾರ್ಗದಲ್ಲಿ ಈತನ ವಿಲಕ್ಷಣ ರೂಪವನ್ನು ಕಂಡು ಹುಚ್ಚನೆಂದು ಹಿಂಸಿಸುತ್ತಾರೆ. ಗೇಲಿ ಮಾಡುತ್ತಾ, ಕಲ್ಲುಗಳಿಂದ ಹೊಡೆಯುತ್ತಾರೆ. ಲೋಕದ ಜನರ ಚಿಂತೆ ಮರೆತು, ಅವರುಗಳು ಕೊಟ್ಟ ತೊಂದರೆಗಳನ್ನು ಅನುಭವಿಸುತ್ತಾ ತುಮಕೂರನ್ನು ಸೇರುತ್ತಾನೆ. ಆದರೆ, ಕೈಯಲ್ಲಿ ದುಡ್ಡಿಲ್ಲ. ಏನು ಮಾಡುವುದು ಎಂದು ಚಿಂತಿಸಿ, ಅವರಿವರ ಸಾಮಾನುಗಳನ್ನು ಹೊರುವ ಕೂಲಿ ಕೆಲಸ ಮಾಡಿ ಹಣ ಸಂಪಾದಿಸುತ್ತಾನೆ. ಬಂದ ಹಣದಿಂದ ಚಕ್ಕುಲಿ ತೆಗೆದುಕೊಂಡು, ತುಂಡು ಬಟ್ಟೆಯಲ್ಲಿ ಕಟ್ಟಿಕೊಂಡು ಹಿಂದಿರುಗಿದನು. ತನ್ನ ದೇಹದ ಅರಿವಿಲ್ಲದೆ ಗುರು ಬಯಕೆಯನ್ನು ಈಡೇರಿಸುವ ಉದ್ದೇಶದಿಂದ ಹಗಲೆನ್ನದೆ, ಇರುಳೆನ್ನದೆ, ಚಳಿ, ಗಾಳಿಯೆನ್ನದೆ, ಅನ್ನ-ನೀರಿಲ್ಲದೆ, ಮೈಮೇಲೆ ಬಟ್ಟೆಯಿಲ್ಲದೆ, ಆತುರವಾಗಿ ಬರುತ್ತಿದ್ದನು. ಮಾರ್ಗ ಮಧ್ಯದ ಹಳ್ಳಿಯೊಂದರಲ್ಲಿ ಅನ್ನಕ್ಕಾಗಿ ಭಿಕ್ಷೆ ಬೇಡಲು ಹೋದರೆ ಯಾರೂ ನೀಡುವುದಿಲ್ಲ. ರಾತ್ರಿಯ ಸಮಯ ನಡೆಯಲಾಗದೆ ಆ ಹಳ್ಳಿಯಲ್ಲೇ ಇರಲು ನಿರ್ಧರಿಸುತ್ತಾನೆ. ಈತನ ವಿಚಿತ್ರ ವೇಷ, ರೂಪವ ಕಂಡ ಗ್ರಾಮಸ್ಥರು ಕಳ್ಳನಿರಬೇಕೆಂದು ಬಂಧಿಸಿ, ಮೈ-ಕೈಯಲ್ಲಿ ರಕ್ತ ಬರುವ ಹಾಗೆ ಹೊಡೆಯುತ್ತಾರೆ. ಎಷ್ಟು ಹೊಡೆದರೂ ತಾನ್ಯಾರೆಂದೂ ಹೇಳದೆ ಸುಮ್ಮನೇ ಇದ್ದ ಈತನ ಸ್ಥಿತಿ ಕಂಡು ಊರವರ ಮನಸ್ಸು ಕರಗಿ ಕಟ್ಟಿರುವ ಕೈಗಳನ್ನು ಬಿಚ್ಚಿ ಕಳುಹಿಸುತ್ತಾರೆ.

ಹೀಗೆ ದಾರಿಯುದ್ದಕ್ಕೂ ನಾನಾ ರೀತಿಯ ಕಷ್ಟಗಳನ್ನು ಅನುಭವಿಸುತ್ತಾ ಚೇಳಗುರ್ಕಿಗೆ ಬರುತ್ತಾನೆ.

ಚೇಳಗುರ್ಕಿಗೆ ಬಂದು ತಾತನವರಿಗೆ ನಮಸ್ಕರಿಸಿ 'ಅಪ್ಪಾ, ಚಕ್ಕುಲಿ ತಂದಿದ್ದೇನೆ ತಿನ್ನಿ' ಎಂದಾಗ, ತಾತನವರು ಕಾಶಿಯ ಗಂಗಾ ಜಲ ಬರಲಿ ಇರಯ್ಯ ತಿನ್ನುತ್ತೇನೆ ಎನ್ನುತ್ತಾರೆ. ಕಾಶಿಯ ಗಂಗೆ ಬರುವುದೆಂದು, ತರುವವರ್ಯಾರು? ಕಷ್ಟಪಟ್ಟು ತಂದ ನನ್ನ ಶ್ರಮವೆಲ್ಲಾ ವ್ಯರ್ಥವೆಂದು ನಿರಾಸೆಯಿಂದ ಚಿಂತಿಸುತ್ತಾನೆ. ಕೆಲದಿನಗಳಲ್ಲೇ ಯಾರೋ ಭಕ್ತರೊಬ್ಬರು ಕಾಶಿಗೆ ಹೋಗಿ, ಗಂಗಾಜಲವನ್ನು ತೆಗೆದುಕೊಂಡು ತಾತನವರ ದರ್ಶನಕ್ಕೆಂದು ಮಠಕ್ಕೆ ಬರುತ್ತಾರೆ. ಇದನ್ನರಿತ ತಾತನು 'ತಾರಯ್ಯ ತುಮಕೂರ ಚಕ್ಕುಲಿ' ಎಂದು ತಂದಿದ್ದ ಚಕ್ಕುಲಿಗಳಲ್ಲಿ ಕೆಲವನ್ನು ತಿಂದು ಗಂಗಾ ಜಲವನ್ನು ಕುಡಿದು ಉಳಿದ ಚಕ್ಕುಲಿ ಮತ್ತು ಗಂಗಾ ಜಲವನ್ನು ಶಿಷ್ಯನಾದ ಮೈಲಾರನಿಗೆ ಕೊಡುತ್ತಾ, ಶಿಷ್ಯನ ನಿಷ್ಠೆ, ಸಹನೆಯನ್ನರಿತು ಮೋಕ್ಷದ ಮಾರ್ಗವನ್ನು ಉಪದೇಶಿಸಿ 'ನೀನು ಶಿವರಾಮನಯ್ಯ' ಎಂದು ಹೊಸ ಹೆಸರಿನಿಂದ ಕರೆದು ಆಶೀರ್ವದಿಸಿದರು. ಹೀಗೆ ಮೈಲಾರನು, ಹುಚ್ಚುಲಿಂಗಪ್ಪನಾಗಿ, ಮುಂದೆ ಗುರುಕೃಪೆ ಮತ್ತು ಗುರು ಉಪದೇಶದಿಂದ ಶಿವರಾಮಯ್ಯನಾಗಿ ತನ್ನ ಸಾಧನೆಯ ಸಿದ್ಧಿಯಿಂದ 'ಶಿವರಾಮವಧೂತ'ನೆಂದು ಖ್ಯಾತಿ ಪಡೆದಿದ್ದಾರೆ.

ಗುರು ಉಪದೇಶವನ್ನು ಪಡೆದು, ಕೆಲವು ದಿನ ಮಠದಲ್ಲಿಯೇ ಇದ್ದು ಗುರುವಿನ ಆದೇಶದಂತೆ ಹಂಪಿಗೆ ಪ್ರಯಾಣ ಬೆಳೆಸುತ್ತಾರೆ. ಹಂಪಿಗೆ ಬಂದ ಶಿವರಾಮವಧೂತರು ಸೀತಾ ಸರೋವರದ ಗುಡ್ಡಗಳಲ್ಲಿನ ಗವಿಗಳಲ್ಲಿ ವಾಸಿಸುತ್ತಾ, ಏಕಾಗ್ರತೆಯಿಂದ ಗುರುವನ್ನು ಸ್ಮರಿಸುತ್ತಾ ಯೋಗ ಸಾಧನೆಯಲ್ಲಿ ನಿರತರಾಗುತ್ತಾರೆ. ದೇಹದ ಪರಿವೇ ಇಲ್ಲದೆ ಊಟ, ಬಾಯಾರಿಕೆ, ನಿದ್ರೆಗಳ ತೊರೆದು ಯಾರಿಗೂ ಗೊತ್ತಾಗದ ಹಾಗೆ ಒಂಟಿಯಾಗಿ ಗವಿಯಲ್ಲಿದ್ದು, ತನಗೆ ಬೇಕೆನಿಸಿದಾಗ ಮಾತ್ರ ಹೊರಗಡೆ ಬಂದು ಹೋಗುತ್ತಿದ್ದರು. ಕೋದಂಡರಾಮಸ್ವಾಮಿ ಗುಡಿಯ ಅರ್ಚಕರೊಬ್ಬರು ಇವರನ್ನು ಕಂಡು ಯಾರೋ ಯೋಗಿ ಇರಬಹುದೆಂದು ನಿತ್ಯ ಹಣ್ಣು-ಹಂಪಲುಗಳನ್ನು ನೀಡುತ್ತಾರೆ. ಸತ್ಪುರುಷರೊಬ್ಬರು ಗವಿಯಲ್ಲಿದ್ದಾರೆಂಬ ವಿಷಯ ತಿಳಿದ ಹಲವಾರು ಜನರು ಬಂದು ಅವರ ದರ್ಶನ ಮಾಡತೊಡಗಿದರು. ತನ್ನನ್ನು ನಂಬಿ ಬರುವ ಅಸಹಾಯಕರಿಗೆ, ನೊಂದವರಿಗೆ, ಅಭಯವನ್ನು ನೀಡುತ್ತಾ ಅವರಿಗಾಗುವ ತಾಪತ್ರಯಗಳನ್ನು ಪರಿಹಾರ ಮಾಡುತ್ತಾ, ಭಕ್ತ ಜನತೆಯನ್ನು ಉದ್ಧರಿಸತೊಡಗಿದರು.

ಒಮ್ಮೆ ಶಿವರಾಮಯ್ಯನವರು ವಾಸಿಸುತ್ತಿದ್ದ ಪ್ರದೇಶವು ಶೀತಮಯವಾಗಿ ಕಾಯಿಲೆ ಬಂದು ಹೊಟ್ಟೆಯಲ್ಲಿ ಒಂದು ವಿಧವಾದ ಗಂಟು ಬೆಳೆಯಿತು. ಅದರಿಂದ ನಿತ್ರಾಣರಾಗಿ ಎದ್ದು ಓಡಾಡಲು ಕೂಡ ಸಾಧ್ಯವಿಲ್ಲವಾಯಿತು. ಇಷ್ಟಾದರೂ ಸದ್ಗುರುಗಳು ಇವೆಲ್ಲವೂ 'ಜಡಮಯವಾದ ದೇಹಕ್ಕೆ ವಿನಃ ನನ್ನೇನು ಮಾಡುವುದೆಂದು' ಹೇಳುತ್ತಿದ್ದರು. ಶೀತಮಯವಾದ ಪ್ರದೇಶವನ್ನು ಬಿಡಲು ಹಲವು ಭಕ್ತರ ಮತ್ತು ವಿರೂಪಾಕ್ಷಸ್ವಾಮಿಯ ಅರ್ಚಕರಾದ ಸುಬ್ಬಯ್ಯನವರ ಒತ್ತಾಯದ ಮೇರೆಗೆ ಈವರೆಗೆ ವಾಸ ಮಾಡುತ್ತಿದ್ದ ಪ್ರದೇಶವನ್ನು ಬಿಟ್ಟು ಹೇಮಕೂಟದಲ್ಲಿದ್ದ ನಾಗಲಿಂಗಪ್ಪನವರ

ಗವಿಗೆ ಬರುತ್ತಾರೆ. ಭಕ್ತರೆಲ್ಲಾ ಸೇರಿ ಆ ಗವಿಯನ್ನು ಅದರ ಆವರಣವನ್ನು ಸ್ವಚ್ಛಗೊಳಿಸಿ, ವಾಸ ಮಾಡಲು ಯೋಗ್ಯ ಜಾಗವನ್ನಾಗಿ ಮಾಡುತ್ತಾರೆ. ಗವಿಯನ್ನೇ ಆಶ್ರಮವನ್ನಾಗಿ ಮಾಡಿಕೊಂಡು ತಾತನವರು, ಆಶ್ರಮದಲ್ಲಿದ್ದಾಗ ನಿತ್ಯವೂ ಬೆಳಿಗ್ಗೆ ಮತ್ತು ಸಾಯಂಕಾಲ ಭಾಗವತ, ರಾಮಾಯಣ ಮತ್ತು ವೇದಾಂತಸಾರವಾದ ಅನುಭವಾಮೃತಗಳನ್ನು ಉಪದೇಶಿಸುತ್ತಿದ್ದರು. ಜೊತೆಗೆ ಮಾನವರಾಗಿ ಹುಟ್ಟಿ, ಸಾಧನೆಯಿಂದ ದೈವತ್ವಕ್ಕೇರಿದ ಮಹಾತ್ಮರುಗಳ ಜೀವನ ಕಥೆಗಳನ್ನು, ಅವರ ಸಾಧನೆಗಳನ್ನು ಸೋದಾರಣವಾಗಿ ತನ್ನ ಶಿಷ್ಯ ವೃಂದಕ್ಕೆ, ಭಕ್ತ ಜನತೆಗೆ ಉಪದೇಶಿಸುತ್ತಿದ್ದರು.

ತಾತನ ದರ್ಶನಕ್ಕೆಂದು ಬರುತ್ತಿದ್ದ ಭಕ್ತ ಸಮೂಹಕ್ಕೆ ಒಮ್ಮೆ ಮೌನಿಯಾಗಿ, ಒಮ್ಮೆ ಹುಚ್ಚರಂತೆ, ಮತ್ತೊಮ್ಮೆ ಮಹಾಜ್ಞಾನಿಯಂತೆ ಕಾಣುತ್ತಾ ತಮ್ಮ ಅದ್ಭುತ ಲೀಲೆಗಳನ್ನು ತೋರಿದ್ದಾರೆ. ಆಶ್ರಮದಲ್ಲಿ ನಿರಂತರವಾಗಿ ಶಿವಭಜನೆ, ರಾಮಭಜನೆ, ಅನ್ನಸಂತರ್ಪಣೆ ಮುಂತಾದ ಕಲ್ಯಾಣ ಕಾರ್ಯಗಳನ್ನು ಯಾವ ಭೇದ, ಭಾವವಿಲ್ಲದೆ ನೆರವೇರಿಸುತ್ತಿದ್ದರು. ತಮ್ಮನ್ನು ನಂಬಿ ಬಂದ ಭಕ್ತರ ಕಷ್ಟಗಳನ್ನು, ಸಮಸ್ಯೆಗಳನ್ನು ಬಗೆಹರಿಸುತ್ತಾ ಸಮಾಜದ ಎಲ್ಲಾ ವರ್ಗದ ಜನರಿಂದಲೂ, ಭಕ್ತಿ, ಗೌರವಗಳನ್ನು ಸ್ವೀಕರಿಸುತ್ತಿದ್ದರು. ರೋಗಿಗಳಿಗೆ, ಅಶಕ್ತರಿಗೆ, ಅಸಹಾಯಕರಿಗೆ ಅಭಯವನ್ನಿತ್ತು, ಆಶೀರ್ವದಿಸಿ ಅವರನ್ನು ರಕ್ಷಿಸುತ್ತಿದ್ದರು.

ಕಾಲ ಕಳೆದಂತೆ ಆಯುಷ್ಯದ ಅಂಚಿನಲ್ಲಿದ್ದ ತಾತನು, ತನ್ನ ಎಲ್ಲಾ ಭಕ್ತರನ್ನು, ಶಿಷ್ಯರನ್ನು ಕರೆದು ನಾನು ಭುವಿಗೆ ಬಂದ ಕಾರ್ಯವು ಮುಗಿಯಿತು. ಇಂದಿಗೆ ಈ ದೇಹದ ಸಹವಾಸ ಸಾಕಾಯಿತು. ಇನ್ನು ಮುಂದೆ ನಿರ್ಗುಣ, ನಿರಾಕಾರ ಸ್ವರೂಪನಾದ ಪರಬ್ರಹ್ಮನಲ್ಲಿ ಸುಖವನ್ನು ಹೊಂದುತ್ತಾ ಕೈವಲ್ಯವನ್ನು ಪಡೆಯುತ್ತೇನೆಂದು ಹೇಳಿದರು. ತಾತನವರು ಐಕ್ಯರಾಗುವ ವಿಷಯ ತಿಳಿದು ದುಃಖಿತರಾದ ಭಕ್ತರಿಗೆ, ಶಿಷ್ಯರಿಗೆ ಸಮಾಧಾನ ಮಾಡುತ್ತಾ ನೀವೆಲ್ಲಾ ನಿತ್ಯ ಭಜನೆ, ಪ್ರಾರ್ಥನೆ, ಸತ್ಯ ಕಾರ್ಯಗಳನ್ನು ಬಿಡದೆ ಮಾಡುತ್ತೀರಿ. ನಿಮಗೆ ಶಾಶ್ವತವಾದ ಸುಖ ದೊರೆಯುತ್ತದೆ ಎಂದು ಉಪದೇಶಿಸಿದರು. ಶಿಷ್ಯನಾದ ಶಿವಶರಣಾನಂದರನ್ನು ಹತ್ತಿರ ಕರೆದು, ನಿನ್ನ ಮನಸ್ಸು ಗುರು ಸೇವೆಯಲ್ಲಿ ಹಾಗೂ ಆತ್ಮಾನುಸಂಧಾನದಲ್ಲಿ ಸ್ಥಿರವಾಗಿರುವುದು. ಸದ್ಗುರುವಿನ ಶ್ರೇಷ್ಠ ಕರುಣೆಯನ್ನು ನೀನು ಪಡೆದಿರುವೆ. ಈ ಆಶ್ರಮದ ಜವಾಬ್ದಾರಿಯನ್ನು ನಿನಗೆ ವಹಿಸಿಕೊಡುತ್ತೇನೆ ಎಂದು ಆಶೀರ್ವದಿಸಿದರು. ತಾತನವರು ಐಕ್ಯರಾಗುವ ವಿಷಯ ತಿಳಿದು ಅನೇಕ ಸಾಧು-ಸಂತರು, ಸತ್ಪುರುಷರು, ಶರಣರು ಸೇರಿ ಪುರಾಣ ಪ್ರವಚನ, ಕೀರ್ತನೆ, ಭಜನೆಗಳನ್ನು ನಡೆಸುತ್ತಾರೆ. ಮಂಗಳ ಘೋಷಣೆಯೊಂದಿಗೆ ಸಮಾಧಿ ಸ್ಥಿತಿಯಲ್ಲಿ ಧ್ಯಾನ ಮಾಡುತ್ತಾ ೧೯೩೪ರಲ್ಲಿ ತಾತನವರು ಐಕ್ಯರಾದರು.

ಶಿವರಾಮವಧೂತರ ನಂತರ ಆಶ್ರಮದ ಜವಾಬ್ದಾರಿಯನ್ನು ಸ್ವೀಕರಿಸಿದ ಶಿವಶರಣಾನಂದರು ಗುರುವಿನ ಆದೇಶದಂತೆ ಆಶ್ರಮಕ್ಕೆ ಬರುವ ಭಕ್ತರ ನೋವು-ಕಷ್ಟಗಳನ್ನು ಪರಿಹರಿಸಿ, ಗುರುವಿನ ಹೆಸರಿನಲ್ಲಿ ಸಪ್ತಾಹ, ಭಜನಾ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಭಕ್ತರ ಸಹಕಾರದಿಂದ ಹಂಪಿಯಲ್ಲಿ ಶಿವರಾಮವಧೂತರ ಸಮಾಧಿಯ ಮೇಲೆ ಅಮೃತ ಶಿಲೆಯ ಮೂರ್ತಿಯನ್ನು ಪ್ರತಿಷ್ಠಾಪಿಸಿ, ನಿತ್ಯಪೂಜೆ ಮತ್ತು ಅಮವಾಸ್ಯೆಯ ದಿನದಂದು ವಿಶೇಷ ಪೂಜೆಗಳು ನಡೆಯುವಂತೆ

ವ್ಯವಸ್ಥೆ ಮಾಡಿದರು. ನಂತರ ಮಠದ ಅಧಿಕಾರವನ್ನು ಅವರ ಶಿಷ್ಯರಾದ ಕಟ್ಟೆ ಬಸಪ್ಪನವರು ವಹಿಸಿಕೊಂಡರು. ಮುಂದೆ ಶಿವಾನಂದ ಭಾರತಿ ಸ್ವಾಮಿಗಳು ನಂತರದಲ್ಲಿ, ವಿದ್ಯಾನಂದ ಭಾರತಿ ಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಆಶ್ರಮದಲ್ಲಿ ಪೂಜೆ, ಪ್ರವಚನ ಕಾರ್ಯಕ್ರಮಗಳ ಜೊತೆಗೆ ಶಿವರಾಮವಧೂತರ ಹೆಸರಿನಲ್ಲಿ ರಥೋತ್ಸವ ಕಾರ್ಯಗಳನ್ನು ನಡೆಸುತ್ತಿದ್ದಾರೆ.

### ೧೨. ಕಾಳಘಟ್ಟದ ರುದ್ರಾವಧೂತರು

ಕಮಲಾಪುರ ಹೋಬಳಿಯ ಕಾಳಘಟ್ಟ ಎಂಬ ಪ್ರದೇಶದಲ್ಲಿ ರುದ್ರಾವಧೂತರ ಆಶ್ರಮ ಕಂಡುಬರುತ್ತದೆ. ರುದ್ರಾವಧೂತರ ಕೌಟುಂಬಿಕ ಹಿನ್ನೆಲೆಯ ಬಗ್ಗೆ ಹೆಚ್ಚಿನ ವಿವರಗಳು ಸಿಕ್ಕುವುದಿಲ್ಲ. ಇವರ ಜನ್ಮಸ್ಥಳ ಚಿತ್ರದುರ್ಗ ಜಿಲ್ಲೆಯ ದೊಡ್ಡ ಸಿದ್ದವ್ವನಹಳ್ಳಿ. ಲೌಕಿಕ ಜೀವನದ ಬಗ್ಗೆ ಜುಗುಪ್ಸೆ ಹೊಂದಿ, ವೈರಾಗ್ಯ ತಾಳಿ, ವಿರಾಗಿಯಾಗಿ ಊರೂರು ಅಲೆಯುತ್ತಾ ಹಂಪಿಗೆ ಬಂದು, ಕಾಳಘಟ್ಟದ ತಿಮ್ಮಪ್ಪವಧೂತರ ಶಿಷ್ಯರಾಗಿ ಗುರುಸೇವೆಯಲ್ಲಿ ನಿರತರಾಗುತ್ತಾರೆ. ಗುರುವಿನಿಂದ ಗುರುಕೃಪೆ ಮತ್ತು ಗುರು ಉಪದೇಶವನ್ನು ಪಡೆದು ಯೋಗ ಮಾರ್ಗದಲ್ಲಿ ಹಠ ಯೋಗ ಮತ್ತು ರಾಜಯೋಗವನ್ನು ಸಾಧಿಸಿದರು. ಈಗಿರುವ ಮಠದ ಎಡಭಾಗದ ಹಂಪಿ ಹೊಳೆಯ ದಡದಲ್ಲಿ ಒಂದು ಸಣ್ಣ ಗವಿಯಿದೆ. ಸ್ವಾಭಾವಿಕವಾಗಿ ನಿರ್ಮಾಣವಾಗಿರುವ ಈ ಗವಿಯಲ್ಲಿಯೇ ರುದ್ರಾವಧೂತರು ಧ್ಯಾನ ಮತ್ತು ಯೋಗಭ್ಯಾಸವನ್ನು ಮಾಡುತ್ತಿದ್ದರು. ಯೋಗ ಮಾರ್ಗಾವಲಂಬಿಗಳಾಗಿದ್ದ ಇವರು ಆಯುರ್ವೇದ ಪಂಡಿತರೂ ಆಗಿದ್ದರು. ತಮ್ಮನ್ನು ನಂಬಿ ಬಂದಿದ್ದ ನಾನಾ ರೀತಿಯ ರೋಗಿಗಳನ್ನು ಗುಣಪಡಿಸುತ್ತಾ, ಉಚಿತವಾಗಿ ಔಷಧೋಪಚಾರಗಳನ್ನು ಮಾಡುತ್ತಿದ್ದರು. ಇವರ ವ್ಯಕ್ತಿತ್ವ, ಸಾಧನೆ, ಸಿದ್ಧಿಯನ್ನರಿತ ಎಷ್ಟೋ ಜನರು ಇವರ ಶಿಷ್ಯರಾಗಿದ್ದಾರೆ.

ರುದ್ರಾವಧೂತರು ತಮ್ಮ ಅಂತ್ಯದ ಸಮಯದಲ್ಲಿ ತನ್ನೆಲ್ಲಾ ಆಸ್ತಿ ಮತ್ತು ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಬಗ್ಗೆ ಭಕ್ತೆಯಾದ ದುರ್ಗಮ್ಮನಿಗೆ ಈ ರೀತಿ ಹೇಳಿದರಂತೆ: 'ನನ್ನ ಶಿಷ್ಯರೆಲ್ಲಾ ಬಂದು, ನನ್ನ ಸಮಾಧಿಯ ಮೇಲೆ ಜೋಳವನ್ನು ಚೆಲ್ಲಬೇಕು. ಯಾರು ಹಾಕಿದ ಜೋಳವು ಹರಳುಗಳಾಗುವವೋ ಅವರೇ ನನ್ನ ಮುಂದಿನ ಉತ್ತರಾಧಿಕಾರಿಗಳಾಗಲು ಅರ್ಹರು' ಎಂದು ಹೇಳಿದ್ದರಂತೆ. ಅದರಂತೆ ಅವರ ಅಂತ್ಯದ ಸಮಯದಲ್ಲಿ ಬಂದ ಕೆಂಚಾವಧೂತ ಮತ್ತು ತಿಪ್ಪೇಸ್ವಾಮಿ ಎಂಬ ಶಿಷ್ಯರು ಇಬ್ಬರೂ ಸಮಾಧಿಯ ಮೇಲೆ ಜೋಳ ಹಾಕಿದಾಗ, ಹಾಕಿದ ಜೋಳವೆಲ್ಲಾ ಹರಳಾದವಂತೆ. ಇದರ ಪ್ರತೀಕವಾಗಿ ರುದ್ರಾವಧೂತರ ಪರಂಪರೆಯನ್ನು ಅವರ ಶಿಷ್ಯರಾದ ತಿಪ್ಪೇಸ್ವಾಮಿಗಳು ಮತ್ತು ಕೆಂಚಾವಧೂತರು ಮುಂದುವರೆಸಿದರು. ನಂತರ, ರಂಗಾವಧೂತರು ಮುಂದೆ ನರಸಿಂಹಾವಧೂತರು ಮುಂದುವರೆಸಿಕೊಂಡು ಬಂದರು.

### ೧೩. ಹೊಸಪೇಟೆಯ ಕೆಂಪಾವಧೂತರು

ಹೊಸಪೇಟೆ ನಗರ ಹೊರವಲಯದ ಹಂಪಿ ಮಾರ್ಗದಲ್ಲಿ ಕೆಂಪಾವಧೂತರ ಮಠ ಕಂಡು ಬರುತ್ತದೆ. ಕೆಂಪಾವಧೂತರ ಮೂಲ ಹೆಸರು ಹನುಮಯ್ಯ. ಕುರುಬ ಜಾತಿಗೆ ಸೇರಿದ

ಇವರು ಶ್ರೀಮಂತ ಕುಟುಂಬದವರಾಗಿದ್ದರು. ವ್ಯವಸಾಯ, ಬೇಟೆ ಇವುಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದ ಹನುಮಯ್ಯನವರಿಗೆ ಇಬ್ಬರು ಹೆಂಡತಿಯರಿದ್ದರು. ಹುಟ್ಟಿದ ಮಕ್ಕಳೆಲ್ಲಾ ಸತ್ತಿದ್ದರಿಂದ ಸಂಸಾರದ ಬಗ್ಗೆ ಜುಗುಪ್ಸೆ ಮೂಡಿ ತನ್ನೆಲ್ಲಾ ಆಸ್ತಿಯನ್ನು ತ್ಯಾಗ ಮಾಡಿ ಹಂಪಿಯ ಹೇಮಕೂಟದಲ್ಲಿರುವ ಶಿವರಾಮವಧೂತರ ಆಶ್ರಮ ಸೇರಿದರು. ಹಿಂದೆ ಹನುಮಯ್ಯನವರ ಅಜ್ಜಿ ತಿಮ್ಮಕ್ಕ ಶಿವರಾಮವಧೂತರ ಭಕ್ತೆ ಆಗಿದ್ದಳು. ತಾತನವರಿಗೆ ಊಟವನ್ನು ತೆಗೆದುಕೊಂಡು ಹೋಗುವಾಗ ಅಜ್ಜಿಯ ಜೊತೆಯಲ್ಲಿ ಆಶ್ರಮಕ್ಕೆ ಬರುತ್ತಿದ್ದ ಹನುಮಯ್ಯನು ಈಗ ವೈರಾಗ್ಯ ತಾಳಿ, ಶಿವರಾಮವಧೂತರ ಶಿಷ್ಯರಾಗಿದ್ದ ಶಿವಶರಣಾನಂದರ ಶಿಷ್ಯರಾಗಿ ಗುರುಸೇವೆ ಮಾಡತೊಡಗಿದರು. ಅವರಿಂದ ಗುರೂಪದೇಶವನ್ನು ಪಡೆದು, ಹೊಸಪೇಟೆಗೆ ಬಂದು, ಹಂಪಿ ಮಾರ್ಗದಲ್ಲಿ, ನಗರದ ಹೊರವಲಯದಲ್ಲಿ ಸಣ್ಣ ಮಠ ಕಟ್ಟಿಕೊಂಡು ವಾಸ ಮಾಡಿದರು. ಅಕ್ಷರ ಜ್ಞಾನ ಬಲ್ಲವರಾಗಿದ್ದ ಇವರು ಆಧ್ಯಾತ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ನಿಜಗುಣ ಶಿವಯೋಗಿಗಳ 'ವಿಚಾರ ಸಾಗರ', 'ಗುರುಚರಿತೆ', 'ಜ್ಞಾನಸಿಂಧು', 'ದೇವಿಮಹಾತ್ಮೆ', 'ಮಾರ್ಕಂಡೇಯ ಪುರಾಣ' - ಇತ್ಯಾದಿ ಪುಸ್ತಕಗಳು ಈಗಲೂ ಮಠದಲ್ಲಿವೆ. ದೇವಿಪುರಾಣವನ್ನು ಪಾರಾಯಣ ಮಾಡುವುದರಲ್ಲಿ ಸುತ್ತ-ಮುತ್ತ ಗ್ರಾಮಗಳಲ್ಲೆಲ್ಲಾ ಪ್ರಸಿದ್ಧರಾಗಿದ್ದರು.

ಆಶ್ರಮಕ್ಕೆ ಬರುವ ಭಕ್ತರುಗಳ ಸಮಸ್ಯೆ, ನೋವು, ತೊಂದರೆಗಳನ್ನು ಪರಿಹರಿಸುವುದರ ಜೊತೆಗೆ ತಮ್ಮನ್ನು ನಂಬಿ ಬರುತ್ತಿದ್ದ ರೋಗಿಗಳಿಗೆ, ಅಶಕ್ತರಿಗೆ, ಮಕ್ಕಳಿಲ್ಲದವರಿಗೆ ಅನುಕಂಪ ತೋರಿಸುತ್ತಿದ್ದರು. ಕೆಲವು ರೋಗಗಳಿಗೆ ಗಿಡ ಮೂಲಿಕೆ ಔಷಧ ನೀಡಿ ಗುಣಪಡಿಸುತ್ತಿದ್ದರು. ಗ್ರಹಗತಿಗಳ ಕಾಟವಿದ್ದವರನ್ನು, ದೆವ್ವ, ಪೀಡೆ ಹಿಡಿದವರನ್ನು ಗುಣಪಡಿಸುವುದರ ಜೊತೆಗೆ ಕಾಮಾಲೆ ರೋಗಕ್ಕೆ ಪಥ್ಯವಿಲ್ಲದ ಔಷಧ ನೀಡುತ್ತಿದ್ದರು. ಸಾಮಾನ್ಯವಾಗಿ ದನ-ಕರುಗಳಿಗೆ ಬರುತ್ತಿದ್ದ 'ಹೆಗಲುಣ್ಣು' ರೋಗಕ್ಕೆ ತಮ್ಮ ಬಾಯಿಯ ಎಂಜಲನ್ನು ಹಚ್ಚಿ ಗುಣಪಡಿಸುತ್ತಿದ್ದರು.

ಕೆಂಪಾವಧೂತರು ೧೯೯೩ರಲ್ಲಿ ಮಠದಲ್ಲಿಯೇ ಐಕ್ಯರಾಗಿದ್ದು, ಅವರ ಸಮಾಧಿ ಇದೆ. ನಂತರ ಅವರ ಶಿಷ್ಯರಾದ ನಾಯಕ ಜಾತಿಯ ಬೋರಮ್ಮ ಎಂಬುವವರು ಗುರುಗಳ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಕೆಂಪಾವಧೂತರು ಉಪಯೋಗಿಸುತ್ತಿದ್ದ ಮಂಚ ಮಠದಲ್ಲಿದ್ದು, ಅದರಲ್ಲಿ ದೇವಿ ಫೋಟೋ ಮತ್ತು ದೇವಿಪುರಾಣಗಳನ್ನಿಟ್ಟು ಪೂಜಿಸುತ್ತಿದ್ದಾರೆ. ತಾತನವರ ಹೆಸರಿನಲ್ಲಿ ಸಮಿತಿಯನ್ನು ರಚಿಸಿಕೊಂಡು ಪುಣ್ಯತಿಥಿಯ ನೆನಪಿಗೆ ಆರಾಧನೆಗಳು ನಡೆಯುತ್ತಿವೆ. ಪ್ರತಿ ದಸರಾ ಹಬ್ಬದ ನವರಾತ್ರಿಯಲ್ಲಿ ದೇವಿ ಪುರಾಣದ ಪಾರಾಯಣ ನಡೆಯುತ್ತಿದ್ದು, ಅಪಾರ ಭಕ್ತರು ಸೇರಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

### ೫.೨. ಸ್ಥಳ ಪುರಾಣಗಳು

ಇಂಗ್ಲಿಷಿನ 'ಮಿಥ್' ಪದವನ್ನು ನಮ್ಮಲ್ಲಿಯ ಪುರಾಣ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'ಮಿಥ್' ಎನ್ನುವುದು ಗ್ರೀಕಿನ 'ಮಿಥೋಸ್'ನಿಂದ ಬಂದಿದೆ. 'ಮಿಥೋಸ್'

ಎಂದರೆ 'ಕತೆ, ನೀತಿಕತೆ, ಮಾತು' ಎಂದರ್ಥ. ಗ್ರೀಕರಿಗೆ 'ಮಿಥೋಸ್' ಎಂಬುದು 'ಸತ್ಯ ಮತ್ತು ವಾಸ್ತವತೆ' ಎರಡನ್ನೂ ಹೇಳುತ್ತದೆ.[೮೭]

ಜನರು ನಂಬುವಂತೆ ಪುರಾಣವು ಬಹು ಹಿಂದಿನ ಕಾಲದಲ್ಲಿ ನಡೆದು ಹೋದ ನೈಜ ಘಟನೆ. ಪುರಾಣಗಳನ್ನು ಅತ್ಯಂತ ಪವಿತ್ರ ನಂಬುಗೆಯೊಂದಿಗೆ, ನೈಜವಾಗಿ ಘಟಿಸಿದ ಘಟನೆಗಳೆಂದು ಜನರು ತಿಳಿಯುತ್ತಾರೆ. ಧರ್ಮಕ್ಕೂ, ಪುರಾಣಕ್ಕೂ ತೀರ ಅನ್ಯೋನ್ಯವಾದ ಸಂಬಂಧವನ್ನು ಕಲ್ಪಿಸುವ ಜನ, ಪುರಾಣವನ್ನು ಹೆಚ್ಚೂ ಕಡಿಮೆ ಧರ್ಮದ ರೂಪ ತೊಡಿಸಿ ಆಚರಣೆಯಲ್ಲಿ ಅಳವಡಿಸಿಟ್ಟುಕೊಂಡಿರುತ್ತಾರೆ. ಹೀಗಾಗಿ ಜನಜೀವನಕ್ಕೂ ಪುರಾಣಗಳಿಗೂ ಬಿಡಿಸಲಾರದ ಸಂಬಂಧವಿದ್ದು, ಸಾಮಾನ್ಯರ ಬದುಕಿನ ಮೇಲೆ ಪುರಾಣಗಳು ಅತ್ಯಂತ ಗಾಢವಾದ ಪರಿಣಾಮ ಗಳನ್ನು ಬೀರಿವೆ.

ಮನುಷ್ಯ ಎಂದು ಪ್ರಕೃತಿಯನ್ನು ತನ್ನ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದನೋ ಅಂದೇ ಅವನಲ್ಲಿ ಪೌರಾಣಿಕ ಕಲ್ಪನೆಗಳು ಹುಟ್ಟಿಕೊಂಡವು ಎಂದು ಹೇಳಬಹುದು. ಆತ ದೇವರನ್ನು ಸೃಷ್ಟಿ ಮಾಡಿ ತನ್ನ ಸಾಮರ್ಥ್ಯಕ್ಕೆ ಮೀರಿದ್ದನ್ನು ಕುರಿತು ತನ್ನಿಂದಲೇ ಉಂಟಾಗುವ ಪ್ರಶ್ನೆಗೆ 'ದೇವರು' ಎಂಬ ಶಕ್ತಿಯಲ್ಲಿ ಉತ್ತರ ಹುಡುಕಿಕೊಂಡನು. ದೇವರನ್ನು ಮುಂದೆ ಇಟ್ಟುಕೊಂಡು ತನಗೆ ಹೊಳೆದ ಅನೇಕ ವೈಜ್ಞಾನಿಕ ಅನುಮಾನಗಳಿಗೆ, ಊಹೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದ ಫಲವಾಗಿಯೇ ಸತ್ಯವನ್ನು ಅನಂತ ಸುರುಳಿಯಲ್ಲಿ ಸುತ್ತಿಕೊಂಡ ಪುರಾಣ ಕಲ್ಪನೆಗಳು ಚಿಗುರೊಡೆದವು ಎಂದು ತೋರುತ್ತದೆ.[೮೮]

ಇತಿಹಾಸ ಪೂರ್ವಯುಗಕ್ಕೆ ಸಂಬಂಧಿಸಿದ್ದು ಎಂದು ಭಾವಿಸಲಾದ ವಿಶ್ವಸೃಷ್ಟಿ, ಜನಾಂಗದ ಸೃಷ್ಟಿ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಕಥೆಗಳು ಪ್ರಚಲಿತವಾಗಿವೆ. ಈ ಕಥೆಗಳಲ್ಲಿನ ಸೃಷ್ಟಿ ಕಾರ್ಯ ದೇವರು, ದೈವಿಕ ವ್ಯಕ್ತಿ ಅಥವಾ ಸಾಂಸ್ಕೃತಿಕ ನಾಯಕರಿಂದ ನಡೆದಿರುತ್ತದೆ.[೮೯] ಮಾನವನು ಅತ್ಯಂತ ಬಲವಾಗಿ ನಂಬಿಕೊಂಡಿರುವ ಸೃಷ್ಟಿಕ್ರಿಯೆ, ದೇವರು, ಆಕಾಶ, ಭೂಮಿ, ಸೂರ್ಯ, ಚಂದ್ರ, ಮಳೆ, ಗಾಳಿ, ಮನುಷ್ಯನ ಉಗಮ, ಜೀವಿಗೂ ಜಗತ್ತಿಗೂ ಮತ್ತು ಸೃಷ್ಟಿ ಶಕ್ತಿಗೂ ಇರುವ ಸಂಬಂಧ, ಋತುಮಾನಗಳು, ಹುಟ್ಟು-ಸಾವು, ಹುಟ್ಟಿನ ಮುಂಚೆ ಮತ್ತು ಸಾವಿನ ಅನಂತರದ ಸ್ಥಿತಿ, ಮನುಷ್ಯ ಈ ಲೋಕದಲ್ಲಿ ಪಡುವ ರೋಗ-ರುಜಿನಗಳಂತಹ ಯಾತನೆಗಳ ಕಾರಣ - ಇತ್ಯಾದಿಗಳ ನಿಸರ್ಗ ರಹಸ್ಯವನ್ನು ಅರಿತುಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲ ಪುರಾಣಗಳಾಗಿ ನಿಂತವು.[೯೦]

ಪುರಾಣವು ಮತೀಯ ಗುಣವನ್ನು ಹೊಂದಿದ್ದು, ಮನುಷ್ಯನ ಮೂಲಸತ್ವಕ್ಕೆ ಹೆಚ್ಚು ಹತ್ತಿರವಾಗಿದೆ. ಅದು ಅವರ ನಂಬಿಕೆ, ಶ್ರದ್ಧೆ, ನಡವಳಿಕೆ, ಮೌಲ್ಯ ವ್ಯವಸ್ಥೆಗಳನ್ನು, ಆದರ್ಶಗಳನ್ನು ರೂಪಿಸುವ ಗುಣವನ್ನು ಹೊಂದಿದೆ. ಆದ್ದರಿಂದಲೇ ಅದು ಹೆಚ್ಚು ಗಂಭೀರವಾಗಿ, ಹೆಚ್ಚು ಪವಿತ್ರವಾಗಿ, ಹೆಚ್ಚು ವಾಸ್ತವವಾಗಿ ಕಾಣುತ್ತದೆ.[೯೧] ಇಂದಿನ ವೈಜ್ಞಾನಿಕ ಸಂಶೋಧನೆಗಳನ್ನು ಮಾನವನು ಇನ್ನೂ ಕಂಡುಕೊಳ್ಳದ ಮುಂಚಿನ, ಆತನ ಅನಂತ ಬಗೆಯ ಊಹಾತ್ಮಕ

ಕಲ್ಪನೆಗಳೇ ಪುರಾಣಗಳಾಗಿ ಸೃಷ್ಟಿಗೊಂಡವು. ಆದಕ್ಕಾಗಿ ಪುರಾಣವು ಕೇವಲ ಸೃಷ್ಟಿ ಕ್ರಿಯೆಯನ್ನು ಅಥವಾ ದೇವರ ಲೀಲೆಗಳನ್ನಷ್ಟೆ ಹೇಳುವುದಿಲ್ಲ. ಅದು ಮಾನವನ ಬೆಳವಣಿಗೆಯ ಒಂದು ಹಂತವನ್ನು ಹೇಳುತ್ತದೆ ಎಂಬುದನ್ನು ಗಮನಿಸಬೇಕು. ಆದುದರಿಂದ 'ಮಾನವನ ವಿಕಾಸದ ಚರಿತ್ರೆಯೇ ಪುರಾಣ' ಎನ್ನುವ ಅಂಡ್ರೂಲಾಂಗ್ ಅವರ ಮಾತನ್ನೂ 'ಪುರಾಣ ಎನ್ನುವುದು ಚರಿತ್ರೆಯ ಮಾತೃಕೆ' ಎನ್ನುವ ಎಲಿಯಡ್ ಅವರ ಮಾತನ್ನು ನಾವು ಒಪ್ಪಬೇಕಾಗುತ್ತದೆ.[೯೨]

ಸ್ಥಳದ ಹುಟ್ಟು, ಮಹಿಮೆಯನ್ನು ವಿವರಿಸುವ ಕಥೆಗಳನ್ನು 'ಸ್ಥಳ ಪುರಾಣ'ಗಳೆಂದು ಕರೆಯುತ್ತಾರೆ. ಸ್ಥಳ ಪುರಾಣಗಳಲ್ಲಿ ನಿಸರ್ಗದ ಸೃಷ್ಟಿ ಸಂಬಂಧವಾದ ಕಥೆಗಳು ಇರುವಂತೆಯೇ, ಮನುಕುಲದ ಸಂಪ್ರದಾಯ, ವೃತ್ತಿ, ಪದ್ಧತಿ, ವೈಚಿತ್ರ್ಯಗಳನ್ನು ವಿವರಿಸುವ ಕಥೆಗಳು, ಸ್ಥಳ ವೈಶಿಷ್ಟ್ಯಗಳಿಗೆ ಸಂಬಂಧಿಸಿದ ಕಥೆಗಳು ಇರುತ್ತವೆ.

ಸ್ಥಳ ಪುರಾಣಗಳು ಚರಿತ್ರೆಯ ಪ್ರಮುಖ ಆಕರಗಳಾಗಿವೆ. ಸ್ಥಳ ಪುರಾಣಗಳು ಆಯಾ ಸ್ಥಳದ ವೈಶಿಷ್ಟ್ಯಗಳನ್ನಷ್ಟೆ ಒಳಗೊಂಡಿರುತ್ತವೆ. ಇಂದು ದೇವಾಲಯಗಳಿರುವ ಹೆಚ್ಚಿನ ಕ್ಷೇತ್ರಗಳಿಗೂ ಒಂದಿಲ್ಲದಿದ್ದರೊಂದು ಪುರಾಣ ಇದ್ದೇ ಇರುತ್ತದೆ. ಇಂತಹ ಪುರಾಣಗಳು ಆಯಾ ಕ್ಷೇತ್ರಗಳ ದೈವ, ದೇವರುಗಳ ಮಹತ್ವವನ್ನು ವಿವರಿಸುತ್ತವೆ. ಇವೆಲ್ಲಾ ಸಾಧ್ಯವೇ ಅಥವಾ ಇಲ್ಲವೇ ಎಂಬುದನ್ನು ಸಾಬೀತುಪಡಿಸಲು ಕಷ್ಟವೆನಿಸುವಷ್ಟರಮಟ್ಟಿಗೆ ಜನರಿಗೆ ಅವುಗಳ ಮೇಲೆ ನಂಬಿಕೆ ಬೇರೂರಿಬಿಟ್ಟಿದೆ. ವೈಜ್ಞಾನಿಕವಾಗಿ ಇಂಥ ಘಟನೆಗಳನ್ನು ಪುರಾವೆಗಳೊಂದಿಗೆ ಸಾಧ್ಯವೆಂದು ಸಾಬೀತುಪಡಿಸುವುದು ಕಷ್ಟಸಾಧ್ಯ. ಒಂದು ವೇಳೆ ಇಲ್ಲಿ ಬರುವ ಅಸಾಧ್ಯವೆನಿಸುವ ಘಟನೆಗಳನ್ನು ಇಂತಹ ಪುರಾಣಗಳಿಂದ ಕಳಚಿಬಿಟ್ಟರೆ ಬಾಕಿ ವಿಷಯಗಳನ್ನು ಸಾಧ್ಯವೆಂದು ಸ್ವೀಕರಿಸಬಹುದೇನೊ. ಕೆಲವೊಂದು ಸಂದರ್ಭಗಳಲ್ಲಿ ಇವುಗಳ ಸಾಧ್ಯತೆಯ ಬಗ್ಗೆ ಸಂಶಯವೇಳುವುದು ಸಹಜ.[೯೩] ಆದರೂ ಸ್ಥಳ ಪುರಾಣಗಳು ಎಷ್ಟೋ ಸಂದರ್ಭಗಳಲ್ಲಿ ಈ ನಾಡಿನ ಪೂರ್ವ ಸಂಸ್ಕೃತಿ, ನಡವಳಿಕೆ, ಆಚಾರ-ವಿಚಾರಗಳ ಬಗೆಗೆ ಬೆಳಕು ಚೆಲ್ಲುತ್ತವೆ ಎಂಬ ಅಂಶವನ್ನು ನಾವು ಅಲ್ಲಗಳೆಯುವಂತಿಲ್ಲ.

**ಹಂಪಿ**

ದಕ್ಷ ಬ್ರಹ್ಮನ ಮಗಳಾದ ಪಂಪಾದೇವಿಯು ಶಿವನನ್ನು ಮದುವೆಯಾಗಲೂ ಹೇಮಕೂಟದ ಉತ್ತರಕ್ಕಿರುವ ಅರ್ಧಕೋಶ ದೂರದಲ್ಲಿ ವಿಪ್ರಕೂಟವೆಂಬ ಪರ್ವತ ಬಳಿಯ ಸರೋವರದ ದಡದಲ್ಲಿ ಉಗ್ರವಾದ ತಪಸ್ಸನ್ನಾಚರಿಸುತ್ತಾಳೆ. ಅವಳ ತಪಸ್ಸಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗುತ್ತಾನೆ. ಅವಳ ಇಚ್ಛೆಯ ಮೇರೆಗೆ ಹೇಮಕೂಟದಲ್ಲಿ ವಿವಾಹವಾಗಿ, ವಿರೂಪಾಕ್ಷನಾಗಿದ್ದವನು ಪಂಪಾಪತಿ ಎನಿಸಿಕೊಳ್ಳುತ್ತಾನೆ. ಪಂಪಾದೇವಿಯ ಇಚ್ಛೆಯಂತೆ ವಿರೂಪಾಕ್ಷನು, ಈ ಕ್ಷೇತ್ರವನ್ನು ಪಂಪಾಕ್ಷೇತ್ರವೆಂದು ಕರೆದು, ಅವಳು ತಪಸ್ಸು ಮಾಡಿದ ಸರೋವರವು ಪಂಪಾ ಸರೋವರೆಂದು ಖ್ಯಾತಿಯಾಗಲೆಂದು ವರ ನೀಡುತ್ತಾನೆ.

ಮಾತಂಗಗಿರಿ, ಮಾಲ್ಯವಂತಗಿರಿ, ಋಷ್ಯಮೂಕ, ಕಿಷ್ಕಿಂದಾದ್ರಿ, ಹೇಮಕೂಟ, ವಿಪ್ರಕೂಟ, ಗಂಧರ್ವಗಿರಿ, ಜಂಬೂನಾಥಗಿರಿ, ಸೋಮಪರ್ವತ, ಮಣಿಭದ್ರೇಶ್ವರ ಪರ್ವತ ಮುಂತಾದವು

ಪುಣ್ಯಗಿರಿಗಳೆನಿಸಿವೆ. ಪಂಚಕ್ರೋಶಾತ್ಮಕವಾದ ಈ ಪಂಪಾಪುರಕ್ಕೆ ನಾಲ್ಕು ಮಹಾದ್ವಾರಗಳು, ನಾಲ್ಕು ಉಪದ್ವಾರಗಳು ಅಷ್ಟ ದಿಕ್ಕಿನಲ್ಲಿವೆ. ಈ ಎಂಟು ದ್ವಾರಗಳಲ್ಲಿ ಆಚರಿಸಲ್ಪಡುವ ಸತ್ಕ್ರಿಯೆಗಳು ಶೀಘ್ರವಾಗಿ ಸಿದ್ಧಿಸುತ್ತವೆ.[೯೪] ಈ ಕ್ಷೇತ್ರದಲ್ಲಿ ಮೂರುವರೆ ಕೋಟಿ ತೀರ್ಥಗಳಿವೆ. ಕಾಶಿ ಗಂಗೆಗೆ ಸಮಾನವೆನಿಸಿದ ತುಂಗಭದ್ರಾ ಎಂಬ ಪುಣ್ಯ ನದಿಯು ಹರಿಯುತ್ತದೆ. ಪುಣ್ಯ ಸ್ಥಳಗಳ ರಾಜ ಎನಿಸಿದ ಈ ಕ್ಷೇತ್ರದಲ್ಲಿ ಋಷಿಗಳ ದಿವ್ಯಾಶ್ರಮಗಳು ವಿರಾಜಿಸುತ್ತಿವೆ. ಇದು ಶಂಭುವಿನ ತಪೋ ಭೂಮಿಯೂ ಹೌದು. ಪಂಪಾಪತಿ, ಕಿನ್ನರೇಶ್ವರ, ಜಾಂಬವಂತೇಶ್ವರ, ಸೋಮನಾಥ, ಮಣಿಭದ್ರೇಶ್ವರ ಈ ಪಂಚಲಿಂಗಗಳು ಸೇವಕರಿಗೆ ಮುಕ್ತಿಕೊಡುವಂತಹ ಸದಾಶಿವನ ಪಂಚಮುಖಗಳಾಗಿ ಕಂಗೊಳಿಸುತ್ತಿವೆ.

ಸಪ್ತಋಷಿಗಳಲ್ಲಿ ಒಬ್ಬನಾದ ಕಪಿಲನು, 'ಪಂಪಾಕ್ಷೇತ್ರದಲ್ಲಿ ಜಗತ್ತಿನಲ್ಲಿ ಪೂಜ್ಯವಾದ ಚಕ್ರತೀರ್ಥವಿದೆ. ಆ ತೀರ್ಥದಲ್ಲಿ ಸ್ನಾನ ಮಾಡಿ ಅದರ ದಂಡೆಯ ಮೇಲೆ ತಪಸ್ಸನ್ನು ಆಚರಿಸು, ಆ ತೀರ್ಥದ ದರ್ಶನದಿಂದ ರಾಕ್ಷಸರ ಬಾಧೆಗಳು ನಶಿಸುವವು' ಎಂದು ತನ್ನಲ್ಲಿಗೆ ಬಂದ ಅಹಿರ್ಬುಧ್ನ್ಯನಿಗೆ ತಿಳಿಸಿ ಚಕ್ರತೀರ್ಥದ ಮಹತ್ವವನ್ನು ತಿಳಿಸುತ್ತಾನೆ.

ಹೀಗೆ ಹಂಪಿ ಪರಿಸರದ ಬೆಟ್ಟ-ಗುಡ್ಡಗಳಿಗೆ ಮತ್ತು ಕೊಳಗಳಿಗೆ ಸಂಬಂಧಿಸಿದಂತೆ, ಶಿವ-ಪಾರ್ವತಿಯರ ಸುತ್ತಲೂ ಹೆಣೆದ ಕಥೆಗಳು ಅಡಕವಾಗಿವೆ. ಇಲ್ಲಿ ಕಂಡುಬರುವ ಅಸಂಖ್ಯಾತ ಕೊಳಗಳನ್ನು ಒಂದೊಂದು ಹೆಸರಿನಿಂದ ಕರೆಯಲಾಗಿದೆ. ಹಾಗೆಯೇ ಬೆಟ್ಟ-ಗುಡ್ಡಗಳಲ್ಲಿನ ಗುಹೆ, ಆಸರೆಗಳನ್ನು ಸಹ ಒಂದೊಂದು ದೈವ ಸ್ಥಾನವಾಗಿ ವರ್ಣಿಸಲಾಗಿದೆ.

### ಜಂಬುನಾಥನ ಹಳ್ಳಿ

ಹೊಸಪೇಟೆಯ ದಕ್ಷಿಣಕ್ಕಿರುವ ಜಂಬುನಾಥ ಗುಡ್ಡಕ್ಕೆ ಸಂಬಂಧಿಸಿದ ಸ್ಥಳ ಪುರಾಣವು ಈ ರೀತಿಯಿದೆ: ಬ್ರಹ್ಮನು ಜಾಂಬವಂತನನ್ನು ಕುರಿತು 'ಶ್ರೀರಾಮನಿಗೆ ಸಹಾಯಕನಾಗಿರಲು ನಿನ್ನ ಸೃಷ್ಟಿಯಾಗಿದೆ. ಮಹಾಬಲಶಾಲಿ ಹಾಗೂ ಚಿರಾಯುಷ್ಯವುಳ್ಳವನಾಗಿರುವೆ. ನಿನಗೆ ಸರ್ವಸಿದ್ಧಿಗಳು ಪ್ರಾಪ್ತವಾಗಲು ಹೇಮಕೂಟದ ದಕ್ಷಿಣ ದಿಕ್ಕಿನಲ್ಲಿರುವ ದಿವ್ಯವಾದ ಅರಣ್ಯದಲ್ಲಿ ವಿರೂಪಾಕ್ಷನ ಧ್ಯಾನ ಮಾಡುತ್ತ ತಪಸ್ಸನ್ನಾಚರಿಸು' ಎಂದು ತಿಳಿಸುತ್ತಾನೆ. ತಂದೆಯ ಮಾತಿನಂತೆ ಜಾಂಬವಂತನು ಕಾಳೆ, ಹೊನ್ನೆ, ಬಿಳಿಗಂಧ, ನೇರಿಲೆ ಮರಗಳ ಸಮೂಹದಿಂದಲೂ ಮಂದಾರ, ಪಾರಿಜಾತ ಮೊದಲಾದ ಹೂ ಗಿಡಗಳಿಂದಲೂ, ಬಿಲ್ವ, ಮಾವಿನ ಮರಗಳಿಂದ ಶೋಭಿಸುತ್ತಿದ್ದ ಅರಣ್ಯದಲ್ಲಿ ತಪಸ್ಸನ್ನಾಚರಿಸಿದನು. ಸರ್ವೇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸನ್ನು ಆತ್ಮಲಿಂಗದಲ್ಲಿರಿಸಿ, ಹೇಮಕೂಟಾಧಿಪತಿಯಾದ ಶ್ರೀ ವಿರೂಪಾಕ್ಷನನ್ನು ಧ್ಯಾನಿಸುತ್ತ ಐದು ಯೋಜನೆ ವಿಸ್ತೀರ್ಣವುಳ್ಳ ಪಂಪಾಕ್ಷೇತ್ರವನ್ನು ನಿತ್ಯವು ಪ್ರದಕ್ಷಿಣೆ ಮಾಡಿದನು. ಹೀಗೆ ಹತ್ತು ಸಾವಿರ ವರ್ಷ ತಪಸ್ಸು ಮಾಡಿದನು. ಇವನ ತಪಸ್ಸಿಗೆ ಮೆಚ್ಚಿದ ವಿರೂಪಾಕ್ಷ ಪ್ರತ್ಯಕ್ಷನಾಗಿ ಜಾಂಬವಂತನಿಗೆ ದೇವತ್ವವನ್ನು, ಕಲ್ಪ ಆಯುಷ್ಯವನ್ನು ಅನುಗ್ರಹಿಸಿದನು. "ಕೃತಯುಗದಲ್ಲಿ ದೇವಾಹಿತಾರ್ಥವಾಗಿ ವಿಷ್ಣುವು

ವಾಮನರೂಪವನ್ನು ಧರಿಸಿ ತ್ರಿವಿಕ್ರಮಾವತಾರದಿಂದ ಬಲಿಯ ಗರ್ವಭಂಗ ಮಾಡುವನು. ಮಹಾಪ್ರಾಜ್ಞನೆ ಅವನಿಗೆ ಪ್ರದಕ್ಷಿಣೆಯನ್ನು ಮಾಡಲು ಯತ್ನಿಸು. ಆದರಿಂದ ನಿನ್ನ ಕೀರ್ತಿಯು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದುವುದು. ತ್ರೇತಾಯುಗದಲ್ಲಿ ರಾಮನಿಗೆ ದಶಕಂಠನಾದ ರಾವಣನ ವಧಾಕಾರ್ಯದಲ್ಲಿ ಸಹಾಯ ಮಾಡು. ಆ ವಿಷ್ಣುವಿನಿಂದ ಪುನಃ ದ್ವಾಪರ ಯುಗದಲ್ಲಿ ಶಮಂತಕಮಣಿ ನೆಪದಿಂದ ಉಂಟಾಗುವ ಯುದ್ಧದಲ್ಲಿ ರಕ್ಷಿಸಲ್ಪಡುವೆ. ಕಲಿಯುಗದಲ್ಲಿ ಸುಂದರವಾದ ಮಹಾಕಾಯವುಳ್ಳವನಾಗಿ ಭಗವದ್ಭಕ್ತಿ ಸಂಪನ್ನನಾಗಿ ಚಂದ್ರ, ತಾರೆಗಳು ಪ್ರಕಾಶಿಸುವವರೆಗೆ ನೀನು ಕೀರ್ತಿ ಹೊಂದುವೆ" ಎಂದು ಅನುಗ್ರಹಿಸಲು, ಜಾಂಬವಂತನು 'ಭೋ ಪ್ರಭೋ' ಬಹುಕಾಲ ಇಲ್ಲಿಯೇ ವಾಸ ಮಾಡಿಕೊಂಡಿದ್ದು, ನಾನು ತಪಸ್ಸಿದ್ಧಿಯನ್ನು ಪಡೆದೆನು. ನಿನ್ನ ಕೃಪೆಯಿಂದ ಈ ಕ್ಷೇತ್ರವು ನನ್ನ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಿ ಹೊಂದಲಿ ಎಂದು ಬೇಡುತ್ತಾನೆ. ಶಿವನು ಅವನ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ. ತಾನು ಸಹ ಜಾಂಬವಂತೇಶ್ವರ ನೆಂಬ ಹೆಸರಿನಿಂದ ಇಲ್ಲಿಯೇ ನೆಲೆಸುವೆನು ಎಂದು ತಿಳಿಸಿ ವಿರೂಪಾಕ್ಷನು ಜಾಂಬವಂತೇಶ್ವರ ಎಂಬ ಹೆಸರಿನಿಂದ ಪ್ರಕಾಶಿಸಿದನು.

ಹೀಗೆ ಜಾಂಬವಂತನು ವಿರೂಪಾಕ್ಷನಿಂದ ವರಗಳನ್ನು ಪಡೆದುಕೊಂಡು, ಮಹಾಬಲದಿಂದ ಕೂಡಿದವನಾಗಿ ಕ್ಷೇತ್ರರಾಜವೆನಿಸಿದ ಪಂಪಾಕ್ಷೇತ್ರದಲ್ಲಿ ಪ್ರದಕ್ಷಿಣಾ ಪೂರ್ವಕವಾಗಿ ಚಲಿಸುತ್ತಿರುವಾಗ ಘೋರವಾದ ಅರಣ್ಯವನ್ನು ಪ್ರವೇಶಿಸಿದನು. ಈ ಅರಣ್ಯವು ಹೊನ್ನೆ, ಶ್ರೀಗಂಧ ಮೊದಲಾದ ವೃಕ್ಷಗಳಿಂದಲೂ, ಬಿದಿರು, ಮೇಳೆ ಪೊದೆಗಳಿಂದಲೂ, ವ್ಯಾಘ್ರ, ಗೂಬೆ ಮೊದಲಾದವುಗಳ ಭಯಂಕರ ಧ್ವನಿಗಳಿಂದಲೂ, ಮುಳ್ಳಿನಗಿಡ, ಬಳ್ಳಿಗಳಿಂದ ಕೂಡಿತ್ತು. ಈ ನಿರ್ಜನ ಅರಣ್ಯದಲ್ಲಿ ಒಬ್ಬ ಪುರುಷನು ಸ್ತ್ರೀಯೊಬ್ಬಳನ್ನು ಹೊಡೆಯುತ್ತಿರುವ ಮತ್ತು ಅವಳು ಶಿವನ ರಕ್ಷಣೆಯನ್ನು ಬೇಡುತ್ತ ಅಳುತ್ತಿರುವ ಧ್ವನಿಯನ್ನು ಕೇಳಿ ಜಾಂಬವಂತನು ಆಶ್ಚರ್ಯಗೊಂಡು ಆ ಸ್ಥಳಕ್ಕೆ ಹೋದನು. ಅಲ್ಲಿ ಒಬ್ಬ ರಾಕ್ಷಸನು ಸಿಟ್ಟಿನಿಂದ ಒಬ್ಬ ಕನ್ಯೆಯ ತಲೆಗೂದಲುಗಳನ್ನು ಹಿಡಿದುಕೊಂಡು ಅವಳ ಶಿರವನ್ನು ಕತ್ತರಿಸಲು ಸಿದ್ಧನಾಗಿದ್ದನು. ರಾಕ್ಷಸನು ಅವಳನ್ನು ಕುರಿತು, ಎಲೈ ಭದ್ರೆ ನನ್ನೊಡನೆ ರಮಿಸು, ಇಲ್ಲದಿದ್ದರೆ ನಿನ್ನ ಪ್ರಾಣವನ್ನು ತೆಗೆಯುವೆನು ಎಂದು ಹಿಂಸಿಸುತ್ತಿದ್ದನು. ಆಗ ಸ್ತ್ರೀಯು ಎಲೈ ರಾಕ್ಷಸನೆ ನನ್ನ ಪ್ರಾಣವನ್ನಾದರೂ ಕೊಟ್ಟೇನು, ನಿನ್ನೊಡನೆ ನಾನು ಎಂದಿಗೂ ರಮಿಸಲಾರೆ ಎಂದು ಹೇಳಿ ರಕ್ಷಣೆಗೆ ಗೋಳಿಟ್ಟಳು. ಆಗ ಜಾಂಬವಂತನು ಆ ರಾಕ್ಷಸನಿಗೆ ತನ್ನ ಮುಷ್ಟಿಯಿಂದ ಹೊಡೆದನು. ರಾಕ್ಷಸನು ಕನ್ಯೆಯನ್ನು ಬಿಟ್ಟು ಜಾಂಬವಂತನನ್ನು ಮೂದಲಿಸಿ ಆತನೊಡನೆ ಖಡ್ಗವನ್ನು ಪ್ರಯೋಗಿಸಿದನು. ಹೀಗೆ ಇಬ್ಬರಿಗೆ ಭಯಂಕರ ಕದನವಾಗಲು ಜಾಂಬವಂತನು ತನ್ನ ಮುಷ್ಟಿಯಿಂದ ಬಲವಾಗಿ ಹೊಡೆದು ಅವನನ್ನು ನೆಲಕ್ಕುರುಳಿಸಿದನು. ರಾಕ್ಷಸನು ರಕ್ತ ಕಾರುತ್ತ ಪ್ರಾಣಬಿಟ್ಟನು. ಕೂಡಲೇ ಆ ಶರೀರದಿಂದ ಶಿವಸ್ವರೂಪಿಯೂ, ನಿರ್ಮಲನೂ, ರುದ್ರಾಕ್ಷಿ ಮಾಲೆಗಳನ್ನು ಧರಿಸಿದವನೂ, ಭಸ್ಮಧಾರಿಯೂ ಆದ ಶರಣನೊಬ್ಬನು ಹೊರಬಂದನು. ಅವನನ್ನು ಕಂಡು ಚಕಿತನಾದ ಜಾಂಬವಂತನು ಅಯ್ಯಾ ನೀನು ಯಾರು,

ಈ ರಾಕ್ಷಸ ರೂಪ ಏಕೆ ಬಂದಿತು, ಹೀಗೆ ಆದರಿಂದ ಮುಕ್ತಿ ಉಂಟಾಗಲು ಕಾರಣವೇನೆಂದು ಕೇಳಿದನು. ಅದಕ್ಕೆ ಅವನು ನಾನು ಪೂರ್ವಜನ್ಮದಲ್ಲಿ ಶಿವಾಲಯದಲ್ಲಿ ಸೇವಕನಾಗಿದ್ದು, ದಾರಿದ್ರ್ಯದಿಂದ ದೇವರಿಗೆ ಸಂಬಂಧಿಸಿದ ವಸ್ತುಗಳನ್ನು ಕದ್ದೆನು. ಆಗ ಧರ್ಮಾಧಿಕಾರಿಯು ನನ್ನನ್ನು ಶಪಿಸಿದನು. ಆಗ ನಾನು ಧರ್ಮಾಧಿಕಾರಿಯ ಕ್ಷಮೆ ಕೇಳಲಾಗಿ ಅವನು ನೀನು ಯಾವಾಗ ಬ್ರಾಹ್ಮಣ ಕನ್ಯೆಯನ್ನು ಕೊಲ್ಲಲು ಇಚ್ಛಿಸುವೆಯೋ ಆಗ ಜಾಂಬವಂತನ ದರ್ಶನವಾಗಿ, ಅವನು ಮುಷ್ಠಿಯಿಂದ ಶಿರಸ್ಸಿಗೆ ಹೊಡೆದು ನಿನ್ನನ್ನು ಕೊಲ್ಲುವನು. ಆಗ ನಿನಗೆ ಮುಕ್ತಿ ದೊರಕುವುದು ಎಂದು ತಿಳಿಸಿದನು. ಅಲ್ಲಿಯವರೆಗೂ ನೀನು ಮಾಡಿದ ಪಾಪ ಕೃತ್ಯಕ್ಕಾಗಿ ರಾಕ್ಷಸತ್ವವನ್ನು ಅನುಭವಿಸು ಎಂದು ಶಾಪ ನೀಡಿದ್ದನು. ಈಗ ಧರ್ಮಾಧಿಕಾರಿಯ ವಾಣಿಯಂತೆ ನಿನ್ನ ಹೊಡೆತದಿಂದ ಮುಕ್ತಿ ಪಡೆದಿದ್ದೇನೆ. ನನಗೆ ಅಪ್ಪಣೆ ಕೊಡು, ಶಿವಲೋಕಕ್ಕೆ ಹೋಗುತ್ತೇನೆ ಎಂದು ನಮಸ್ಕರಿಸಿ ಶಿವಧೂತರೊಂದಿಗೆ ಕೈಲಾಸ ನಗರಕ್ಕೆ ಹೋದನು. ಆದುದರಿಂದ ಈ ಕ್ಷೇತ್ರದ ಪ್ರಭಾವದಿಂದ ಕ್ಷೇತ್ರದಲ್ಲಿರುವ ಸರ್ವಜಂತುಗಳಿಗೆ ಶಾಶ್ವತವಾದ ಮುಕ್ತಿಯುಂಟಾಗುವುದು. ಇದು ದುಷ್ಕರ್ಮಿಗಳಿಗೆ ಮೋಕ್ಷವನ್ನು ಕೊಡುವಂತಹ ಕ್ಷೇತ್ರವಾಗಿದೆ.

ರಾಕ್ಷಸನಿಂದ ಹಿಂಸೆಗೊಳಗಾಗಿದ್ದ ಕನ್ಯೆಯು ಭದ್ರಾದೇವಿಯಾಗಿದ್ದು, ಕೈಲಾಸದಲ್ಲಿ ಪಾರ್ವತಿಯ ಕೋಪಕ್ಕೆ ಗುರಿಯಾಗಿ, ಮಾನವರಲ್ಲಿ ಬ್ರಾಹ್ಮಣಳಾಗಿ ಹುಟ್ಟಿ ರಾಕ್ಷಸನಿಂದ ಪೀಡಿತಳಾಗು ಎಂದು ಶಪಿಸಲ್ಪಟ್ಟಳು. ಹೀಗೆ ಪಾರ್ವತಿಯಲ್ಲಿ ಕ್ಷಮೆ ಕೋರಿದರೂ ಫಲವಾಗಿಲಿಲ್ಲ. ಆಗ ಅವಳು ಇದೇ ನರಜನ್ಮದಿಂದಲೇ ನಿನ್ನ ಗಂಡನಾದ ಶಂಕರನನ್ನು ಪತಿಯನ್ನಾಗಿ ಪಡೆಯುವೆನೆಂದು ಪ್ರತಿಜ್ಞೆ ಮಾಡಿ ಭೂಲೋಕದಲ್ಲಿ ಹುಟ್ಟಿದಳು. ಅದರಂತೆ ಅವಳು ತಪಸ್ಸು ಮಾಡಿದ ಫಲವಾಗಿ ಸ್ವತಃ ಗೌರಿಯೇ ಮುಂದೆ ನಿಂತು, ಜಾಂಬವಂತೇಶ್ವರನ ಸನ್ನಿಧಿಯಲ್ಲಿ ಭದ್ರಾದೇವಿ ಮತ್ತು ಜಾಂಬವಂತೇಶ್ವರರ(ಶಿವ) ವಿವಾಹವನ್ನು ನೆರವೇರಿಸುತ್ತಾಳೆ. ಜಾಂಬವಂತೇಶ್ವರನು ತನ್ನ ಪ್ರಿಯಳಾದ ಭದ್ರೆಯೊಂದಿಗೆ ಅಲ್ಲಿ ನೆಲಸಿರುವುದರಿಂದ ಈ ಕ್ಷೇತ್ರವು ಜಾಂಬವಂತೇಶ್ವರ ಕ್ಷೇತ್ರವೆಂದು ಪ್ರಸಿದ್ಧಿಯಾಯಿತು.

**ಗುಡಿ ಓಬಳಾಪುರ**

ಹೊಸಪೇಟೆ ಹೋಬಳಿಯ ಗುಡಿ ಓಬಳಾಪುರಕ್ಕೆ ಸಮೀಪದಲ್ಲಿ ಧರ್ಮರಗುಡ್ಡವಿದ್ದು, ಅದರಲ್ಲಿ ಬಂಡೆಯಾಸರೆಗಳು ಕಂಡುಬರುತ್ತವೆ. ಶಿವನು ತಪಸ್ಸಿಗೆ ಹೋದಾಗ, ನಂದಿಯು ವಿಹಾರಕ್ಕಾಗಿ ಧರ್ಮರಗುಡ್ಡಕ್ಕೆ ಬರುತ್ತದೆ. ಅದರ ಸಲುವಾಗಿ ಅಲ್ಲಿ ಚೆನ್ನಬಸವೇಶ್ವರ ಗುಡಿಯು ಸ್ಥಾಪನೆಯಾಯಿತೆಂದು ತಿಳಿದು ಬರುತ್ತದೆ. ಅಲ್ಲದೆ ಪಾಂಡವರು ತಮ್ಮ ಅಜ್ಞಾತ ವನವಾಸ ಕಾಲದಲ್ಲಿ ಧರ್ಮರಗುಡ್ಡದಲ್ಲಿ ತಂಗಿದ್ದರೆಂದು, ಆಗ ಅವರಿಗೆ ಗೌಳಿಗರ ಹೆಣ್ಣು ಮಗಳೊಬ್ಬಳು ಯಾರಿಗೂ ತಿಳಿಯದಂತೆ ಹಾಲು ಕೊಡುತ್ತಿದ್ದು, ಆಕಸ್ಮಿಕವಾಗಿ ಯಾರೋ ನೋಡಿದಾಗ ಅವಳು ಕಲ್ಲಾದಳು ಎಂದು ತಿಳಿದುಬರುತ್ತದೆ. ಇದೇ ಆಲಮ್ಮನ ಗುಡಿ ಎಂದು ಹೇಳಲಾಗುತ್ತದೆ.

**ಹೊಸೂರು**

ಹೊಸೂರಿಗೆ ಸಂಬಂಧಿಸಿದಂತೆ, ವ್ಯಾಸ ಮಹರ್ಷಿಗಳು ಇಲ್ಲಿನ ಹೊಸೂರಮ್ಮ ದೇವಸ್ಥಾನಕ್ಕೆ ಬಂದಾಗ, ಅಲ್ಲಿ ಪ್ರಾಣಿ ಬಲಿಯಿದೆ ಎಂದು ಭಾವಿಸಿ ದೇವಾಲಯಕ್ಕೆ ಹೋಗದೆ ನೇರವಾಗಿ ತುಂಗಭದ್ರಾ ನದಿಗೆ ಹೋಗಿ ಸ್ನಾನ ಮಾಡಿದರು. ನಂತರ ಪೂಜಿಸಲು ತಮ್ಮ ಸಾಲಿಗ್ರಾಮಗ ಕಾಣಲಿಲ್ಲ. ಅವರ ಕನಸಲ್ಲಿ ಸಾಲಿಗ್ರಾಮವು ಹೊಸೂರಮ್ಮನ ಬಳಿ ಇವೆ ಎಂದು ತಿಳಿಯಲಾಗಿ ವ್ಯಾಸ ಮಹರ್ಷಿಗಳು ಪುನಃ ಬಂದು ದೇವತೆಯನ್ನು ಪೂಜಿಸಿ ತಮ್ಮ ಸಾಲಿಗ್ರಾಮಗಳನ್ನು ಪಡೆದರೆಂದು ತಿಳಿಯುತ್ತದೆ. ವ್ಯಾಸರು ಹೊಸೂರಮ್ಮನನ್ನು ಮಹಾಮಾಯಿ ಎಂದು ಕರೆದಿದ್ದಾರೆ.

**ಗೊಲ್ಲರಹಳ್ಳಿ**

ಮರಿಯಮ್ಮನಹಳ್ಳಿ ಹೋಬಳಿಯ ಗೊಲ್ಲರಹಳ್ಳಿಯಲ್ಲಿ, ಓಂದೆ ಕಮ್ಮಾರರು ತಮ್ಮ ವೃತ್ತಿಯಲ್ಲಿ ತೊಡಗಿ ಸುತ್ತಿಗೆಯಿಂದ ಬಡಿಯುತ್ತಿದ್ದಾಗ ಕಾಳಿಕಾದೇವಿ ಮೂರ್ತಿಯು ಉದ್ಭವವಾಯಿತೆಂದು, ಅದರಿಂದಾಗಿ ಅಲ್ಲಿ ಕಾಳಮ್ಮ ದೇವಾಲಯ ನಿರ್ಮಿತವಾಯಿತೆಂದು ತಿಳಿದುಬರುತ್ತದೆ.

**ತೆಲುಗುಬಾಳು**

ಮರಿಯಮ್ಮನಹಳ್ಳಿ ಹೋಬಳಿಯ ತೆಲುಗುಬಾಳು ಸ್ಥಳ ಪುರಾಣದಂತೆ, ತರಳಬಾಳು ಮೂಲ ಪೀಠಾಧ್ಯಕ್ಷರು ಈ ಊರಲ್ಲಿ ಇದ್ದರೆಂಬ ಪ್ರತೀತಿ ಇದೆ.

ವೀರಶೈವ ಪಂಚಪೀಠಗಳಲ್ಲಿ ಒಂದಾದ ಉಜ್ಜಯನಿಯ ವಿಶ್ವಬಂಧು ಮರುಳಸಿದ್ಧರು (೧೨ನೇ ಶತಮಾನ), ಊರೂರು ಸಂಚರಿಸುತ್ತ, ಧರ್ಮ ಬೋಧನೆ ಮಾಡುತ್ತಾ ತೆಲುಗುಬಾಳು ಗ್ರಾಮಕ್ಕೆ ಬಂದರು. ಅವರಿಗೆ ಒಬ್ಬ ಶಿಷ್ಯನ ಅವಶ್ಯಕತೆ ಇದ್ದು, ಸಿದ್ದಯ್ಯ ಎಂಬ ಬಡ ಕುಟುಂಬದಿಂದ ಬಂದ ಮೂಕ ಹುಡುಗನೊಬ್ಬನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು. ಗುರುಗಳ ಕೃಪಾಶಿರ್ವಾದದಿಂದ ಹುಡುಗನಿಗೆ ಮಾತು ಬಂದಿತು. ಇದ್ದ ಒಬ್ಬನೆ ಮಗನನ್ನು ತಂದೆ-ತಾಯಿಗಳು ತಮ್ಮ ಬಳಿ ಇರಿಸಿಕೊಳ್ಳಬೇಕೆಂದು ಬಯಸಿದರು. ಅದರಂತೆ ಮರುಳಸಿದ್ಧರು ಹುಡುಗನನ್ನು ಬಿಟ್ಟು ಮುಂದೆ ಹೋದರು. ಹುಡುಗ ಮತ್ತೆ ಮೂಕನಾದನು. ತಂದೆ-ತಾಯಿಗಳು ತಮ್ಮ ತಪ್ಪನ್ನು ಅರಿತುಕೊಂಡು ವಿಶ್ವಬಂಧುಗಳನ್ನು ಹುಡುಕಿಕೊಂಡು ಹೋಗಿ ಮತ್ತೆ ಹುಡುಗನನ್ನು ಅವರಿಗೆ ಶಿಷ್ಯನನ್ನಾಗಿ ಒಪ್ಪಿಸಿದರು. ಆತನನ್ನು ಮತ್ತೆ ಶಿಷ್ಯನನ್ನಾಗಿ ಸ್ವೀಕರಿಸಿದ ಅವರು, ತಾವೇ ನಿರ್ಮಿಸಿದ ಉಜ್ಜಯಿನಿ ಮಠದ ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿ 'ತರಳ ಬಾಳು' ಎಂದು, ಶಿಷ್ಯನಿಗೆ ಆಶೀರ್ವದಿಸಿದರು. ಅಂದಿನಿಂದ ಈ ಪೀಠಕ್ಕೆ 'ತರಳಬಾಳು ಪೀಠ' ಎಂಬ ಹೆಸರು ಪ್ರಾಪ್ತವಾಯಿತು. ಇಂದು ಈ ಪೀಠ ಚಿತ್ರದುರ್ಗ ಸಮೀಪದ ಸಿರಿಗೆರೆಯಲ್ಲಿ ತರಳಬಾಳು ಪೀಠವೆಂದೇ ಪ್ರಸಿದ್ಧವಾಗಿದ್ದು, ತೆಲುಗುಬಾಳು ಗ್ರಾಮದಲ್ಲಿ ಶಾಖಾಮಠವಿದೆ.

**ತಿಮ್ಮಲಾಪುರ**

ಮರಿಯಮ್ಮನಹಳ್ಳಿ ಹೋಬಳಿಯ ತಿಮ್ಮಲಾಪುರವನ್ನು ವಿರೂಪಾಕ್ಷನ(ಶಿವ) ಹೆಂಡತಿಯಾದ ಹಂಪಮ್ಮನ ತವರುಮನೆ ಎಂದು ಹೇಳಲಾಗುವುದು.

**ವ್ಯಾಸನಕೆರೆ**

ಮರಿಯಮ್ಮನಹಳ್ಳಿ ಹೋಬಳಿಯ ವ್ಯಾಸನಕೆರೆ ಸ್ಥಳ ಪುರಾಣದಂತೆ, ವ್ಯಾಸ ಮಹರ್ಷಿಗಳು ಹಿಂದೆ ಈ ಊರಿಗೆ ಬಂದಿದ್ದರೆಂದೂ ಆದುದರಿಂದಾಗಿಯೇ ಈ ಊರಿಗೆ ವ್ಯಾಸನಕೆರೆ ಎಂಬ ಹೆಸರು ಬಂತೆಂಬ ಪ್ರತೀತಿಯಿದೆ.

**ಹಂಪದೇವನಹಳ್ಳಿ**

ಕಂಪ್ಲಿ ಹೋಬಳಿಯ ಹಂಪದೇವನಹಳ್ಳಿಯು, ಪಂಪಾಪತಿಯ(ವಿರೂಪಾಕ್ಷ) ಮೂಲ ಸ್ಥಳವಾಗಿದ್ದು, ನಂತರ ಹಂಪೆಗೆ ಹೋದನೆಂಬ ಸ್ಥಳ ಪುರಾಣವಿದೆ.

**ನಂ. ೨, ಮುದ್ದಾಪುರ(ಇಟಗಿ ಮುದ್ದಾಪುರ)**

ಕಂಪ್ಲಿ ಹೋಬಳಿಯ ಸಂಖ್ಯೆ - ೨ ಮುದ್ದಾಪುರದಲ್ಲಿ, ವೆಂಕಟೇಶ್ವರ ದೇವಾಲಯದ ಮೂರ್ತಿಯನ್ನು ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳ ಗುರುಗಳಾದ ಸುರೇಂದ್ರ ತೀರ್ಥರು ಪ್ರತಿಷ್ಠಾಪಿಸಿದರೆಂಬ ಪ್ರತೀತಿ ಇದೆ.

**ಗುಂಡ್ಲವದ್ದಿಗೇರಿ**

ಕಮಲಾಪುರ ಹೋಬಳಿಯ ಗುಂಡ್ಲವದ್ದಿಗೇರಿ ಗ್ರಾಮದ ಸ್ಥಳ ಪುರಾಣದಲ್ಲಿ, ರಾಮಾಯಣ ಕಾಲದಲ್ಲಿ ರಾಮ ಲಕ್ಷ್ಮಣರು ಕಿಷ್ಕಿಂದೆ, ಋಷ್ಯಮೂಕಾದ್ರಿಯಿಂದ ಈ ಗ್ರಾಮದ ಮೂಲಕ ಹಾಯ್ದು ದಕ್ಷಿಣಕ್ಕಿರುವ ರಾಮಮಲೆಯಲ್ಲಿ ಒಂದು ದಿನ ತಂಗಿದ್ದರೆಂಬುದಾಗಿ ತಿಳಿದುಬರುತ್ತದೆ.

**ವೆಂಕಟಾಪುರ**

ಕಮಲಾಪುರ ಹೋಬಳಿಯ ವೆಂಕಟಾಪುರದ ಸಮೀಪವಿರುವ ಬೂದಿದಿಬ್ಬವನ್ನು ವಾಲಿಕಾಷ್ಟ ಅಥವಾ ವಾಲಿದಿಬ್ಬವೆಂದು ಕರೆಯಲಾಗುತ್ತದೆ. ಇದನ್ನು ವಾಲಿ-ಸುಗ್ರೀವರ ಕಾಳಗ ನಡೆದ ಜಾಗವೆಂದು, ರಾಮನು ವಾಲಿಯನ್ನು ಕೊಂದ ಸ್ಥಳವೆಂದು ಮತ್ತು ವಾಲಿಯನ್ನು ಸುಟ್ಟಿದ್ದರಿಂದ ಈ ಬೂದಿಗುಡ್ಡ ನಿರ್ಮಾಣವಾಯಿತೆಂದು ತಿಳಿದುಬರುತ್ತದೆ.

ಪುರಾತತ್ವಶಾಸ್ತ್ರಜ್ಞರ ಅಭಿಪ್ರಾಯದಂತೆ ಇಂತಹ ಬೂದಿದಿಬ್ಬವು ದನ-ಕರುಗಳ ಸಾಕಣೆಯನ್ನು ಕಸುಬನ್ನಾಗಿಸಿಕೊಂಡಿದ್ದ ನೂತನ ಶಿಲಾಯುಗದ ಜನರು ಆಗಾಗ್ಗೆ ಹಬ್ಬದೋಪಾದಿಯಲ್ಲಿ ಕೊಟ್ಟಿಗೆಯಲ್ಲಿ ಸಂಗ್ರಹವಾದ ಸಗಣಿಯನ್ನು ಸುಟ್ಟಿದ್ದರಿಂದ, ಇಲ್ಲವೆ ಬೃಹತ್‌ಶಿಲಾ ಸಂಸ್ಕೃತಿಯ ಜನರು ಕಬ್ಬಿಣ ಅದಿರನ್ನು ಕರಗಿಸಿ ಲೋಹ ಮಾಡಿದ ಭಟ್ಟಿಯಿಂದ ಇಂತಹ ಬೂದಿದಿಬ್ಬಗಳಾಗಿವೆ ಎಂಬುದು ವಿದ್ವಾಂಸರ ಅಭಿಪ್ರಾಯ. ಒಟ್ಟಿನಲ್ಲಿ ಈ ಬೂದಿದಿಬ್ಬವು ಯಾವುದೇ ವ್ಯಕ್ತಿಯ ಶವಸಂಸ್ಕಾರದಿಂದ ಆದುದಲ್ಲ ಎಂಬುದನ್ನು ಖಚಿತವಾಗಿ ಹೇಳಬಹುದು.

**ಮಧುವನ**

ಕಮಲಾಪುರ ಹೋಬಳಿಯ ವೆಂಕಟಾಪುರ ಗ್ರಾಮದ ಸಮೀಪವಿರುವ ಮಧುವನದಲ್ಲಿ ಹಿಂದೆ ಮಹಾಋಷಿಗಳೊಬ್ಬರಿದ್ದರು. ಅವರು ವನದಲ್ಲಿ ಸಿಗುವ ಹಸಿರೆಲೆಗಳನ್ನು ಮಾತ್ರ

ಸೇವಿಸಿ ಬದುಕುತ್ತಿದ್ದರು. ಊರ ಮಂದಿ ಯಾವುದೋ ಉದ್ದೇಶಕ್ಕಾಗಿ ಆತನ ಋಷಿತ್ವವನ್ನು ಕೆಡಿಸಿ ಸಂಸಾರಿಯನ್ನಾಗಿ ಮಾಡಬೇಕೆಂದು ಬಗೆದು, ಆತ ತಿನ್ನುವ ಎಲೆಗಳಿಗೆ ಮಧು(ಜೇನು)ವನ್ನು ಲೇಪಿಸಿಕೊಟ್ಟರೆಂದೂ, ಅದನ್ನು ಸೇವಿಸಿ ಆತನ ಪುರುಷತ್ವ ಹೆಚ್ಚಿ, ಸಂಸಾರಿಯಾದನೆಂಬ ಪುರಾಣವಿದೆ.

**ಕಾಳಗಟ್ಟ**

ಕಮಲಾಪುರ ಹೋಬಳಿಯ ಕಾಳಗಟ್ಟ ಗ್ರಾಮವು ಹಿಂದಕ್ಕೆ ಆನೆಗೊಂದಿ ಸಂಸ್ಥಾನಕ್ಕೆ ಸೇರಿತ್ತು. ಈ ಊರಲ್ಲಿ ಕಾಳಗದ ತರಬೇತಿ ಕೊಡುತ್ತಿದ್ದರು. ಆದ್ದರಿಂದ ಈ ಊರಿಗೆ ಕಾಳಗಟ್ಟ ಎಂಬ ಹೆಸರು ಬಂತೆಂಬ ಪ್ರತೀತಿ ಇದೆ.

**ಮಲಪನಗುಡಿ**

ಕಮಲಾಪುರ ಹೋಬಳಿಯ ಮಲಪನಗುಡಿ ಗ್ರಾಮದ ಸ್ಥಳ ಪುರಾಣದಂತೆ, ವಿಜಯನಗರದ ಅರಸ, ಮಲ್ಲಪ್ಪ ನಾಯಕನಿಗೆ ಉಂಬಳಿ ಕೊಟ್ಟ ಊರು ಇದಾಗಿದ್ದು, ಮಲ್ಲಪ್ಪ ಎಂಬ ಜಟ್ಟಿಯ ಕಾರಣದಿಂದ ಈ ಊರಿಗೆ ಈ ಹೆಸರು ಬಂದಿತೆಂದೂ, ಮಲ್ಲಿಕಾರ್ಜುನ ದೇವರ ಹೆಸರಿನಿಂದ 'ಮಲಪನಗುಡಿ' ಎಂಬ ಹೆಸರು ಬಂತೆಂಬ ಪ್ರತೀತಿಗಳಿವೆ.

**ಬೈಲುವದ್ದಿಗೇರಿ**

ಕಮಲಾಪುರ ಹೋಬಳಿಯ ಬೈಲುವದ್ದಿಗೇರಿ ಗ್ರಾಮಕ್ಕೆ ಸಂಬಂಧಿಸಿದಂತೆ ಸಿದ್ದೇಶ್ವರ ಪುರಾಣದ ಪ್ರಕಾರ, ವಿಜಯನಗರ ಕಾಲದಲ್ಲಿ ಇದು ಕುದುರೆ ಮೇಯಿಸುವ ಪ್ರದೇಶವಾಗಿತ್ತು. ಹಾಗೆ ಕುದುರೆ ಮೇಯಿಸುವ ಸಂದರ್ಭದಲ್ಲಿ ಕುದುರೆಯು ಒದ್ದ(ತುಳಿದ) ಈ ಬಯಲಿಗೆ ವದ್ದಿಗೇರಿ ಎಂದು, ನಂತರ ಬಯಲುವದ್ದಿಗೇರಿ ಎಂಬ ಹೆಸರು ಬಂದಿತೆಂದು ತಿಳಿದುಬರುತ್ತದೆ.

**ಕೊಟಗಿನಹಾಳು**

ಕಮಲಾಪುರ ಹೋಬಳಿಯ ಕೊಟಗಿನಹಾಳು ಗ್ರಾಮದಲ್ಲಿ ಕಪೂರ್ ತಾತನ ಸಮಾಧಿ ಮತ್ತು ಬಸಪ್ಪ ತಾತನ ಸಮಾಧಿ ಹಾಗೂ ಮಠವಿದೆ. ಕಪೂರ್‌ತಾತ ಎಂಬ ಪವಾಡ ಪುರುಷರು ಸುಮಾರು ೬೦೦ ವರ್ಷಗಳ ಹಿಂದೆ ಸಮಾಧಿಯಾಗಿದ್ದರೆಂದು ಪ್ರತೀತಿ. ಬಸಪ್ಪ ತಾತ ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ಪಡೇಸೂರಿನವರು. ಮನೆಬಿಟ್ಟು ಬಂದ ಅವರು ಸಾಗರದ ಮಳಲಗದ್ದೆಯಲ್ಲಿ ತಪಸ್ಸು ಮಾಡಿದಾಗ, ಕಪೂರ್‌ತಾತ ಪ್ರತ್ಯಕ್ಷರಾಗಿ ಕೊಟಗಿನಹಾಳಿನಲ್ಲಿ ತನ್ನ ಸಮಾಧಿಯಿರುವುದಾಗಿ ತಿಳಿಸಿದರು. ಅವರ ಮಾತಿನ ಮೇರೆಗೆ ಬಸಪ್ಪ ತಾತನವರು ಮಠವೊಂದನ್ನು ಕೊಟಗಿನ ಹಾಳು ಗ್ರಾಮದಲ್ಲಿ ನಿರ್ಮಾಣ ಮಾಡಿದರೆಂದು ತಿಳಿದುಬರುತ್ತದೆ. ಮಠದಲ್ಲಿ ಬಸಪ್ಪ ತಾತನಿಗೆ ದರ್ಶನಕೊಟ್ಟ ಸಂದರ್ಭದ ಕಪೂರ್‌ತಾತನ ಭಾವಚಿತ್ರವಿದೆ.

**ಡಣಾಯಕನಕೆರೆ**

ಮರಿಯಮ್ಮನ ಹೋಬಳಿಯ ಡಣಾಯಕನಕೆರೆ ಗ್ರಾಮದ ಮದಗದ ಕೆಂಚಮ್ಮನ ಕುರಿತು ಸ್ಥಳ ಪುರಾಣವೊಂದಿದೆ.

ಹಿಂದೆ ಡಣಾಯಿಕನಕೆರೆ ಗ್ರಾಮವು ಬೆಲ್ಲ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಹಿರೇಕೆರೂರು ತಾಲೂಕಿನ ಮದಗ ಮಾಸೂರು ಗ್ರಾಮದಿಂದ ತರಕಾರಿ ತಂದು ಬದಲಿಗೆ ಬೆಲ್ಲ ಕೊಂಡೊಯ್ಯುತ್ತಿದ್ದರು. ಒಂದು ಬಾರಿ ಹಾಗೆ ತರಕಾರಿ ಬಂಡಿಯಲ್ಲಿ ಸಮತೋಲನಕ್ಕಾಗಿ ಕಲ್ಲೊಂದನ್ನು ಇರಿಸಿದ್ದರಂತೆ. ಬೆಲ್ಲವನ್ನು ಖರೀದಿಸಿಕೊಂಡು ಪ್ರತಿಯಾಗಿ ತರಕಾರಿ ಹಿಂದಿರುಗಿಸಬೇಕಾದರೆ ಆ ಕಲ್ಲನ್ನು ಇಲ್ಲೇ ಬಿಟ್ಟು ಹೋದರಂತೆ. ದಾರಿಯಲ್ಲಿ ಬಿದ್ದಿದ್ದ ಕಲ್ಲನ್ನು ಕಂಡ ಊರ ಹರಿಜನ ವ್ಯಕ್ತಿಯೊಬ್ಬ, ದಾರಿ ಬದಿಯಿಂದ ಎತ್ತಿ ಅದನ್ನು ಆಚೆಗೆ ಎಸೆದನಂತೆ. ಸ್ವಲ್ಪ ಹೊತ್ತಲ್ಲಿ ಅದು ಪೂರ್ವ ಸ್ಥಳದಲ್ಲಿ ತನ್ನಷ್ಟಕ್ಕೆ ತಾನೇ ಬಂದು ಬೀಳುತ್ತಿತ್ತಂತೆ. ಈ ರೀತಿ ರಾತ್ರಿ ಸಮಯದಲ್ಲಿ ನಡೆಯುತ್ತಿತ್ತಂತೆ. ಒಂದು ರಾತ್ರಿ ಹೀಗೆ ಎಸೆದು ಆತ ಅದು ಹೇಗೆ ಬಂದು ಬೀಳುತ್ತದೆ? ಇಲ್ಲ ಯಾರಾದರೂ ತಂದು ಹಾಕುತ್ತಿರಬಹುದೋ ಎಂಬುದನ್ನು ಪತ್ತೆ ಹಚ್ಚಲು ಜಾಗರಣೆ ಕುಳಿತನಂತೆ. ಆತನಿಗೆ ಸ್ವಲ್ಪ ಮಂಪರು ಆವರಿಸಲು ಆ ಕಲ್ಲು ಬಂದು ಪೂರ್ವ ಸ್ಥಾನದಲ್ಲಿ ಬೀಳುತ್ತಿದ್ದಂತೆ ಇದರಿಂದ ಆ ಕಲ್ಲಲ್ಲಿ ಏನೋ ಶಕ್ತಿ ಇದೆಯೆಂದೂ ಊಹಿಸಿದ ಆತನು ಏನು ಮಾಡುವುದೆಂದು ಚಿಂತಿಸಿದನಂತೆ. ಹೀಗಿರಲು ಒಂದು ರಾತ್ರಿ ಕೆಂಚಮ್ಮ ಆತನಿಗೆ ಕನಸಿನಲ್ಲಿ ಬಂದು ಆ ಕಲ್ಲು ತಾನೇ ಎಂದೂ ಅದಕ್ಕೆ ಗುಡಿಕಟ್ಟಿ ಕೆಂಚಮ್ಮನೆಂದು ಪೂಜಿಸಬೇಕೆಂದು, ನಿಮ್ಮ(ಹರಿಜನ) ಮಂದಿಯೇ ಅದಕ್ಕೆ ಪೂಜೆಯನ್ನು ನಡೆಸಬೇಕೆಂದು ಹೇಳಿದಳಂತೆ. ಹೀಗೆ ಕೆಂಚಮ್ಮನ ಗುಡಿ ಸ್ಥಾಪಿತವಾಯಿತೆಂಬ ಪ್ರತೀತಿ ಇದೆ. ಈಗಲೂ ಹರಿಜನರೇ ಅಲ್ಲಿ ಪೂಜೆ ಮಾಡುತ್ತಾರೆ.

**ಕಮಲಾಪುರ**

ಕಮಲಾಪುರ ಗ್ರಾಮಕ್ಕೆ ಸಂಬಂಧಿಸಿದ ಸ್ಥಳ ಪುರಾಣದಂತೆ, ಹಿಂದೆ ಮಾಧವ ಭಟ್ಟ ಎಂಬ ಬ್ರಾಹ್ಮಣನು ದಾರಿದ್ರ್ಯದಿಂದ ಬಹಳ ಕಷ್ಟವನ್ನು ಅನುಭವಿಸುತ್ತಿದ್ದನು. ಆತನ ಪತ್ನಿ 'ನೀವು ಸಕಲ ವಿದ್ಯೆಗಳನ್ನು ಬಲ್ಲಿರಿ, ನಾವು ದಾರಿದ್ರ್ಯ ಅನುಭವಿಸುತ್ತಿರುವುದಕ್ಕೆ ಕಾರಣವೇನೆಂದು' ಕೇಳಿದಳು. ಆಗ ಮಾಧವ ಭಟ್ಟರು 'ಇದಕ್ಕೆ ದೇವಿ ಕುರಿತು ಪ್ರಾರ್ಥನೆ ಮಾಡದೇ ನಮ್ಮ ದಾರಿದ್ರ್ಯ ಪರಿಹಾರವಾಗುವುದಿಲ್ಲ'ವೆಂದು ತನ್ನ ಪತ್ನಿಯ ಮುಂದೆ ಹೇಳಿದನು. ಆಗ ಪತ್ನಿಯು ದೇವಿ ಕುರಿತು ಪ್ರಾರ್ಥನೆ ಮಾಡುವುದರಿಂದ ನಮ್ಮ ದರಿದ್ರ ಪರಿಹಾರವಾಗುವುದಾದರೇ ಆ ಕೆಲಸ ಬೇಗ ಮಾಡಿ ಎಂದು ಹೇಳಿದಳು. ಆ ಮಾತಿಗೆ ಮಾಧವ ಭಟ್ಟರು ಶ್ರೀ ಶೈಲಕ್ಕೆ ಹೋಗಿ ಅಲ್ಲಿಯ ಅಭಿಮಾನ ದೇವತೆಯಾದ ಭ್ರಮರಾಂಬಿಕೆಯ ಗುಡಿಯಲ್ಲಿ ಪೂಜೆ, ಪ್ರಾರ್ಥನೆ ಮಾಡತೊಡಗಿದನು. ಇವನ ಪೂಜೆ, ಪ್ರಾರ್ಥನೆಯಿಂದ ಪ್ರಸನ್ನಳಾದ ದೇವಿಯು 'ನಿನಗೆ ಈ ಜನ್ಮದಲ್ಲಿ ಧನ ಲಭ್ಯವಿಲ್ಲ' ಎಂದು ಹೇಳಿದಳು. ಇದನ್ನು ಕೇಳಿ ಚಿಂತಿತನಾದ ಮಾಧವ ಭಟ್ಟನು ನಾನು, ಇಷ್ಟು ದಿನ ಮಾಡಿದ ಪೂಜೆ, ಪ್ರಾರ್ಥನೆ ವ್ಯರ್ಥವಾಯಿತೆಂದು, ದೇವಿಯ ಮೇಲೆ ಕೋಪ ಮಾಡಿಕೊಂಡು ತನ್ನಲ್ಲಿರುವ ಎಲ್ಲಾ ಮಂತ್ರಗಳನ್ನು ಸುಟ್ಟು ಹಾಕಿದನು. ಶ್ರೀ ಶೈಲದಿಂದ ವಾಪಸ್ಸು ಪಂಪಾಕ್ಷೇತ್ರಕ್ಕೆ ಬಂದನು. ಪಂಪಾಕ್ಷೇತ್ರದ ಪಶ್ಚಿಮ ಭಾಗದಲ್ಲಿರುವ ಕಮಲಾದೇವಿ ಎಂಬ ದುರ್ಗಿ ದೇವಸ್ಥಾನ ಕಂಡನು. ಈ ಸ್ಥಳವು ನನ್ನ ತಪಸ್ಸಿಗೆ ಪ್ರಶಸ್ತವಾಗಿದೆ ಎಂದು

ತಿಳಿದ ಮಾಧವಭಟ್ಟನು, ಕಮಲಾದೇವಿ ಗುಡಿಯಲ್ಲಿ ತಪಸ್ಸಿಗೆ ಕುಳಿತನು. ಇವನ ತಪಸ್ಸಿಗೆ ಮೆಚ್ಚಿ, ದೇವಿಯು ಪ್ರತ್ಯಕ್ಷಳಾಗಿ 'ನಿನಗೇನು ಬೇಕು ಕೇಳು' ಎಂದಳು. ಆಗ ಮಾಧವಭಟ್ಟನು 'ನನಗೇನು ಬೇಡ' ಎಂದು ಹೇಳಿದನು. ಆಗ ದೇವಿಯು 'ಹೇಳಿದ ಕಾಲಕ್ಕೆ ಮಹತ್ವದ ಫಲ ತಪ್ಪದು' ಎಂದು ದ್ರವ್ಯವನ್ನು ಅನುಗ್ರಹಿಸಿದಳು. ಆ ದ್ರವ್ಯವನ್ನು ಸಾಧಿಸಿಕೊಂಡು ತನ್ನ ದಾರಿದ್ರ್ಯವನ್ನು ಪರಿಹರಿಸಿಕೊಂಡನೆಂಬ ಪ್ರತೀತಿ ಇದೆ.

## ೩.೩. ಸ್ಥಳನಾಮಗಳು

ಸ್ಥಳನಾಮ ಅಧ್ಯಯನವು ಸ್ಥಳೀಯ ಚರಿತ್ರೆ ಅಧ್ಯಯನಕ್ಕೆ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿದೆ. ಸ್ಥಳನಾಮ ಅಧ್ಯಯನವು ಪ್ರತಿಯೊಂದು ಗ್ರಾಮ ಅಥವಾ ಪಟ್ಟಣಗಳು ಯಾವ ಯಾವ ಕಾಲದಲ್ಲಿ ಯಾವ ಹೆಸರುಗಳನ್ನು ಪಡೆದವು, ಏಕೆ ಪಡೆದವು, ಇಂದಿನ ಹೆಸರೇನು ಮುಂತಾದ ವಿಷಯಗಳನ್ನು ಕುರಿತು ಚರ್ಚಿಸುತ್ತದೆ. ಸ್ಥಳನಾಮವು ಯಾವ ಯಾವ ಅಂಶಗಳನ್ನು ಆಧರಿಸಿ ನಿರ್ಧಾರವಾಗುತ್ತಿತ್ತು ಎಂದು ತಿಳಿಯುವುದಲ್ಲದೆ, ಅದು ಒಂದು ಜನಾಂಗ, ಸಂಸ್ಕೃತಿ, ಧರ್ಮ, ಜೀವನಕ್ರಮ ಮುಂತಾದ ಅನೇಕ ಸಂಗತಿಗಳ ಮೇಲೆ ಬೆಳಕು ಬೀರುತ್ತದೆ.[೯೬]

ಸ್ಥಳನಾಮಗಳ ಅಧ್ಯಯನವೆಂದರೆ ಮಾನವ ಜೀವಿಯ ಸರ್ವಾಂಗೀಣ ಹಾಗೂ ಸಮಸ್ತ ಅಧ್ಯಯನವಾಗಿದೆ. ಸ್ಥಳನಾಮಗಳ ಶೋಧನೆಗೆ ತೊಡಗುವ ಸಂಶೋಧಕನು ತನ್ನ ನೆಲೆಯಲ್ಲಿ ಮುನ್ನಡೆದಂತೆಲ್ಲ ಭಾಷೆಯ ವಿವಿಧ ಮಗ್ಗಲುಗಳನ್ನು ಸ್ಪರ್ಶಿಸುವ, ಪದರು ಪದರುಗಳನ್ನು ತೆರೆದು ನೋಡುವ ಸೂಕ್ಷ್ಮ ವೀಕ್ಷಕನಾಗಿರಬೇಕಾಗುತ್ತದೆ. ಏಕೆಂದರೆ ಒಂದು ಭಾಷೆಯಲ್ಲಿ ವ್ಯವಹಾರದಲ್ಲಿರುವ ಸಾಮಾನ್ಯ ಶಬ್ದಗಳಿಗಿಂತ ಸ್ಥಳನಾಮದಲ್ಲಿ ಅಡಕವಾದ ಶಬ್ದಗಳು ತಮ್ಮ ಸ್ವರೂಪ ಮತ್ತು ಕಾರ್ಯದಲ್ಲಿ ವಿಭಿನ್ನವಾಗಿವೆ. ಅಂದರೆ ಸ್ಥಳನಾಮಗಳಲ್ಲಿ ಅಡಕವಾಗಿರುವ ಶಬ್ದಗಳು ಕಾಲಾಂತರದಲ್ಲಿ ಅರ್ಥಹೀನವಾಗಿ ಪರಿಣಮಿಸಬಹುದಾದರೂ, ಅವು ಒಂದು ಸ್ಥಳದ ಗುರುತುಗಳೇ ಆಗಿರುವುದರಿಂದ, ಅವು ಹಾಗೆಯೇ ಉಳಿದುಬಿಡುತ್ತವೆ. ಇಂತಹ ತಾಳಿಕೆಯ ಗುಣದಿಂದಲೇ ನಮ್ಮ ಪಾಲಿಗೆ ಸ್ಥಳನಾಮಗಳು ಇಂದಿಗೂ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಮೌಲ್ಯವುಳ್ಳ ಪಳೆಯುಳಿಕೆಗಳಾಗಿ ಉಳಿಯುವಂತಾಗಿದೆ.[೯೭] ಹೀಗಾಗಿ ಮುಂದುವರಿದ ರಾಷ್ಟ್ರಗಳಲ್ಲಿ ಚರಿತ್ರೆ ಹಾಗೂ ಕೋಶವನ್ನು ಅತ್ಯಂತ ವೈಜ್ಞಾನಿಕವಾಗಿ ಪುನರ್‌ನಿರ್ಮಿಸುವಲ್ಲಿ ಸ್ಥಳನಾಮಗಳನ್ನು ಮುಖ್ಯ ಆಧಾರವನ್ನಾಗಿ ಬಳಸಿಕೊಳ್ಳಲಾಗುತ್ತಿದೆ.

ಸ್ಥಳನಾಮಶಾಸ್ತ್ರಕ್ಕೆ ಆಂಗ್ಲ ಭಾಷೆಯಲ್ಲಿ 'ಟೊಪಾನಿಮಿ'(Toponomy) ಎಂದು ಕರೆಯಲಾಗುತ್ತದೆ. ಇದು ಮೂಲತಃ ಗ್ರೀಕ್‌ನ ಟೊಪಾಸ್+ನೊಮಾಸ್(Topos+Nomos) ಎಂಬ ಎರಡು ಪದಗಳಿದ ಬಂದಿದೆ. 'ಟೊಪಾಸ್' ಎಂದರೆ 'ಸ್ಥಳ'(Place), 'ನೊಮಾಸ್' ಎಂದರೆ 'ಕುರಿತಾದ ಅಧ್ಯಯನ(A Study of). 'ಟೊಪಾನಿಮಿ' ಎಂಬುದು ಸ್ಥಳದ, ಕ್ಷೇತ್ರದ ಕುರಿತಾದ ವ್ಯವಸ್ಥಿತ ಅಧ್ಯಯನವಾಗಿದೆ. ಇತ್ತೀಚೆಗೆ ಅದೊಂದು ವಿಜ್ಞಾನದ ಶಾಖೆಯಾಗಿ, ಸುವ್ಯವಸ್ಥಿತ ಶಾಸ್ತ್ರವಾಗಿ ಬೆಳೆದುಬಂದಿದೆ. ಆದ್ದರಿಂದ ಅದನ್ನು ಸ್ಥಳಗಳನ್ನು-ಸ್ಥಳನಾಮಗಳನ್ನು ಕುರಿತು ಅಧ್ಯಯನ ಮಾಡುವ ವಿಜ್ಞಾನ

ಎಂದೇ ಹೇಳಬಹುದು.[೯೮] ದೇಶ, ರಾಜ್ಯ, ಗ್ರಾಮ, ಊರು ಪದಗಳಿಗೆ ಪರಂಪರಾಗತವಾದ ಸೀಮಿತ ಅರ್ಥವಿದೆ. ಅವುಗಳು ಸಾಮುದಾಯಿಕ ಮಾನವ ನೆಲೆಗಳ ಅರ್ಥವನ್ನು ತುಂಬಿಕೊಳ್ಳುವುದಿಲ್ಲವಾದ್ದರಿಂದ ನವೀನವಾಗಿ ಚಲಾವಣೆಗೆ ಬಂದಿರುವ ಸ್ಥಳನಾಮ ಎಂಬ ಪದ ಬಹಳ ಸೂಕ್ತ ಮತ್ತು ಸಮರ್ಪಕ ಎಂದು ಹೇಳಬಹುದು.

ಪ್ರದೇಶ ಅಥವಾ ಸ್ಥಳಗಳಿಗೆ ಇಟ್ಟಿರುವ ಹೆಸರುಗಳೇ ಸ್ಥಳನಾಮಗಳು. ಸ್ಥಳನಾಮಗಳು ಸಮೂಹಕ್ಕೆ ಅನ್ವಯವಾಗುವಂಥವು. ಮಾನವ ತನ್ನ ವಸತಿ ಸ್ಥಳದ ವೈಶಿಷ್ಟ್ಯ, ಪ್ರಯೋಜನಗಳನ್ನು ಗಮನಿಸಿ ಅದಕ್ಕನುಗುಣವಾಗಿ ಸ್ಥಳಗಳಿಗೆ ಹೆಸರಿಡುವ ಪ್ರವೃತ್ತಿಯನ್ನು ಬೆಳೆಸಿಕೊಂಡ. ಈ ಬಗೆಯ ಹೆಸರುಗಳು ಆರಂಭಿಕ ಹಂತದಲ್ಲಿ ರೂಢನಾಮಗಳಾಗಿದ್ದು, ಅನಂತರದ ಹಂತದಲ್ಲಿ ಅಂಕಿತನಾಮಗಳಾದವು. ಸ್ಥಳಗಳ ಪ್ರಾಚೀನನಾಮಗಳು ವಿವರಣಾತ್ಮಕವಾಗಿದ್ದು ಹೆಚ್ಚು ನೈಜವಾಗಿವೆ. ಈ ನಿಟ್ಟಿನಲ್ಲಿ ಕೆಲಸ ಮಾಡಿದ ವಿದ್ವಾಂಸರನೇಕರ ಅಭಿಪ್ರಾಯದಂತೆ ಸ್ಥಳನಾಮಗಳು ಸೃಷ್ಟಿಯೊಂದಿಗೇ ಬೆಳೆದುಬಂದು ಕಾಲಾಂತರದಲ್ಲಿ ಪ್ರಾಕೃತಿಕ, ಭೌಗೋಳಿಕ, ಐತಿಹಾಸಿಕ, ಜಾನಪದೀಯ, ಪುರಾಣ-ಐತಿಹ್ಯ-ದಂತಕಥೆಗಳ ಮೂಲಕ ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ಹುಟ್ಟಿಕೊಂಡಂಥವು.

ಸ್ಥಳನಾಮಶಾಸ್ತ್ರದ ಬೆಳವಣಿಗೆ ಈಚಿನದು. ನಮ್ಮ ದೇಶದ ಮಟ್ಟಿಗಂತೂ ಇದು ತೀರಾ ಹೊಸತಾದುದೆನ್ನಬೇಕು. ಸ್ಥಳನಾಮಗಳಿಗೆ ಒಂದು ಮಹತ್ವದ ಅರ್ಥ ಇದೆಯೆಂದೂ, ಆ ಅರ್ಥವನ್ನು ಆ ಸ್ಥಳದ ಹಳೆಯ ನಾಮರೂಪವನ್ನು ಪರಿಶೀಲಿಸುವುದರ ಮೂಲಕ ಖಚಿತಪಡಿಸಿಕೊಳ್ಳಬಹುದೆಂದೂ ಮೊತ್ತಮೊದಲು ತೋರಿಸಿಕೊಟ್ಟ ಕೀರ್ತಿ ಜರ್ಮನಿಯ 'ಗಾಟ್‌ಫ್ರೀಡ್ ವಿಲ್ ಹೆಲ್ಮ್ ಲೀಬ್ನಿಜ್'(೧೬೬೮) ಎಂಬ ವಿದ್ವಾಂಸನಿಗೆ ಸಲ್ಲುತ್ತದೆ. ಆದ್ದರಿಂದ ಇವನನ್ನು 'ಸ್ಥಳನಾಮಶಾಸ್ತ್ರದ ಪಿತಾಮಹ' ಎಂದು ಕರೆಯಲಾಗಿದೆ.[೯೯]

ಲೀಬ್ನಿಜ್‌ನು ಸ್ಥಳನಾಮ ಅರ್ಥಗರ್ಭಿತವಾದವುಗಳೆಂದೂ, ಅವುಗಳ ಪ್ರಾಚೀನ ರೂಪಗಳಿಂದ ಅರ್ಥವನ್ನು ನಿರ್ಣಯಿಸಬಹುದೆಂದೂ ಪ್ರಥಮವಾಗಿ ಘೋಷಿಸಿದನು. ಆ ಹೊತ್ತಿಗಾಗಲೇ ಯುರೋಪಿನ ಗ್ರಾಮಗಳ ಪ್ರಾಚೀನ ನಾಮಗಳಲ್ಲಿ ಹಲವು ಕಣ್ಮರೆಯಾಗಿದ್ದವು. ಇಂಥ ಪರಿಸ್ಥಿತಿಯಲ್ಲಿ ಸ್ಥಳನಾಮ ವಿಜ್ಞಾನದ ವಿಕಾಸಕ್ಕೆ ಭದ್ರವಾದ ಬುನಾದಿ ಹಾಕಿದವನು ಇಂಗ್ಲೆಂಡಿನ 'ಸ್ಕೀಟ್' ಮಹಾಶಯ. ಜರ್ಮನಿಯಲ್ಲಿ 'ಫಾರ್‌ಸ್ಟೀಮನ್', ಫ್ರಾನ್ಸಿನಲ್ಲಿ 'ಲಾಂಗ್ನನ್', ನಾರ್ವೆಯಲ್ಲಿ 'ರೈ' ಮತ್ತು ಸ್ವೀಡನ್‌ನಲ್ಲಿ 'ನೋರಿನ್' ಆ ಕ್ಷೇತ್ರದಲ್ಲಿ ಕೆಲಸ ಮಾಡಿದ ತಜ್ಞರಾಗಿದ್ದಾರೆ. ಸ್ಥಳನಾಮ ಸಂಶೋಧನೆಯಲ್ಲಿ ಹೆಸರುಗಳ ಐತಿಹಾಸಿಕ ವಿಕಾಸಕ್ಕೂ, ಭೌಗೋಳಿಕ ಪರಿಸ್ಥಿತಿ ಸನ್ನಿವೇಶಗಳ ವಿವರಣೆಗೂ ಆದ್ಯ ಗಮನ ನೀಡತಕ್ಕದ್ದೆಂದು ಅವರು ಸ್ಪಷ್ಟಪಡಿಸಿದರು. ಅವುಗಳ ಅಧ್ಯಯನದಿಂದ ಸಾಂಸ್ಕೃತಿಕ ಲಾಭ ಮಾತ್ರವಲ್ಲ, ಹಲವಾರು ಜ್ಞಾನಶಾಖೆಗಳಿಗೆ ಪ್ರಯೋಜನವಾಗುತ್ತದೆಂದು ಅವರು ಸೂಚಿಸಿದರು.[೧೦೦]

ಸ್ಥಳನಾಮಗಳು ಆಯಾ ಜನರ ಮನೋಧರ್ಮ, ಬುದ್ಧಿ ಸಾಮರ್ಥ್ಯ, ಸಂಸ್ಕೃತಿಗಳ ಪ್ರತೀಕಗಳಾಗಿ ಹೆಚ್ಚು ವೈಶಿಷ್ಟ್ಯಪೂರ್ಣವೆನಿಸಿವೆ. ಭಾರತ ಮೂಲತಃ ಹಳ್ಳಿಗಳ ದೇಶ. ಹಾಗಾಗಿ

ಗ್ರಾಮಗಳಿಗೆ, ಸ್ಥಳಗಳಿಗೆ ಹೆಸರಿಟ್ಟ ಮೊದಲ ಜನ ಗ್ರಾಮೀಣರು ಎಂಬುದನ್ನು ಮರೆಯುವಂತಿಲ್ಲ. ಹೀಗೆ ಗ್ರಾಮೀಣರು ಸ್ಥಳಗಳಿಗೆ ಹೆಸರಿಡುವ ಸಂದರ್ಭದಲ್ಲಿ ಅವರ ಗಮನಕ್ಕೆ ಬಂದದ್ದು ಆಯಾ ಸ್ಥಳಗಳ ಭೌಗೋಳಿಕ ಪರಿಸರ, ನದಿ, ಸರೋವರಗಳು ಮತ್ತು ಸುತ್ತಮುತ್ತಲಿನ ಮೃಗ, ಪಕ್ಷಿ, ಕಾಡು-ಮೇಡುಗಳು - ಇತ್ಯಾದಿ. ಹೀಗೆ ಹುಟ್ಟಿಕೊಂಡ ಸ್ಥಳನಾಮಗಳು ಕಾಲಾಂತರದಲ್ಲಿ ನಗರಗಳು, ಅಲ್ಲಿಯ ಜನ, ಅವರಾಡುವ ಭಾಷೆ, ಅನ್ಯಭಾಷಿಕರು - ಇವೆಲ್ಲದರ ಪ್ರಭಾವದಿಂದ ಮೂಲ ಸ್ವರೂಪ, ಅರ್ಥಗಳನ್ನು ಕಳೆದುಕೊಂಡು ಮುಂದಿನ ಪೀಳಿಗೆಯ ಜನರ ಕಲ್ಪನೆಗಳಿಂದ ತಮ್ಮ ಸುತ್ತಲೂ ಹಲವು ಕಥಾ ಪರಿವೇಶಗಳನ್ನೂ, ಪೌರಾಣಿಕ ಹಿನ್ನೆಲೆಗಳನ್ನೂ ಪಡೆದುಕೊಳ್ಳುವಂತಾಯಿತು.

ಪ್ರತಿಯೊಂದು ಊರುಗಳ ಹೆಸರಿನ ಹಿನ್ನೆಲೆಯಲ್ಲಿ ಯಾವುದಾದರೂ ಐತಿಹ್ಯ, ದಂತಕಥೆ, ಪುರಾಣ ಕತೆಗಳು ಅಡಕಗೊಂಡಿರುತ್ತವೆ. ಅಲ್ಲಿಯ ಕಲ್ಲು, ಮಣ್ಣು, ಪೈರು, ಗುಡ್ಡ, ಹೊಳೆ, ಹಳ್ಳ, ತೊರೆ, ಕೆರೆ, ಕೋಟೆ, ಹೊಂಡ ಮೊದಲಾದ ನೈಸರ್ಗಿಕ ಹಿನ್ನೆಲೆಯನ್ನೂ ಹೊಂದಿರುತ್ತವೆ. ಅಷ್ಟೇ ಅಲ್ಲದೆ ರಾಜ ಪರಿವಾರದವರು, ಧಾರ್ಮಿಕ ಮಹಾಪುರುಷರು, ಸಾಧು-ಸಂತರು, ಸಮಾಜ ಸುಧಾರಕರ ಸ್ಮರಣೆಗಳೂ ಸ್ಥಳನಾಮಗಳ ಹಿನ್ನೆಲೆಯಾಗಿರುವುದನ್ನೂ ಸಾಮಾನ್ಯವಾಗಿ ಗಮನಿಸಬಹುದು. ಈ ದೃಷ್ಟಿಯಿಂದ ಸ್ಥಳನಾಮಗಳು ಮಾನವನ ಇತಿಹಾಸ, ಧರ್ಮ, ಸಮಾಜ, ಸಂಸ್ಕೃತಿ, ಜಾನಪದ ಈ ಬಗೆಯ ಎಲ್ಲ ಅಂಶಗಳ ಮೇಲೂ ಪರಿಣಾಮಕಾರಿಯಾಗಿ ಬೆಳಕು ಚೆಲ್ಲುವಂಥವುಗಳಾಗಿವೆ.

ಒಟ್ಟಾರೆ ಹೇಳುವುದಾದರೆ ಸ್ಥಳನಾಮ ಚರಿತ್ರೆಯೆಂದರೆ ಮಾನವ ಜೀವನಕ್ಕೆ ಯೋಗ್ಯವಾದ ಪರಿಸರವನ್ನು, ಐಹಿಕ ಜೀವನದ ಸುಖ-ಸಂತೃಪ್ತಿಗೆ ಸಾಧನವಾಗಬಲ್ಲ ಸನ್ನಿವೇಶವನ್ನು ಹುಡುಕುತ್ತ, ಅಂಥ ಕಡೆ ವಲಸೆ ಹೋಗಿ ನೆಲೆಸಿದ ಮಾನವ ಜನಾಂಗದ ಲಿಖಿತ ಇತಿಹಾಸವೇ ಆಗಿದೆ.[೧೦೧] ಸ್ಥಳನಾಮಗಳು ಜನರ ವಲಸೆ, ಅವರ ನಂಬುಗೆಗಳು, ಅವರ ಸಾಮಾಜಿಕ-ಆರ್ಥಿಕ ಸ್ಥಾನಮಾನಗಳು ಮುಂತಾದ ಸಮಾಜಶಾಸ್ತ್ರೀಯ ಹಾಗೂ ಮಾನವಶಾಸ್ತ್ರೀಯ ವಿವರಗಳನ್ನು ಸೂಚಿಸುವ ಸಾಧ್ಯತೆಗಳೇ ಹೆಚ್ಚಿರುವುದರಿಂದ ಇದರ ಅಧ್ಯಯನವು ಅತ್ಯಂತ ಮೌಲಿಕವಾದದ್ದು ಎಂದೇ ಹೇಳಬಹುದು.

**ಸ್ಥಳನಾಮಗಳ ವರ್ಗೀಕರಣ**

ಸ್ಥಳನಾಮಗಳ ಅಧ್ಯಯನ, ಸ್ಥಳನಾಮಗಳ ಹೆಸರು ವ್ಯಾಪ್ತಿ, ಸ್ಥಳನಾಮಗಳ ಉಗಮ ಮತ್ತು ಇತಿಹಾಸದಂತೆಯೇ ಸ್ಥಳನಾಮಗಳ ವರ್ಗೀಕರಣವು ಅಷ್ಟೇ ಪ್ರಮುಖವಾದ ವಿಷಯವಾಗಿದೆ. ಸ್ಥಳನಾಮ ವರ್ಗೀಕರಣವು ಭೌಗೋಳಿಕ, ಚಾರಿತ್ರಿಕ, ಪ್ರಾಕೃತಿಕ ಅಂಶಗಳ ವರ್ಗೀಕರಣಕ್ಕೆ ಪೂರಕವಾಗಿ ಕಂಡುಬರುತ್ತದೆ.[೧೦೨] ಸ್ಥಳನಾಮಗಳನ್ನು ಸ್ಥೂಲವಾಗಿ ಎರಡು ವಿಧವಾಗಿ ವಿಂಗಡಿಸಲಾಗಿದೆ. ಮೊದಲನೆಯ ಗುಂಪು 'ಪ್ರಾಕೃತಿಕ' ಮತ್ತು 'ಭೌಗೋಳಿಕ' ಅಂಶಗಳನ್ನೇ ಪ್ರಧಾನವಾಗಿ ಪ್ರತಿನಿಧಿಸಿದರೆ, ಎರಡನೆಯ ಗುಂಪು 'ಸಾಂಸ್ಕೃತಿಕ' ಸ್ಥಳನಾಮಗಳಾಗಿ ಕಂಡುಬರುತ್ತವೆ.

ಸ್ಥಳನಾಮಗಳು ನಿರ್ದಿಷ್ಟ ಮತ್ತು ರಚನೆಗಳ ಒಂದು ಅರ್ಥಪೂರ್ಣ ವ್ಯವಸ್ಥೆಯಾಗಿರುವುದರಿಂದ ಈ ಕೆಳಕಂಡಂತೆ ಸ್ಥಳನಾಮ ವರ್ಗೀಕರಣದ ಗುಂಪುಗಳನ್ನು ನೋಡಬಹುದು.

## ೧. ಪ್ರಾಕೃತಿಕ ಸ್ಥಳನಾಮ

ಮಾನವ ಪ್ರಕೃತಿಯೊಂದಿಗೆ ಸಹಜವಾಗಿ ಬದುಕುತ್ತಿರುವ ಸಂದರ್ಭದಲ್ಲಿ ಕಲ್ಲು, ಬೆಟ್ಟ, ಗುಡ್ಡ, ಗಿರಿಗಳಲ್ಲಿ ನೆಲೆಮಾಡಿಕೊಂಡಿದ್ದ. ಆಸರೆಗಳನ್ನು ಗುರುತಿಸುವ ಸಂದರ್ಭದಲ್ಲಿ ಆ ಕಲ್ಲು, ಗುಡ್ಡಗಳಿಂದಲೇ ಹೆಸರಿಸಲು ಪ್ರಾರಂಭಿಸಿದನು.

ಪ್ರಾಕೃತಿಕ ಸ್ಥಳನಾಮಗಳನ್ನು ಮತ್ತೆ ೬ ಭಾಗಗಳಾಗಿ ವಿಂಗಡಿಸಲಾಗಿದೆ.

**I. ಜಲವಾಚಕ:** ಅಲೆಮಾರಿಯಾಗಿದ್ದ ಆದಿಮಾನವನು, ಒಂದು ಕಡೆ ನೆಲೆ ನಿಂತು ತನ್ನ ಜೀವನವನ್ನು ಪ್ರಾರಂಭಿಸಿದ್ದು ನೀರಿನ ತಾಣಗಳಲ್ಲಿ. ಅಲ್ಲಿಯೇ ಮಾನವನ ಸಂಸ್ಕೃತಿಗಳು ಪ್ರಸಿದ್ಧಿಗೆ ಬಂದಿರುವುದು. ನದಿ, ಪರಿಸರ, ಕೆರೆ, ಹಳ್ಳ, ಕೊಳ್ಳ, ಕುಂಟೆಗಳಂತಹ ಕೃತಕ ಜಲಸಂಗ್ರಾಹಕಗಳನ್ನು ನಿರ್ಮಿಸಿಕೊಂಡು ವಾಸಿಸುವುದಕ್ಕಾಗಿ ಗ್ರಾಮಗಳನ್ನು ನಿರ್ಮಿಸಿಕೊಂಡರು.

**II. ಭೂಸ್ಥಿತಿ ವಾಚಕ:** ಮಾನವನು ತಾನು ಜೀವಿಸಲು ನೆಲೆನಿಂತು ತನ್ನ ಸುತ್ತಲಿನ ಪ್ರದೇಶವನ್ನಲ್ಲದೆ, ಭೌಗೋಳಿಕ ವೈಶಿಷ್ಟ್ಯಗಳಾದ ಬೆಟ್ಟ, ಕಾಡು, ದಿಬ್ಬ, ಕೋಟೆ, ದುರ್ಗ ಮುಂತಾದವುಗಳಿಂದ ಗುರುತಿಸಿದನು.

**III. ಪ್ರಾಣಿ-ಪಕ್ಷಿ ವಾಚಕ:** ಪ್ರಾಣಿ-ಪಕ್ಷಿಗಳು ಪ್ರಕೃತಿಯಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿವೆ. ಮನುಷ್ಯ ತನ್ನ ಜೀವನದೊಂದಿಗೆ ಬದುಕುವ ಅಥವಾ ತಮಗೆ ಅತಿಮಾನುಷ ವೆಂದು ತೋರುವ ಪ್ರಾಣಿ-ಪಕ್ಷಿಗಳ ಹೆಸರನ್ನು ತಮ್ಮ ವಾಸದ ನೆಲೆಗಳಿಗೆ ನಿರ್ದೇಶಿಸುತ್ತಾರೆ.

**IV. ಸಸ್ಯ ವಾಚಕ:** ಪ್ರಾಚೀನ ಕಾಲದಿಂದಲೂ ಪ್ರಾಕೃತಿಕ ಸಂಪತ್ತುಗಳ ಮಧ್ಯೆ ಬದುಕುತ್ತಿರುವ ಮಾನವನು, ಗಿಡ, ಮರಗಳ ಬಗ್ಗೆ ಆರಾಧನಾ ಮನೋಭಾವ ಬೆಳೆಸಿಕೊಂಡು ಬಂದಿದ್ದಾನೆ. ತನ್ನ ಸುತ್ತ-ಮುತ್ತಲಿನ ಪರಿಸರದಲ್ಲಿ ಸಾಮಾನ್ಯವಾಗಿ ಬೆಳೆಯುತ್ತಿದ್ದ ಮರ, ಗಿಡ, ದವಸ-ಧಾನ್ಯ ಮುಂತಾದವುಗಳ ಹೆಸರಿನಲ್ಲಿ ಸ್ಥಳನಾಮಗಳು ಕಂಡುಬರುತ್ತವೆ.

**V. ಪ್ರಮಾಣ ವಾಚಕ:** ಒಂದೇ ಹೆಸರಿನ ಹಲವಾರು ಸ್ಥಳಗಳು ಇರುವಂತಹ ಕಡೆ ಆ ಪ್ರದೇಶವನ್ನು ಗುರುತಿಸಲು ಹಿರಿದು, ಕಿರಿದು, ಚಿಕ್ಕದು, ದೊಡ್ಡದು ಎಂಬ ಪ್ರಮಾಣಗಳನ್ನು ಬಳಸಿಕೊಂಡರು.

**VI. ದಿಕ್ಕು ವಾಚಕ:** ಒಂದು ಪ್ರದೇಶದ ಸ್ಥಳಗಳನ್ನು ಗುರುತಿಸುವಲ್ಲಿ ದಿಕ್ಕು, ರಸ್ತೆ, ಗುಡಿ, ಬೀದಿ ಮುಂತಾದ ವರ್ಗಗಳನ್ನು ಒಳಗೊಂಡ ಸ್ಥಳನಾಮಗಳು ಕಂಡುಬರುತ್ತವೆ.

## ೨. ಸಾಂಸ್ಕೃತಿಕ ಸ್ಥಳನಾಮ

ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ಬಹಳಷ್ಟು ಸ್ಥಳನಾಮಗಳು ವ್ಯಕ್ತಿವಾಚಿಯಾಗಿ ಜಾತಿಯನ್ನು ಸೂಚಿಸುತ್ತಾ ದೇವರನ್ನು ಸೂಚಿಸುವ ಸ್ಥಳನಾಮಗಳು ಸೇರಿವೆ. ಇಂತಹ ಸ್ಥಳನಾಮಗಳಲ್ಲಿ

ಪುರುಷ ಹೆಸರಿನ ಸ್ಥಳನಾಮಗಳು ಹಾಗೂ ಸ್ತ್ರೀ ಹೆಸರಿನ ಸ್ಥಳನಾಮಗಳು ಕಂಡುಬರುವುದು ವಿಶಿಷ್ಟ.

ಸಾಂಸ್ಕೃತಿಕ ಸ್ಥಳನಾಮಗಳನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ.

**I. ಜಾತಿ ವಾಚಕ ಸ್ಥಳನಾಮ:** ಸ್ಥಳನಾಮಗಳಲ್ಲಿ ಜಾತಿಗೆ ಸಂಬಂಧಿಸಿದ ಅಂಶಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ. ಜನಾಂಗೀಯ ಅಧ್ಯಯನಕ್ಕೆ ಈ ಬಗೆಯ ಸ್ಥಳನಾಮಗಳು ಮಹತ್ವದ ಆಕರಗಳಾಗುತ್ತವೆ.

**II. ದೈವ ವಾಚಕ ಸ್ಥಳನಾಮ:** ಸಂಸ್ಕೃತಿಯಲ್ಲಿ ದೇವರ ಪಾತ್ರ ಅನನ್ಯವಾದುದು. ಜೀವನದ ಹಲವಾರು ಸಂಗತಿಗಳಲ್ಲಿ ದೈವ ಅಸ್ತಿತ್ವವನ್ನು ಕಂಡುಕೊಳ್ಳುವುದು ನಮ್ಮ ಸಂಸ್ಕೃತಿಯ ಪರಂಪರೆಯಾಗಿ ಮುಂದುವರೆಯುತ್ತಿದೆ. ಹಾಗೆಯೇ ಗ್ರಾಮ, ಊರು, ನಗರ, ಪಟ್ಟಣಗಳಿಗೂ ದೇವರನಾಮವನ್ನು ಹೆಸರಿಸುವುದು ವಾಡಿಕೆಯಾಗಿದೆ. ಸಮುದಾಯಗಳು ತಮ್ಮ ಕುಲ ದೈವ, ಮನೆ ದೈವ, ಗ್ರಾಮ ದೈವ, ಪ್ರಾದೇಶಿಕ ದೈವ ಹೀಗೆ ಹಲವಾರು ದೇವರುಗಳ ಹೆಸರನ್ನು ತಮ್ಮ ನೆಲೆಗಳಿಗೆ ಇಟ್ಟುಕೊಂಡರೆ ಶುಭವೆಂಬ ನಂಬಿಕೆಯೊಂದಿಗೆ, ದೇವರನ್ನು ತಮ್ಮ ಸಂಸ್ಕೃತಿಯ ಒಂದು ಭಾಗವಾಗಿ ಸ್ವೀಕರಿಸಿದ್ದರೆಂದು ಇಂತಹ ಅಧ್ಯಯನಗಳಿಂದ ತಿಳಿದುಬರುತ್ತದೆ.

ಹೊಸಪೇಟೆ ತಾಲ್ಲೂಕಿನಲ್ಲಿರುವ ಗ್ರಾಮಗಳನ್ನು ಕುರಿತು, ಲಭ್ಯವಿರುವ ಸ್ಥಳನಾಮ ಚರಿತ್ರೆಯನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಹೊಸಪೇಟೆ ತಾಲೂಕಿನಲ್ಲಿ ನಾಲ್ಕು ಹೋಬಳಿಗಳಿವೆ. ಈ ನಾಲ್ಕು ಹೋಬಳಿಗಳಲ್ಲಿ ೯೦ ಗ್ರಾಮಗಳಿದ್ದು, ಇವುಗಳಲ್ಲಿ ಕೆಲವು ಗ್ರಾಮಗಳು ಬೇಚರಾಕ್(ಜನವಸತಿ ಇಲ್ಲದ) ಗ್ರಾಮಗಳೆಂದು ಪರಿಗಣಿತವಾಗಿವೆ.

### ೧. ಹೊಸಪೇಟೆ ಹೋಬಳಿ

**೧. ಹೊಸಪೇಟೆ(ಕಾಲವಾಚಕ) ಹೊಸತಾದ, ಇತ್ತೀಚಿನ:** ಹೊಸಪೇಟೆ ಎಂಬ ಸ್ಥಳನಾಮವು ವಿಜಯನಗರೋತ್ತರ ಕಾಲದಲ್ಲಿ ತಡವಾಗಿ ಬಳಕೆಗೆ ಬಂದಂತೆ ಕಾಣುತ್ತದೆ. ವಿಜಯನಗರದ ಅರಸ ಕೃಷ್ಣದೇವರಾಯನು ತನ್ನ ಪಟ್ಟದ ರಾಣಿಯಾದ ತಿರುಮಲದೇವಿಯ ಹೆಸರಿನಲ್ಲಿ ಈಗಿನ ಹೊಸಪೇಟೆಯ ದಕ್ಷಿಣ ಭಾಗದಲ್ಲಿ ತಿರುಮಲದೇವಿ ಅಮ್ಮನವರ ಪಟ್ಟಣವನ್ನು ನಿರ್ಮಿಸಿದನು. ತಿರುಮಲದೇವಿ ಅಮ್ಮನವರ ಪಟ್ಟಣವನ್ನು ಕ್ರಿ.ಶ. ೧೫೧೩, ಕ್ರಿ.ಶ. ೧೫೩೧, ಕ್ರಿ.ಶ. ೧೫೩೫ ಮತ್ತು ಕ್ರಿ.ಶ. ೧೫೪೦ರ ಶಾಸನಗಳು ಉಲ್ಲೇಖಿಸುತ್ತವೆ. ಸಣ್ಣಕ್ಕಿ ವೀರಭದ್ರ ದೇವಾಲಯವಿರುವ ಸುತ್ತಮುತ್ತಲಿನ ಪ್ರದೇಶವೇ ತಿರುಮಲದೇವಿ ಅಮ್ಮನವರ ಪಟ್ಟಣದ ನೆಲೆಯಾಗಿತ್ತು. ಕ್ರಿ.ಶ. ೧೫೩೧ರ ಅಚ್ಯುತರಾಯನ ಶಾಸನವು ತಿರುಮಲದೇವಿಯರ ಪಟ್ಟಣದ ಗೌರೇಶ್ವರ ಮತ್ತು ತಿರುವೆಂಗಳನಾಥ ದೇವಾಲಯಗಳನ್ನು ಉಲ್ಲೇಖಿಸಿದೆ.[೧೦೩] ಇದರಿಂದ ಇಂದಿನ ಹೊಸಪೇಟೆಯ ಮೂಲ ನೆಲೆ ತಿರುಮಲದೇವಿ ಅಮ್ಮನವರ ಪಟ್ಟಣ ಎಂಬುದು ಸ್ಪಷ್ಟವಾಗುತ್ತದೆ.

ಇತ್ತೀಚಿನ ಶೋಧನೆಗಳಿಂದ ಈ ಪ್ರಾಚೀನ ಗ್ರಾಮದ ಹೆಸರು 'ಬಿಸಿಲಹಳ್ಳಿ' ಆಗಿತ್ತು. ವಿಜಯನಗರ ಪೂರ್ವದಲ್ಲೇ ಇಲ್ಲಿ ಊರು ಇದ್ದುದ್ದರಿಂದ, ಕೃಷ್ಣದೇವರಾಯನು ತನ್ನ ಕಾಲದಲ್ಲಿ ಅದನ್ನು ತಿರುಮಲದೇವಿಯರ ಪಟ್ಟಣವೆಂದು ಹೆಸರಿಸಿರಬೇಕೆಂದು ತಿಳಿಯುತ್ತದೆ.

**೨. ಮುದ್ದಲಾಪುರ:** ಮುದ್ದಲಾಪುರ ಗ್ರಾಮವು ವಿಜಯನಗರ ಕಾಲದಲ್ಲಿ ಮಾಗಣೆ ಪ್ರದೇಶ ಆಗಿತ್ತು. ಹೊಸವೂರ ಮಾಗಣೆಯಿಂದ ತಿರುಮಲದೇವಿಯರ ಪಟ್ಟಣದ ಮಾಗಣೆಗೆ ಮುದ್ದಲಾಪುರವನ್ನು ಸೇರಿಸಿದ ಬಗ್ಗೆ ಕ್ರಿ.ಶ. ೧೫೧೨ರ ಮುದ್ದಲಾಪುರ ಶಾಸನ ತಿಳಿಸುತ್ತದೆ.[೧೦೪] ಪ್ರಸ್ತುತ ಮುದ್ದಲಾಪುರ ಗ್ರಾಮವು ಹೊಸಪೇಟೆ ನಗರಸಭೆಯ ೧೮ನೇ ವಾರ್ಡಿಗೆ ಸೇರಿದೆ. ವಿಜಯನಗರ ಕಾಲದ ಮುದ್ದಲಾಪುರವು ಇಂದು ಮುದ್ಲಾಪುರವೆಂದು ಕರೆಸಿಕೊಳ್ಳುತ್ತಿದೆ.

**೩. ಜಂಬುನಾಥನಹಳ್ಳಿ (ದೈವವಾಚಿ) ನೇರಳೆಮರ:** ಜಂಬುನಾಥನಹಳ್ಳಿ ಈಗ ಹಾಳು ಬಿದ್ದಿದ್ದು, ಬೇಚರಾಕ್ ಗ್ರಾಮವೆಂದು ಪರಿಗಣಿಸಲಾಗಿದೆ. ಈ ಗ್ರಾಮದ ಸಮೀಪದ ಬೆಟ್ಟದಲ್ಲಿ ಜಂಬುನಾಥನ ದೇವಾಲಯವಿದ್ದು, ಆ ಬೆಟ್ಟವನ್ನು ಜಂಬುನಾಥನ ಬೆಟ್ಟವೆಂದು ಕರೆಯುತ್ತಾರೆ. ಕ್ರಿ.ಶ. ೧೫೪೯ರ ಶಾಸನವು ಜಂಬುಕೇಶ್ವರ ಬೆಟ್ಟವನ್ನು ಉಲ್ಲೇಖಿಸುತ್ತದೆ.[೧೦೫]

**೪. ಅನಂತಶಯನಗುಡಿ (ವ್ಯಕ್ತಿವಾಚಕ ಪುರುಷ):** ಅನಂತಶಯನಗುಡಿ ಎಂಬ ಗ್ರಾಮದ ಹೆಸರು, ಅಲ್ಲಿರುವ ಅನಂತಶಯನ ದೇವಾಲಯದಿಂದ ಬಂದಿದೆ. ಕ್ರಿ.ಶ. ೧೫೨೪ರ ಶಾಸನದಲ್ಲಿ, ಕೃಷ್ಣದೇವರಾಯನು ತನ್ನ ಮಗನಾದ ತಿರುಮಲರಾಯನ ಹೆಸರಿನಲ್ಲಿ ಸಾಲೆ ತಿರುಮಲ ಮಹಾರಾಯಪುರವೆಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿ ಅನಂತಪದ್ಮನಾಭ ದೇವರ ದೇವಾಲಯವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ.[೧೦೬] ಸಾಲೆ ತಿರುಮಲ ಮಹಾರಾಯಪುರ ಎಂಬ ಹೆಸರು ಮರೆಯಾಗಿ, ಅನಂತಶಯನ ದೇವಾಲಯವನ್ನು ಆಧರಿಸಿ ಮುಂದೆ ಅನಂತಶಯನ ಗುಡಿ ಎಂಬ ಹೆಸರಿನಿಂದ ಕರೆಸಿಕೊಂಡಿತು.

**೫. ಕಲ್ಲಹಳ್ಳಿ (ಸ್ಥಳವಾಚಿ):** ಕಲ್ಲಹಳ್ಳಿಯು, ಕ್ರಿ.ಶ. ೧೫೪೦ರ ಶಾಸನದಲ್ಲಿ, ಕಲಹಳಿ ಎಂದು ಉಲ್ಲೇಖಗೊಂಡಿದೆ.[೧೦೭] ಈ ಗ್ರಾಮವು ತಿರುಮಲದೇವಿಯರ ಪಟ್ಟಣದ(ಹೊಸಪೇಟೆ) ಉಪ ಗ್ರಾಮವಾಗಿತ್ತು.

**೬. ಸಂಕ್ಲಾಪುರ (ಸ್ಥಳವಾಚಿ):** ವಿಜಯನಗರ ಕಾಲದಲ್ಲಿ ಸಂಕ್ಲಾಪುರದಲ್ಲಿ ಸುಂಕ ಸಂಗ್ರಹಿಸುತ್ತಿದ್ದು, ಸುಂಕಕ್ಕೆ ಸಂವಾದಿಯಾಗಿ ಸಂಕ್ಲಾಪುರವೆಂಬ ಹೆಸರು ಬಂತೆಂದು ಸ್ಥಳೀಯರು ತಿಳಿಸುತ್ತಾರೆ. ಕ್ರಿ.ಶ. ೧೫೧೩ರ ಶಾಸನದಲ್ಲಿ ಸಂಕಲಾಪುರವೆಂದು ಕರೆಯಲಾಗಿದೆ.[೧೦೮] ಈ ಊರನ್ನು ವಿಜಯನಗರ ದೇವೇರಿ ರಸ್ತೆಯ ಪೂರ್ವ ಭಾಗದಲ್ಲಿದ್ದ ಗಣಪತಿ ದೇವಾಲಯಕ್ಕೆ ದತ್ತಿ ಬಿಟ್ಟಿದ್ದು, ಶಾಸನದಲ್ಲಿ ಈ ದೇವರನ್ನು 'ಕೋಟೆ ವಿನಾಯಕ ನಮಃ' ಎಂದಿರುವುದರಿಂದ, ಸಂಕಲಾಪುರವನ್ನು 'ಕೋಟಾ ವಿಘ್ನೇಶಪುರ' ಮತ್ತು 'ಕೋಟ ಗಜವಕ್ತ್ರ' ಎಂಬ ಹೆಸರಿನಿಂದ ಕರೆಯಲಾಗಿದೆ.

**೭. ಗುಡಿ ಓಬಳಾಪುರ (ವ್ಯಕ್ತಿವಾಚಕ ಪುರುಷ):** ಕೃಷ್ಣದೇವರಾಯನ ಕಾಲದಲ್ಲಿ ಓಬಳೇಶ್ವರ ಎಂಬ ವ್ಯಕ್ತಿಯೊಬ್ಬನು ಬೇಟೆಗಾರನಾಗಿ ಹೆಸರುವಾಸಿಯಾಗಿದ್ದನು. ಬೇಟೆಯಲ್ಲಿ ನಿಷ್ಣಾತನಾಗಿದ್ದ ಅವನಿಗೆ ಈ ಪ್ರದೇಶ ಉಂಬಳಿಯಾಗಿ ದೊರೆತಿರಬೇಕು. ಅವನಿಂದಾಗಿಯೇ ಈ ಊರಿಗೆ ಓಬಳಾಪುರ ಎಂಬ ಹೆಸರು ಬಂದಿತೆಂದು ತಿಳಿಯುತ್ತದೆ. ನಂತರ ಅಲ್ಲಿ ನಿರ್ಮಾಣವಾದ

ಗುಡಿಯಿಂದಾಗಿ ಇದನ್ನು ಗುಡಿ ಓಬಳಾಪುರವೆಂದು ಕರೆದಿರಬೇಕು ಎಂದು ಸ್ಥಳೀಯರು ತಿಳಿಸುತ್ತಾರೆ.

೮. **ಕೊಂಡನಾಯಕನಹಳ್ಳಿ (ವ್ಯಕ್ತಿವಾಚಕ ಪುರುಷ)**: ಕೊಡಪಾಲ ನಾಯಕ ಎಂಬುವವನು ರಾಜನು ಎಲ್ಲಿಗೆ ಹೋದರೂ ಆತನಿಗೆ ಛತ್ರಿ(ಕೊಡೆ) ಹಿಡಿಯುವ ಕಾಯಕದವನಾಗಿದ್ದ. ಇವನ ಕಾಯಕಕ್ಕೆ ಮೆಚ್ಚಿ ಅಂದಿನ ಅರಸರು ಈ ಊರನ್ನು ಉಂಬಳಿಯಾಗಿ ನೀಡಿದ್ದರಂತೆ. ಕೊಡಪಾಲನಾಯಕನಹಳ್ಳಿ ಎಂಬ ಹೆಸರು ಮರೆಯಾಗಿ, ಮುಂದೆ ಕೊಂಡನಾಯಕನಹಳ್ಳಿ ಎಂದಾಯಿತು.

ಸ್ಥಳೀಯರು ತಿಳಿಸುವಂತೆ ಈ ಊರಿನಲ್ಲಿ ಕೊಂಡಗಳು(ಬಾವಿ) ಹೆಚ್ಚು ಇದ್ದಿದ್ದುರಿಂದ, ಅವುಗಳ ಮೇಲ್ವಿಚಾರಣೆಯನ್ನು ಒಬ್ಬ ನಾಯಕನಿಗೆ ವಹಿಸಲಾಗಿತ್ತು. ಆದ್ದರಿಂದ ಈ ಊರಿಗೆ ಕೊಂಡನಾಯಕನಹಳ್ಳಿ ಎಂಬ ಹೆಸರು ಬಂದಿತು.

೯. **ಅಮರಾವತಿ (ಧಾರ್ಮಿಕ ಭಾವವಾಚಿ) ಇನಾಮಾಗಿ ಕೊಟ್ಟ ಗ್ರಾಮ:** ಹೊಸಪೇಟೆಗೆ ಹೊಂದಿಕೊಂಡಿರುವ ಅಮರಾವತಿಯು, ಹೊಯ್ಸಳ ದೊರೆ ಮೂರನೆಯ ಬಲ್ಲಾಳನ ಕಾಲದಿಂದಲೂ ಇದ್ದು, ಚಂದ್ರಶಾಲೆಯಿಂದ ಕೂಡಿ, ವಿಹಾರ ಮಂದಿರವಿದ್ದ ಸ್ಥಳವನ್ನು ಅಮರಾವತಿ ಎಂದು ಕರೆಯಲಾಯಿತಂತೆ.

೧೦. **ಹೊಸೂರು (ಕಾಲವಾಚಕ) ಹೊಸತಾದ, ಇತ್ತೀಚಿನ:** ತುಂಗಭದ್ರಾ ನದಿಯ ಬಲದಂಡೆಯಲ್ಲಿರುವ ಹೊಸೂರು ಗ್ರಾಮವು, ವಿಜಯನಗರ ಕಾಲದಿಂದಲೂ ಶಾಸನಗಳಲ್ಲಿ ಹೊಸವೂರು ಎಂದು ಉಲ್ಲೇಖಗೊಂಡಿದೆ. ಸ್ಥಳೀಯರು ಇದನ್ನು ಹೊನ್ನಿನ ಹೊಸೂರು ಎಂದು ತಿಳಿಸುತ್ತಾರೆ. ತುಂಗಭದ್ರಾ ನದಿಗೆ ತಾಕಿದಂತೆ ಹಳೆಯ ವಸತಿ ಇದ್ದು, ಪಾಳುಬಿದ್ದ ದೇವಾಲಯಗಳು ಕಂಡು ಬರುತ್ತವೆ. ಈ ಹಳೆಯ ಊರಿನ ಹೆಸರು ತಿಳಿದುಬರುವುದಿಲ್ಲ. ವಿಜಯನಗರ ಕಾಲದಿಂದಲೂ ಇದರ ಸ್ಥಳನಾಮದಲ್ಲಿ ಯಾವ ಬದಲಾವಣೆ ಇಲ್ಲದೇ ಒಂದೇ ರೂಪ ಕಂಡು ಬರುತ್ತದೆ.

೧೧. **ನಾಗೇನಹಳ್ಳಿ (ಪ್ರಾಣಿವಾಚಕ ಹಾಗೂ ವ್ಯಕ್ತಿವಾಚಕ, ಸ್ತ್ರೀ : ಪುರುಷ) ಒಂದು ಜಾತಿಯ ಹಾವು:** ನಾಗೇನಹಳ್ಳಿಯು ಕ್ರಿ.ಶ. ೧೫೧೬ರ ಶಾಸನದಲ್ಲಿ, ನಾಗಲಾದೇವಿಯರ ಅಗ್ರಹಾರವೆಂಬ ಹೆಸರಿನಿಂದ ಉಲ್ಲೇಖಗೊಂಡಿದೆ. ವಿಜಯನಗರದ ಅರಸ ಕೃಷ್ಣದೇವರಾಯನು ತನ್ನ ತಾಯಿಯಾದ ನಾಗಲಾದೇವಿಯ ಜ್ಞಾಪಕಾರ್ಥವಾಗಿ ಈ ಊರನ್ನು ನಿರ್ಮಿಸಿದನೆಂದು ಶಾಸನ ತಿಳಿಸುತ್ತದೆ.[೧೯] ನಾಗಲಾದೇವಿಪುರ ಇಂದು ನಾಗೇನಹಳ್ಳಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ.

೧೨. **ಚಿತ್ತವಾಡಿಗೆ:** ಚಿತ್ತವಾಡಿಗೆಯು ದಿನಾಂಕವಿಲ್ಲದ ಶಾಸನವೊಂದರಲ್ಲಿ 'ಚಿಕವಾಡಿ' ಎಂಬ ರೂಪವನ್ನು ಹೊಂದಿದ್ದು, ನಂತರ ಕಾಲದಲ್ಲಿ 'ಚಿತ್ತವಾಡಿಗಿ' ಎಂಬ ರೂಪವನ್ನು ಪಡೆದಿದೆ. ವಿಜಯನಗರ ಕಾಲದ ಹೊಸೂರಿನ ಶಾಸನವೊಂದು. ಬ್ರಾಹ್ಮಣ ಚಿತವಾಡಿ ಸೀಮೆಯನ್ನು

ಉಲ್ಲೇಖಿಸುತ್ತದೆ. ಇದರಿಂದ ಚಿತವಾಡಿ, ಪ್ರಮುಖ ಆಡಳಿತ ಘಟಕವಾಗಿತ್ತೆಂದು ತಿಳಿದುಬರುತ್ತದೆ. ವಿಜಯನಗರ ಕಾಲದಿಂದಲೂ ಇಲ್ಲಿ ಬ್ರಾಹ್ಮಣರ ವಾಸ್ತವ್ಯವನ್ನು ಕಾಣಬಹುದು. ಆದ್ದರಿಂದ ಇದನ್ನು ಶಾಸನದಲ್ಲಿ 'ಬ್ರಾಹ್ಮಣ ಚಿತವಾಡಿ ಸೀಮೆ' ಎಂದು ಕರೆಯಲಾಗಿದೆ.[೧೧೦]

ವಿಜಯನಗರ ಅರಸರಲ್ಲಿ ಪ್ರಸಿದ್ಧನಾದ ಒಂದನೆಯ ಬುಕ್ಕರಾಯನು(ಕ್ರಿ.ಶ. ೧೩೪೩-೧೩೭೯) 'ಚಿತ್ರವಟಿಕಾ' ಎಂಬ ದಿವ್ಯ ಉದ್ಯಾನವನ್ನು ನಿರ್ಮಿಸಿ ವನಪಾಲಕರ ವಸತಿಗೃಹಗಳನ್ನು ರಚಿದನೆಂದು ಚಿತ್ರವಟಿಕಾ ತದ್ಭವ ರೂಪದಲ್ಲಿ ಚಿತ್ತವಾಡಿಗೆಯಾಯಿತೆಂದು ಹೇಳಲಾಗಿದೆ.

ಸ್ಥಳೀಯರು ತಿಳಿಸುವಂತೆ, ವಿಜಯನಗರಕ್ಕೆ ಬಿಜಾಪುರದ ಕಡೆಯಿಂದ ಬರುವ ವ್ಯಾಪಾರಿಗಳು ಈ ಊರಿನ ಮೂಲಕ ಬರುತ್ತಿದ್ದರಂತೆ. ಬಹುಶಃ ಇದು ವ್ಯಾಪಾರಿ ಮಾರ್ಗವಾಗಿತ್ತೆಂಬುದಾಗಿ ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ ಇಲ್ಲಿ ಚಿನ್ನ ಮಾರುತ್ತಿದ್ದರಂತೆ. 'ಚಿನ್ನವಾಡಿ'ಗೆ ಎಂಬುದು ನಂತರದ ದಿನಗಳಲ್ಲಿ 'ಚಿತ್ತವಾಡಿ'ಗೆ ಆಗಿ ರೂಪಾಂತರಗೊಂಡಿತೆಂಬುದಾಗಿ ಸ್ಥಳೀಯರು ತಿಳಿಸುತ್ತಾರೆ.

### ೨. ಕಮಲಾಪುರ ಹೋಬಳಿ

**೧. ಕಮಲಾಪುರ (ವ್ಯಕ್ತಿವಾಚಕ-ಸ್ತ್ರೀ) ಪುಷ್ಪವಾಚಕ:** ಕಮಲಾಪುರವು ವಿಜಯನಗರ ಪಟ್ಟಣದ ಒಂದು ಭಾಗವಾಗಿತ್ತು. ಕ್ರಿ.ಶ. ೧೫೩೧ರ ಇಲ್ಲಿನ ಶಾಸನವು ಕಮಲಾಪುರವನ್ನು ಉಲ್ಲೇಖಿಸುತ್ತದೆ.[೧೧೧] ಪಂಪಾ ಸರೋವರಕ್ಕೆ ಪಶ್ಚಿಮ ಭಾಗದಲ್ಲಿ 'ಕಮಲಾದೇವಿ' ಎಂಬ ದುರ್ಗಿ ದೇವಸ್ಥಾನವಿದ್ದುದರಿಂದ ಆ ಸ್ಥಳವನ್ನು 'ಕಮಲಾಪುರ' ಎಂದು ಕರೆಯಲಾಗಿದೆ ಎಂದು ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿದ ಕರ್ನಾಟಕ ಕೈಫಿಯತ್ತುಗಳು ಕೃತಿಯಲ್ಲಿ ಉಲ್ಲೇಖಗೊಂಡಿದೆ.

ಸ್ಥಳೀಯರು ತಿಳಿಸುವಂತೆ ವಿಜಯನಗರ ಕಾಲಕ್ಕೆ ಕೆರೆಯೊಂದನ್ನು ಕಟ್ಟಿಸಲಾಯಿತು. ಕೆರೆಯಲ್ಲಿ ಕಮಲದ ಹೂಗಳು ಹೇರಳವಾಗಿ ಬಿಡುತ್ತಿದ್ದವಂತೆ. ಕೆರೆಯ ಹಿಂದೆ ಸ್ಥಾಪನೆಯಾದ ಊರಿಗೆ 'ಕಮಲಾಪುರ' ಎಂದು ಕರೆಯಲಾಯಿತಂತೆ.

**೨. ಹಂಪಿ (ದೈವವಾಚಕ) ಸ್ಥಳೀಯ ಆರಾಧ್ಯ ದೈವ:** ಹಂಪಿಯು ಪೂರ್ವಕಾಲದಿಂದಲೂ ಮಾನವನ ವಾಸದ ನೆಲೆಯಾಗಿದ್ದು, ಚಾರಿತ್ರಿಕ ದೃಷ್ಟಿಯಿಂದ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡ ಸ್ಥಳವಾಗಿದೆ. ಮೊದಲಿಗೆ ಹಂಪಿಯನ್ನು, ಬಾದಾಮಿ ಚಾಲುಕ್ಯ ದೊರೆ ವಿನಯಾದಿತ್ಯನ ಕ್ರಿ.ಶ. ೬೮೯ರ ಶಾಸನವು 'ಪಂಪಾತೀರ್ಥ'ವೆಂದು ಹೆಸರಿಸುತ್ತದೆ.[೧೧೨] ಕಲ್ಯಾಣ ಚಾಲುಕ್ಯರ ಸಾಮಂತನಾದ ಇರಿವನೊಳಂಬಾದಿ ರಾಜನ ಕ್ರಿ.ಶ. ೧೦೦೪ರ ಗೋನಾಳಿನ ಶಾಸನವು ಹಂಪಿಯನ್ನು 'ಪಂಪಾ' ಎಂದು ತಿಳಿಸುತ್ತದೆ.[೧೧೩] ಕ್ರಿ.ಶ. ೧೧೯೯ರ ಹಂಪಿ ಶಾಸನವು 'ವಿರೂಪಾಕ್ಷತೀರ್ಥ'ವೆಂದು,[೧೧೪] ಹೊಯ್ಸಳರ ಶಾಸನಗಳು ಹಂಪಿಯನ್ನು 'ವಿಜಯವಿರೂಪಾಕ್ಷಪುರ', 'ಹಂಪೆ ಹೊಸಪಟ್ಟಣ'ವೆಂದು ಕರೆದಿವೆ.[೧೧೫] ವಿಜಯನಗರ ಅರಸರ ಶಾಸನಗಳು 'ಭಾಸ್ಕರಕ್ಷೇತ್ರ', 'ವಿದ್ಯಾನಗರ', 'ವಿಜಯನಗರ' ಎಂದು ಉಲ್ಲೇಖಿಸುತ್ತವೆ.

**೩. ಕಡ್ಡಿರಾಮಪುರ (ಸಸ್ಯವಾಚಕ ಹಾಗೂ ವ್ಯಕ್ತಿವಾಚಕ ಪುರುಷ) ಚಿಗುರು, ಹುಲ್ಲುಕಡ್ಡಿ:** ಕಡ್ಡಿರಾಂಪುರವು ಕ್ರಿ.ಶ. ೧೩೬೬ರ ಬುಕ್ಕರಾಯನ ಶಾಸನದಲ್ಲಿ 'ರಾಮಾಪುರ'ವೆಂದು,[೧೧೬] ಕ್ರಿ.ಶ. ೧೫೦೫ರ ಶಾಸನದಲ್ಲಿ 'ಕಡೆರಾಮಾಪುರ'ವೆಂದು ಉಲ್ಲೇಖಗೊಂಡಿದೆ.[೧೧೭] ಈ ಕಡೆರಾಮಾಪುರವು ಕಡೀರಾಂಪುರವಾಗಿ, ನಂತರ ಕಡ್ಡಿರಾಂಪುರ ಎಂಬ ರೂಪವನ್ನು ಪಡೆದಿದೆ.

ಸ್ಥಳೀಯರು ತಿಳಿಸುವಂತೆ, 'ಖಡ್ಗರಾಮಪುರ' ಎಂಬುದರಿಂದ ಕಡ್ಡಿರಾಮಪುರ ಎಂಬ ಹೆಸರು ಬಂದಿದೆ. ಅಂದರೆ ವಿಜಯನಗರ ಕಾಲದಲ್ಲಿ ಇಲ್ಲಿ ಖಡ್ಗಗಳನ್ನು ತಯಾರಿಸುತ್ತಿದ್ದರಂತೆ. ಮತ್ತೊಂದು ಹೇಳಿಕೆಯ ಪ್ರಕಾರ, ಹಿಂದೆ ವನವಾಸ ಕಾಲದಲ್ಲಿ ಸೀತೆಯನ್ನು ಕಳೆದುಕೊಂಡು ರಾಮನು ಹುಡುಕಿಕೊಂಡು ಈ ಸ್ಥಳಕ್ಕೆ ಬಂದಾಗ, ಚಿಂತೆಯಿಂದ ಸೊರಗಿ ಕಡ್ಡಿಯಂತಾಗಿದ್ದರಿಂದ ಈ ಊರಿಗೆ 'ಕಡ್ಡಿರಾಮಪುರ'ವೆಂಬ ಹೆಸರು ಬಂದಿತಂತೆ.

**೪. ಸಿಂಗನಾಥನಹಳ್ಳಿ(ದೈವವಾಚಿ) ಶೃಂಗ, ಬೆಟ್ಟದ ತುದಿ:** ಸಿಂಗನಾಥನಹಳ್ಳಿ ಈಗ ಹಾಳು ಬಿದ್ದಿದ್ದು, ಬೇಚರಾಕ್ ಗ್ರಾಮವೆಂದು ಇದನ್ನು ಪರಿಗಣಿಸಲಾಗಿದೆ. ಕೃಷ್ಣದೇವರಾಯನ ಕ್ರಿ.ಶ. ೧೫೧೦ರ ಹಂಪಿ ಶಾಸನದಲ್ಲಿ 'ಸಿಂಗನಾಯಕನಹಳ್ಳಿ' ಎಂದು ಉಲ್ಲೇಖಗೊಂಡಿದೆ.[೧೧೮] ಸಿಂಗನಾಯಕ ಎನ್ನುವುದು ನಂತರ ಸಿಂಗನಾಥ ಎಂದು ಕರೆಸಿಕೊಂಡಿದೆ.

**೫. ಕೃಷ್ಣಾಪುರ(ದೈವವಾಚಿ):** ಕೃಷ್ಣಾಪುರವು ಅಸ್ತಿತ್ವದಲ್ಲಿ ಇಲ್ಲದಿರುವುದರಿಂದ, ಬೇಚರಾಕ್ ಗ್ರಾಮವೆಂದು ಪರಿಗಣಿಸಲಾಗಿದೆ. ಕೃಷ್ಣಾಪುರವು, ಹಂಪಿಯ ಇಂದಿನ ಕೃಷ್ಣದೇವಾಲಯದ ಸುತ್ತಮುತ್ತಲಿನ ಪ್ರದೇಶವನ್ನು ಒಳಗೊಂಡಿದೆ. ವಿಜಯನಗರ ಕಾಲಕ್ಕೆ ಇದು ಅಗ್ರಹಾರವಾಗಿ ಮತ್ತು ಪೇಟೆಯಾಗಿ ಅಸ್ತಿತ್ವದಲ್ಲಿತ್ತು.[೧೧೯] ಕೃಷ್ಣದೇವರಾಯನು ಕೃಷ್ಣ ದೇವಾಲಯವನ್ನು ನಿರ್ಮಿಸಿದ ಮೇಲೆ ಕೃಷ್ಣಾಪುರವು ಅಸ್ತಿತ್ವಕ್ಕೆ ಬಂತು ಎಂಬುದಾಗಿ ತಿಳಿದುಬರುತ್ತದೆ. ಕೃಷ್ಣಾಪುರವು ಈಗ ಸಂಪೂರ್ಣವಾಗಿ ಕಣ್ಮರೆಯಾಗಿದ್ದು, ಈ ಭಾಗದಲ್ಲಿ ಗದ್ದೆ, ತೋಟಗಳು ಮಾತ್ರ ಕಂಡುಬರುತ್ತವೆ.

**೬. ನಿಂಬಾಪುರ:** ನಿಂಬಾಪುರ ಗ್ರಾಮವು ಈಗ ಮಾಗಣೆ(ನೀರಾವರಿ ಭೂಮಿ)ಯಾಗಿದ್ದು, ಬೇಚರಾಕ್ ಗ್ರಾಮವಾಗಿದೆ. ಕ್ರಿ.ಶ. ೧೫೧೫ರ ಕೃಷ್ಣದೇವರಾಯನ ಹಂಪಿ ಶಾಸನವು ನಿಂಬಾಪುರವನ್ನು ಉಲ್ಲೇಖಿಸುತ್ತದೆ.[೧೨೦] ನಿಂಬಾಪುರ ಸ್ಥಳನಾಮದಲ್ಲಿ ಯಾವುದೇ ಬದಲಾವಣೆ ಕಂಡುಬರುವುದಿಲ್ಲ.

**೭. ಡಣಾಪುರ (ವ್ಯಕ್ತಿವಾಚಿ):** ಡಣಾಪುರವು ಬೇಚರಾಕ್ ಗ್ರಾಮವಾಗಿದ್ದು, ಕ್ರಿ.ಶ. ೧೫೧೩ರ ಕೃಷ್ಣದೇವರಾಯನ ಶಾಸನದಲ್ಲಿ 'ದಣಾಯಕಪುರ'ವೆಂದು ಉಲ್ಲೇಖಿಸಲ್ಪಟ್ಟಿದೆ.[೧೨೧]

**೮. ಬುಕ್ಕಸಾಗರ (ವ್ಯಕ್ತಿವಾಚಿ):** ಕ್ರಿ.ಶ. ೧೫೧೩ರ ಕೃಷ್ಣದೇವರಾಯನ ಶಾಸನವು, ಬುಕಾಪುರ ಎನ್ನುವ ಗ್ರಾಮವನ್ನು ಉಲ್ಲೇಖಿಸುತ್ತದೆ.[೧೨೨] ಈ ಬುಕಾಪುರವೇ ಇಂದಿನ ಬುಕ್ಕಸಾಗರವಾಗಿದೆ. ಕ್ರಿ.ಶ. ೧೬೧೨ರ ತಾಮ್ರಶಾಸನ, ಬುಕ್ಕಸಾಗರ ಗ್ರಾಮವನ್ನು ಉಲ್ಲೇಖಿಸುತ್ತದೆ.[೧೨೩] ಈ ಹೆಸರು ಇಂದೂ ಸಹ ಬಳಕೆಯಲ್ಲಿದೆ.

**೯. ಪಾಪಿನಾಯಕನಹಳ್ಳಿ (ವ್ಯಕ್ತಿವಾಚಕ):** ಕ್ರಿ.ಶ. ೧೫೩೨ರ ಅಚ್ಯುತರಾಯನ ಶಾಸನದಲ್ಲಿ, 'ನಿಡುಗುಲ' ಅಥವಾ 'ಅಪಿನಾಯಕನಪುರ' ಎಂಬ ಸರ್ವಮಾನ್ಯ ಅಗ್ರಹಾರದ ಉಲ್ಲೇಖವಿದೆ.[೨೪] ಬಹುಶಃ ಪಾಪಿನಾಯಕನಹಳ್ಳಿ ಗ್ರಾಮದ ಮೊದಲ ಸ್ಥಳನಾಮ ನಿಡುಗುಲ ಎಂದಿದ್ದು, ನಂತರ ಅಪಿನಾಯಕನಪುರಂ ಆಗಿ, ಈಗ ಪಾಪಿನಾಯಕನಹಳ್ಳಿ ಆಗಿರಬಹುದು.

ಸ್ಥಳೀಯರು ತಿಳಿಸುವಂತೆ, ವಿಜಯನಗರ ಕಾಲದಲ್ಲಿ ಈ ಊರಿನ ಕಂದಾಯ ವಸೂಲಿ ಹಕ್ಕನ್ನು ಪಾಪಯ್ಯ ಎಂಬ ಪಾಳೆಯಗಾರನಿಗೆ ವಹಿಸಲಾಗಿತ್ತು. ಪಾಪಯ್ಯನು ಯುದ್ಧದ ಸಂದರ್ಭದಲ್ಲಿ ಸೈನ್ಯ ಜಮಾವಣೆ ಮಾಡುವ ಕೆಲಸವನ್ನು ಮಾಡುತ್ತಿದ್ದನು. ಇವನ ಕಾರ್ಯದಕ್ಷತೆಯನ್ನು ಮೆಚ್ಚಿದ ಅಂದಿನ ಅರಸರು ಈ ಊರನ್ನು ಪಾಪಯ್ಯನಿಗೆ ಉಂಬಳಿಯಾಗಿ ನೀಡಿದರು. ಆದ್ದರಿಂದ ಈ ಹಳ್ಳಿಗೆ 'ಪಾಪಿನಾಯಕನಹಳ್ಳಿ' ಎಂಬ ಹೆಸರು ಬಂದಿದೆ.

**೧೦. ಇಂಗಳಗಿ (ವ್ಯಕ್ತಿವಾಚಿ):** ಈಗಿನ ಇಂಗಳಗಿ ಗ್ರಾಮವನ್ನು, ಸಂಕಲಾಪುರದ ಕ್ರಿ.ಶ. ೧೫೧೩ರ ಶಾಸನದಲ್ಲಿ 'ಅಂಗುಳಿಕ'ವೆಂದು ಕರೆಯಲಾಗಿದೆ.[೨೫] ಅದು ಕಾಲಕ್ರಮೇಣ ಇಂಗಳಗಿ ಎಂಬ ರೂಪವನ್ನು ಪಡೆದಿದೆ.

ಸ್ಥಳೀಯರು ತಿಳಿಸುವಂತೆ, ಹಿಂದೆ ಆನೆಗೊಂದಿ ಅರಸರು ಪರಿವಾರ ಸಮೇತ ಈ ಪ್ರದೇಶಕ್ಕೆ ಬೇಟೆಗೆ ಬರುತ್ತಿದ್ದರಂತೆ. ಹಾಗೆ ಬಂದಾಗ ಬೆಳಿಗ್ಗೆಯ ಹೊತ್ತು ಈ ಊರಿನ ಹೆಂಗಳೆಯರು ಮೊಸರು ಕಡೆಯುವ ಸದ್ದು ಅವರಿಗೆ ಕೇಳಿಸಿತಂತೆ. ಅದನ್ನು ಕೇಳಿಸಿಕೊಂಡ ಅರಸರು, ಈ ಊರನ್ನು 'ಹೊನ್ನಿಂಗಳಗಿ' ಎಂದು ಕರೆದರಂತೆ.

**೧೧. ಗುಂಡ್ಲುವದ್ದಿಗೇರಿ (ಸ್ಥಳವಾಚಿ):** ಗುಂಡ್ಲುವದ್ದಿಗೇರಿ ಮೊದಲ ಹೆಸರು ಯಾದವಗಿರಿ. ಇಲ್ಲಿ ಯಾದವ ಜನಾಂಗದವರೇ ಬಹಳ ಜನ ವಾಸಿಸುತ್ತಿರುವುದರಿಂದ ಯಾದವಗಿರಿ ಎಂಬ ಹೆಸರು ಬಂತೆಂದು ತಿಳಿಯುತ್ತದೆ. ಈ ಗ್ರಾಮಕ್ಕೆ ಹೊಂದಿಕೊಂಡಂತಿರುವ ಗುಂಡುಕಲ್ಲುಗಳ ಗುಡ್ಡದಿಂದಾಗಿ ಗುಂಡ್ಲುವದ್ದಿಗೇರಿ ಎಂಬ ಹೆಸರು ಬರಲು ಕಾರಣವಾಯಿತೆನ್ನಲಾಗಿದೆ. ಬಹುಶಃ ಗುಂಡುಕಲ್ಲುಗಳ ವಡ್ಡಿನ ಕೆರೆಯಿಂದಾಗಿ 'ಗುಂಡ್ಲುವದ್ದಿಗೇರಿ' ಎಂದು ಕರೆಸಿಕೊಂಡಿರಬೇಕು.

**೧೨. ಬೈಲುವದ್ದಿಗೇರಿ (ಸ್ಥಳವಾಚಿ) ಬಯಲು ಪ್ರದೇಶ:** ವಿಜಯನಗರ ಕಾಲದಲ್ಲಿ ಇಲ್ಲಿ ಕುದುರೆಗಳನ್ನು ಮೇಯಿಸಲಾಗುತ್ತಿತ್ತು. ಇಲ್ಲಿನ ಬಯಲಿನಲ್ಲಿ ಕುದುರೆಗಳು ಮೇಯುತ್ತಿದ್ದವಂತೆ. ಹೀಗೆ ಕುದುರೆ ತುಳಿದ ಅಥವಾ ಒದ್ದ ಈ ಬಯಲಿಗೆ ವದ್ದಿಗೇರಿ ಎಂಬ ಹೆಸರು ಬಂದು, ಅದು ಬಯಲು ವದ್ದಿಗೇರಿ ಆಗಿ, ನಂತರ ಬೈಲುವದ್ದಿಗೇರಿ ಎಂದಾಯಿತಂತೆ. ಬಹುಶಃ ಬಯಲು, ವಡ್ಡು ಮತ್ತು ಕೆರೆ ಶಬ್ದಗಳಿಂದ ಬೈಲುವದ್ದಿಗೇರಿ ಎಂದಾಗಿರಬೇಕು.

**೧೩. ಧರ್ಮಸಾಗರ (ದೈವವಾಚಿ ಹಾಗೂ ವ್ಯಕ್ತಿವಾಚಕ ಪುರುಷ):** ಕ್ರಿ.ಶ. ೧೫೪೦ರ ಕಮಲಾಪುರ ಶಾಸನವು, ಧರ್ಮಸಾಗರ ಗ್ರಾಮವನ್ನು ಕುರಿತು ಪ್ರಸ್ತಾಪಿಸುತ್ತದೆ.[೨೬] ಈಗಲೂ ಧರ್ಮಸಾಗರ ಎಂದು ಇದನ್ನು ಕರೆಯಲಾಗುತ್ತಿದೆ.

**೧೪. ಗಾದಿಗನೂರು (ವ್ಯಕ್ತಿವಾಚಿ):** ಗಾದಿಲಿಂಗೇಶ್ವರ ಎಂಬ ಪವಾಡ ಪುರುಷರು ಈ ಊರಲ್ಲಿ ಜೀವಿಸಿ, ಅನೇಕ ಪವಾಡಗಳನ್ನು ಮಾಡಿ ಜನರನ್ನು ಉದ್ಧರಿಸಿದ್ದರಂತೆ. ಅವರು ಮಾಡಿದ ಪುಣ್ಯದ ಕೆಲಸಗಳಿಂದಾಗಿ ಈ ಊರಿಗೆ ಅವರ ಹೆಸರನ್ನೇ ಇಟ್ಟರಂತೆ. ಈ ಊರಲ್ಲಿ ಅವರ ಗದ್ದುಗೆಯು ಕಂಡುಬರುತ್ತದೆ.

**೧೫. ಕಾರಿಗನೂರು (ವ್ಯಕ್ತಿವಾಚಿ) ಮಳೆಯ ನೀರಿನಿಂದ ತೆಗೆಯುವ ಫಸಲು:** ಸಂಕಲಾಪುರದ ಕ್ರಿ.ಶ. ೧೫೧೩ರ ಶಾಸನದಲ್ಲಿ 'ಕಾರನೂರು' ಎಂದು ಕರೆದಿದೆ.[೧೨] ಹಳೆಯ ಕಾರಿಗನೂರು ಗ್ರಾಮವು ತಿಮ್ಮಪ್ಪನಗುಡ್ಡ ಎಂದು ಕರೆಯಲ್ಪಡುವ ಸ್ಥಳದ ಪಕ್ಕದಲ್ಲಿತ್ತು. ಚಿರತೆ ಮತ್ತು ಕಳ್ಳರ ಹಾವಳಿಯಿಂದ ಊರು, ಈಗಿರುವ ಸ್ಥಳಕ್ಕೆ ವರ್ಗಾಯಿಸಲ್ಪಟ್ಟಿತು ಎಂದು ಸ್ಥಳೀಯರು ತಿಳಿಸುತ್ತಾರೆ.

**೧೬. ಕಾಳಗಟ್ಟ (ಸ್ಥಳವಾಚಿ) ಯುದ್ಧ ನಡೆಯುವ ಸ್ಥಳ:** ಕಾಳಗಟ್ಟ ಹಿಂದಕ್ಕೆ ಆನೆಗೊಂದಿ ಸಂಸ್ಥಾನಕ್ಕೆ ಸೇರಿತ್ತು. ಈ ಊರಲ್ಲಿ ಕಾಳಗದ ತರಬೇತಿ ಕೊಡುತ್ತಿದ್ದರು. ಆದ್ದರಿಂದ ಈ ಊರಿಗೆ 'ಕಾಳಗಟ್ಟ' ಎಂಬ ಹೆಸರು ಬಂದಿತು.

**೧೭. ಕಾಕುಬಾಳು (ದೈವವಾಚಿ):** ಕಾಕುಬಾಳು ಸ್ಥಳನಾಮ ಕುರಿತಂತೆ, ರಾಮಾಯಣ ಕಾಲಕ್ಕೆ ಕಾಕಾಸುರನು ಸೀತಾದೇವಿಯನ್ನು ಪೀಡಿಸಲಾಗಿ, ಶ್ರೀರಾಮ ದರ್ಬೆಯನ್ನು ಮಂತ್ರಿಸಿ ಆತನ ಮೇಲೆ ಪ್ರಯೋಗಿಸಿದಾಗ ಕಾಕಾಸುರನು ಶರಣಾಗಿ ಜೀವವನ್ನು ಉಳಿಸಿಕೊಂಡನಂತೆ. ಈ ಘಟನೆಯು ಪ್ರಸ್ತುತ ಗ್ರಾಮವಿರುವ ಸ್ಥಳದಲ್ಲಿ ನಡೆದದ್ದರಿಂದ ಅದಕ್ಕೆ 'ಕಾಕುಬಾಳು' ಎಂದು ಹೆಸರಾಯಿತಂತೆ. ಮತ್ತೊಂದು ಹೇಳಿಕೆ ಪ್ರಕಾರ, ಕಕ್ಕಿ ಹೂವಿನಿಂದ ಈ ಗ್ರಾಮದ ಆಂಜನೇಯ ಸ್ವಾಮಿಯನ್ನು ಪೂಜಿಸುತ್ತಿದ್ದರಿಂದ 'ಕಾಕುಬಾಳು' ಎಂಬ ಹೆಸರು ಬಂತೆಂದು ತಿಳಿದುಬಂದಿದೆ.

**೧೮. ವೆಂಕಟಾಪುರ (ವ್ಯಕ್ತಿವಾಚಿ ಹಾಗೂ ದೈವವಾಚಿ):** ವೆಂಕಟಾಪುರವನ್ನು ಹಿಂದೆ 'ಹೊನ್ನಿನ ವೆಂಕಟಾಪುರ'ವೆಂದು ಕರೆಯಲಾಗುತ್ತಿತ್ತು. ಆಗ ಗ್ರಾಮವು ಈಗಿನ ತುಂಗಭದ್ರಾ ನದಿ ಹರಿಯುತ್ತಿರುವ ಸ್ಥಳದಲ್ಲಿತ್ತು. ತುಂಗಭದ್ರಾ ನದಿ ಹರಿಯುತ್ತಿದ್ದುದ್ದರಿಂದ ಊರು ಮುಳುಗಡೆಯಾಗಿ, ಈಗಿರುವ ಕಮಲಾಪುರ - ಕಂಪ್ಲಿ ರಸ್ತೆಯಲ್ಲಿ ನಿರ್ಮಾಣವಾಯಿತು. ಹಿಂದೆ ವಿದ್ಯಾರಣ್ಯರು ವಿಜಯನಗರದಲ್ಲಿ ಹೊನ್ನಿನ ಮಳೆ ಸುರಿಸಿದಾಗ ಅದು ವೆಂಕಟಾಪುರದಲ್ಲೂ ಬಿದ್ದ ಕಾರಣ, ಅಲ್ಲಿ ಈಗಲೂ ಹೊನ್ನಿನ ನಾಣ್ಯ, ಪಾತ್ರೆಗಳು ಸಿಗುತ್ತವೆ ಎಂದು ತಿಳಿಯಲಾಗಿದೆ.

**೧೯. ಕೊಟಗಿನಹಾಳು (ಸ್ಥಳವಾಚಿ) ಕೊಟಗೆ, ಕೊಟ್ಟಗೆ, ಕೊಟ್ಟಿಗೆ, ದನಗಳ ಹಿಕ್ಕೆ:** ಹಿಂದೆ ರೌಡುಕುಂದಿ ಎಂಬ ಊರಿಂದ ತಾಯಮ್ಮ ದೇವತೆಯನ್ನು ತೆಗೆದುಕೊಂಡು ಬಂದ ಜನರು, ಇಲ್ಲಿ ಕೊಟ್ಟಿಗೆಗಳನ್ನು (ಗುಡಿಸಲು) ಕಟ್ಟಿಕೊಂಡು ವಾಸಿಸತೊಡಗಿದ್ದರಿಂದ ಈ ಊರಿಗೆ 'ಕೊಟಗಿನಹಾಳು' ಎಂಬ ಹೆಸರು ಬಂತೆಂದು ಹೇಳಲಾಗಿದೆ. ಊರಿನ ಸುತ್ತ ಕೋಟೆ ಇರುವುದರಿಂದ 'ಕೊಟಗಿನಹಾಳು' ಎಂಬ ಹೆಸರು ಬಂತೆಂಬ ಮತ್ತೊಂದು ಹೇಳಿಕೆ ಇದೆ. ಆದರೆ ಕ್ರಿ.ಶ. ೧೫೩೪ರ ಹಂಪಿ ಶಾಸನವೊಂದು, 'ಕೋಟೆನಹಾಳ' ಎಂದು ಉಲ್ಲೇಖಿಸುತ್ತದೆ.[೧೩] ಕೋಟೆನ ಹಾಳದಿಂದ ಕೊಟಗಿನಹಾಳು ಎಂಬ ಶಬ್ದ ಹುಟ್ಟಿಕೊಂಡಿರಬೇಕು.

**೨೦. ವಡ್ಡರಹಳ್ಳಿ (ಜನಾಂಗವಾಚಿ) ಕಲ್ಲುಕುಟಿಗ, ಒರಟು ಸ್ವಭಾವದ:** ಈ ಗ್ರಾಮದಲ್ಲಿ ವಡ್ಡರು ಹೆಚ್ಚಿನಸಂಖ್ಯೆಯಲ್ಲಿ ವಾಸಿಸುತ್ತಿರುವುದರಿಂದ ಈ ಊರಿಗೆ 'ವಡ್ಡರಹಳ್ಳಿ' ವಡ್ರಳ್ಳಿ ಎಂದು ಕರೆಯುತ್ತಾರೆ.

**೨೧. ಮಲಪನಗುಡಿ(ದೈವವಾಚಿ ಹಾಗೂ ವ್ಯಕ್ತಿವಾಚಕ ಪುರುಷ):** ಮಲಪನಗುಡಿ ಗ್ರಾಮದ ಸ್ಥಳನಾಮ ಕುರಿತಂತೆ ಮೂರು ಅಭಿಪ್ರಾಯಗಳಿವೆ. ಮೊದಲನೆಯಾಗಿ ವಿಜಯನಗರದ ಅರಸನೊಬ್ಬನು ಮಲ್ಲಪ್ಪನಾಯಕ ಎಂಬ ಜಟ್ಟಿಗೆ ಉಂಬಳಿಯಾಗಿ ಕೊಟ್ಟ ಊರು ಎಂದು. ಎರಡನೆಯದಾಗಿ ಮಲ್ಲಪ್ಪ ಎನ್ನುವ ಜಟ್ಟಿಯು ಆ ಊರಿನಲ್ಲಿದ್ದನೆಂದು, ಮೂರನೆಯದಾಗಿ ಅಲ್ಲಿನ ಮಲ್ಲಿಕಾರ್ಜುನ ದೇವರ ಗುಡಿಯಿರುವುದರಿಂದ 'ಮಲಪನಗುಡಿ' ಎಂಬ ಹೆಸರು ಬಂದಿದೆ ಎನ್ನಲಾಗಿದೆ.

ಕ್ರಿ.ಶ. ೧೪೧೨ರ ಇಲ್ಲಿನ ಶಾಸನವೊಂದು, ಇಲ್ಲಿ ಐದನೆಯ ಸುತ್ತಿನ ಕೋಟೆ ಇದ್ದು, ಊರ ಮುಂದಿರುವ ಮಾಳಿಗೆ ಕೂಪಾರಾಮ(ಸೂಳೆಬಾವಿ)ವನ್ನು ಕಟ್ಟಿಸಿದ ಬಗ್ಗೆ ತಿಳಿಸುತ್ತದೆ.[೧೨೯] ಇದರಲ್ಲಿ ಈ ಊರಿನ ಯಾವುದೇ ಹೆಸರು ಕಂಡುಬರುವುದಿಲ್ಲ. ಕಾಲಕ್ರಮೇಣ ಈ ಕೋಟೆ ಪ್ರದೇಶದಲ್ಲಿ ಜನವಸತಿ ನೆಲೆಗೊಂಡು, ಅಲ್ಲಿ ಪ್ರಸ್ತುತ ಮಲ್ಲಿಕಾರ್ಜುನ ದೇವಾಲಯ ನಿರ್ಮಾಣಗೊಂಡ ನಂತರದ ದಿನಗಳಲ್ಲಿ ಈ ಗ್ರಾಮವನ್ನು ಮಲ್ಲಿಕಾರ್ಜುನಗುಡಿ ಎಂದು ಕರೆದು, ಮುಂದೆ ಮಲ್ಲಪ್ಪನಗುಡಿ, ಮಲಪನಗುಡಿ ಎಂದು ಕರೆದಿರಬೇಕು.

**೨೨. ಹೊಸ ಮಲಪನಗುಡಿ (ಹೊಸತಾದ, ಇತ್ತೀಚಿನ):** ತುಂಗಭದ್ರಾ ಅಣೆಕಟ್ಟಿನಲ್ಲಿ ಮುಳುಗಡೆಯಾದ ಬಸಾಪುರ, ಗೌರೀಪುರ, ಬೆನಕಾಪುರ, ಕುರಂದಗಡ್ಡಿ, ನಾರಾಯಣದೇವರ ಕೆರೆಯಂತಹ ಊರುಗಳಿಂದ ವಲಸೆ ಬಂದ ಜನರಿಗೆ ಮಲಪನಗುಡಿ ಗ್ರಾಮದ ಪೂರ್ವಕ್ಕೆ ಹೊಸ ನೆಲೆಯನ್ನು ಒದಗಿಸಿಕೊಟ್ಟು, ಅದನ್ನು ಹೊಸ ಮಲಪನಗುಡಿ ಎಂದು ಕರೆಯಲಾಯಿತು.

**೨೩. ಗಾಳೆಮ್ಮನಗುಡಿ (ದೈವವಾಚಿ):** ಗಾಳೆಮ್ಮ ಎಂಬ ದೇವಿಯ ದೇವಸ್ಥಾನ ಇರುವುದರಿಂದ ಈ ಊರಿಗೆ ಗಾಳೆಮ್ಮನಗುಡಿ ಎಂದು ಕರೆಯಲಾಗುತ್ತದೆ. ಈ ದೇವಿಯ ಮೂಲ ಸ್ಥಳ ಸಂಡೂರು ಆಗಿದ್ದು, ನಂತರ ಈಗಿನ ಸ್ಥಳಕ್ಕೆ ವಲಸೆ ಬಂದಳಂತೆ ಎಂದು ಸ್ಥಳೀಯರು ತಿಳಿಸುತ್ತಾರೆ.

**೨೪. ಸೀತಾರಂ ತಾಂಡ (ವ್ಯಕ್ತಿವಾಚಿ):** ಸೀತಾರಾಂ ತಾಂಡ ಈಗಿರುವ ಸ್ಥಳದಿಂದ ೩ ಕಿ.ಮೀ. ದೂರದ ಗುಡ್ಡದ ಪಕ್ಕದಲ್ಲಿತ್ತು. ಆದರೆ, ಆ ಪ್ರದೇಶ ಪರೋಪಕಾರದ ನೆಲವಾಗಿರಲಿಲ್ಲ. ಬಂಜಾರ ಸಮುದಾಯದ ಸೀತಾರಾಮ್ ಎಂಬ ಪವಾಡ ಪುರುಷ ಈಗಿರುವ ಸ್ಥಳಕ್ಕೆ ವಲಸೆ ಬರುವಂತೆ ಮತ್ತು ವಾಸಿಸುವಂತೆ ಮಾಡಿದರಂತೆ. ಇದರಿಂದ ಊರಲ್ಲಿ ಜನರು ಸುಭಿಕ್ಷೆಯಿಂದ ಇರತೊಡಗಿದರಂತೆ. ಪವಾಡ ಪುರುಷ ಸೀತಾರಾಮ್ ವಾಸವಾಗಿದ್ದ ಈ ಸ್ಥಳವನ್ನು ಅವರ ಹೆಸರಿನಿಂದ ಕರೆಯತೊಡಗಿದರು.

### ೩. ಕಂಪ್ಲಿ ಹೋಬಳಿ

**೧. ಕಂಪ್ಲಿ (ದೈವವಾಚಿ ಹಾಗೂ ವ್ಯಕ್ತಿವಾಚಕ ಪುರುಷ):** ಕಂಪ್ಲಿ ಸ್ಥಳನಾಮ ಕುರಿತಂತೆ, ಹಿಂದೆ ಇಲ್ಲಿ ಕಪಿಲ ಎಂಬ ಋಷಿ ತಪಸ್ಸು ಮಾಡಿದ್ದನೆಂದು, ಮುಂದೆ ಈ ಪ್ರದೇಶವನ್ನಾಳಿದ ಪ್ರಸಿದ್ಧ ಅರಸನಿಗೆ ಆ ಋಷಿಯ ಹೆಸರನ್ನಿಡಲಾಯಿತೆಂದು, ಆದರಿಂದಾಗಿ ಈ ಊರಿಗೆ ಕಂಪಿಲಿ(ಕಂಪ್ಲಿ) ಎಂಬ ಹೆಸರು ಬಂದಿತು ಎನ್ನಲಾಗಿದೆ. ಮತ್ತೊಂದು ಹೇಳಿಕೆ ಪ್ರಕಾರ, ಇಲ್ಲಿಯ ರಾಜನು ಕೆಂಪು ಹುಲಿಯನ್ನು ಕೊಂದಿದ್ದರಿಂದ ಆತನ ಹೆಸರು ಕೆಂಪು ಹುಲಿರಾಯನೆಂದಾಯಿತು. ಕೆಂಪು ಹುಲಿರಾಯನೆಂಬ ಹೆಸರು ಕ್ರಮೇಣ ಕಂಪಿಲರಾಯನೆಂದಾಯಿತೆಂದು. ಆತನ ಹೆಸರೇ ಈ ಊರಿಗೆ ಕಂಪಿಲಿ ಎಂದು ಹೆಸರು ಬರಲು ಕಾರಣವಾಯಿತಂತೆ.

೧೩-೧೪ನೆಯ ಶತಮಾನದ ಶಾಸನಗಳು, ಕಂಪಿಲರಾಯನನ್ನು ಕುಮ್ಮಟದ ದೊರೆ ಎಂದು ಉಲ್ಲೇಖಿಸುತ್ತವೆ. ಈತನು ಕಂಪಿಲಿ ಪಟ್ಟಣದ ಸೋಮೇಶ್ವರದೇವರ(ಖಂಡೇಯರಾಯ) ವರಪ್ರಸಾದದಿಂದ ಹುಟ್ಟಲಾಗಿ ಕಂಪಿಲರಾಯನೆಂದು ಕರೆಯಲಾಗಿದೆ ಎಂದು ಕುಮಾರರಾಮನ ಸಾಂಗತ್ಯ ತಿಳಿಸುತ್ತದೆ. ಈತನ ಮತ್ತೊಂದು ಹೆಸರು ಖಂಡೇರಾಯ ಎಂಬುದಾಗಿದೆ.

ಕ್ರಿ.ಶ. ೧೦೧೪ರ ಶಾಸನವು ಕಂಪಿಲಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೧೮ರ ಬಾಗಳಿಶಾಸನವು ನೊಳಂಬರ ರಾಜಧಾನಿ ಕಂಪಿಲಿಯನ್ನು ಪ್ರಸ್ತಾಪಿಸುತ್ತದೆ. ಕಂಪಿಲಿಯು ಕಲ್ಯಾಣ ಚಾಲುಕ್ಯರ ಪ್ರಾಂತೀಯ ರಾಜಧಾನಿಯಾಗಿ, ನಂತರದ ಕಾಲದಲ್ಲಿ ಕುಮ್ಮಟದುರ್ಗದ ಪ್ರಮುಖ ಪಟ್ಟಣವಾಯಿತು.

ಕಂಪ್ಲಿಯು, ಕ್ರಿ.ಶ. ೧೫೪೦ರಲ್ಲಿ 'ಕಂಪಿಲೆ'[೧೬೦] ಎಂದು, ಕ್ರಿ.ಶ. ೧೫೫೨ರಲ್ಲಿ 'ಕಂಪಿಲ್ಯ' ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೧೬೧] ಕಂಪಿಲಿಯ ಅಧಿದೈವ ಸೋಮೇಶ್ವರನಿಂದ ಕಂಪಿಲದೇವನೆಂಬ ಹೆಸರು ಬಂದಿತೆ ವಿನಃ ಕಂಪಿಲರಾಯನಿಂದ ಕಂಪಿಲಿ ಎಂಬ ಹೆಸರು ಬರಲಿಲ್ಲವೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

**೨. ಜವುಕು (ಸಸ್ಯವಾಚಕ):** ಜವುಕು ಎನ್ನುವುದು ಒಂದು ಬಗೆಯ ಸಸ್ಯವಾಗಿದ್ದು, ದನಕರುಗಳು, ಕುದುರೆಗಳಿಗೆ ಮೇವು ಒದಗಿಸುವ ಸ್ಥಳವಾಗಿತ್ತೆಂದು ಸ್ಥಳೀಯರು ತಿಳಿಸುತ್ತಾರೆ. ಸಸ್ಯದಿಂದಾಗಿ ಈ ಊರಿಗೆ ಜವುಕು ಎಂಬ ಹೆಸರು ಬಂದಿರಬೇಕೆಂದು ತಿಳಿಯುತ್ತದೆ.

**೩. ಮಾವಿನಹಳ್ಳಿ (ವೃಕ್ಷವಾಚಕ):** ಮಾವಿನ ತೋಟ ಸಮೃದ್ಧವಾಗಿ ಇರುವಂತಹ ಈ ಸ್ಥಳದಲ್ಲಿ ಮಾವಿನ ವಾಸನೆ ೩ ಕಿ.ಮೀ. ವ್ಯಾಪ್ತಿಯವರೆಗೂ ಹರಡುತ್ತಿತ್ತಂತೆ. ಆದುದರಿಂದ ಈ ಊರಿಗೆ 'ಮಾವಿನಹಳ್ಳಿ' ಎಂದು ಕರೆಯಲಾಗಿದೆ.

**೪. ದೇವಲಾಪುರ (ದೈವವಾಚಿ):** ಕ್ರಿ.ಶ. ೧೫೧೩ರ ಹಂಪಿ ಶಾಸನವು ದೇವಲಾಪುರವನ್ನು ಉಲ್ಲೇಖಿಸುತ್ತದೆ.[೧೬೨] ಕಳೆದ ಐದು ಶತಮಾನಗಳಿಂದಲೂ ದೇವಲಾಪುರದ ಸ್ಥಳನಾಮದಲ್ಲಿ ಯಾವುದೇ ಬದಲಾವಣೆ ಇಲ್ಲ.

೫. **ಸೋಮಲಾಪುರ (ದೈವವಾಚಿ):** ಸೋಮಲಾಪುರವನ್ನು ಪ್ರೌಢದೇವರಾಯನ ಆದೇಶದ ಮೇರೆಗೆ ರಾಯಪಣ್ಣಯ್ಯನು ನಿರ್ಮಿಸಿ, ಅಲ್ಲಿ ಸೌಮ್ಯ ಸೋಮೇಶ್ವರ ದೇವರನ್ನು ಪ್ರತಿಷ್ಠಾಪಿಸಿದನೆಂದು ಕ್ರಿ.ಶ. ೧೪೩೦ರ ನಿಂಬಾಪುರದ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೫೧೫ರ ಶಾಸನದಲ್ಲಿ, ಸೋಮಲಾಪುರದ ಸೀಮೆಯ ಉಲ್ಲೇಖವಿದೆ.[೧೩೩] ಸ್ಥಳನಾಮದಲ್ಲಿ ಯಾವುದೇ ಬದಲಾವಣೆಯಿಲ್ಲ.

ಸ್ಥಳೀಯರು ತಿಳಿಸುವಂತೆ ಈ ಊರಿಗೆ ಮಟ್ಟಿ ಸೋಮಲಾಪುರ, ಕರಡಿ ಸೋಮಲಾಪುರ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ಗ್ರಾಮವು ಎತ್ತರವಾದ ಸ್ಥಳದಲ್ಲಿರುವುದರಿಂದ ಈ ಊರಿಗೆ 'ಮಟ್ಟಿ ಸೋಮಲಾಪುರ'ವೆಂದು, ಕರಡಿಗಳ ಹಾವಳಿ ವಿಪರೀತ ಇರುವುದರಿಂದ 'ಕರಡಿ ಸೋಮಲಾಪುರ' ಎಂತಲೂ ಕರೆಯುತ್ತಾರೆ.

೬. **ಕಣಿವೆ ತಿಮ್ಮಾಪುರ (ಸ್ಥಳವಾಚಿ):** ಕಣವಿ ತಿಮ್ಮಾಪುರವು, ಕ್ರಿ.ಶ. ೧೫೧೩ರ ಹಂಪಿಯ ಶಾಸನವೊಂದರಲ್ಲಿ 'ಸೋಲೂರ ಬಸವಪನಾಯಕನು ಕಟ್ಟಿದ ತಿಮ್ಮಾಪುರ' ಎಂದು ಉಲ್ಲೇಖಗೊಂಡಿದೆ.[೧೩೪] ತಿಮ್ಮಾಪುರವನ್ನು ಸೋಲೂರ ಬಸವಪನಾಯಕ ನಿರ್ಮಿಸಿದನೆಂದು ಶಾಸನದಿಂದ ಸ್ಪಷ್ಟವಾಗುತ್ತದೆ. ಕಾಲಕ್ರಮೇಣ ಕಣಿವೆಯ ಪರಿಸರದಿಂದಾಗಿ, ಕಣಿವೆರಾಯ ಎಂಬ ದೇವರಿಂದಾಗಿ ಇದು ಕಣಿವೆ ತಿಮ್ಮಾಪುರ, ಕಣಿವೆ ತಿಮ್ಲಾಪುರ ಎಂಬ ಹೆಸರನ್ನು ಪಡೆದುಕೊಂಡಿತು.

೭. **ರಾಮಸಾಗರ (ದೈವವಾಚಿ ಹಾಗೂ ವ್ಯಕ್ತಿವಾಚಕ ಪುರುಷ):** ಕ್ರಿ.ಶ. ೧೫೬೧ರ ಶಾಸನವು, ಕಂಪಿಲೆ ಮಾಗಣಿಗೆ ಸೇರುವ ರಾಮಸಾಗರ ಗ್ರಾಮವನ್ನು ಪ್ರಸ್ತಾಪಿಸಿದೆ.[೧೩೫] ಈ ಗ್ರಾಮದ ಸಮೀಪ ತುಂಗಭದ್ರಾನದಿಗೆ ವಿಜಯನಗರ ಕಾಲದಲ್ಲಿ ಅಣೆಕಟ್ಟೊಂದನ್ನು ನಿರ್ಮಿಸಿದ್ದು, ಬಹುಶಃ ಅದನ್ನು ರಾಮಸಾಗರವೆಂದು ಕರೆದಿರಬಹುದು. ಅಲ್ಲಿಂದ ಹೊರಟ ಕಾಲುವೆಗಳು ಇಂದಿಗೂ ಈ ಗ್ರಾಮಕ್ಕೆ ಸೇರಿದ ಭೂಮಿಗೆ ನೀರನ್ನು ಒದಗಿಸುತ್ತವೆ. ಈ ಅಣೆಕಟ್ಟೆಗೆ ಇಟ್ಟ ಹೆಸರು ಮುಂದೆ ಅಲ್ಲಿ ನೆಲೆಯೂರಿದ ಗ್ರಾಮಕ್ಕೂ ಅನ್ವಯಿಸಿರಬೇಕು.

ರಾಮಸಾಗರ ಗ್ರಾಮದ ಸಮೀಪದಲ್ಲಿ ರಾಮಲಿಂಗೇಶ್ವರ ದೇವಾಲಯವಿದ್ದು, ಬಹುಶಃ ಇದು ಕಂಪಿಲರಾಯನ ಮಗ ಕುಮಾರರಾಮನಿಂದ ಬಂದ ಹೆಸರಾಗಿರಬೇಕು. ದೇವಸ್ಥಾನದ ಪಕ್ಕದಲ್ಲೇ ರಾಮಲಿಂಗ ಕೆರೆಯಿದ್ದು, ಈಗ ಅದನ್ನು ವಿಠಲಾಪುರ ಕೆರೆಯೆಂದು(ದಾಖಲೆಗಳಲ್ಲಿ) ಕರೆಯಲಾಗುತ್ತದೆ. ರಾಮಲಿಂಗ ಕೆರೆಯಿದ್ದುದರಿಂದಲೇ ಈ ಊರಿಗೆ 'ರಾಮಸಾಗರ'ವೆಂಬ ಹೆಸರು ಬಂದಿರಬೇಕೆಂದು ಊಹಿಸಲಾಗುತ್ತದೆ(ಕೆರೆಯನ್ನು ಸಾಮಾನ್ಯವಾಗಿ ಈ ಪ್ರದೇಶದಲ್ಲಿ 'ಸಾಗರ', 'ಸಮುದ್ರ' ಎಂದು ಹೇಳುವುದಿದೆ).

೮. **ಹಿರೇಜಾಯಿಗನೂರು (ಸ್ಥಳವಾಚಿ):** ಹಿರೇಜಾಯಿಗನೂರು ಗ್ರಾಮವು ಕ್ರಿ.ಶ. ೧೫೧೩ರ ಹಂಪಿ ಶಾಸನದಲ್ಲಿ "ನಾರಿಯ ಸೀಮೆಯಲು ನಾವ್ವತ್ತನಾಕು ವಿನಯೋಗಕೆ, ಸಲುವ ಜಾಯನೂರ ಗ್ರಾಮ" ಎಂದು ಉಲ್ಲೇಖಗೊಂಡಿದೆ.[೧೩೬] ಜಾಯನೂರು ಎಂಬುದು ಜಾಯಿಗನೂರು ಎಂದು ಸ್ವಲ್ಪ ಬದಲಾವಣೆಯೊಂದಿಗೆ ರೂಢಿಯಲ್ಲಿದೆ.

**೯. ಚಿಕ್ಕ ಜಾಯಿಗನೂರು (ಸ್ಥಳವಾಚಿ):** ಇಲ್ಲಿ ಚಿಕ್ಕ ಜೇನು ಹೆಚ್ಚಾಗಿ ಸಿಗುತ್ತಿದ್ದರಿಂದ ಚಿಕ್ಕ ಜೇನೂರು, ಚಿಕ್ಕಜಾಯಿಗನೂರಾಯಿತೆಂದು ಸ್ಥಳೀಯರು ತಿಳಿಸುತ್ತಾರೆ. ಹಿರೇಜಾಯಿಗನೂರಿನಲ್ಲಿ ಪ್ಲೇಗ್, ಕಾಲರಾ ಕಾಣಿಸಿಕೊಂಡಿತಂತೆ. ಅಲ್ಲಿನ ಜನವಸತಿಯು ಈ ಊರಿಗೆ ಸ್ಥಳಾಂತರಗೊಂಡಿತಂತೆ.

**೧೦. ಅರಳಿಹಳ್ಳಿ (ವೃಕ್ಷವಾಚಿ) ಅಶ್ವತ್ಥ ವೃಕ್ಷ:** ಅರಳಿಹಳ್ಳಿಯು, ಶಾಸನವೊಂದರಲ್ಲಿ ಅರಳಿಹಳ್ಳಿ ಎಂದೇ ಉಲ್ಲೇಖಗೊಂಡಿದೆ. ಅರಳಿಹಳ್ಳಿಯಲ್ಲಿ ೩೦೦ ವರ್ಷಗಳ ಹಿಂದೆ ಪ್ಲೇಗ್ ಕಾಣಿಸಿಕೊಳ್ಳಲಾಗಿ, ಅಲ್ಲಿನ ಜನರು ಸಮೀಪದ ಸಣಾಪುರ ಗ್ರಾಮಕ್ಕೆ ವಲಸೆ ಹೋದರು. ಆಗ ಊರು ಪಾಳು ಬಿದ್ದಿತು. ಈಗ್ಗೆ ೫೦ ವರ್ಷಗಳಿಂದ ಈ ಪಾಳು ಗ್ರಾಮದಲ್ಲಿ ಬಂಜಾರ ಸಮುದಾಯದ ಜನರು ವಾಸಿಸುತ್ತಿದ್ದಾರೆ.

**೧೧. ಸಂಕ್ಲಾಪುರ (ಸ್ಥಳವಾಚಿ):** ಸಂಕ್ಲಾಪುರ ಗ್ರಾಮವು ಈಗ ಹಾಳು ಬಿದ್ದಿದ್ದು, ಬೇಚರಾಕ್ ಗ್ರಾಮವೆಂದು ಪರಿಗಣಿಸಲಾಗಿದೆ. ಸಂಕ್ಲಾಪುರವು ಕ್ರಿ.ಶ. ೧೫೧೩ರ ಶಾಸನದಲ್ಲಿ ಸಂಕಲಾಪುರವೆಂದು ಪ್ರಸ್ತಾಪಿಸಲ್ಪಟ್ಟಿದೆ.[೧೩೭]

**೧೨. ಇಟಗಿ ಮುದ್ದಾಪುರ (ವ್ಯಕ್ತಿವಾಚಿ) (ನಂ. ೨ ಮುದ್ದಾಪುರ):** ಮುದ್ಗಲ ಋಷಿಗಳ ಕ್ಷೇತ್ರವಾಗಿದ್ದರಿಂದ ಮುದ್ದಲಾಪುರ ಎಂಬ ಹೆಸರು ಬಂತೆಂದು ಸ್ಥಳೀಯರು ತಿಳಿಸುತ್ತಾರೆ. ಇದನ್ನು ಕ್ರಿ.ಶ. ೧೫೧೫ರ ಶಾಸನದಲ್ಲಿ ಸಂತೆ ಮುದ್ದಲಾಪುರ ಅಥವಾ ಇಮ್ಮಡಿ ದೇವರಾಯಪುರವೆಂದು ಕರೆಯಲಾಗಿದೆ.[೧೩೮] ಕಾಲಾನುಕ್ರಮದಲ್ಲಿ ಸಂತೆ ಶಬ್ದ ಹೋಗಿ, ಗ್ರಾಮವನ್ನು ಗುರುತಿಸುವ ಸಲುವಾಗಿ ಅದರ ಸಮೀಪ ಗ್ರಾಮವಾದ ಇಟಗಿಯನ್ನು ಆಧರಿಸಿ ಇಟಗಿ ಮುದ್ದಾಪುರವೆಂದು ಕರೆಯಲಾಯಿತು. ಇಂದಿಗೂ ಕೂಡ ಇದೇ ಹೆಸರನ್ನು ಹೊಂದಿದೆ.

**೧೩. ಮೆಟ್ರಿ:** ಕ್ರಿ.ಶ. ೧೫೧೩ರ ಹಂಪಿ ಶಾಸನವು, ಪ್ರಸ್ತುತ ಮೆಟ್ರಿಯನ್ನು ಮೆಟರೆ ಎಂದು ಉಲ್ಲೇಖಿಸಿದೆ.[೧೩೯] ಬಹುಶಃ ಮೆಟ್ಟರೆಯು ಮೆಟರೆ ಆಗಿ ನಂತರ ಮೆಟ್ರಿಯಾಗಿರಬೇಕು. ದಾರಿಯಲ್ಲಿ ಹಾಸುಬಂಡೆಯಿದ್ದರೆ, ಅದನ್ನು ಮೆಟ್ಟುವ ಅಥವಾ ತುಳಿಯುವುದರಿಂದ ಮೆಟ್ಟರೆ ಎಂದು ಕರೆಯುತ್ತಾರೆ.

**೧೪. ಹಂಪದೇವನಹಳ್ಳಿ (ದೈವವಾಚಕ) ಸ್ಥಳೀಯ ಆರಾಧ್ಯ ದೈವ:** ಕ್ರಿ.ಶ. ೧೫೧೧ರ ಹಂಪದೇವನಹಳ್ಳಿ ಶಾಸನವು, ನಾರಿಸೀಮೆಯ ಹಂಪದೇವನಹಳ್ಳಿಯನ್ನು ಶ್ರೀಕೃಷ್ಣದೇವರಾಯ ಪುರವೆಂದು ಕರೆದು ಅಗ್ರಹಾರವನ್ನಾಗಿ ಮಾಡಿ ಬ್ರಾಹ್ಮಣರಿಗೆ ಕೊಟ್ಟ ಬಗ್ಗೆ ತಿಳಿಸುತ್ತದೆ.[೧೪೦] ಹಂಪದೇವನಹಳ್ಳಿಯನ್ನು ಕೃಷ್ಣರಾಯಪುರವೆಂದು ಕರೆದರೂ, ಅದು ಶಾಶ್ವತವಾಗದೆ ಮೊದಲ ಹೆಸರೇ ಉಳಿಯಿತು.

**೧೫. ಉಪ್ಪಾರಹಳ್ಳಿ (ಜನಾಂಗವಾಚಿ):** ವಿಜಯನಗರ ಕಾಲದಲ್ಲಿ ಈ ಊರಿನಲ್ಲಿ ಉಪ್ಪನ್ನು ತಯಾರಿಸುತ್ತಿದ್ದರಂತೆ. ಹಾಗಾಗಿ ಈ ಊರಿಗೆ 'ಉಪ್ಪಾರಹಳ್ಳಿ' ಎಂಬ ಹೆಸರು ಬಂದಿದೆ. ಉಪ್ಪಾರ ಜನಾಂಗದವರೇ ಈ ಊರಿನಲ್ಲಿ ಹೆಚ್ಚಾಗಿ ವಾಸಿಸುತ್ತಿರುವುದರಿಂದ ಈ ಊರಿಗೆ 'ಉಪ್ಪಾರಹಳ್ಳಿ' ಎಂಬ ಹೆಸರು ಬಂತೆಂದು ತಿಳಿಯಲಾಗಿದೆ.

**೧೬. ದೇವಸಮುದ್ರ (ದೈವವಾಚಿ):** ದೇವಸಮುದ್ರವನ್ನು, ಕ್ರಿ.ಶ. ೧೫೧೬ರ ಶಾಸನದಲ್ಲಿ ಉಲ್ಲೇಖಗೊಂಡಿರುವ ಕಳಸಾಪುರದ ಮಾಗಣೆಗೆ ಸಲುವ ಹರಿಯಸಮುದ್ರ ಗ್ರಾಮದ ಜೊತೆ ಗುರುತಿಸಬಹುದಾಗಿದೆ.[೧೪೧] ಬಹುಶಃ ಹರಿಯಸಮುದ್ರ ಗ್ರಾಮವು ನಂತರದ ಕಾಲದಲ್ಲಿ 'ದೇವಸಮುದ್ರ'ವೆಂದು ಹೆಸರು ಪಡೆದಿರಬಹುದು.

**೧೭. ಸುಗ್ಗೇನಹಳ್ಳಿ (ಸ್ಥಳವಾಚಿ):** ಸುಗ್ಗೇನಹಳ್ಳಿಯನ್ನು, ಕ್ರಿ.ಶ. ೧೫೫೮ರ ಹಂಪಿ ಶಾಸನದಲ್ಲಿ 'ಸಿರುಸುಗನಹಳ್ಳಿ' ಎಂಬ ಉಲ್ಲೇಖವಿದೆ.[೧೪೨] ಸಿರುಸುಗನಹಳ್ಳಿ ಕಾಲಾಂತರದಲ್ಲಿ ಸುಗ್ಗೇನಹಳ್ಳಿ ಎಂದಾಗಿದೆ.

**೧೮. ಗೋನಾಳು (ಪ್ರಾಣಿವಾಚಿ):** ಗೋನಾಳು ಸ್ಥಳನಾಮವು, ಗೋವಿನಹಾಳು ಎಂಬುದರಿಂದ ಬಂದಿದ್ದು, ಹಿಂದೆ ಅಲ್ಲಿ ಅಧಿಕಸಂಖ್ಯೆಯಲ್ಲಿ ಗೋವುಗಳಿದ್ದುದರಿಂದ ಆ ಹೆಸರು ಬಂತೆಂದು ಸ್ಥಳೀಯರು ತಿಳಿಸುತ್ತಾರೆ. ಕ್ರಿ.ಶ. ೧೫೧೩ರ ಶಾಸನವು 'ಗೋನಹಾಳ' ಎಂದು ಉಲ್ಲೇಖಿಸುತ್ತದೆ.[೧೪೩] ಹೀಗೆ ಗೋನಹಾಳು ಗೋನಾಳು ಎಂದು ರೂಪಾಂತರ ಹೊಂದಿದೆ.

**೧೯. ನಂ.೧೦ ಮುದ್ದಾಪುರ (ಸ್ಥಳವಾಚಿ):** ನಂ.೧೦ ಮುದ್ದಾಪುರವು ಅಲ್ಲಿಯ ಶಾಸನದಲ್ಲಿ ಮುದ್ದಾಪುರವೆಂದೇ ಉಲ್ಲೇಖಿಸಲ್ಪಟ್ಟಿದೆ.[೧೪೪] ಸ್ಥಳನಾಮದಲ್ಲಿ ಯಾವ ಬದಲಾವಣೆಯೂ ಇಲ್ಲ.

**೨೦. ಇಟಗಿ (ಸ್ಥಳವಾಚಿ):** ಇಟಗಿ ಗ್ರಾಮವು ಕ್ರಿ.ಶ. ೧೫೧೩ರ ಶಾಸನದಲ್ಲಿ "ಸಾರಿಯ ಸೀಮೆಗೆ ಸಲುವ ಯಿಟ್ಟಿಗೆಯ ಗ್ರಾಮ" ಎಂದು ಉಲ್ಲೇಖಗೊಂಡಿದೆ.[೧೪೫] ಇದು ವಿಜಯನಗರ ಕಾಲದಲ್ಲಿ ಅರಸರಿಂದ ಬ್ರಾಹ್ಮಣರಿಗೆ ದತ್ತಿಯಾಗಿ ಬಂದಿತೆಂದು, ಹಾಗಾಗಿ ಇದನ್ನು ಉಂಬಳಿ ಗ್ರಾಮವೆಂದು ಕರೆಯುತ್ತಾರೆ.

**೨೧. ಸಣಾಪುರ (ವ್ಯಕ್ತಿವಾಚಕ ಪುರುಷ):** ಸಣಾಪುರವು, ಕ್ರಿ.ಶ. ೧೫೧೩ರ ಶಾಸನದಲ್ಲಿ "ಕಂಪಿಲೆಯ ಮಾಗಣಿಯಲೂ ಸಾಯಣಪುರದ ಗ್ರಾಮ" ಎಂದು ಉಲ್ಲೇಖಗೊಂಡಿದೆ.[೧೪೬] ಮೊದಲನೆಯ ಬುಕ್ಕರಾಯನ ಕಾಲದಲ್ಲಿ ಸಾಯಣಾಚಾರ್ಯನೆಂಬ ಪ್ರಸಿದ್ಧ ಸಂಸ್ಕೃತ ವಿದ್ವಾಂಸನು ವಿಜಯನಗರದ ಆಸ್ಥಾನದಲ್ಲಿದ್ದನು. ಅಲ್ಲದೆ ಈತನು ಬುಕ್ಕರಾಯನ ಮಂತ್ರಿಯಾಗಿದ್ದು, ವಿದ್ವಾಂಸನಾದ ಮಾಧವಾಚಾರ್ಯನ ಸಹೋದರನೂ ಆಗಿದ್ದನು. ಬಹುಶಃ ಈತನ ಗೌರವಾರ್ಥವಾಗಿ ಗ್ರಾಮವನ್ನು ನಿರ್ಮಿಸಿ ಅದಕ್ಕೆ ಸಾಯಣಪುರವೆಂದು ಹೆಸರಿಟ್ಟಿರಬೇಕು. ಸುಮಾರು ೨೫೦ ವರ್ಷಗಳ ಹಿಂದೆ ಈ ಗ್ರಾಮದಲ್ಲಿ ಕಾಲರಾ ಕಾಣಿಸಿಕೊಳ್ಳಲಾಗಿ ಹಳೆಯ ಗ್ರಾಮ ಬಿಟ್ಟು ಈಗಿನ ಹೊಸ ಗ್ರಾಮವನ್ನು ನಿರ್ಮಿಸಲಾಯಿತೆಂದು ಸ್ಥಳೀಯರು ತಿಳಿಸುತ್ತಾರೆ.

**೨೨. ಹೊನ್ನಾಹಳ್ಳಿ (ಸ್ಥಳವಾಚಿ):** ಹೊನ್ನಹಳ್ಳಿಯು, ಕ್ರಿ.ಶ. ೧೫೧೩ರ ಶಾಸನದಲ್ಲಿ 'ಹೊಂನಾಪುರ'ವೆಂದು ಪ್ರಸ್ತಾಪಿಸಲ್ಪಟ್ಟಿದೆ.[೧೪೭] ಈ ಗ್ರಾಮವನ್ನು ಇತರ ಗ್ರಾಮಗಳೊಂದಿಗೆ ಕೃಷ್ಣದೇವರಾಯನು ವಿರೂಪಾಕ್ಷ ದೇವರ ಸೇವೆಗಾಗಿ ದತ್ತಿ ಬಿಡುತ್ತಾನೆ. ಹೊಂನಾಂಪುರವು ಕಾಲಾಂತರದಲ್ಲಿ 'ಹೊನ್ನಾಹಳ್ಳಿ' ಆಗಿರಬಹುದು.

## ೪. ಮರಿಯಮ್ಮನಹಳ್ಳಿ ಹೋಬಳಿ

೧. **ಮರಿಯಮ್ಮನಹಳ್ಳಿ (ವ್ಯಕ್ತಿವಾಚಕ ಸ್ತ್ರೀ):** ೧೯೫೨ರಲ್ಲಿ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾದ ನಾರಾಯಣದೇವರಕೆರೆ, ತಾರಿಹಳ್ಳಿ, ಕಣಿವೆ ಬಸಾಪುರ, ಆನೆವೇರಿ, ಹಳ್ಳಿ, ವಾಲಾಪುರ, ಕುರಂದಗಡ್ಡಿ ಗ್ರಾಮಗಳಿಂದ ಬಂದ ಬಹುಮಂದಿ ಮರಿಯಮ್ಮನಹಳ್ಳಿಯಲ್ಲಿ ವಾಸ್ತವ್ಯ ಹೂಡಿದರು. ಆದರೆ ಮರಿಯಮ್ಮನಹಳ್ಳಿ ಸ್ಥಳನಾಮ ಕುರಿತಂತೆ ಯಾವುದೇ ಮಾಹಿತಿ ಲಭ್ಯವಾಗಿಲ್ಲ.

೨. **ತೆಲುಗುಬಾಳು:** ತೆಲುಗುಬಾಳು ಗ್ರಾಮವು, ೧೯೭೬ರಲ್ಲಿ ತರಳಬಾಳು ಜಗದ್ಗುರುಗಳು ಶ್ರೀ ತೆಲುಗುಬಾಳು ಸಿದ್ಧ ಪ್ರೌಢಶಾಲೆ ಪ್ರಾರಂಭಿಸುವುದಕ್ಕೆ ಮುಂಚೆ ಪಾಳು ಗ್ರಾಮವಾಗಿತ್ತು. ಸಿರಿಗೆರೆಯ ತರಳಬಾಳು ಪೀಠದ ಮೂಲ ನೆಲೆ ತೆಲುಗು ಬಾಳು ಗ್ರಾಮವಾಗಿರುವುದರಿಂದ, ಬಹುಶಃ ತರಳಬಾಳು ಎಂಬುದರಿಂದ ತೆಲುಗುಬಾಳು ಸ್ಥಳನಾಮ ಬಂದಿರಬಹುದು.

೩. **ತಾಳೆ ಬಸಾಪುರ (ವೃಕ್ಷವಾಚಿ):** ತಾಳೆ ಬಸಾಪುರ ಗ್ರಾಮ ಪರಿಸರದಲ್ಲಿ ಹೆಚ್ಚು ತಾಳೆ ಮರಗಳು ಕಾಣಬರುವುದರಿಂದ ಗ್ರಾಮವನ್ನು ತಾಳೆ ಬಸಾಪುರವೆಂದು ಕರೆಯಲಾಗಿದೆ.

೪. **ನಾಗಲಾಪುರ (ವ್ಯಕ್ತಿವಾಚಕ ಸ್ತ್ರೀ):** ವಿಜಯನಗರದ ಅರಸ ಸದಾಶಿವರಾಯನು ತನ್ನ ಹೆಂಡತಿ ನಾಗಲಾದೇವಿ ಅಪೇಕ್ಷೆ ಮೇರೆಗೆ ನಾಗಲಾಪುರವನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ.

ಸ್ಥಳೀಯರು ತಿಳಿಸುವಂತೆ, ವಿಜಯನಗರದ ದೊರೆ ಬೇಟೆಗೆಂದು ಈ ಪ್ರದೇಶಕ್ಕೆ ಪತ್ನಿ ಸಮೇತನಾಗಿ ಬಂದಿದ್ದನಂತೆ. ರಾಣಿ ನಾಗಲಾದೇವಿಗೆ ಪ್ರಭೆಯೊಂದು ಕಾಣಿಸಿದ ನಂತರ ಒಪ್ಪತ್ತೇಶ್ವರ ಸ್ವಾಮಿ ಎಂಬ ಸಾಧು ಕಾಣಿಸಿಕೊಂಡು ಇಲ್ಲಿ ನನ್ನ ಗದ್ದುಗೆ ಇದೆ. ನಾನು ಬಹಳ ವರ್ಷಗಳ ಹಿಂದೆ ಇಲ್ಲಿ ಸಮಾಧಿ ಹೊಂದಿದ್ದೇನೆ ಎಂದು ತಿಳಿಸಿ ಅದೃಶ್ಯನಾಗುತ್ತಾನೆ. ಈ ವಿಚಾರವನ್ನು ನಾಗಲಾದೇವಿಯು ದೊರೆಗೆ ತಿಳಿಸಿ, ದಂಪತಿಗಳು ಅಲ್ಲಿ ಒಪ್ಪತ್ತೇಶ್ವರ ಸ್ವಾಮಿಗೆ ಗುಡಿಯೊಂದನ್ನು ನಿರ್ಮಿಸಿ, ಊರೊಂದನ್ನು ಕಟ್ಟಿಸಿದರೆಂದು, ಅದಕ್ಕೆ ಕಾರಣಳಾದ ನಾಗಲಾದೇವಿಯ ಹೆಸರನ್ನೆ ಈ ಗ್ರಾಮಕ್ಕೆ ಇಡಲಾಗಿ, ನಾಗಲಾಪುರವಾಯಿತೆಂದು ತಿಳಿಸುತ್ತಾರೆ.

೫. **ಡಣಾಪುರ:** ೧೯೫೨ರಲ್ಲಿ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾದ ಗ್ರಾಮಗಳಿಂದ ಬಂದ ಜನರ ವಸತಿಗಾಗಿ ಡಣಾಪುರ ಎಂಬ ಹೊಸ ಬಡಾವಣೆಯು ಅಸ್ತಿತ್ವಕ್ಕೆ ಬಂದಿತು.

೬. **ಹಾರೋನಹಳ್ಳಿ (ಜನಾಂಗವಾಚಿ):** ಹಾರೋನಹಳ್ಳಿ ಸ್ಥಳನಾಮವು, ಹೆಚ್ಚಿನ ಸಂಖ್ಯೆಯಲ್ಲಿ ಹಾರುವರು(ಬ್ರಾಹ್ಮಣರು) ವಾಸವಿದ್ದುದರಿಂದ ಬಂದಿತೆಂದು ತಿಳಿಯಲಾಗಿದೆ.

೭. **ಗರಗ (ಸ್ಥಳವಾಚಿ):** ಗರಗ ಗ್ರಾಮವು ಕ್ರಿ.ಶ. ೧೫೬೪ರ ಶಾಸನದಲ್ಲಿ 'ಗರುಗದ ಸೀಮೆ' ಎಂದು ಉಲ್ಲೇಖಗೊಂಡಿದೆ.[೧೪೮] ಸ್ಥಳೀಯವಾಗಿ, ಈ ಊರಿಗೆ 'ಗಡಿದುರ್ಗ' ಎಂಬ ಹೆಸರಿದ್ದು, ಈಗ ಗರಗವಾಗಿದೆ ಎಂದು ತಿಳಿಯುತ್ತದೆ. ಗರಗವು ವಿಜಯನಗರ ಕಾಲದಲ್ಲಿ ಆಡಳಿತದ ಒಂದು ಘಟಕವಾಗಿ ಪರಿಗಣಿಸಲ್ಪಟ್ಟಿದೆ. ಬಹುಶಃ ಗರಗವು ವಿಜಯನಗರ ಪೂರ್ವದ ಗ್ರಾಮವಾಗಿರಬಹುದು.

**೮. ನಂದಿಬಂಡೆ (ಪ್ರಾಣಿವಾಚಿ):** ನಂದಿಬಂಡೆ ಗ್ರಾಮವು, ಕ್ರಿ.ಶ. ೧೫೫೯ರ ಶಾಸನದಲ್ಲಿ 'ನಂದಿಯಬಂಡೆ' ಎಂದು ಉಲ್ಲೇಖಗೊಂಡಿದೆ.[೧೪೯] ಸ್ಥಳೀಯರು ತಿಳಿಸುವಂತೆ ಗ್ರಾಮದ ಪೂರ್ವದಿಕ್ಕಿನಲ್ಲಿ ನಂದಿಯಾಕಾರದ ಬಂಡೆಯೊಂದಿದೆ(ಬಸವಣ್ಣಗುಡ್ಡ). ಆದರಿಂದಾಗಿಯೇ ಈ ಊರಿಗೆ 'ನಂದಿಬಂಡೆ' ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ. ಈ ಹೆಸರು ಬಹುಶಃ ಅಲ್ಲಿನ ಬೆಟ್ಟ, ಗುಡ್ಡಗಳ ಆಕೃತಿ ಅಥವಾ ಲಕ್ಷಣವನ್ನು ಆಧರಿಸಿ ಬಂದಿರಬೇಕು.

**೯. ಗೊಲ್ಲರಹಳ್ಳಿ (ಜನಾಂಗವಾಚಿ):** ಹಿಂದೆ ಗೊಲ್ಲರಹಳ್ಳಿಯಲ್ಲಿ ಹೆಚ್ಚು ಮಂದಿ ಗೊಲ್ಲರಿದ್ದು, ಇಲ್ಲೆಲ್ಲಾ ಅವರ ಹಟ್ಟಿಗಳಿದ್ದವಂತೆ. ಅವರ ಹಟ್ಟಿಗಳಿಂದಾಗಿ ಆ ಊರಿಗೆ 'ಗೊಲ್ಲರಹಟ್ಟಿ' ಅಥವಾ 'ಗೊಲ್ಲರಹಳ್ಳಿ' ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ.

**೧೦. ವ್ಯಾಸನಕೆರೆ (ವ್ಯಕ್ತಿವಾಚಕ ಪುರುಷ):** ವ್ಯಾಸನಕೆರೆಗೆ ಸಂಬಂಧಿಸಿದಂತೆ, ಈ ಗ್ರಾಮಕ್ಕೆ ವ್ಯಾಸಮಹರ್ಷಿಗಳು ಬಂದಿದ್ದರಿಂದ ಇಲ್ಲಿಗೆ ವ್ಯಾಸನಕೆರೆ ಎಂಬ ಹೆಸರು ಬಂತೆಂಬ ಪ್ರತೀತಿ ಇದೆ. ಬಹುಶಃ ವ್ಯಾಸರಾಯರ ಹೆಸರಿನ ಕೆರೆಯಿಂದಾಗಿ ಆ ಸ್ಥಳದ ಜನವಸತಿಗೆ 'ವ್ಯಾಸನಕೆರೆ' ಎಂಬ ಹೆಸರು ಬಂದಿರಬಹುದು.

**೧೧. ತಿಮ್ಮಲಾಪುರ (ವ್ಯಕ್ತಿವಾಚಕ ಸ್ತ್ರೀ, ಪುರುಷ):** ಕೃಷ್ಣದೇವರಾಯನ ಮಹಾಮಂತ್ರಿಯಾಗಿದ್ದ ತಿಮ್ಮರಸಯ್ಯನು ತನ್ನ ಹೆಂಡತಿ ತಿರುಮಲಾಂಬೆಯ ಹೆಸರಿನಲ್ಲಿ 'ತಿರುಮಲಾಪುರ' ಎಂಬ ಗ್ರಾಮವನ್ನು ಕಟ್ಟಿಸಿದ. ತಿರುಮಲಾಪುರವು ಮುಂದೆ 'ತಿಮ್ಮಾಪುರ', 'ತಿಮ್ಮಲಾಪುರ'ವಾಯಿತೆಂದು ತಿಳಿಯುತ್ತದೆ.

ತಿಮ್ಮಲಾಪುರವು, ಕ್ರಿ.ಶ. ೧೬ನೆಯ ಶತಮಾನದ ಶಾಸನಗಳಲ್ಲಿ 'ತಿಮ್ಮಾಪುರ'ವೆಂದು ಉಲ್ಲೇಖಿಸಲ್ಪಟ್ಟಿದೆ.[೧೫೦] ಶಾಸನಗಳಲ್ಲಿ ಉಲ್ಲೇಖಗೊಂಡ ತಿಮ್ಮಾಪುರವು ನಂತರದ ದಿನಗಳಲ್ಲಿ 'ತಿಮ್ಮಲಾಪುರ'ವೆಂದಾಯಿತು.

**೧೨. ಪೋತಲಕಟ್ಟೆ (ಸ್ಥಳವಾಚಿ):** ವಿಜಯನಗರದ ಅರಸ ಅಚ್ಯುತದೇವರಾಯನ ಮಾಂಡಳೀಕನಾಗಿದ್ದ ಬಯಕಾರ ರಾಮಪ್ಪಯ್ಯನು, ಕ್ರಿ.ಶ. ೧೫೩೯ರಲ್ಲಿ ತನ್ನ ಮಗ ಅಕ್ಕಪ್ಪನಿಗೆ ಪುಣ್ಯವಾಗಲೆಂದು ಅವನ ಹೆಸರಿನಲ್ಲಿ 'ಅಕ್ಕಸಮುದ್ರ' ಎಂಬ ಕೆರೆಯನ್ನು ಕಟ್ಟಿಸುತ್ತಾನೆ. ಈ ಕೆರೆಯನ್ನು ಶಾಸನಗಳಲ್ಲಿ 'ಅಂಕಸಮುದ್ರ' ಎಂದು ಕರೆಯಲಾಗಿದೆ.[೧೫೧] ಕೆರೆಯನ್ನು ಆಧರಿಸಿ ಜನವಸತಿ ಹುಟ್ಟಿಕೊಂಡಿತು. ಸ್ಥಳೀಯರು ತಿಳಿಸುವಂತೆ, ಈಗ್ಗೆ ೩೦೦ ವರ್ಷಗಳ ಹಿಂದೆ ಜನರು ಕಾರಣಾಂತರಗಳಿಂದ ಹಳೆಯ ಊರನ್ನು ಬಿಟ್ಟು ಪಕ್ಕದಲ್ಲೇ ಹೊಸ ನೆಲೆಯನ್ನು ಮಾಡಿಕೊಂಡರು. ಹೊಸ ನೆಲೆಗೆ 'ಪೋತಲಕಟ್ಟೆ' ಎಂದು ಕರೆಯಲಾಯಿತೆಂದು ತಿಳಿಸುತ್ತಾರೆ.

**೧೩. ವೆಂಕಟಾಪುರ (ವ್ಯಕ್ತಿವಾಚಿ ಹಾಗೂ ದೈವವಾಚಿ):** ವೆಂಕಟಾಪುರ ಗ್ರಾಮವು ತುಂಗಭದ್ರಾ ಜಲಾಶಯದಲ್ಲಿ ಮುಳುಗಿದ್ದು, ಅಲ್ಲಿನ ನಿವಾಸಿಗಳು ಹೊಸ ನೆಲೆಯನ್ನು ಮಾಡಿಕೊಂಡು

ಅದನ್ನು 'ವೆಂಕಟಾಪುರ'ವೆಂಬ ಹೆಸರಿನಿಂದ ಕರೆದುಕೊಂಡಿದ್ದಾರೆ. ಹಳೆಯ ಊರಿನಲ್ಲಿದ್ದ ವಿಷ್ಣುದೇವಾಲಯದ ವಾಸ್ತು ಭಾಗಗಳನ್ನು(ಕಂಬ, ಗರುಡಕಂಬ, ಲಕ್ಷ್ಮಿ, ಉಬ್ಬುಶಿಲ್ಪವಿರುವ ತೊಲೆಗಳು) ಹೊಸ ವೆಂಕಟಾಪುರಕ್ಕೆ ಸ್ಥಳಾಂತರ ಮಾಡಲಾಗಿದೆ. ಆದ್ದರಿಂದ ವೆಂಕಟಾಪುರ ಎಂಬ ಸ್ಥಳನಾಮವು, ಹಳೆಯ ಊರಿನಲ್ಲಿದ್ದ ವಿಷ್ಣುದೇವಾಲಯದಿಂದ ಬಂದಿದೆ.

**೧೪. ಡಣಾಯಕನಕೆರೆ (ವ್ಯಕ್ತಿ ವಾಚಕ ಪುರುಷ)**: ಸ್ಥಳೀಯರು ತಿಳಿಸುವಂತೆ, ಡಣಾಯಕನಕೆರೆ ಗ್ರಾಮದ ಮೊದಲ ಹೆಸರು 'ಬಿದಿರಹಳ್ಳಿ'. ಇಲ್ಲಿ ವಾಸವಿದ್ದ ಮುದ್ದ ಎಂಬ ದಂಡನಾಯಕನು ವಿಶಾಲವಾದ ಕೆರೆಯೊಂದನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಮುದ್ದನ ತ್ಯಾಗ ಗುಣಗಳಿಂದಾಗಿ ಕೆರೆಗೆ 'ದಂಡನಾಯಕನಕೆರೆ' ಅಥವಾ 'ಡಣಾಯಕನಕೆರೆ' ಎಂದು ಕರಯಲಾಯಿತು. ಕೆರೆಗೂ ಅಲ್ಲಿನ ವಸತಿ ನೆಲೆಗೂ ಇದ್ದ ಸಂಬಂಧವನ್ನಾಧರಿಸಿ ಆ ಗ್ರಾಮವನ್ನು 'ಡಣಾಯಕನಕೆರೆ' ಎಂಬ ಹೆಸರಿನಿಂದ ಕರೆಯಲಾಯಿತೆಂದು ತಿಳಿದುಬರುತ್ತದೆ.

**ಇನ್ನೊಂದು ಹೇಳಿಕೆಯಂತೆ,** ವಿಜಯನಗರದ ಅರಸ ಅಚ್ಯುತರಾಯ ವಡ್ಡರನ್ನು ಕರೆಯಿಸಿ ಬಿದಿರಹಳ್ಳಿಯಲ್ಲಿ ವಿಶಾಲವಾದ ಕೆರೆಯೊಂದನ್ನು ಕಟ್ಟಿಸಿದ. ಕೆರೆಕಟ್ಟುವ ಮೊದಲು ವಡ್ಡರಿಗೆ, ಅರಸನು ಕೆರೆಕಟ್ಟುವ ಕೆಲಸ ಸುಸೂತ್ರವಾಗಿ ಪೂರೈಸಿದರೆ ಕೊಳಗ ತುಂಬ ಹೊನ್ನು ಅಳೆದುಕೊಡುವುದಾಗಿ ಮಾತುಕೊಟ್ಟಿದ್ದ. ಅದರಂತೆ ಕೆರೆಯ ಕೆಲಸ ಪೂರೈಸಿದ ವಡ್ಡರು, ಅರಸನಲ್ಲಿಗೆ ಬಂದು ತಮ್ಮ ಮಾತನ್ನು ನಡೆಸಿಕೊಡಿರೆಂದು ಕೇಳಿಕೊಳ್ಳುತ್ತಾರೆ. ಗರ್ವಿಷ್ಟನಾದ ರಾಜನು ಅದನ್ನು ಅಷ್ಟು ಗಂಭೀರವಾಗಿ ಪರಿಗಣಿಸದೇ ಹಸುವಿನ ಗೊರಸಿನಿಂದ(ಹಸುವಿನ ಗೊರಸಿಗೂ 'ಕೊಳಗ' ಎನ್ನುವುದಿದೆ) ಚಿನ್ನ ಅಳೆದುಕೊಡಲು ಮುಂದಾಗುತ್ತಾನೆ. ಇದರಿಂದ ಕುಪಿತರಾದ ವಡ್ಡರು ಆತನ ರಾಜ್ಯಕ್ಕೆ ದುರ್ಭಿಕ್ಷ ಬರಲೆಂದು ಶಪಿಸುತ್ತಾರೆ. ಶಾಪದ ಪರಿಣಾಮ ಕ್ರಮೇಣ ಗೋಚರವಾಗಲು ಪುರೋಹಿತರ ಸಲಹೆಯಂತೆ, ಅದರ ಪರಿಹಾರಾರ್ಥವಾಗಿ ಅರಸ ೧೨ ವರ್ಷಗಳ ಕಾಲ ತೀರ್ಥಯಾತ್ರೆಗೆ ಹೋಗುವ ಕಾಲಾವಧಿಯಲ್ಲಿ ಮಂತ್ರಿಗಳ ಸೂಚನೆಯ ಮೇರೆಗೆ, ರಾಜ್ಯವನ್ನು ನೋಡಿಕೊಳ್ಳುವ ಹೊಣೆಯನ್ನು 'ಬಿದಿರಹಳ್ಳಿ'ಯ ದಂಡನಾಯಕ ಮುದ್ದನಿಗೆ ವಹಿಸುತ್ತಾನೆ. ಅರಸನು ೧೨ ವರ್ಷಗಳ ಕಾಲ ಪವಿತ್ರ ತೀರ್ಥಕ್ಷೇತ್ರಗಳನ್ನು ದರ್ಶಿಸಿ, ದೇಶಾಟನೆಯಿಂದ ಮರಳಿ ಬರಬೇಕಾದರೆ ಮುದ್ದನು, ರಾಜ್ಯದಲ್ಲಿ ಕೆರೆ, ಬಾವಿ, ದೇವಸ್ಥಾನಗಳನ್ನು ಕಟ್ಟಿಸಿ ರಾಜ್ಯವನ್ನು ಸುಭಿಕ್ಷೆಗೊಳಿಸಿರುತ್ತಾನೆ. ಇದನ್ನು ಕಂಡು ಮೆಚ್ಚಿ ಅರಸನು, ಅತ್ಯಂತ ಸಂತೋಷಭರಿತನಾಗಿ ಮುದ್ದ ದಂಡನಾಯಕನನ್ನು ಸನ್ಮಾನಿಸಲು ಕರೆ ಕಳುಹಿಸುತ್ತಾನೆ. ಇದೇ ವೇಳೆಯಲ್ಲಿ ಯಾರೋ ಕಿಡಿಗೇಡಿಗಳು ದುರುದ್ದೇಶದಿಂದ ಮುದ್ದನಿಗೆ ಸುಳ್ಳು ಸುದ್ದಿ ಹಬ್ಬಿಸುತ್ತಾರೆ. ಈ ರೀತಿಯ ಕೆಲಸ ಕಾರ್ಯಗಳಿಗಾಗಿ ರಾಜ್ಯದ ಬೊಕ್ಕಸದ ಹಣವನ್ನು ಪೋಲು ಮಾಡಿದ್ದರಿಂದ ಅರಸನು ಮುದ್ದನನ್ನು ಶಿಕ್ಷಿಸಲು ಕರೆ ಕಳುಹಿಸಿದ್ದಾನೆ ಎಂದು ಹೇಳುತ್ತಾರೆ. ಇದರಿಂದ ನೊಂದ ಮುದ್ದನು ತಾನೇ ತನ್ನ ವಜ್ರದುಂಗುರವನ್ನು ತಿಂದು ಜೀವ ತೆತ್ತನು. ಹಾಗಾಗಿಯೇ ಈ ಊರಿಗೆ 'ದಂಡನಾಯನಕೆರೆ', 'ಡಣಾಯನಕೆರೆ ಎಂಬ ಹೆಸರು ಪ್ರಾಪ್ತವಾಯಿತಂತೆ.

**೧೫. ಚಿಲಕನಹಟ್ಟಿ:** ಚಿಲಕನಹಟ್ಟಿಯು, ಕ್ರಿ.ಶ. ೧೫೩೪ರ ಹಂಪಿ ಶಾಸನದಲ್ಲಿ 'ಚಂನಹಟ' ಎಂದು ಉಲ್ಲೇಖಗೊಂಡಿದೆ.[೧೫೨] ಚಂನಹಟಯು ಕಾಲಾಂತರದಲ್ಲಿ 'ಚಿಲಕನಹಟ್ಟಿ' ಆಗಿರಬಹುದು.

**೧೬. ಬ್ಯಾಲಕುಂದಿ (ವೃಕ್ಷವಾಚಿ):** ಬ್ಯಾಲಕುಂದಿ ಗ್ರಾಮ ಪರಿಸರದಲ್ಲಿ ಹೆಚ್ಚು ಬೆಳವಲ ಮರಗಳು ಕಾಣಬರುವುದರಿಂದ ಗ್ರಾಮವನ್ನು 'ಬ್ಯಾಲಕುಂದಿ' ಎಂದು ಕರೆಯಲಾಗಿದೆ.

**೧೭. ಅಯ್ಯನಹಳ್ಳಿ (ವ್ಯಕ್ತಿವಾಚಿ):** ಅಯ್ಯನಹಳ್ಳಿ ಸ್ಥಳನಾಮ ಕುರಿತಂತೆ, ಹಿಂದೆ ಈ ಗ್ರಾಮದಲ್ಲಿ ಹೆಚ್ಚಾಗಿ ಜಂಗಮರು ವಾಸಿಸುತ್ತಿದ್ದರಂತೆ. ಜಂಗಮರು ಲಿಂಗಾಯತ ಧರ್ಮದ ಧಾರ್ಮಿಕ ಗುರುಗಳು. ಇವರು ವಾಸಿಸುತ್ತಿದ್ದ ನೆಲೆಯನ್ನು 'ಅಯ್ಯನೋರಳ್ಳಿ' ಎಂದು ಕರೆಯಲಾಗುತ್ತಿತ್ತು. ಮುಂದೆ ಅಯ್ಯನೋರಳ್ಳಿ, 'ಅಯ್ಯನಹಳ್ಳಿ' ಆಗಿ ಕರೆಸಿಕೊಂಡಿತು.

## ೩.೪. ನಂಬಿಕೆಗಳು

ನಂಬಿಕೆಗಳು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷಣೆಗಳು ಮುಖ್ಯವಾಗುತ್ತವೆ. ನಂಬಿಕೆಗಳು ಜನಪದರ ಜೀವನಾನುಭವದ ಉತ್ಪನ್ನಗಳು. ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ ಏರ್ಪಟ್ಟಿದೆ. ಅದು ಸೂಚನೆ, ನಿಯಮ, ವಿಧಿ-ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ನಂಬಿಕೆಯು ಸಂಪ್ರದಾಯ, ಆಚರಣೆಗಳೊಂದಿಗೆ ಅಂತರ್‌ಸಂಬಂಧವನ್ನು ಹೊಂದಿದ್ದು, ಆ ಮೂಲಕ ಕ್ರಿಯಾರೂಪವನ್ನು ತಾಳುತ್ತದೆ. ಅದು ಜನಪದ ಪ್ರಕಾರಗಳಾದ ಗಾದೆ, ಕತೆ, ಐತಿಹ್ಯ, ಪುರಾಣ, ಜನಪದ ವೈದ್ಯ, ಜನಪದ ಧರ್ಮ ಇವುಗಳೊಂದಿಗೆ ಒಳಸಂಬಂಧವನ್ನು ಹೊಂದಿದ್ದು, ಸಂಕೀರ್ಣ ಸ್ವರೂಪದ್ದಾಗಿ ಕಂಡುಬರುತ್ತದೆ.

ಆರ್.ಎಸ್. ಬಾಗ್ಸ್‌ರವರು ನಂಬಿಕೆಗಳನ್ನು ವೈಜ್ಞಾನಿಕ ಬಗೆಯಲ್ಲಿ ಅರ್ಥೈಸಿದ್ದಾರೆ. "ನಂಬಿಕೆಗಳು ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಫಲವಾಗಿ ಮಾಡುವ ಕಾರ್ಯಕಾರಣ ಸಂಬಂಧ ಉಳ್ಳ ಸಾಂಪ್ರದಾಯಿಕ ಭಾವನೆ"[೧೫೩] ಎಂದಿದ್ದಾರೆ.

ದೇ. ಜವರೇಗೌಡ ಅವರು ನಂಬಿಕೆಯನ್ನು ಕುರಿತು "ದೇಶ, ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಜ್ಞಾನ, ದೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ" ಎಂದಿದ್ದಾರೆ. ನಂಬಿಕೆ ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಅದೇ ಅವನ ಜೀವನವನ್ನು ರೂಪಿಸುತ್ತಿದೆ. ಅದೇ ಸಂಸ್ಕೃತಿಯ ತಿರುಳು ಎನ್ನಬೇಕಾಗುತ್ತದೆ. ಜಗತ್ತಿನ ಶ್ರೇಷ್ಠ ವಿಜ್ಞಾನಿಗಳು ಸಹ ದಿನ ಬೆಳಗಾದರೆ ನಂಬಿಕೆಗಳಿಗೆ ಆತುಕೊಂಡಿರುತ್ತಾರೆ.[೧೫೪]

ಡಿ.ಕೆ. ರಾಜೇಂದ್ರ ಅವರು "ಪುರಾತನ ಕಾಲದಿಂದ ಮಾನವನ ನಾಗರಿಕತೆ, ಪ್ರೌಢ ಜ್ಞಾನ ಮತ್ತು ಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಮಾನವನ ಅವಿರತ ಮುನ್ನಡೆಯ ಹಾದಿಯಲ್ಲಿ ಬಹುಕಾಲದಿಂದಲೂ ಬೆಳೆದುಬಂದ ನಂಬಿಕೆಗಳು ಅಂತರ್ಗತವಾಗಿರುವುದು ಕಂಡು ಬರುತ್ತದೆ. ನಂಬಿಕೆಗಳು ಕೆಲವೊಮ್ಮೆ ತಪ್ಪು ತಿಳುವಳಿಕೆ, ಅಜ್ಞಾನ ಮತ್ತು ಅಂಧಕಾರದಿಂದ ಉದ್ಭವಿಸುತ್ತವೆ. ಮಾನವನ ವಿಚಾರಶಕ್ತಿ ಕುಸಿದಿರುವಲ್ಲಿ ಮತ್ತು ಜ್ಞಾನ ಸಂಪತ್ತು ಕಿರಿದಾಗಿರುವಲ್ಲಿ ಈ ನಂಬಿಕೆಗಳು ಹುಟ್ಟುತ್ತವೆ"[೧೫೫] ಎಂದು ನಂಬಿಕೆಗಳ ಹುಟ್ಟನ್ನು ತಿಳಿಸುತ್ತಾರೆ.

ಬಿ.ಎ. ವಿವೇಕ ರೈ ಅವರು ನಂಬಿಕೆಗಳನ್ನು ಕುರಿತಂತೆ "ಪ್ರಾಚೀನ ಮಾನವನ ಪರಿಮಿತ ತಿಳುವಳಿಕೆಯು ನಂಬಿಕೆಗಳಿಗೆ ಮೂಲ ವಸ್ತುಸ್ಥಿತಿಯೊಡನೆ ಅಸಂಬದ್ಧ, ಅವೈಜ್ಞಾನಿಕ ಸಂಬಂಧವನ್ನು ಕಲ್ಪಿಸಿದಾಗ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ತಪ್ಪು ತಿಳುವಳಿಕೆ ಮತ್ತು ಅಜ್ಞಾನದಿಂದ ಹೆಚ್ಚಿನ ನಂಬಿಕೆಗಳು ಜನ್ಮ ತಾಳುತ್ತವೆ"[೧೫೬] ಎಂದಿದ್ದಾರೆ.

ಜಿ.ವಿ. ದಾಸೇಗೌಡ ಅವರು "ಭೂಮಿಯ ಮೇಲೆ ಎಂದು ಮಾನವನ ಉಗಮವಾಯಿತೋ ಅಂದೇ ಮಾನವನ ಮನೋಮಂದಿರದಲ್ಲಿ ಅವು ಮೂಡಿದವು. ಮಾನವನ ಭಾವನೆಗಳ ಅಭಿವ್ಯಕ್ತಿಯ ಮಾಧ್ಯಮವಾದ ಭಾಷೆ ಹುಟ್ಟಿದಾಗ ನಂಬಿಕೆಗಳೂ ಅಭಿವ್ಯಕ್ತಿ ಪಡೆದು ಜನಜೀವನದಲ್ಲಿ ಚಲಾವಣೆ ಹೊಂದಿದವು. ನಂಬಿಕೆಗಳ ಉಗಮಕ್ಕೆ ಕಾರಣ ಮಾನವನ ಮಾನಸಿಕ ಆಂದೋಲನ. ಮಾನಸಿಕ ಆಂದೋಲನಕ್ಕೆ ಮಾನವ ಒಳಗಾಗಲು ನೈಸರ್ಗಿಕ ಶಕ್ತಿ ಪ್ರಭಾವ ಬೀರಿದೆ. ಯಾವುದೋ ಒಂದು ಅವ್ಯಕ್ತ ಶಕ್ತಿ ಜನತೆಯ ಬದುಕನ್ನು ನಿಯಂತ್ರಿಸುತ್ತದೆಯಾದ್ದರಿಂದ ಸಾಮಾನ್ಯ ಮತ್ತು ಅಸಾಮಾನ್ಯಗಳ ಬಗ್ಗೆ ಕಂಡುಬಂದ ವ್ಯತ್ಯಾಸಗಳೇ ನಂಬಿಕೆಗಳ ತಾಯಿ ಬೇರಾಯಿತು[೧೫೭] ಎಂದು ನಂಬಿಕೆಗಳ ಪ್ರಾಚೀನತೆಯ ಬಗ್ಗೆ ಹೇಳುತ್ತಾರೆ.

ಮಲ್ಲಿಕಾರ್ಜುನ.ಶಿ. ಲಠ್ಠೆ ಅವರು ನಂಬಿಕೆಗಳ ಉಗಮವನ್ನು ಕುರಿತಂತೆ ಈ ರೀತಿ ಹೇಳುತ್ತಾರೆ: "ನಂಬಿಕೆಗೆ ಬೇಕಾದುದು ಶ್ರದ್ಧೆ. ಆ ಶ್ರದ್ಧೆ ಅಂಧವಾದಾಗ ಅದು ನಂಬಿಕೆಯಾಗುತ್ತದೆ. ಅರ್ಥವಿಲ್ಲದ ತಿಳುವಳಿಕೆ, ಅಜ್ಞಾನಗಳೇ ನಂಬಿಕೆಗಳಿಗೆ ಮೂಲ. ಬಹಳಷ್ಟು ನಂಬಿಕೆಗಳು ಭಯ - ಭ್ರಮೆಗಳ ಮೇಲೆ ಹೆಣೆದುಕೊಂಡು ಬಂದಿವೆ. ಶ್ರೀ ಸಾಮಾನ್ಯನ ಚಂಚಲ ಚಿತ್ತದಲ್ಲಿ ಮೂಡಿಬರುವ ಒಂದು ಮಾನಸಿಕ ಸ್ಥಿತಿಯೆ ನಂಬಿಕೆಯ ಉಗಮಕ್ಕೆ ಕಾರಣವಾಗಿದೆ"[೧೫೮] ಎಂದಿದ್ದಾರೆ.

ಡಿ. ಲಿಂಗಯ್ಯ ಅವರು "ನಂಬಿಕೆಗಳು ಯಾವುದೋ ಒಂದು ಅವ್ಯಕ್ತ ಭಯ ಅಥವಾ ಆಂತಕವನ್ನು ಸೂಚಿಸುತ್ತವೆ. ಆದ್ದರಿಂದ ಇವು ಮಾನಸಿಕ ಸ್ಥಿತಿಗೆ ಸಂಬಂಧಿಸಿದಂಥವು ಯಾವುದೇ ವಿಷಯವನ್ನು ಕುರಿತು ಪರಿಮಿತ ತಿಳುವಳಿಕೆ ಬಹುತೇಕ ನಂಬಿಕೆಗಳ ಹುಟ್ಟಿಗೆ ಕಾರಣ. ಪ್ರಾಚೀನ ಮಾನಸಿಕ ಪರಿಮಿತ ತಿಳುವಳಿಕೆಯೇ ನಂಬಿಕೆಗಳಿಗೆ ಮೂಲ. ವಸ್ತು ಸ್ಥಿತಿಯೊಡನೆ ಅಸಂಬದ್ಧ, ಅವೈಜ್ಞಾನಿಕ ಸಂಬಂಧವನ್ನು ಕಲ್ಪಿಸಿದಾಗ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ತಪ್ಪು ತಿಳುವಳಿಕೆ ಮತ್ತು ಅಜ್ಞಾನದಿಂದ ನಂಬಿಕೆಗಳು ಜನ್ಮ ತಾಳುತ್ತವೆ"[೧೫೯] ಎಂದು ನಂಬಿಕೆಗಳ ಹುಟ್ಟಿನ ಬಗ್ಗೆ ತಿಳಿಸುತ್ತಾರೆ.

ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ತಿಳುವಳಿಕೆಯನ್ನು 'ನಂಬಿಕೆ' ಎನ್ನಬಹುದು. ನಂಬಿಕೆಗಳು ಹುಟ್ಟುತ್ತಲೇ ನಂಬಿಕೆಗಳಾಗಿ ಹುಟ್ಟುವುದಿಲ್ಲ. ಯಾವುದೋ ಒಂದು ಅನುಭವದ ಹಿನ್ನೆಲೆಯಲ್ಲಿ ಮೂಡಿಬಂದ ಜ್ಞಾನವೇ ಹೇಳಿಕೆಯ ರೂಪ ಪಡೆದುಕೊಂಡು ಪರಂಪರೆಯಲ್ಲಿ ನಂಬಿಕೆಯಾಗಿ ರೂಪುಗೊಂಡಿರುತ್ತವೆ. ಸಾಮಾನ್ಯವಾಗಿ ಮನುಷ್ಯ ಯಾವ ವಿಷಯದ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಾನೋ ಅಂತಹ ವಿಷಯಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ನಂಬಿಕೆಗಳು ರೂಪುಗೊಂಡಿರುತ್ತವೆ. ಪ್ರಾಕೃತಿಕ ರಹಸ್ಯವನ್ನು ಭೇದಿಸುವಲ್ಲಿ ಆದಿಮಾನವನ ವಿಫಲತೆ, ಹುಟ್ಟು, ಬದುಕು, ಸಾವಿನ ನಿಗೂಢತೆಯನ್ನು ಅರ್ಥೈಸಲಾಗದ ಆತಂಕ, ಜಾತಿ ಮತ್ತು ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ ಮುಂತಾದ ವಿಷಯಗಳ ಹಿನ್ನೆಲೆಯಲ್ಲಿ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ.

ನಂಬಿಕೆಗಳು ಇಂಥವೇ ಹಿನ್ನೆಲೆಯಿಂದ ಹುಟ್ಟುತ್ತವೆ ಎಂದು ನಿರ್ಧರಿಸುವುದು ಕಷ್ಟ. ಇವುಗಳ ಹುಟ್ಟಿಗೆ ನಾನಾ ಕಾರಣಗಳಿರಬಹುದು. ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿ ಬೆಳೆದು ಉಳಿದುಕೊಂಡು ಬಂದಿವೆ. ಅವುಗಳ ಬೇರು ಜನಪದ ಸಂಸ್ಕೃತಿಯ ಅಂತರಾಳದಲ್ಲಿ ನೆಲೆಗೊಂಡಿವೆ. ಮೂಲ ಸಂಸ್ಕೃತಿಯ ಹುಟ್ಟಿನೊಂದಿಗೆ ಇಂತಹ ನಂಬಿಕೆಗಳು ತಲೆ ಎತ್ತಿದವು. ಜನಪದರ ನಿತ್ಯಬದುಕಿಗೂ ಈ ನಂಬಿಕೆಗಳಿಗೂ ನಿಕಟವಾದ ನಂಟಿದೆ. ಅವುಗಳನ್ನು ಪ್ರತ್ಯೇಕಿಸಲು ಸಾಧ್ಯವೇ ಇಲ್ಲ ಅನ್ನುವಷ್ಟರಮಟ್ಟಿಗೆ ಅವು ಒಂದಕ್ಕೊಂದು ಪೂರಕವಾಗಿವೆ. ಹೀಗಾಗಿ ಜನಪದರ ಆಂತರಿಕ ಮನೋಭಾವವನ್ನು ಹಾಗೂ ಅವರ ಮೂಲ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಮುಖ್ಯ ಸಾಧನಗಳಲ್ಲಿ ಈ ನಂಬಿಕೆಗಳು ಪ್ರಮುಖ ಪಾತ್ರ ವಹಿಸುತ್ತವೆ.

ನಂಬಿಕೆಗಳ ವರ್ಗೀಕರಣದ ಬಗ್ಗೆ ಖಚಿತವಾದ ಒಂದು ಅಭಿಪ್ರಾಯವಿಲ್ಲ. ಅವುಗಳ ಸಂಕೀರ್ಣ ಸ್ವರೂಪದಿಂದಾಗಿ ವಿಂಗಡಣೆ ತುಂಬ ತೊಡಕಾಗಿದೆ. ನಂಬಿಕೆಗಳ ಸ್ವರೂಪ ಹಾಗೂ ಕಾರ್ಯಕ್ಕೆ ಅನುಗುಣವಾಗಿ ಹಲವು ಬಗೆಯ ವರ್ಗೀಕರಣಗಳು ಚಾಲ್ತಿಯಲ್ಲಿವೆ.

ಆರ್.ಎಸ್. ಬಾಗ್ಸ್ ಅವರು ಜನಪದ ನಂಬಿಕೆಗಳನ್ನು ವೈಜ್ಞಾನಿಕ ಬಗೆಯಲ್ಲಿಯೇ ಸಮಾವೇಶಗೊಳಿಸಿದ್ದಾರೆ. ಅವರು ಜಾನಪದವನ್ನು ನಾಲ್ಕು ಬಗೆಯಲ್ಲಿ ವಿಭಾಗಿಸಿ ಪುರಾಣ, ಐತಿಹ್ಯ, ಕತೆ, ಗೀತೆಗಳನ್ನು ಸಾಹಿತ್ಯಿಕ ಬಗೆಯಲ್ಲಿ ಸೇರಿಸಿದ್ದಾರೆ. ಗಾದೆ, ಒಗಟು, ನುಡಿಗಟ್ಟುಗಳನ್ನು ಭಾಷಿಕ ಬಗೆಯಲ್ಲೂ, ನೃತ್ಯ, ಸಂಗೀತ, ಕಲೆ, ಆಟಗಳನ್ನು ಕ್ರಿಯಾತ್ಮಕ ಬಗೆಯಲ್ಲೂ ಹಾಗೂ ಜನಪದ ನಂಬಿಕೆ, ಆಚಾರ, ವೈದ್ಯ ಮೊದಲಾದವುಗಳನ್ನು ವೈಜ್ಞಾನಿಕ ಬಗೆಯಲ್ಲಿ ವಿಭಜಿಸಿದ್ದಾರೆ.[೧೦]

ವೇಲ್ಯಾಂಡ್ ಅವರು ನಂಬಿಕೆಗಳನ್ನು ಏಳು ಬಗೆಗಳಲ್ಲಿ ವರ್ಗೀಕರಿಸಿದ್ದಾರೆ.

೧. ಮನುಷ್ಯ ಶರೀರ ಹಾಗೂ ವೈದ್ಯಕ್ಕೆ ಸಂಬಂಧಿಸಿದವು.

೨. ಜೀವನ ಚಕ್ರಕ್ಕೆ ಸಂಬಂಧಿಸಿದವು.

೩. ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳು.

೪. ಮಾಟ ಮತ್ತು ಮಂತ್ರ ವಿದ್ಯೆ.

೫. ಭೂತ - ಪ್ರೇತ, ಸಾವು ಮುಂತಾದವುಗಳಿಗೆ ಸಂಬಂಧಿಸಿದವು.

೬. ಸಂಖ್ಯೆಗಳು ಮತ್ತು ಖಗೋಳ ಸಂಗತಿಗಳು.

೭. ಬೇಸಾಯಕ್ಕೆ ಸಂಬಂಧಿಸಿದವು.

ಇದರೊಳಗೆ ಹವಾಮಾನ, ಪ್ರಾಣಿಸಾಕಣೆ, ಕೃಷಿ, ಬೇಟೆ ಇತ್ಯಾದಿ ಒಳಗೊಳ್ಳುತ್ತವೆ.[೧೬೧] ಈ ಮೇಲ್ಕಂಡ ವರ್ಗೀಕರಣಕ್ಕೆ ಸೇರದ ಅನೇಕ ನಂಬಿಕೆಗಳಿವೆ. ಒಂದರ ಒಳಗೆ ಇನ್ನೊಂದು ಒಳಗಾದವು ಇವೆ.

ಜಿ.ವಿ. ದಾಸೇಗೌಡ ಅವರು ಅತಿಮಾನುಷ, ಮಾನುಷ, ಪ್ರಾಣಿ, ಪ್ರಕೃತಿ, ಕೌಟುಂಬಿಕ ಹಾಗೂ ಸಂಕೀರ್ಣ.[೧೬೨] ಹೀಗೆ ಆರು ವಿಭಾಗಗಳನ್ನು ಮಾಡಿಕೊಂಡಿದ್ದಾರೆ.

ದೇ. ಜವರೇಗೌಡ ಅವರು ದಕ್ಷಿಣ ಭಾರತದ ನಂಬಿಕೆಗಳನ್ನು ಗಮನದಲ್ಲಿಟ್ಟುಕೊಂಡು ನಂಬಿಕೆಗಳನ್ನು ಹತ್ತು ಗುಂಪುಗಳಾಗಿ ವಿಂಗಡಿಸಿದ್ದಾರೆ.

೧. ಧಾರ್ಮಿಕ ನಂಬಿಕೆಗಳು, ೨. ಐತಿಹ್ಯಾತ್ಮಕ ನಂಬಿಕೆಗಳು, ೩. ಗೃಹ ನಂಬಿಕೆಗಳು, ೪. ವೈದ್ಯಕೀಯ ನಂಬಿಕೆಗಳು, ೫. ಔದ್ಯೋಗಿಕ ನಂಬಿಕೆಗಳು, ೬. ನೈಸರ್ಗಿಕ ನಂಬಿಕೆಗಳು, ೭. ಪ್ರಾಣಿ ನಂಬಿಕೆಗಳು, ೮. ಮಂತ್ರ ಸಂಬಂಧಿ ನಂಬಿಕೆಗಳು, ೯. ಜ್ಯೋತಿಷ್ಯಾತ್ಮಕ ನಂಬಿಕೆಗಳು, ೧೦. ಸಂಕೀರ್ಣ ನಂಬಿಕೆಗಳು.[೧೬೩]

ಡಿ.ಕೆ. ರಾಜೇಂದ್ರ ಅವರು ನಂಬಿಕೆಗಳ ಉಗಮವನ್ನು ಧಾರ್ಮಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕ ಎಂದು ಮೂರು ರೀತಿಯಲ್ಲಿ ಗುರುತಿಸಿ ಅವುಗಳನ್ನು ವೈಜ್ಞಾನಿಕ ಮತ್ತು ಅವೈಜ್ಞಾನಿಕ ಎಂದು ಎರಡು ಬಗೆಯಲ್ಲಿ ವಿಂಗಡಿಸಿದ್ದಾರೆ.[೧೬೪]

ಮಲ್ಲಿಕಾರ್ಜುನ ಶಿ. ಲಠ್ಠೆ ಅವರು ನಂಬಿಕೆಗಳ ಅಧ್ಯಯನದ ಅನುಕೂಲಕ್ಕಾಗಿ ಹನ್ನೆರಡು ಬಗೆಯಾಗಿ ವಿಭಾಗಿಸಿದ್ದಾರೆ. ೧. ಗೃಹ ಜೀವನ, ೨. ದೇವರು, ೩. ಮದುವೆ ಮಂಗಲ, ೪. ಗರ್ಭಿಣಿ, ೫. ಕೂಸು, ೬. ವಾರ-ತಿಥಿ-ನಕ್ಷತ್ರ, ೭. ಕನಸು, ೮. ವೃತ್ತಿ, ೯. ರೋಗ, ೧೦. ಶವ, ೧೧ ದೆವ್ವ, ೧೨. ಪಶು-ಪಕ್ಷಿ-ಪ್ರಾಣಿ.[೧೬೫]

ಮಂಜುನಾಥ ಬೇವಿನಕಟ್ಟಿ ಅವರು ನಂಬಿಕೆಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವರ್ಗೀಕರಿಸಿದ್ದಾರೆ. ೧. ಆಶಯ ಪರವಾಗಿ, ೨. ಸ್ಥಿತಿಪರವಾಗಿ.

ಆಶಯಪರವಾಗಿ ವರ್ಗೀಕರಿಸುವ ನಂಬಿಕೆಗಳನ್ನು ಮತ್ತೆ ಮೂರು ಉಪವರ್ಗಗಳಾಗಿ ವಿಂಗಡಿಸಿದ್ದಾರೆ. ೧. ವ್ಯಕ್ತಿಸಂಬಂಧಿ, ೨. ವಸ್ತುಸಂಬಂಧಿ, ೩. ಘಟನಾಸಂಬಂಧಿ

ಈ ವರ್ಗೀಕರಣದಲ್ಲಿ ನಂಬಿಕೆಗಳು ಪ್ರತಿನಿಧಿಸುವ ಅಂಶಗಳನ್ನು ಆಧಾರವಾಗಿಟ್ಟುಕೊಂಡು, ಅವುಗಳ ಆಶಯಗಳನ್ನು ಅನುಸರಿಸಿ ವರ್ಗೀಕರಣ ಮಾಡಲಾಗಿದೆ.

ಸ್ಥಿತಿ ಪರವಾದ ನಂಬಿಕೆಗಳನ್ನು ನಾಲ್ಕು ಉಪವರ್ಗಗಳಾಗಿ ವಿಂಗಡಿಸಿದ್ದಾರೆ.

೧. ಧಾರ್ಮಿಕ ನಂಬಿಕೆಗಳು, ೨. ಸಾಮಾಜಿಕ ನಂಬಿಕೆಗಳು, ೩. ಆರ್ಥಿಕ ನಂಬಿಕೆಗಳು, ೪. ಸಾಂಸ್ಕೃತಿಕ ನಂಬಿಕೆಗಳು.[೧೬೬]

ನಂಬಿಕೆಗಳಲ್ಲಿ ಯಾವುದನ್ನೂ ಅರ್ಥರಹಿತವೆಂದು ತಿರಸ್ಕರಿಸುವುದು ಸರಿಯಲ್ಲ. ಒಂದು ನಂಬಿಕೆ ಯಾವ ಸಂದರ್ಭದಲ್ಲಿ ಹುಟ್ಟಿತು ಎಂಬುದು ನಮಗೆ ತಿಳಿದಿಲ್ಲದಿರಬಹುದು. ಆದರೆ, ಆ ಸಂದರ್ಭದ ಅನುಭವ, ನಂಬಿಕೆಯ ಮೂಲಕ ಇಂದಿನವರೆಗೂ ಪ್ರವಹಿಸಿಕೊಂಡು ಬಂದಿದೆ ಎಂಬುದಂತೂ ಸತ್ಯ. ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಈ ನಂಬಿಕೆ ಇಡಿಯಾಗಿ ಒಂದು ಸಮುದಾಯದ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗಿವೆ. ನಂಬಿಕೆ, ಸಂಪ್ರದಾಯ, ಆಚರಣೆಗಳು ಪರಸ್ಪರ ಸೋದರ ಸಂಬಂಧಿಯಾದವುಗಳು. ಇವುಗಳ ಸಂಬಂಧವನ್ನು ಯಾವುದು, ಏನು ಮತ್ತು ಹೇಗೆ ಎನ್ನುವ ನೆಲೆಯಲ್ಲಿಟ್ಟು ವಿಶ್ಲೇಷಿಸಬಹುದು.

ಸಂಪ್ರದಾಯದ ಬೀಜರೂಪದಲ್ಲಿ ಒಂದು ನಂಬಿಕೆ ಇದ್ದೇ ಇರುತ್ತದೆ. ಅಂದರೆ ಸಂಪ್ರದಾಯಗಳೆಲ್ಲವೂ ಬಹುತೇಕ ನಂಬಿಕೆಗಳಾಗಿರುತ್ತವೆ. ಇವುಗಳನ್ನು ವರ್ಗೀಕರಿಸಿದ ಮಾತ್ರಕ್ಕೆ ಕೇವಲ ಆ ವರ್ಗೀಕರಣಕ್ಕಷ್ಟೇ ನಂಬಿಕೆಗಳು ಸೀಮಿತವೆಂದಲ್ಲ. ಅಧ್ಯಯನ ದೃಷ್ಟಿಯಿಂದ ಮಾತ್ರ ಈ ವರ್ಗೀಕರಣ ಒಪ್ಪುವಂತಹದೇ ಹೊರತು ಇದನ್ನು ಮೀರಿ ಬೇರೆ ಬಗೆಯ ನಂಬಿಕೆಗಳು ಇಲ್ಲವೆಂದಾಗಲೀ ಅಲ್ಲ. ಒಂದು ಸ್ಥಳ, ಒಂದು ಘಟನೆಗೆ ಮಾತ್ರವಷ್ಟೇ ಈ ನಂಬಿಕೆಗಳು ಸೀಮಿತವಾಗಿ ಇಲ್ಲ. ಆಚರಣೆಗಳ ಅರ್ಥದಲ್ಲಿ ಇಂದಿಗೂ ನಂಬಿಕೆಗಳು ಉಳಿದಿದ್ದು, ಇಂದಿನ ಪೀಳಿಗೆಗೆ ಒಂದು ಪರಂಪರೆಯನ್ನು ಕಟ್ಟಿಕೊಡುವ ಕೆಲಸವನ್ನು ಇವು ನಿರ್ವಹಿಸುತ್ತಿವೆ. ಆ ಮೂಲಕ ಮಾನವನ ಬದುಕು ಸಾಫಲ್ಯದ ಕಡೆಗೆ ಹೋಗಲು ನೆರವಾಗುತ್ತಿವೆ.

ನಂಬಿಕೆಗಳ ವೈಜ್ಞಾನಿಕ ಅಧ್ಯಯನದಲ್ಲಿ ಅವುಗಳು ಹುಟ್ಟಿಕೊಂಡ ಸಂದರ್ಭಗಳ ದೃಷ್ಟಿಯಿಂದ ವಿಶ್ಲೇಷಿಸುವುದು ಅಗತ್ಯವಾಗುತ್ತದೆ. ನಂಬಿಕೆಗಳ ಉಗಮವನ್ನು ಸ್ಥೂಲವಾಗಿ ಮೂರು ವಿಧವಾಗಿ ಗುರುತಿಸಬಹುದು. ೧. ಧಾರ್ಮಿಕ, ೨. ಸಾಂಸ್ಕೃತಿಕ, ೩. ವೈಯಕ್ತಿಕ.

**೧. ಧಾರ್ಮಿಕ ನಂಬಿಕೆಗಳು**

ಧಾರ್ಮಿಕ ನಂಬಿಕೆಗಳನ್ನು ಅತಿಮಾನುಷ ನಂಬಿಕೆಗಳು ಎಂದೂ ಕರೆಯಬಹುದು. ಮಾನವನ ಬದುಕಿನಲ್ಲಿ ಭಯ ಮತ್ತು ಅಸ್ಥಿರ ಭಾವನೆಗಳು ಅತಿಮಾನುಷ ನಂಬಿಕೆಗಳಿಗೆ ಮೂಲ. ನಿಸರ್ಗದ ನಡುವೆ ಬದುಕಬೇಕಾದ ಮಾನವ ತನ್ನ ಪರಿಸರದ ಎಷ್ಟೋ ಸಂಗತಿಗಳ ಬಗ್ಗೆ ಅಜ್ಞಾನಿಯಾಗಿದ್ದ. ಅಸ್ಥಿರವಾದ ಅವನ ಮನಸ್ಸಿಗೆ ತಾತ್ಕಾಲಿಕವಾಗಿಯಾದರೂ ಸಮಾಧಾನ ಕೊಡುವಲ್ಲಿ ಧಾರ್ಮಿಕ ನಂಬಿಕೆಗಳು ಸಹಕಾರಿಯಾದವು. ದೇವರು, ದೆವ್ವ ಮುಂತಾದ ಅತಿಮಾನುಷ

ಶಕ್ತಿಗಳ ಕಲ್ಪನೆಗಳು ಆತನ ಮನಸ್ಸಿನಲ್ಲಿ ಹುಟ್ಟಿಕೊಂಡವು. ಹಾಗೆಯೇ ಅವುಗಳ ಸ್ವರೂಪ, ಕಾರ್ಯಗಳಿಗೆ ಸಂಬಂಧಿಸಿದ ನಂಬಿಕೆಗಳೂ ಕಾಣಿಸಿಕೊಂಡವು. ಕೆಲವೊಮ್ಮೆ ಕಾಲ್ಪನಿಕ ದೇವರುಗಳನ್ನು ವಾಸ್ತವಿಕ ವಸ್ತುಗಳೊಡನೆ ಸಂಬಂಧ ಕಲ್ಪಿಸಿ, ಗೌರವಿಸುವ ನಂಬಿಕೆಗಳೂ ಬಂದವು.

ಕೆಲವು ನಂಬಿಕೆಗಳು ಧಾರ್ಮಿಕ ಸ್ವರೂಪದವು ಆಗಿದ್ದರೂ, ಆ ನಂಬಿಕೆಗಳಲ್ಲಿನ ಕ್ರಿಯೆ ಲೌಕಿಕವಾಗಿರುತ್ತದೆ. ಮೂಲತಃ ಲೌಕಿಕವಾದ ಒಂದು ಕ್ರಿಯೆಯನ್ನು ಸಮರ್ಪಕವಾಗಿ ಮೂಡಿಸುವುದಕ್ಕಾಗಿ ಅಥವಾ ನಿಷೇಧಿಸುವುದಕ್ಕಾಗಿ ಇಂತಹ ನಂಬಿಕೆಗಳು ಹುಟ್ಟಿಕೊಂಡಿರಬಹುದು. ಈ ದೃಷ್ಟಿಯಿಂದ ನಂಬಿಕೆಗಳು ಅನೇಕ ಬಾರಿ ನಿಷಿದ್ಧತೆಗಳು ಆಗಿರುವುದನ್ನು ಗಮನಿಸಬಹುದು. ನಿಷಿದ್ಧತೆಗಳು ಪ್ರಾಚೀನ ಸಮಾಜಗಳ ಅಲಿಖಿತ ಕಾನೂನು ಎಂದು ಕರೆಯಲಾಗಿದೆ. ಲಿಖಿತವಾದ ಕಾನೂನು ವ್ಯವಸ್ಥೆ ಇಲ್ಲದ ಕಾಲದಲ್ಲಿ ನಿಷಿದ್ಧತೆಗಳನ್ನು ಸಮಾಜದ ವ್ಯವಸ್ಥೆಯನ್ನು ರಕ್ಷಿಸುವ ಕಾನೂನುಗಳ ರೀತಿಯಲ್ಲಿ ಬಳಸುತ್ತಿದ್ದರು. ಇಂತಹ ನಿಷಿದ್ಧತೆಗಳನ್ನು ಮುರಿದರೆ ಕೇಡು ಸಂಭವಿಸುತ್ತದೆ ಎನ್ನುವ ಭಾವನೆಯನ್ನು ಉಂಟು ಮಾಡುವುದಕ್ಕಾಗಿ ಅವುಗಳನ್ನು ಧಾರ್ಮಿಕ ನಂಬಿಕೆಗಳ ರೂಪದಲ್ಲಿ ಇಡುತ್ತಿದ್ದರು.

ನಿಷಿದ್ಧ ರೂಪದ ನಂಬಿಕೆಗಳೆಲ್ಲವೂ ಸಕಾರಣವಾಗಿ ಹುಟ್ಟಿದವುಗಳಲ್ಲ. ಹೆಚ್ಚಿನ ಧಾರ್ಮಿಕ ನಂಬಿಕೆಗಳು ಧಾರ್ಮಿಕ ವ್ಯವಸ್ಥೆಯನ್ನು ಉಳಿಸಿಕೊಂಡು ಬರುವ ಉದ್ದೇಶದಿಂದ ಬಂದವುಗಳು.

ಮಾನವನ ಸಾವು, ಸತ್ತ ನಂತರದ ಸ್ಥಿತಿಗತಿಗಳ ಬಗೆಗಿನ ಅಜ್ಞಾನದಿಂದ ಭೂತ, ಪ್ರೇತ, ದೆವ್ವ ಮುಂತಾದ ಅತಿಮಾನುಷ ಶಕ್ತಿಗಳ ಬಗೆಗಿನ ನಂಬಿಕೆಗಳು ಹುಟ್ಟಿಕೊಂಡಿವೆ. ಮನುಷ್ಯನ ನೆರಳು, ಪ್ರತಿಬಿಂಬ, ಕತ್ತಲಿನಲ್ಲಿ ಪ್ರಾಣಿ-ಪಕ್ಷಿಗಳ ಕೂಗುಗಳು, ರೂಪಗಳು ಮುಂತಾದವು ದೆವ್ವಗಳ ಕಲ್ಪನೆಗಳಿಗೆ ಹಾಗೂ ನಂಬಿಕೆಗಳಿಗೆ ಪ್ರಧಾನ ಸಾಮಗ್ರಿಗಳು.

ಉದಾ:- 'ತೆಂಗಿನಕಾಯಿಯನ್ನು ಕಾಲಿನಿಂದ ಒದೆಯಬಾರದು. ಅದು ಮುಕ್ಕಣ್ಣ'
'ಒಲೆಯನ್ನು ಕಾಲಿನಿಂದ ಒದೆಯಬಾರದು. ಲಕ್ಷ್ಮಿಗೆ ಸಮಾನ'
'ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ಒದ್ದೆಯಾಗಬೇಕು. ಇಲ್ಲದಿದ್ದರೆ ಶನಿಯ ಕಾಟವಿರುತ್ತದೆ'
'ದೇವರ ಮುಡಿಗೇರಿಸುವ ಹೂವನ್ನು ಮೂಸಬಾರದು'.

**೨. ಸಾಂಸ್ಕೃತಿಕ ನಂಬಿಕೆಗಳು**

ಧರ್ಮವು ಸಂಸ್ಕೃತಿಯ ಭಾಗವೇ ಆದರೂ ಸಂಸ್ಕೃತಿಯ ಇತರ ಅಂಗಗಳಿಗೆ ಸಂಬಂಧಿಸಿದ ನಂಬಿಕೆಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತವೆ. ಹುಟ್ಟು, ಮದುವೆ, ಸಾವು ಮುಂತಾದ ಬದುಕಿನ ಹಂತಗಳಿಗೆ ಸಂಬಂಧಿಸಿದಂತೆ ಅನೇಕ ನಂಬಿಕೆಗಳಿವೆ.

ಸಾಂಸ್ಕೃತಿಕ ಸಂಬಂಧವಾದ ಚಟುವಟಿಕೆಗಳನ್ನು ರೂಢಿಸಿಕೊಳ್ಳುವಾಗ ಅಥವಾ ರೂಪಿಸಿ ಕೊಳ್ಳುವಾಗ ರೂಪು ತಳೆದವುಗಳೇ ಸಾಂಸ್ಕೃತಿಕ ನಂಬಿಕೆಗಳು. ತಾನು ಉತ್ತಮಗೊಳ್ಳಲು

ಪ್ರಯತ್ನಿಸಿದಂತೆಲ್ಲಾ ತನ್ನ ಸಂಸ್ಕೃತಿಯನ್ನು ತನ್ನದೇ ಆದ ರೀತಿಯಲ್ಲಿ ಕಟ್ಟಲು ಯೋಚಿಸಿದಂತೆಲ್ಲಾ ಈ ಬಗೆಯ ನಂಬಿಕೆಗಳು ಹುಟ್ಟಿಕೊಂಡಿರಬೇಕು. ವಾಸ್ತವವಾಗಿ ಕಾಣಬರುವುದನ್ನು ಜನರ ಬದುಕಿಗೆ ಆಧಾರವಾದ ವಿಶೇಷ ಸಂಗತಿಗಳನ್ನೂ ಯಾವುದೇ ನಂಬಿಕೆಯನ್ನು ಈ ವರ್ಗಕ್ಕೆ ಉದಾಹರಣೆಯಾಗಿ ಕೊಡಬಹುದು. 'ಒಳ್ಳೆಯ ಕಾರ್ಯಗಳಿಗೆ ಹೋಗುವಾಗ ವಿಧವೆಯರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಬಾರದು' ಎಂಬ ಒಂದು ನಂಬಿಕೆ. 'ವಿಧವೆ' ಶುಭ ಕಾರ್ಯಗಳಲ್ಲಿ ಭಾಗವಹಿಸುವುದು ನಿಷಿದ್ಧ ಎಂದು ನಮ್ಮ ಸಮಾಜ ಒಪ್ಪಿಕೊಂಡಿರುವುದರಿಂದ, ಅದನ್ನು ಆಚರಣೆಯಲ್ಲಿ ಶಾಶ್ವತವಾಗಿ ಉಳಿಸಿಕೊಳ್ಳಲು ಇಂಥ ಒಂದು ನಂಬಿಕೆಯನ್ನು ರೂಢಿಗೆ ತಂದರು. ಹೀಗೆ ಕೆಲವು ನಂಬಿಕೆಗಳು ಬುದ್ಧಿ ವಿಕಾಸಕ್ಕೆ ಆಧಾರವಾಗಿ ಬೆಳೆದಿವೆ. ಕಾಲಕ್ರಮೇಣ ಅವುಗಳೇ ಬದುಕಿನ ಸೂತ್ರಗಳಾಗಿ ಸ್ಥಾನ ಪಡೆದು ಸಾರ್ವತ್ರಿಕವಾಗಿ ಹರಡಿಕೊಂಡವು.

ಉದಾ:- 'ಮಕ್ಕಳಿರುವ ಮನೆಗೆ ಬರಿಗೈಯಲ್ಲಿ ಹೋಗಬಾರದು'.
'ಅಮಾವಾಸ್ಯೆಯ ದಿನ ಹುಟ್ಟಿದ ಮಕ್ಕಳು ಕಳ್ಳರಾಗುತ್ತಾರೆ'.
'ಕಾಶಿಯಲ್ಲಿ ಸತ್ತರೆ ಸೀದಾ ಸ್ವರ್ಗಕ್ಕೆ ಹೋಗುತ್ತಾರೆ'.
'ಮದುವೆಯಲ್ಲಿ ಕಳಶ ಉರುಳಿದರೆ ಅಶುಭ'.
'ಅಂತ್ಯಸಂಸ್ಕಾರಕ್ಕೆ ಹೋದವರು ನೇರವಾಗಿ ಮನೆಗೆ ಹೋಗಬಾರದು'.

**೩. ವೈಯಕ್ತಿಕ ನಂಬಿಕೆಗಳು**

'ವ್ಯಕ್ತಿ'ಯಿಂದ ತಳೆದ ನಿಲುವುಗಳು 'ವೈಯಕ್ತಿಕ' ನಂಬಿಕೆಗಳ ರೂಪದಲ್ಲಿ ಜನಜನಿತವಾಗುತ್ತವೆ. ಅವು ವೈಯಕ್ತಿಕ ನೆಲೆಗಳಲ್ಲಿ ಹೇಗೆ ಅನಾವರಣವಾಗಿವೆ ಎಂಬುದನ್ನು ವಿಶ್ಲೇಷಿಸಿ ಪರಿಶೀಲಿಸುವ ಪ್ರಯತ್ನ ಇಲ್ಲಿನದು.

ಸಾಮಾನ್ಯವಾಗಿ ವೈಯಕ್ತಿಕ ನಂಬಿಕೆಗಳು ಹುಟ್ಟಿಕೊಳ್ಳುವುದು ನೇರವಾಗಿ ಬಾಳಿನ ಅನುಭವದಿಂದ ಮನುಷ್ಯನ ಮಾನಸಿಕ ಅನುಭವಕ್ಕೆ ಹೊಂದಿಕೊಂಡ ಯಾವುದೋ ಒಂದು ಸ್ಥಿತಿ ಅವನನ್ನು ಹಾಗೆ ಮಾಡಿರುತ್ತದೆ. ವೈಯಕ್ತಿಕ ನಂಬಿಕೆಗಳು ಹುಟ್ಟುವಾಗ ವ್ಯಕ್ತಿಯೊಬ್ಬನಿಗೆ ಮಾತ್ರ ಸಂಬಂಧಿಸಿದ್ದರೂ, ಕ್ರಮೇಣ ಒಂದು ಸಮಾಜ ಅದನ್ನು ಅನುಕರಿಸಿದಾಗ, ಅದು ಸಾಂಸ್ಕೃತಿಕ ನಂಬಿಕೆಯಲ್ಲಿಯೇ ಸೇರಿಹೋಗುತ್ತದೆ. ಇಂತಹ ವೈಯಕ್ತಿಕ ನಂಬಿಕೆಗಳು ಮುಂದೆ ಸಾಂಸ್ಕೃತಿಕ ನಂಬಿಕೆಗಳಾಗಿ ಪರಿವರ್ತಿತವಾಗುತ್ತವೆ. ಆದರೆ ಬಹಳಷ್ಟು ನಂಬಿಕೆಗಳು ವ್ಯಕ್ತಿಯೊಬ್ಬನಿಗೆ ಮಾತ್ರ ಸಂಬಂಧಿಸಿಯೂ ಇರುತ್ತವೆ.

ಉದಾ:- ಒಬ್ಬ ವ್ಯಕ್ತಿಗೆ ಯಾವುದೋ ಒಂದು ವಾರ ಅಥವಾ ಒಂದು ಬಣ್ಣ ಹೆಚ್ಚು ಅನುಕೂಲಕರವಾದದ್ದು ಹಾಗೂ ಅದೃಷ್ಟಕಾರಿಯಾದದ್ದು ಎಂಬ ನಂಬಿಕೆ ಅವನ ಅನುಭವದಿಂದ ಬರುವಂತಹದು. ಕೆಲವರಿಗೆ ಮಂಗಳವಾರ ಅಮಂಗಳವಾಗಿ ತೋರಿದರೆ ಮತ್ತೆ ಕೆಲವರಿಗೆ ಅದೇ ವಿಜಯದ ವಾರವೆನಿಸಬಹುದು. ಹೆಂಡತಿಯ ಕೈ ಹಿಡಿದ ಗಳಿಗೆ, ಮನೆಯನ್ನು ಕಟ್ಟಿಸಿದ

ಅಥವಾ ಕೊಂಡ ಗಳಿಗೆ, ಅವನ ಭಾಗ್ಯದ ಬಾಗಿಲು ತೆರೆದ ಘಟನೆ - ಎಂದು ವ್ಯಕ್ತಿಯೊಬ್ಬನಲ್ಲಿ ಮೂಡಬಹುದಾದ ಭಾವನೆಗಳೆಲ್ಲವೂ ವೈಯಕ್ತಿಕ ನಂಬಿಕೆಗಳೆನಿಸಿಕೊಳ್ಳುತ್ತವೆ.

ಒಬ್ಬನು ಧರಿಸಿದ ಯಾವುದೋ ಬಟ್ಟೆಯಿಂದ, ವಸ್ತುವಿನಿಂದ ಆಕಸ್ಮಿಕವಾಗಿ ಅವನಿಗೆ ಹಣ ಅಥವಾ ಇಚ್ಛಿಸಿದ ಹೆಣ್ಣು ಸಿಕ್ಕಿದರೆ ಅಥವಾ ಪರೀಕ್ಷೆಯಲ್ಲಿ ಪಾಸಾದರೆ, ಮುಂದೆ ಆತ ಆ ವಸ್ತುಗಳೇ ತನ್ನ ಅದೃಷ್ಟಕ್ಕೆ ಕಾರಣ ಎಂದು ನಂಬುತ್ತಾ ಹೋಗಬಹುದು. ಒಂದು ವೇಳೆ ಯಾವ ಪ್ರಯೋಜನ ಸಿಕ್ಕದೆ ಇದ್ದರೂ, ಆತನ ನಂಬಿಕೆ ಸಡಿಲವಾಗುವುದು ಕಡಿಮೆ. ೧೦೦ರಲ್ಲಿ ಒಂದು ಬಾರಿ ಸಫಲವಾಗಿ, ೯೯ ಬಾರಿ ಸೋತರೂ ಆ ಒಂದು ಬಾರಿಯ ಸಫಲತೆಯನ್ನೇ ವಾಸ್ತವಿಕ ಎಂದು ಭಾವಿಸುವುದು ವೈಯಕ್ತಿಕ ನಂಬಿಕೆಗಳ ಲಕ್ಷಣ.

ಕಾಕತಾಳೀಯ ಎಂಬ ಮಾತು ವೈಯಕ್ತಿಕ ನಂಬಿಕೆಗಳಿಗೆ ಹೆಚ್ಚಾಗಿ ಅನ್ವಯಿಸುತ್ತದೆ. ಜ್ಯೋತಿಷ್ಯ, ಜಾತಕ, ಶಕುನ, ಶಾಸ್ತ್ರ, ಭವಿಷ್ಯ ಮುಂತಾದವುಗಳ ಬಗ್ಗೆ ಮನುಷ್ಯನು ಇಟ್ಟುಕೊಳ್ಳುವ ನಂಬಿಕೆಗಳು ಇಂತಹ ಕಾಕತಾಳೀಯ ಸಂಬಂಧಕ್ಕೆ ಹಾಗೂ ಮನುಷ್ಯರ ಕುಗ್ಗದ ಆಶಾಭಾವನೆಗೆ ಸಂಬಂಧಿಸಿದವು. ಅಂಕೆ-ಸಂಖ್ಯೆಗಳನ್ನು ಕುರಿತ ಅನೇಕ ನಂಬಿಕೆಗಳು ಇದೇ ಗುಂಪಿಗೆ ಸೇರುತ್ತವೆ.

**೧. ಉಪವಾಸ ವ್ರತವನ್ನು ಆಚರಿಸುವುದು**

ಹಬ್ಬ, ಹರಿದಿನಗಳಲ್ಲಿ ಅಥವಾ ಇನ್ನಿತರ ವಿಶೇಷ ದಿನಗಳಲ್ಲಿ ಉಪವಾಸ ವ್ರತವನ್ನು ಆಚರಿಸುವ ಪದ್ಧತಿಯಿದೆ. ಇದು ದೇವರ ಹೆಸರಿನಲ್ಲಿ ಆಹಾರ ಬಿಡುವುದಾಗಿದೆ. ಉಪವಾಸವಿದ್ದಾಗ ನೀರನ್ನು ಮತ್ತು ಇತರ ದ್ರವರೂಪದ ಆಹಾರ ಸೇವಿಸಲಾಗುತ್ತದೆ. ಈ ಉಪವಾಸ ವ್ರತವನ್ನು ಒಂದು ದಿನ, ಒಂದು ವಾರ, ಒಂದು ತಿಂಗಳು ಆಚರಿಸುವವರೂ ಇದ್ದಾರೆ. ವಾರ, ತಿಂಗಳುಗಟ್ಟಲೆ ಉಪವಾಸ ಮಾಡುವುದು ಅನಾರೋಗ್ಯಕ್ಕೆ ಕಾರಣವಾಗಬಹುದು. ಆದ್ದರಿಂದ ಹೆಚ್ಚಿನ ಉಪವಾಸ ಆರೋಗ್ಯವನ್ನು ಹದಗೆಡಿಸಿದರೆ, ವಿರಳವಾಗಿ ಉಪವಾಸ ಮಾಡುವುದು ಆರೋಗ್ಯವನ್ನು ಸಮತೂಕದಲ್ಲಿಡುತ್ತದೆ.

ಜೀರ್ಣಶಕ್ತಿಯಲ್ಲಿ ಕಾರ್ಯನಿರತವಾಗಿರುವ ನರ, ನಾಡಿಗಳಿಗೆ ವಿಶ್ರಾಂತಿ ದೊರಕಿಸಲು ಉಪವಾಸ ಅಗತ್ಯವಾಗಿ ಮಾಡಲೇಬೇಕು. ದೇಹಕ್ಕೆ ಆಹಾರ ಸರಬರಾಜು ಇರದ ಕಾರಣ ಆಮ್ಲಜನಕವು ಹೆಚ್ಚಿನ ಪ್ರಮಾಣದಲ್ಲಿ ದೇಹದೊಳಗೆ ಸೇರುವುದರಿಂದ ರಕ್ತ ಪರಿಚಲನೆ ಸುಲಭವಾಗುತ್ತದೆ. ಇದರಿಂದ ರಕ್ತ ಶುದ್ಧಗೊಳ್ಳುವುದಲ್ಲದೆ, ದೇಹದಲ್ಲಿರುವ ಕೊಬ್ಬು ಮತ್ತು ಪ್ರೊಟೀನುಗಳಲ್ಲಿ ಸಮತೋಲನ ಉಂಟಾಗುತ್ತದೆ.

**೨. ದೇವಸ್ಥಾನಕ್ಕೆ ಬರಿಗಾಲಲ್ಲಿ ಹೋಗುವುದು**

ದೇವರ ಮೇಲಿನ ಭಕ್ತಿಯಿಂದಾಗಿ ಬರಿಗಾಲಲ್ಲಿ ದೇವಸ್ಥಾನಕ್ಕೆ ಹೋಗುವ ನಂಬಿಕೆ ಪ್ರಚಲಿತದಲ್ಲಿದೆ. ಹಿಂದಿನ ಕಾಲದಲ್ಲಿ ಚಪ್ಪಲಿ ಹೆಚ್ಚಿನ ಪ್ರಮಾಣದಲ್ಲಿ ಸಿಗದೆ ಇದ್ದುದರಿಂದಾಗಿ ಈ ನಂಬಿಕೆ ರೂಢಿಗೆ ಬಂದಿರಬಹುದು. ಆದರೆ ಇಂದು ಚಪ್ಪಲಿ ಒಯ್ದರೂ ಹೊರಗಡೆ ಬಿಟ್ಟು

ಹೋಗಬೇಕಾದುದರಿಂದ ಕಳೆಯುತ್ತವೆ ಎಂಬ ಭಯ, ಚಿಂತೆಯಿಂದ ದೂರಾಗಲು ಈ ನಂಬಿಕೆ ಹುಟ್ಟಿಕೊಂಡಿರಬಹುದು.

ಈ ನಂಬಿಕೆಯ ಹಿಂದೆ ಆರೋಗ್ಯಪಾಲನೆಯೂ ಸೇರಿದೆ. ಹೇಗೆಂದರೆ ಚಪ್ಪಲಿ ಪಾದಗಳಿಗೆ ಸ್ಪರ್ಶಿಸುವುದರಿಂದ ದೇಹದ ಉಷ್ಣತೆ ಹೊರಗಡೆ ಹೋಗಲು ಅವಕಾಶ ಕೊಡದೆ ಚಪ್ಪಲಿ ಮತ್ತು ಪಾದಗಳ ನಡುವೆ ಒತ್ತಡ ಉಂಟು ಮಾಡುತ್ತದೆ. ಹೀಗೆ ಬರಿಗಾಲಲ್ಲಿ ಓಡಾಡುವುದರಿಂದ ದೇಹದ ಉಷ್ಣ ಹೊರಹಾಕಲು ಅನುಕೂಲವಾಗುತ್ತದೆ. ಭೂಮಿಯ ಸ್ಪರ್ಶ ನೇರವಾಗಿ ಪಾದಕ್ಕೆ ಆಗುವುದರಿಂದ ತಂಪಿನ ಅನುಭವವಾಗುತ್ತದೆ. ಹೀಗೆ ಉಷ್ಣ ಮತ್ತು ತಂಪಿನ ಅನುಭವದ ಪ್ರಕ್ರಿಯೆಯಿಂದ ಪಾದಗಳು ಗಟ್ಟಿಯಾಗುತ್ತವೆ.

**೩. ದೇವಸ್ಥಾನದಿಂದ ಬರುವಾಗ ಸ್ವಲ್ಪ ಹೊತ್ತು ಕುಳಿತು ಬರಬೇಕು**

ಈ ನಂಬಿಕೆಯಲ್ಲಿ ಮುಖ್ಯವಾಗಿ ವ್ಯಕ್ತವಾಗಿರುವುದು ದೈವಶ್ರದ್ಧೆ. ದೇವಸ್ಥಾನದ ಆಚೆಗೆ ಇರುವುದು ಲೌಕಿಕ ಪ್ರಪಂಚ. ಆದ್ದರಿಂದ ಧಾರ್ಮಿಕ ಕೇಂದ್ರವಾದ ದೇವಸ್ಥಾನದಲ್ಲಿ ಇನ್ನಷ್ಟು ಹೊತ್ತು ದೈವಭಾವನೆಯನ್ನು ಗಟ್ಟಿಗೊಳಿಸಿಕೊಳ್ಳಬೇಕು ಎಂಬ ಉದ್ದೇಶ ಈ ನಂಬಿಕೆಗೆ ಹಿನ್ನೆಲೆಯಾಗಿದೆ.

**೪. ದೇವರ ಮುಡಿಗೇರಿಸುವ ಹೂ ಮೂಸಬಾರದು**

ದೇವರ ಮುಡಿಗೇರಿಸುವ ಹೂ ಮೂಸಬಾರದು ಎಂಬ ನಂಬಿಕೆ ವಿಚಾರವುಳ್ಳದ್ದೇ ಆಗಿದೆ. ಸಾಮಾನ್ಯವಾಗಿ ಹೂಗಳಲ್ಲಿನ ಮಕರಂದ ರುಚಿಸುವುದರಿಂದ ಸಣ್ಣ, ಸಣ್ಣ ಕೀಟಗಳು ಹೂವಿನಲ್ಲಿರುತ್ತವೆ. ಹೂ ಮೂಸಿದಾಗ ಅದರಲ್ಲಿನ ಕೀಟಗಳು ಶ್ವಾಸದ ಮೂಲಕ ದೇಹ ಸೇರಿ ಅನಾಹುತ ಉಂಟಾಗದಿರಲೆಂದು ಈ ನಂಬಿಕೆ ರೂಢಿಯಲ್ಲಿದೆ.

**೫. ದೇವರಿಗೆ ಹೊತ್ತ ಹರಕೆಯನ್ನು ಒಪ್ಪಿಸದೆ ಹೋದರೆ ಮುಂದೆ ಒಳ್ಳೆಯದಾಗುವುದಿಲ್ಲ.**

ತಾನು ಏನಾದರೂ ಕುರಿತುಕೊಂಡು, ಅದು ನೆರವೇರಿದರೆ ಇಂತಹದ್ದನ್ನು ಮಾಡಿಸಿಕೊಡುತ್ತೇನೆ ಎಂದು ದೇವರಲ್ಲಿ ಪ್ರಾರ್ಥಿಸಿಕೊಳ್ಳುವುದು. ತಾನು ಅಂದುಕೊಂಡ ಕೆಲಸವಾದ ಮೇಲೆ ಮಾತಿನಂತೆ ಅದನ್ನು ಮಾಡಿಸಿಕೊಡುತ್ತಾರೆ. ಇಲ್ಲವಾದರೆ ಅದು ಮಾನಸಿಕ ವೇದನೆಗೂ ಕಾರಣವಾಗಬಹುದು.

**೬. ವಿಭೂತಿ ಹಚ್ಚಿಕೊಳ್ಳುವುದು**

ವಿಭೂತಿಯನ್ನು ಹಚ್ಚಿಕೊಂಡವರನ್ನು ಮುಂಜಾನೆ ಎದ್ದು ನೋಡಿದರೆ ಶುಭ ಎನ್ನುವ ನಂಬಿಕೆಯಿದೆ. ವಿಭೂತಿ ಆಕಳ ಸಗಣಿ ಮತ್ತು ಸುಣ್ಣದ ಮಿಶ್ರಣದಿಂದ ತಯಾರು ಮಾಡುವುದರಿಂದ ಔಷಧೀಯ ಮೌಲ್ಯವು ಅದರಲ್ಲಿದೆ. ಇದು ಶರೀರದ ಹೆಚ್ಚು ತೇವವನ್ನು ಹೀರಿಕೊಳ್ಳುತ್ತದೆ. ವಿಭೂತಿಯನ್ನು ಅನೇಕ ಆಯುರ್ವೇದ ಔಷಧಿಗಳಲ್ಲಿ ಉಪಯೋಗಿಸುತ್ತಾರೆ. ತಲೆನೋವು, ಮೊಡವೆ, ಮೈಮೇಲೆ ಉಂಟಾಗುವ ಗುಳ್ಳೆಗಳ ನಿವಾರಣೆಗೂ ಉಪಯೋಗಿಸಲಾಗುತ್ತದೆ. ವಿಭೂತಿಯನ್ನು ನೀರಿನಲ್ಲಿ ಬೆರೆಸಿ ದಿನಾಲೂ ಸೇವಿಸುವುದರಿಂದ ಹೊಟ್ಟೆ ನೋವಿನ ನಿವಾರಣೆಯಾಗುತ್ತದೆ.

**೭. ಹಣೆಯ ಮೇಲೆ ಕುಂಕುಮ ಇಟ್ಟುಕೊಳ್ಳುವುದು**

ಹಣೆಯ ಮೇಲೆ ಕುಂಕುಮ ಇಟ್ಟುಕೊಳ್ಳುವ ನಂಬಿಕೆಗೆ ಬಹು ಪ್ರಾಶಸ್ತ್ಯ ಕೊಟ್ಟಿರುವುದು ಕಂಡುಬರುತ್ತದೆ. ಹಿಂದೂ ಸ್ತ್ರೀಯರು ಯಾವಾಗಲೂ ಕುಂಕಮ ಹಚ್ಚಿಕೊಳ್ಳುತ್ತಾರೆ. ವಿವಾಹಿತ ಮುತ್ತೈದೆಯ ಹಣೆ ಮೇಲೆ ಒಂದು ಕ್ಷಣವೂ ಕುಂಕುಮವಿರದೆ ಇರುವುದಿಲ್ಲ. ಯಾವಾಗಲೂ ಕುಂಕುಮವಿರಲೇಬೇಕು. ಇದು ಮುತ್ತೈದೆಯ ಪ್ರತೀಕ. ಹಣೆಯ ಎರಡು ಹುಬ್ಬುಗಳ ಮಧ್ಯದಲ್ಲಿ ಕುಂಕುಮ ಇಟ್ಟುಕೊಳ್ಳುವುದರಿಂದ ಮುಖದ ಸೌಂದರ್ಯ ಹೆಚ್ಚುವುದಲ್ಲದೇ ರಕ್ತ ಪರಿಚಲನೆಯು ಸರಾಗವಾಗಿರುತ್ತದೆ. ಕುಂಕುಮದ ಬಳಕೆಯಿಂದಾಗಿ ಹಣೆಗೆ ತಂಪು ನೀಡುತ್ತದೆ.

**೮. ಗರ್ಭಿಣಿಯರು ಅಂತ್ಯ ಸಂಸ್ಕಾರದಲ್ಲಿ ಭಾಗವಹಿಸಬಾರದು**

ಹೆಣದ ಅಂತ್ಯಸಂಸ್ಕಾರ ನಡೆಯುವ ಸಂದರ್ಭದಲ್ಲಿ ದುಃಖಿತರಾದ ಬಂಧು-ಬಾಂಧವರೆಲ್ಲರೂ ಅತಿ ದುಃಖಿತರಾಗಿ ಅಳುತ್ತಿರುತ್ತಾರೆ. ಇಂತಹ ಘಟನೆಯಲ್ಲಿ ಗರ್ಭಿಣಿ ಭಾಗವಹಿಸುವುದರಿಂದ ಮಾನಸಿಕ ಆಘಾತಕ್ಕೆ ಒಳಗಾಗುವುದನ್ನು ತಪ್ಪಿಸುವುದಕ್ಕಾಗಿ ಇಂತಹ ನಂಬಿಕೆ ಹುಟ್ಟಿಕೊಂಡಿರಬಹುದು. ಗರ್ಭಿಣಿಯ ದೈಹಿಕ ಮತ್ತು ಮಾನಸಿಕ ತೊಂದರೆಗೆ ಒಳಗಾಗುವುದನ್ನು ತಪ್ಪಿಸುವ ಉದ್ದೇಶ ಈ ನಂಬಿಕೆಯಲ್ಲಿದೆ.

**೯. ಬಸರಿ ಹೆಂಗಸು ಬಯಸಿದ್ದನ್ನು ತಿನ್ನದೆ ಹೋದರೆ ಹೆರಿಗೆ ತಡವಾಗುತ್ತದೆ.**

ಬಸರಿ ಹೆಂಗಸರಿಗೆ ಬಯಕೆ ಹೆಚ್ಚಾಗಿ ಇರುತ್ತದೆ. ಆ ಸಮಯದಲ್ಲಿ ಅವರಿಗೆ ಅಪರೂಪದ ತಿಂಡಿಗಳು ಬೇಕೆನಿಸುತ್ತದೆ. ಹತ್ತಿರದ ಸಂಬಂಧಿಕರು ಬಸರಿ ಹೆಂಗಸನ್ನು ಮನೆಗೆ ಕರೆದುಕೊಂಡು ಹೋಗಿ ವಿಶೇಷವಾದ ಅಡುಗೆಯನ್ನು ಮಾಡಿಸುತ್ತಾರೆ. ದೂರದ ನೆಂಟರುಗಳು ತಾವೇ ಅವರಿರುವಲ್ಲಿಗೆ ಬಂದು, ಎಲ್ಲ ಪದಾರ್ಥಗಳನ್ನು ಅವರೇ ತಂದು ಮಾಡಿಟ್ಟು ಹೋಗುತ್ತಾರೆ. ಇದಕ್ಕೆ 'ಬಯಕೆ ಬುತ್ತಿ' ಎಂದು ಕರೆಯುತ್ತಾರೆ. ಇದು ಇಂದಿಗೂ ಎಲ್ಲ ಕಡೆಯೂ ರೂಢಿಯಲ್ಲಿರುವ ಒಂದು ಪದ್ಧತಿ.

**೧೦. ಬಸರಿಯ ಕೈಯಲ್ಲಿ ಮಕ್ಕಳನ್ನು ಎತ್ತಿಕೊಳ್ಳಲು ಕೊಡಬಾರದು**

ಬಸರಿಯ ಕೈಯಲ್ಲಿ ಮಕ್ಕಳನ್ನು ಎತ್ತಿಕೊಳ್ಳಲು ಕೊಡಬಾರದೆಂಬ ನಂಬಿಕೆಯಿದೆ. ಹಾಗೆ ಕೊಟ್ಟರೆ ಮಕ್ಕಳು ಸಣಕಲು ಆಗುತ್ತವೆಯಂತೆ. ಆದ್ದರಿಂದ ಹಾಗೆ ಕೊಡಲು ಹಿಂಜರಿಯುತ್ತಾರೆ. ಒಂದು ವೇಳೆ ಕೊಟ್ಟರೂ, ಅನಂತರ ಅವರ ಕೈಯಿಂದ ಮಗುವಿನ ಬಾಯಿಗೆ ಒಂದು ಚಿಟಿಕೆ ಸಕ್ಕರೆಯನ್ನೋ ಅಥವಾ ನೆತ್ತಿಗೆ ಒಂದು ಹನಿ ಎಣ್ಣೆ ತಿಕ್ಕಿಸುವುದೋ ಮಾಡುತ್ತಾರೆ.

**೧೧. ಆಷಾಢ ದಿನಗಳಲ್ಲಿ ಋತುಮತಿಯಾಗಬಾರದು**

ಹೆಣ್ಣು ಮೊದಲ ಬಾರಿ ಋತುಮತಿಯಾದಾಗ ಅದು ಸೂತಕ ಎನ್ನುವ ಕಾರಣಕ್ಕೆ ಶುದ್ಧೀಕರಣ ಸಂಬಂಧಿ ಹಲವು ವಿಧಿಗಳನ್ನು ನಡೆಸುತ್ತಾರೆ. ಋತುಮತಿಯಾದ ಹೆಣ್ಣಿಗೆ ಪೌಷ್ಟಿಕ ಆಹಾರ ಮಾಡುವ ಕ್ರಮಗಳಿದ್ದು, ಇವೆಲ್ಲ ವೆಚ್ಚದಾಯಕವಾಗಿರುತ್ತವೆ. ಆರ್ಥಿಕ ಮುಗ್ಗಟ್ಟಿನ ಈ ಆಷಾಢ ದಿನಗಳಲ್ಲಿ ಹೆಣ್ಣು ಋತುಮತಿಯಾಗುವುದು ಬೇಸರದ ಸಂಗತಿಯಾಗಿರುತ್ತದೆ. ಮುಟ್ಟು

ಹೆಣ್ಣಿನಲ್ಲಿ ದೈಹಿಕ ಹಾಗೂ ಮಾನಸಿಕ ವೈಪರೀತ್ಯಗಳನ್ನು ಹುಟ್ಟಿಸಬಲ್ಲದು. ಅಷ್ಟಾಢ ವಾತಾವರಣವು ಹಿತಕರವಾಗಿರದೆ ಇದ್ದುದರಿಂದ ಋತುಚಕ್ರ ಹೆಣ್ಣಿಗೆ ಇನ್ನಷ್ಟು ಸಮಸ್ಯೆಯನ್ನು ತರಬಲ್ಲದು ಎಂಬ ಕಾರಣಗಳಿಂದಾಗಿ ಇಂತಹ ನಂಬಿಕೆ ರೂಢಿಯಲ್ಲಿರಬೇಕು.

**೧೨. ಹಸಿಮೈನವರು ಒಬ್ಬೊಬ್ಬರೆ ಹೊರಗೆ ಓಡಾಡಬಾರದು. ಗಾಳಿ ಹಿಡಿಯುತ್ತದೆ.**

ಋತುಮತಿಯಾದ ಹೆಣ್ಣು ಮಕ್ಕಳನ್ನು ಹಾಗೂ ಬಾಣಂತಿಯರನ್ನು ಅವರು ಸಂಪೂರ್ಣವಾಗಿ ಆ ಸ್ಥಿತಿಯಿಂದ ಚೇತರಿಸಿಕೊಳ್ಳುವವರೆಗೂ ಅವರನ್ನು ಹಸಿಮೈನವರು ಎಂದು ಕರೆಯುತ್ತಾರೆ. ಇಂತಹ ಸ್ಥಿತಿಯಲ್ಲಿ ಒಬ್ಬೊಬ್ಬರನ್ನೇ ಎಲ್ಲಿಗೂ ಹೋಗಲು ಬಿಡುವುದಿಲ್ಲ. ಸದಾ ಜೊತೆಯಲ್ಲಿ ಯಾರಾದರೂ ಇರುತ್ತಾರೆ. ದೆವ್ವಗಳ ಕಾಟ ಅಂತಹವರಿಗೆ ಹೆಚ್ಚಾಗಿರುತ್ತದೆ ಎಂಬ ನಂಬಿಕೆಯಿದೆ.

**೧೩. ಕಪ್ಪೆ ವಟಗುಟ್ಟುತ್ತಿದ್ದರೆ ಮಳೆ ಬರುತ್ತದೆ.**

ಕಪ್ಪೆ ತೇವಾಂಶ ಇರುವ ಕಡೆ ಹೆಚ್ಚಾಗಿರುತ್ತವೆ. ಇವು ಹೆಚ್ಚಾಗಿ ಮಳೆಗಾಲದ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಒಂದೇ ಸಮನಾಗಿ ವಟಗುಟ್ಟುತ್ತಿದ್ದರೆ ಅಷ್ಟೇ ಹೆಚ್ಚಾಗಿ ಮಳೆ ಬರುವ ನಿರೀಕ್ಷೆಯಿರುತ್ತದೆ.

**೧೪. ಹುಣಸೆ ಮರದಲ್ಲಿ ದೆವ್ವ ಇರುತ್ತವೆ.**

ಹುಣಸೆ ಮರದಲ್ಲಿ ದೆವ್ವ ಇರುತ್ತವೆ ಎನ್ನುವ ಕಾರಣಕ್ಕಾಗಿ, ಹುಣಸೆ ಮರವನ್ನು ಮನೆಯ ಸುತ್ತ-ಮುತ್ತ ಎಲ್ಲಿಯೂ ಬೆಳೆಸುವುದಿಲ್ಲ. ಇದಕ್ಕೆ ವೈಜ್ಞಾನಿಕ ಕಾರಣವೇನೆಂದರೆ, ಈ ಮರಗಳು ಎತ್ತರವಾಗಿ ಬೆಳೆದು ವಿಸ್ತಾರವಾದ ಪ್ರದೇಶವನ್ನು ಆಕ್ರಮಿಸಿಕೊಳ್ಳುತ್ತವೆ. ಎತ್ತರವಾಗಿ ಬೆಳೆಯುವ ಮರಗಳು ಸಿಡಿಲನ್ನು ಆಕರ್ಷಿಸುವ ಸಾಧ್ಯತೆಯಿರುವುದರಿಂದ, ಬಿರುಗಾಳಿಗೆ ಮರ ಉರುಳಿ ಬೀಳಬಹುದಾದ ಕಾರಣಗಳಿಂದಾಗಿ ಈ ಗಿಡದಿಂದ ದೂರವಿರುವಂತೆ ಹಾಗೂ ಈ ಮರಗಳು ರಾತ್ರಿ ಕಾರ್ಬನ್ ಡೈ ಆಕ್ಸೈಡ್ ಹೆಚ್ಚು ಬಿಡುಗಡೆ ಮಾಡುವುದರಿಂದ ಈ ರೀತಿಯ ನಂಬಿಕೆ ಹುಟ್ಟಿಕೊಂಡಿರಬೇಕು.

**೧೫. ಮನೆಯ ಮುಂದೆ ನುಗ್ಗೆ ಮರ ಬೆಳೆಸಬಾರದು. ಅದು ಮನೆಯವರನ್ನೆಲ್ಲಾ ನುಗ್ಗು ಮಾಡುತ್ತದೆ.**

ಈ ನಂಬಿಕೆಗೆ ಮೂಲ ಕಾರಣ ನುಗ್ಗೆ ಮರ ಬಹಳ ಪೊಳ್ಳಾಗಿರುವುದಲ್ಲದೆ, ಈ ಪೊಳ್ಳು ಮರವನ್ನೇರಿ ಮಕ್ಕಳು ಬಿದ್ದು ಹಾನಿ ಮಾಡಿಕೊಳ್ಳಬಾರದೆಂಬ ದೃಷ್ಟಿಯಿಂದ ಅದನ್ನು ತಪ್ಪಿಸಲು ಈ ನಂಬಿಕೆ ಹುಟ್ಟಿಕೊಂಡಿರಬಹುದು.

**೧೬. ಕಣಗಿಲ ಹೂವಿನ ಗಿಡ ಮನೆಯಲ್ಲಿರಬಾರದು.**

ಕಣಗಿಲ ಹೂ ಮುಡಿಯಲಿಕ್ಕೆ, ಕೆಲವು ದೇವರ ಪೂಜೆಗೆ ಸಲ್ಲದಿರುವುದರಿಂದ, ಶವದ ಪೂಜೆಗೆ ಮಾತ್ರ ಬಳಸುವುದರಿಂದ ಅದನ್ನು ನಿಷೇಧಿಸುವ ಸಲುವಾಗಿ ಈ ನಂಬಿಕೆ ಹುಟ್ಟಿಕೊಂಡಿರಬಹುದು.

**೧೭. ತಳಿರುತೋರಣ ಶುಭ ಕಾರ್ಯಗಳಲ್ಲಿ ಕಟ್ಟುವುದು.**

ಕಬ್ಬು, ತೆಂಗು, ಬಾಳೆ, ಮಾವು, ಬೇವು, ಅರಳಿ ಗಿಡಗಳ ಎಲೆಗಳನ್ನು ಪೂಜಾ ಕಾರ್ಯಗಳಲ್ಲಿ, ಹಬ್ಬಗಳಲ್ಲಿ ಹಾಗೂ ಇನ್ನಿತರ ಶುಭ ಕಾರ್ಯಗಳಲ್ಲಿ ತೋರಣವಾಗಿಯೂ, ಹಂದರವಾಗಿಯೂ

ಕಟ್ಟುತ್ತಾರೆ. ಇದು ಶುಭದ ಸಂಕೇತ. ತಳಿರು ತೋರಣ ಅಲಂಕಾರದ ಆಕರ್ಷಣೀಯ ಜೊತೆಗೆ ವೈಜ್ಞಾನಿಕ ಪ್ರಯೋಜನಗಳನ್ನು ಹೊಂದಿರುವ ಸಾಧ್ಯತೆಯೂ ಇದೆ. ಶುಭ ಕಾರ್ಯಗಳಂತಹ ಸಂದರ್ಭಗಳಲ್ಲಿ ನೆರೆದ ಜನಸ್ತೋಮದಿಂದಾಗಿ ಆಮ್ಲಜನಕದ ಕೊರತೆಯನ್ನು ನೀಗಿಸುತ್ತದೆ.

**೧೮. ಫಲ ಕೊಡುವ ಗಿಡ, ಮರಗಳನ್ನು ಕಡಿಯಬಾರದು. ಕಡಿದರೆ ಮಕ್ಕಳಾಗುವುದಿಲ್ಲ.**

ನೈಸರ್ಗಿಕವಾಗಿ ಬೆಳೆಯುವ ಗಿಡ, ಮರಗಳು ಅಭಿವೃದ್ಧಿಯ ಸಂಕೇತವಾಗಿರುತ್ತವೆ ಹಾಗೂ ತಮಗೆ ಬೇಕಾದ ಫಲ ಕೊಡುವ ಸಂಪತ್ತಾಗಿರುತ್ತವೆ. ಅಂತಹವುಗಳನ್ನು ಅನವಶ್ಯಕವಾಗಿ ಹಾಳು ಮಾಡಬಾರದೆಂಬ ಉದ್ದೇಶಕ್ಕಾಗಿ ಫಲ ಕೊಡುವ ಗಿಡ, ಮರಗಳನ್ನು ಕಡಿದರೆ ಮಕ್ಕಳಾಗುವುದಿಲ್ಲವೆಂಬ ನಿಷೇಧ ರೂಪದ ನಂಬಿಕೆಯು ಜಾರಿಯಲ್ಲಿದೆ.

**೧೯. ಎಕ್ಕೆಯ ಗಿಡದಲ್ಲಿ ದೇವರಿರುತ್ತಾನೆ. ಪೂಜಿಸಿದರೆ ಒಳಿತಾಗುತ್ತದೆ.**

ಎಕ್ಕೆಯನ್ನು ಗದ್ದೆಯ ರಾಶಿಯ ಸಮಯದಲ್ಲಿ ಪೂಜಿಸುತ್ತಾರೆ. ರಾಶಿಗೆ ಎಕ್ಕೆಯ ಹೂವೇ ಬೇಕು. ಕಣ ಮಾಡುವಾಗಲೇ ಎಕ್ಕೆ ಗಿಡದ ಸಮೀಪ ಮಾಡಿರುತ್ತಾರೆ. ಶಿವರಾತ್ರಿಯಂದು ಶಿವ ಎಕ್ಕೆಯ ಗಿಡದ ಕೆಳಗೆ ವಾಸ ಮಾಡುತ್ತಾನೆಂಬ ನಂಬಿಕೆ ಇದೆ. ಎಕ್ಕೆಯ ಎಲೆಯನ್ನು ಒಣಗಿಸಿ, ಪುಡಿ ಮಾಡಿ ಬೆಲ್ಲದ ಜೊತೆ ತಿಂದರೆ ಅಸ್ತಮಾ ಗುಣವಾಗುತ್ತದೆ ಹಾಗೂ ಕೈ, ಕಾಲು, ದೇಹದ ಇತರೆ ಭಾಗಗಳಲ್ಲಿ ನೋವು ಕಾಣಿಸಿಕೊಂಡರೆ ಎಕ್ಕೆಯ ಗಿಡದ ಹಾಲನ್ನು ಹಚ್ಚುತ್ತಾರೆ.

**೨೦. ಒಲೆಯ ಬೆಂಕಿ ಇನ್ನೊಬ್ಬರಿಗೆ ಕೊಡಬಾರದು**

ಬೆಂಕಿಯಿಂದ ಎಷ್ಟು ಉಪಯೋಗವಿದೆಯೋ, ಅಷ್ಟೇ ಅಪಾಯವೂ ಇದೆ. ಬೆಂಕಿಯನ್ನು ಒಂದು ಒಲೆಯಿಂದ ಇನ್ನೊಂದು ಒಲೆಗೆ ಒಯ್ಯುವ ವೇಳೆ ಚೆಲ್ಲಬಹುದು. ಮೈಮೇಲೆ ಬೀಳಬಹುದು. ಇಲ್ಲವೇ ಗಾಳಿ ಬೀಸಿದಾಗ ಅದರ ಕಿಡಿಯು ಗುಡಿಸಲುಗಳಿಗೆ ತಾಗಿ ಅಪಾಯ ವಾಗಬಹುದು. ಇಂತಹ ಅನಾಹುತಗಳನ್ನು ತಪ್ಪಿಸಲು ಈ ರೀತಿಯ ನಂಬಿಕೆ ಹುಟ್ಟಿಕೊಂಡಿರಬೇಕು.

**೨೧. ಹುತ್ತವನ್ನು ಸುತ್ತಿಕೊಂಡು ಹೋಗಬಾರದು. ಮಗ್ಗುಲಲ್ಲಿ ಹೋಗಬೇಕು.**

ಹುತ್ತಿನ ಒಳಗೆ ಹಾವು ಇರುತ್ತದೆ ಎಂಬುದು ತಿಳಿದ ವಿಷಯವೇ ಆಗಿದೆ. ಹುತ್ತದ ಸಮೀಪ ಓಡಾಡುವಾಗ ಅದರ ಶಬ್ದಕ್ಕೆ ಅಂಜಿ ಹಾವು ಮೇಲೇರಿ ಬಂದು ಕಚ್ಚಬಹುದು. ಇಂತಹ ಅಪಾಯವನ್ನು ಅರಿತು ಮುಂಚಿತವಾಗಿಯೇ ಜಾಗರೂಕರಾಗಿರಲೆಂದು ಮಗ್ಗುಲಲ್ಲಿ ಹೋಗಬೇಕೆಂಬ ನಂಬಿಕೆ ರೂಢಿಯಲ್ಲಿದೆ.

**೨೨. ದೆವ್ವ ಗಾಳಿ ಬಿಟ್ಟಾಗ ಹೊರಗೆ ಬರಬಾರದು**

ಜೋರಾಗಿ ಬೀಸುವ ಬಿರುಗಾಳಿಗೆ ದೆವ್ವ ಗಾಳಿ ಎನ್ನುವ ನಂಬಿಕೆ ಇದೆ. ಒಮ್ಮಿಂದೊಮ್ಮೆಲೆ ಜೋರಾಗಿ ಬೀಸುವ ಗಾಳಿಗೆ ಧೂಳು, ಮಣ್ಣಿನ ಕಣಗಳು ದೇಹಕ್ಕೆ, ಕಣ್ಣಿಗೆ ತಾಗುತ್ತವೆ. ಅಲ್ಲದೆ ಮನೆಯ ಮಾಳಿಗೆಗಳಿಗೆ ಹಾಕಿದ ಹಗುರವಾದ ಹೆಂಚುಗಳು ಗಾಳಿಯ ರಭಸಕ್ಕೆ ಮೈಮೇಲೆ

ಬಿದ್ದು ಗಾಯವಾಗಬಹುದು. ಇಲ್ಲವೆ ಪ್ರಾಣಾಪಾಯ ಉಂಟಾಗಬಹುದು. ಆರೋಗ್ಯ ಹಾಗೂ ಮುಂಜಾಗ್ರತೆಯ ದೃಷ್ಟಿಯಿಂದ ಇಂತಹ ನಂಬಿಕೆ ಹುಟ್ಟಿಕೊಂಡಿರಬಹುದು.

**೨೩. ದೆವ್ವ ಗಾಳಿಗೆ ಹಾರಿ ಹೋದ ಬಟ್ಟೆಗಳನ್ನು ಧರಿಸಬಾರದು.**

ಗಾಳಿಯ ಅತಿಯಾದ ಒತ್ತಡದ ರಭಸವನ್ನು ಪಿರಾಟವಾಗಿ ಕಂಡ ಜನತೆ ಅದನ್ನು ದೆವ್ವ ಗಾಳಿ ಎಂದು ಕರೆಯುತ್ತಾರೆ. ಈ ಜೋರಾದ ಗಾಳಿಗೆ ಹಾರಿ ಹೋದ ಬಟ್ಟೆ ಅಲ್ಲೆಲ್ಲೋ ದೂರದಲ್ಲಿ ಬಿದ್ದಿರುತ್ತವೆ. ಅವುಗಳು ಸಿಗುವುದೇ ಅಪರೂಪ. ಅವು ಸಿಕ್ಕಿದರೂ ಆ ಬಟ್ಟೆಯಲ್ಲಿ ದೆವ್ವ ಗಾಳಿ ಸೇರಿಕೊಂಡಿರುತ್ತದೆ ಎಂಬ ಭಯದಿಂದಾಗಿ ಅದನ್ನು ಧರಿಸುವುದಿಲ್ಲ.

**೨೪. ಮಲಗುವಾಗ ತಲೆಯ ಬಳಿ ಕಸಬರಿಗೆಯನ್ನು ಇಲ್ಲವೇ ಚಪ್ಪಲಿಯನ್ನು ಇಟ್ಟುಕೊಂಡು ಮಲಗಬೇಕು. ಇದರಿಂದ ದೆವ್ವಗಳು ಹತ್ತಿರ ಬರುವುದಿಲ್ಲ.**

ದೆವ್ವಗಳು ಕಸಬರಿಗೆ, ಚಪ್ಪಲಿಗಳಿಗೆ ಹೆದರುತ್ತವೆ ಎಂಬ ನಂಬಿಕೆಯಿದೆ. ಏಕೆಂದರೆ, ಇವುಗಳಿಂದ ಹೊಡೆಸಿಕೊಂಡರೆ ಅವು ಜಾತಿ ಕೆಟ್ಟಂತೆ. ಉಳಿದ ದೆವ್ವಗಳು ಮತ್ತೆ ತಮ್ಮ ಗುಂಪಿಗೆ ಸೇರಿಸಿಕೊಳ್ಳುವುದಿಲ್ಲ. ದೆವ್ವ ಹಿಡಿದಿರುವವರಿಗೆ, ದೆವ್ವ ಬಿಡಿಸಲು ಇವುಗಳಿಂದ ಚೆನ್ನಾಗಿ ಹೊಡೆಯುತ್ತಾರೆ. ಇದರಿಂದಾಗಿ ದೆವ್ವ ಬಿಟ್ಟು ಹೋಗುತ್ತದೆ ಎಂಬ ನಂಬಿಕೆಯಿದೆ.

**೨೫. ಮಲಗಿರುವವರ ಸುತ್ತ ಕುಳಿತುಕೊಳ್ಳಬಾರದು**

ಸತ್ತವರ ಬಳಿ ಹಾಗೆ ಕುಳಿತು ದುಃಖ ಪಡುವುದರಿಂದ, ಅಂತಹ ಕೆಟ್ಟ ಕಲ್ಪನೆಯು ಬಾರದಿರಲಿ ಎಂಬ ಆಶಯವನ್ನು ಈ ನಂಬಿಕೆ ಹೊಂದಿದೆ.

**೨೬. ಓಡುವ ಚುಕ್ಕೆ ನೋಡಬಾರದು.**

ಜೀವನದಲ್ಲಿ ಯಾವುದೇ ಕೆಟ್ಟ ಕೆಲಸಗಳನ್ನು ಮಾಡದೇ ಸತ್ತು ಹೋಗುವರು ನಕ್ಷತ್ರಗಳಾಗುತ್ತಾರೆ ಎಂಬ ನಂಬಿಕೆಯಿದೆ. ಈ ರೀತಿಯ ನಂಬಿಕೆ ತಿಳುವಳಿಕೆಯ ಬದುಕಿನ ಸಾರ್ಥಕತೆಗೆ ಬೆರಳು ಮಾಡಿ ತೋರಿಸುವಂತಿದೆ. ನಕ್ಷತ್ರ ಓಡುವುದಾಗಲಿ ಅಥವಾ ಬೀಳುವುದನ್ನು ಕಂಡರೆ ಕೆಡುಕಾಗುತ್ತದೆ ಎಂಬುದು ಜನರ ನಂಬಿಕೆಯಾಗಿದೆ. ನಕ್ಷತ್ರ ಬಿದ್ದೊಡನೆ ನೋಡಿದವರು ಆ ದಿಕ್ಕಿಗೆ ಉಗುಳಿದರೆ ಒಳಿತಾಗುತ್ತದೆ ಎಂಬ ನಂಬಿಕೆ ರೂಢಿಯಲ್ಲಿದೆ.

**೨೭. ಕತ್ತಲಲ್ಲಿ ಊಟ ಮಾಡಬಾರದು.**

ಕತ್ತಲಲ್ಲಿ ಇರುವೆ, ಸೊಳ್ಳೆ, ಜಿರಳೆ, ಹಲ್ಲಿ ಮುಂತಾದವು ಮನೆಯಲ್ಲಿ ಓಡಾಡುತ್ತಿರುತ್ತವೆ. ದೀಪದ ಬೆಳಕು ಸಹ ಇಲ್ಲದೆ ಕತ್ತಲಲ್ಲಿ ಊಟ ಮಾಡುವಾಗ ತಟ್ಟೆಯಲ್ಲಿ ಬೀಳಬಹುದೆಂಬ ಕಾರಣಕ್ಕಾಗಿ ಈ ನಂಬಿಕೆ ಪ್ರಚಲಿತದಲ್ಲಿದೆ. ಊಟ ಮಾಡುತ್ತಿರುವಾಗ ದೀಪ ಆರಿದರೆ ಊಟ ನಿಲ್ಲಿಸಿ, ದೀಪ ಹಚ್ಚಿದ ನಂತರ ನೀರು ಕುಡಿದು ಊಟ ಮಾಡಬೇಕೆಂಬುದು ಇಲ್ಲಿನ ಉದ್ದೇಶ. ಹೆಚ್ಚು ಹೊತ್ತು ಬಿಟ್ಟರೆ ಕ್ರಿಮಿ-ಕೀಟಗಳು ಗಾಳಿಯ ಮೂಲಕ ಸೇರಬಹುದಾದ್ದರಿಂದ ಬೇಗ ಊಟ ಮುಗಿಸಬೇಕೆಂಬುದು ಈ ನಂಬಿಕೆಯಲ್ಲಿ ಗುರುತಿಸಬಹುದಾಗಿದೆ.

**೨೮. ಒಲೆ ಸಾರಿಸದೆ, ಒಲೆ ಹಚ್ಚಬಾರದು**

ಸಾರಿಸುವುದು ಎಂದರೆ ಶುದ್ಧವಾಗಿಟ್ಟುಕೊಳ್ಳುವುದು. ನಮಗೆ ದಿನನಿತ್ಯದ ಆಹಾರವನ್ನು ತಯಾರಿಸಿಕೊಳ್ಳಲು ಒಲೆ ಅವಶ್ಯಕವಾಗಿ ಬೇಕಾಗುವುದರಿಂದ ಅದನ್ನು ದೇವರ ಸಮಾನವೆಂದು ಭಾವಿಸಲಾಗಿದೆ. ಅದನ್ನು ಶುದ್ಧವಾಗಿಟ್ಟುಕೊಳ್ಳಬೇಕು ಎಂಬುದು ಮುಖ್ಯ ಉದ್ದೇಶವಾಗಿದೆ.

**೨೯. ಒಲೆಗೆ ಕಾಲಿನಿಂದ ಒದೆಯಬಾರದು**

ಒಲೆಯು ಅಗ್ನಿಯ ಪ್ರತಿರೂಪವಾಗಿರುವುದರಿಂದ ದೇವರಿಗೆ ಸಮಾನವೆಂಬ ಭಾವನೆ ಜನರಲ್ಲಿದೆ. ಅಗ್ನಿಯು ಪಂಚಭೂತಗಳಲ್ಲಿ ಒಂದಾಗಿದ್ದು, ಪೌರಾಣಿಕ ಕಲ್ಪನೆ ಇದೆ. ಆದ್ದರಿಂದ ಅಗ್ನಿಯನ್ನು ಗೌರವಿಸಲಾಗುತ್ತಿದೆ. ಒಲೆಯನ್ನು ಒದ್ದಾಗ, ಒಲೆಯಲ್ಲಿರುವ ಬೆಂಕಿ ತಾಗಿ, ಅಪಾಯ ಉಂಟಾಗುವ ಸಂಭವವಿರುತ್ತದೆ. ಆದ್ದರಿಂದ ಒಲೆಗೆ ಒದೆಯಬಾರದು ಎಂಬುದನ್ನು ಧಾರ್ಮಿಕ ಅಂಶದಿಂದ ನಿಷೇಧಿಸಿ, ವಾಸ್ತವಿಕತೆಯನ್ನು ಅರಿವಿಗೆ ತರುವ ಪ್ರಯತ್ನ ಈ ನಂಬಿಕೆಯಲ್ಲಿದೆ.

**೩೦ ದೀಪವನ್ನು ಬಾಯಿಯಿಂದ ಊದಬಾರದು**

ಸಾಮಾನ್ಯವಾಗಿ ಹಳ್ಳಿಗಳಲ್ಲಿ ಸೀಮೆಎಣ್ಣೆ ಇತರೆ ಎಣ್ಣೆಯ ದೀಪಗಳನ್ನು ಬಳಸುತ್ತಾರೆ. ದೀಪಗಳನ್ನು ಆರಿಸುವಾಗ ಬಾಯಿಯಿಂದ ಊದಬಾರದೆಂಬ ನಂಬಿಕೆಯಿದೆ. ಏಕೆಂದರೆ ದೀಪಗಳ ಸುತ್ತಲಿನ ವಾತಾವರಣದಲ್ಲಿ ಆಮ್ಲಜನಕ ತೀರ ಕಡಿಮೆಯಿದ್ದು, ಇಂಗಾಲದ ಡೈ ಆಕ್ಸೈಡ್, ಮೊನಾಕ್ಸೈಡ್ ಹೆಚ್ಚಿನ ಪ್ರಮಾಣದಲ್ಲಿರುತ್ತವೆ. ಬಾಯಿಯಿಂದ ಗಾಳಿ ಊದಿದರೆ ಶ್ವಾಸಕೋಶದಿಂದ ಬಾಯಿ ಮೂಲಕ ಗಾಳಿ ಹೊರಬರುತ್ತಿದ್ದಂತೆಯೇ ಶ್ವಾಸಕೋಶ ಖಾಲಿಯಾಗಿ ಒಳಗೆ ಒತ್ತಡ ಕಡಿಮೆಯಾಗುತ್ತದೆ. ಮರುಕ್ಷಣದಲ್ಲಿಯೇ ಶ್ವಾಸಕೋಶ ಹಿಗ್ಗಿದಾಗ ತಕ್ಷಣಕ್ಕೆ ಅಲ್ಲಿರುವ ಗಾಳಿಯನ್ನೇ ಒಳಕ್ಕೆ ಎಳೆದುಕೊಳ್ಳುತ್ತದೆ. ಆರೋಗ್ಯದ ಮೇಲೆ ದುಷ್ಪರಿಣಾಮ ಬೀರದಿರಲೆಂದು ಈ ರೀತಿಯ ನಂಬಿಕೆ ಹುಟ್ಟಿಕೊಂಡಿದೆ.

**೩೧. ಕಾಲು ತೊಳೆಯುವಾಗ ಹಿಮ್ಮಡಿ ಪೂರ್ತಿಯಾಗಿ ಒದ್ದೆಯಾಗಬೇಕು. ಇಲ್ಲದಿದ್ದರೆ ಶನಿಯ ಕಾಟವಿರುತ್ತದೆ.**

ಹೊರಗಡೆ ಓಡಾಡುವಾಗ ಕಾಲಿಗೆ ಮಣ್ಣಿನ, ಧೂಳಿನ ಕಣಗಳು ಮೆತ್ತಿಕೊಂಡಿರುತ್ತವೆ. ಇದರಲ್ಲಿ ಅನೇಕ ಸೂಕ್ಷ್ಮಾಣು ಜೀವಿಗಳು ಸೇರಿಕೊಂಡಿರುತ್ತವೆ. ಕಾಲು ತೊಳೆಯದೆ ಇದ್ದರೆ ಆ ಕ್ರಿಮಿಗಳೆಲ್ಲಾ ಮನೆಯ ಒಳಗಡೆ ಸೇರಿಕೊಳ್ಳುವ ಸಂಭವವಿರುತ್ತದೆ. ಕಾಲಿನ ಹಿಮ್ಮಡಿ ಪೂರ್ತಿಯಾಗಿ ತೊಳೆಯುವುದು ಶುಚಿತ್ವದ ದೃಷ್ಟಿಯಿಂದ ಮುಖ್ಯವಾದ ಸಂಗತಿ. ಬುದ್ಧಿ ಮಾತನ್ನು ಕೇಳದವರನ್ನು ಸರಿದಾರಿಗೆ ತರುವಂತೆ ಮಾಡಲು ಈ ನಂಬಿಕೆಯಲ್ಲಿ ಶನಿಯ ಭಯವನ್ನು ಒಡ್ಡಲಾಗಿದೆ.

**೩೨. ಒಡೆದ ಕನ್ನಡಿಯಲ್ಲಿ ಮುಖ ನೋಡಬಾರದು**

ಮನೆಯಲ್ಲಿ ಕನ್ನಡಿ ಒಡೆದರೆ ಅಶುಭ ಎಂಬ ನಂಬಿಕೆ ಮೂಢನಂಬಿಕೆ ಆದರೂ ಈ ಒಡೆದ ಕನ್ನಡಿ ಬಳಸದೆ ಇರುವುದರಲ್ಲಿ ಉಪಯೋಗವಿದೆ. ಏಕೆಂದರೆ, ಒಡೆದ ಕನ್ನಡಿಯ

ಗಾಜು ಚೂಪಾಗಿದ್ದು, ದೇಹದ ಯಾವ ಭಾಗಕ್ಕೂ ತಗುಲಿದರೂ ರಕ್ತ ಸುರಿಯುತ್ತದೆ ಮತ್ತು ಚುಚ್ಚಿದ ಭಾಗದಲ್ಲಿ ಗಾಜು ಸೇರುತ್ತವೆ. ಆದ್ದರಿಂದ ಮುಖವೇ ನೋಡಬಾರದೆಂಬ ನಂಬಿಕೆಯಿಂದಾಗಿ ಅದನ್ನು ಉಪಯೋಗಿಸಬಾರದೆಂಬ ಉದ್ದೇಶ ಈ ನಂಬಿಕೆಯಲ್ಲಿದೆ.

**೩೩. ರಾತ್ರಿ ಹೊತ್ತು ಸೂಜಿಯಿಂದ ಹೊಲೆಯಬಾರದು**

ಏನೇ ಹೊಲೆಯ ಬೇಕಾದರೂ ಕಣ್ಣಿನ ದೃಷ್ಟಿಕೋನ ಅದರ ಮೇಲೆಯೇ ಇಡಬೇಕಾಗುತ್ತದೆ. ಇಲ್ಲವಾದರೆ ಹೊಲಿಗೆಯು ತಪ್ಪುತ್ತದೆ. ಹಾಗೆಯೇ ಸೂಜಿಯು ಅಂಗಾಂಗಳಿಗೆ ಚುಚ್ಚುವ ಸಂಭವವಿರುತ್ತದೆ. ಬೆಳಕಿನಲ್ಲಿ ಮಾಡಬಹುದಾದ ಕೆಲಸಕ್ಕೂ ಮತ್ತು ಕತ್ತಲಲ್ಲಿ ಮಾಡಬಹುದಾದ ಕೆಲಸಕ್ಕೂ ವ್ಯತ್ಯಾಸವಾಗುತ್ತದೆ. ರಾತ್ರಿ ಹೊತ್ತು ಇಂತಹ ಕೆಲಸಗಳಿಂದಾಗಿ ಕಣ್ಣಿನ ದೋಷಕ್ಕೆ ಕಾರಣವಾಗುತ್ತದೆ. ಆದ್ದರಿಂದ ಇಂತಹ ಆತಂಕಗಳನ್ನು ತಪ್ಪಿಸುವ ಉದ್ದೇಶ ಈ ನಂಜಿಕೆಯಲ್ಲಿದೆ.

**೩೪. ರಾತ್ರಿ ಹೊತ್ತು ಕಸ ಗುಡಿಸಬಾರದು**

ರಾತ್ರಿ ಹೊತ್ತು ಕಸಗುಡಿಸಿ ಹೊರ ಹಾಕಿದರೆ ಮನೆಯ ಲಕ್ಷ್ಮೀ ಹೊರ ಹೋಗುತ್ತಾಳೆಂಬ ನಂಬಿಕೆಯಿದೆ. ರಾತ್ರಿ ಸಮಯದಲ್ಲಿ ಕಸ ಗುಡಿಸುವಾಗ ಮನೆಯಲ್ಲಿ ಬಿದ್ದಂತಹ ಸಣ್ಣ, ಪುಟ್ಟ ಬೆಲೆಬಾಳುವ ವಸ್ತುಗಳೇನಾದರೂ ಕೈತಪ್ಪಿ ಕಸದ ಮೂಲಕ ಹೊರ ಹೋಗಬಹುದು. ಆದ್ದರಿಂದ ವಸ್ತುಗಳಾವವು ಕಳೆದು ಹೋಗಬಾರದೆಂಬ ಕಾರಣಕ್ಕಾಗಿ ರಾತ್ರಿ ಹೊತ್ತು ಕಸ ಗುಡಿಸಿ ಹೊರಹಾಕಬಾರದೆಂಬ ನಿಷೇಧ ನಂಬಿಕೆ ಜಾರಿಯಲ್ಲಿದೆ.

**೩೫. ಪೂರ್ವದಿಕ್ಕಿಗೆ ಕಾಲು ಚಾಚಿ ಮಲಗಬಾರದು**

ಪೂರ್ವದಿಕ್ಕು ಸೂರ್ಯದೇವ ಹುಟ್ಟುವ ದಿಕ್ಕು ಎಂಬ ಕಾರಣದಿಂದ ಕೆಲವರು ಸೂರ್ಯ ಹುಟ್ಟಿದ ಮೇಲೂ ಮಲಗಿರುತ್ತಾರಾದ್ದರಿಂದ, ಅದನ್ನು ತಪ್ಪಿಸುವ ಸಲುವಾಗಿ ಆ ಕಡೆ ಕಾಲು ಚಾಚಿ ಮಲಗುವುದು ಅಪಚಾರ ಎನ್ನುವ ದೃಷ್ಟಿಯಿಂದ ಈ ನಂಬಿಕೆ ಹುಟ್ಟಿಕೊಂಡಿರಬಹುದು.

**೩೬. ಅನ್ನವನ್ನು ಕೈಯಲ್ಲಿ ತೂಕ ಮಾಡಿ ಊಟ ಮಾಡಬಾರದು. ಸಿಗುವ ಅನ್ನವೂ ಸಿಗುವುದಿಲ್ಲ.**

ಕೆಲವರು ಅನ್ನವನ್ನು ಉಂಡೆ ಮಾಡಿ, ಅದನ್ನು ಕೈಯಲ್ಲಿ ತೂಗಿಕೊಂಡು ಊಟ ಮಾಡುತ್ತಾರೆ. ಇದು ನೋಡುಗರಿಗೆ ಅಶಿಸ್ತು ಭಾವನೆಯನ್ನು ಉಂಟು ಮಾಡುತ್ತದೆ. ಅದನ್ನು ತಪ್ಪಿಸುವ ಸಲುವಾಗಿ, ಊಟ ಮಾಡುವಾಗ ಒಂದು ಶಿಸ್ತು, ಗಾಂಭೀರ್ಯ ಇರಬೇಕು ಎಂಬ ಕಾರಣದಿಂದ ಈ ನಂಬಿಕೆಯು ಹುಟ್ಟಿಕೊಂಡಿದೆ.

**೩೭. ಊಟ ಮಾಡಿದ ಎಂಜಲನ್ನು ತುಳಿಯಬಾರದು. ಹಾಗೆ ತುಳಿದರೆ ಕಾಲ್ದೂಳು ಆಗುತ್ತದೆ.**

ಊಟ ಮಾಡಿದ ಸ್ಥಳ ಎಂಜಲಾಗಿರುತ್ತದೆ. ಅದನ್ನು ನೋಡದೇ ಬೇರೆಯವರು ತುಳಿದರೆ, ಊಟ ಮಾಡಿದವರಿಗೆ ಕಾಲ್ದೂಳು ಆಗುತ್ತದೆ ಎಂಬ ನಂಬಿಕೆಯಿದೆ. ಕಾಲ್ದೂಳಿನಿಂದ ಹೊಟ್ಟೆ ನೋವಿನ ಜೊತೆಗೆ ಭೇದಿಯೂ ಆಗುತ್ತದೆ. ಊಟ ಮಾಡುವ ಸ್ಥಳ ಸದಾ ಶುದ್ಧವಾಗಿರಬೇಕೆಂಬ ಆಶಯ ಈ ನಂಬಿಕೆಯಲ್ಲಿದೆ.

**೩೮. ಏನನ್ನಾದರೂ ತಿನ್ನುತ್ತಿರುವಾಗ ಬೇರೆಯವರು ಎದುರಿಗಿದ್ದು, ಅವರಿಗೆ ಕೊಡದೆ ತಿಂದರೆ 'ಕಣ್ಣು ಜುಟ್ಟು' ಬರುತ್ತದೆ.**

ಕಣ್ಣಿನ ರೆಪ್ಪೆಯ ಅಂಚಿನಲ್ಲಿ ಗುಳ್ಳೆಯ ರೀತಿಯಲ್ಲಿ ಊದಿಕೊಳ್ಳುವುದನ್ನು 'ಕಣ್ಣುಜುಟ್ಟು' ಎಂದು ಕರೆಯುತ್ತಾರೆ. ಇದನ್ನು ಹೋಗಲಾಡಿಸಲು ಪಾಳುಬಿದ್ದ ಮನೆಯ ಒಡೆದ ಮಡಿಕೆಯ ಚೂರನ್ನು ನೀರಿನಲ್ಲಿ ತೇಯ್ದು ಹಚ್ಚುತ್ತಾರೆ. ಸಮಬಾಳು, ಸಮಪಾಲು ತತ್ವ ಈ ನಂಬಿಕೆಯಲ್ಲಿ ವ್ಯಕ್ತವಾಗುತ್ತದೆ.

**೩೯. ಮೂರು ದಾರಿ ಕೂಡುವ ಕಡೆ ತೆಗೆದು ಹಾಕಿದ್ದ(ನೀವಾಳಿಸಿ) ಏನನ್ನೇ ಆದರೂ ದಾಟಬಾರದು.**

ಸಾಮಾನ್ಯವಾಗಿ ಮಂತ್ರಿಸಿದ ಯಾವುದೇ ವಸ್ತುವನ್ನು ಮೂರು ದಾರಿ ಕೂಡುವ ಕಡೆ ಹಾಕುವುದು ವಾಡಿಕೆ. ಈ ರೀತಿ ಹಾಕಿದವರಿಗೆ ಪರಿಹಾರವಾಗಿ, ಅಲ್ಲಿ ಓಡಾಡುವರಿಗೆ ಅದು ತಾಗಲಿ ಎಂಬ ದೃಷ್ಟಿಯಿಂದ ಈ ರೀತಿ ಮಾಡುತ್ತಾರೆ. ಸಾಮಾನ್ಯವಾಗಿ ಹಾಗೆ ತಂದು ಹಾಕುವುದು ರಾತ್ರಿ ವೇಳೆಯಲ್ಲಿ. ಹಗಲಿನಲ್ಲಿ ನೋಡಿದವರು ಆಕ್ಷೇಪಿಸುತ್ತಾರೆ.

**೪೦. ಮನೆಯ ಬಾಗಿಲು ಪೂರ್ವಕ್ಕಿದ್ದರೆ ಒಳ್ಳೆಯದು**

ವೈಜ್ಞಾನಿಕವಾಗಿಯೂ, ಆರೋಗ್ಯದ ದೃಷ್ಟಿಯಿಂದಲೂ ಇದು ಒಪ್ಪಿಗೆಯಾಗಿದೆ. ಬೆಳಗಿನ ಸೂರ್ಯನ ಕಿರಣ ಮನೆಯೊಳಗೆ ಬೀಳುವುದು ಒಳ್ಳೆಯದು ಎಂಬುದು ನಂಬಿಕೆಯಾಗಿಯೂ ಉಳಿದಿದೆ.

**೪೧. ತೆಂಗಿನಕಾಯಿಯನ್ನು ಒಡೆಯುವಾಗ ತೊಟ್ಲುಗಾಯಿಯಾದರೆ ಮಕ್ಕಳಾಗುತ್ತವೆ.**

ತೆಂಗಿನಕಾಯಿಯನ್ನು ಒಡೆಯುವಾಗ ಅದು ಸಮವಾಗಿ ಭಾಗವಾಗದೆ, ಸ್ವಲ್ಪ ಉದ್ದುದ್ದವಾಗಿ ಭಾಗವಾದರೆ ಅದಕ್ಕೆ 'ತೊಟ್ಲುಗಾಯಿ' ಎನ್ನುತ್ತಾರೆ. ತೆಂಗಿನಕಾಯಿ ಒಡೆಯುವಾಗ ಆಕಸ್ಮಿಕವಾಗಿ ಹೀಗಾದರೆ ಮುಂದಿನ ವರ್ಷ ತೊಟ್ಲು ಕಟ್ಟುವ ಸೂಚನೆ ಎಂಬ ನಂಬಿಕೆಯಿದೆ.

**೪೨. ಹೆಣ್ಣು ಕೋಳಿ ಕೂಗಿದರೆ ಮನೆಗೆ ಅಪಾಯ**

ಸಾಮಾನ್ಯವಾಗಿ ಗಂಡುಕೋಳಿ(ಹುಂಜ) ಮಾತ್ರ ಕೂಗುವ ಶಕ್ತಿಯನ್ನು ಪಡೆದಿರುತ್ತದೆ. ಇದಕ್ಕೆ ಅದರ ಧ್ವನಿ ಪೆಟ್ಟಿಗೆಯಲ್ಲಿರುವ ವ್ಯತ್ಯಾಸ ಕಾರಣ. ಆದರೆ ಕೆಲವೊಮ್ಮೆ ದೈಹಿಕ ವ್ಯತ್ಯಾಸಗಳಿಂದಾಗಿ ಹೆಣ್ಣು ಕೋಳಿಯೂ(ಹೇಂಟೆ) ಕೂಗುತ್ತದೆ. ಗಂಡಸು ಹೆಣ್ಣನ್ನು ತನಗಿಂತ ಬೇರೆ ಮಾಡುವ ಉದ್ದೇಶದಿಂದಲೂ ಇಂತಹ ನಂಬಿಕೆಗಳನ್ನು ಸೃಷ್ಟಿಸಿ, ಅವು ಸತ್ಯವೆಂಬಂತೆ ನಡೆಸಿಕೊಂಡು ಬಂದಿದ್ದಾನೆ.

**೪೩. ತೊನ್ನು ಹತ್ತಿದವರನ್ನು ಸತ್ತಾಗ ಸುಡಬೇಕು. ಹೂಳಬಾರದು**

ತೊನ್ನಿದ್ದವರನ್ನು ಹೂತರೆ ಆ ಗ್ರಾಮದಲ್ಲಿ ಮಳೆ ಬರುವುದಿಲ್ಲವೆಂಬ ನಂಬಿಕೆಯಿದೆ. ಎಲ್ಲ ಕಡೆಯೂ ಮಳೆಯಾಗಿ, ಯಾವುದೋ ಒಂದು ಪ್ರದೇಶದಲ್ಲಿ ಮಾತ್ರ ಮಳೆ ಆಗದೆ ಇದ್ದರೆ ಕೆಲವರು ಮೊದಲು ಈ ಕಾರಣವನ್ನು ಊಹಿಸುತ್ತಾರೆ. ಏನಾದರೂ ಸೂಚನೆ ಕಂಡುಬಂದರೆ ಗ್ರಾಮಸ್ಥರು, ಊರ ಮುಖಂಡರ ಸಮ್ಮುಖದಲ್ಲಿ ರಾತ್ರೋ ರಾತ್ರಿ ಹೂತಿರುವ ಹೆಣವನ್ನು

ಹೊರತೆಗೆದು ಸುಟ್ಟು ಹಾಕುತ್ತಾರೆ. ತೊನ್ನಿದ್ದವರ ದೇಹ ಗುಂಡಿಯಲ್ಲಿ ಎಷ್ಟು ದಿನವಾದರೂ ಕರಗದೆ ಹಾಗೆಯೇ ಇರುತ್ತದೆಯಂತೆ. ಈ ಎಲ್ಲ ಕಾರಣಗಳಿಂದಾಗಿಯೇ ಬೇಡದ ಜನಾಂಗಕ್ಕೆ ಸೇರದ ಜನಾಂಗವಾಗಿದ್ದರೂ ಕೂಡ ತಾವೇ ಮುಂದಾಗಿ ಅಂತಹವರನ್ನು ಹೂಳುವ ಬದಲು ಸುಟ್ಟು ಬಿಡುತ್ತಾರೆ.

### ೩.೫. ಕೆರೆ - ಕುಂಟೆ, ಬಾವಿಗಳಿಗೆ ಸಂಬಂಧಿಸಿದ ಐತಿಹ್ಯಗಳು

**ಕೆರೆಗಳು**

ಮಾನವನ ಉಗಮ ಮತ್ತು ವಿಕಾಸದ ಸುದೀರ್ಘ ಇತಿಹಾಸವನ್ನು ಗಮನಿಸಿದಾಗ ನಮಗೆ ತಿಳಿಯುವ ವಿಷಯವೇನೆಂದರೆ, ಮಾನವ ತನ್ನ ಪೂರ್ವಜರ ಕಾಲದಿಂದಲೂ ಭೌತಿಕವಾಗಿ ಹಾಗೂ ಮಾನಸಿಕವಾಗಿ ವಿಕಾಸ ಹೊಂದುವುದರೊಂದಿಗೆ ಪರಿಸರದಲ್ಲಿ ಆಗುತ್ತಿರುವ ಕಠಿಣ ಸಮಸ್ಯೆಗಳನ್ನೂ ಸಹ ಎದುರಿಸುತ್ತಾ ಬಂದಿದ್ದಾನೆ. ಮಾನವನ ಎಲ್ಲಾ ಬಗೆಯ ಕಾರ್ಯ ಚಟುವಟಿಕೆಗಳು ಸರೋವರ, ನದಿ, ಕೆರೆ, ತೊರೆಗಳ ಸಮೀಪದಲ್ಲಿಯೇ ಕೇಂದ್ರೀಕೃತವಾಗಿದ್ದವು.[೧೩] ಪ್ರಾರಂಭದಲ್ಲಿ ಅಲೆಮಾರಿ ಜೀವನವನ್ನು ನಡೆಸುತ್ತಿದ್ದ ಮಾನವನು ಒಂದೆಡೆ ಸ್ಥಿರವಾಗಿ ನೆಲೆನಿಲ್ಲುವಂತಹ ಪ್ರಯತ್ನವು ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ. ಈ ವ್ಯವಸಾಯ ಪದ್ಧತಿಯು ಅವನ ಜೀವನದಲ್ಲಿ ಒಂದು ಕ್ರಮಬದ್ಧತೆಯನ್ನು ತಂದಿತು. ಮಾನವನ ಸರ್ವತೋಮುಖ ಅಭಿವೃದ್ಧಿ ಮತ್ತು ವಾಣಿಜ್ಯ ವ್ಯವಹಾರಗಳೆಲ್ಲವೂ ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾರಂಭವಾದವು. ಒಂದು ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ವ್ಯವಸಾಯವು ತಳಹದಿಯಾಯಿತು.

ಪ್ರಾಚೀನ ಕಾಲದಲ್ಲಿ ಪ್ರಾಣಿಗಳ ಹೆಜ್ಜೆ ಗುರುತುಗಳಿಂದಾದ ತಗ್ಗು ಪ್ರದೇಶದಲ್ಲಿ ನೀರು ಸಂಗ್ರಹವಾಗಿದ್ದು ಕೆಲವೊಮ್ಮೆ ಮಾನವರಿಗೆ ಅಲ್ಲಿಯ ನೀರು ಉಪಯೋಗಕ್ಕೆ ಬಂದಾಗ, ತಗ್ಗಾದ ಪ್ರದೇಶಗಳಲ್ಲಿ ನೀರನ್ನು ಸಂಗ್ರಹಿಸಿಕೊಳ್ಳಬಹುದು ಎಂಬುದನ್ನು ತಿಳಿದುಕೊಂಡು ಕೆರೆಗಳನ್ನು ನಿರ್ಮಿಸುವ ಕಾರ್ಯವನ್ನು ಕೈಗೊಂಡನು. ಈ ಬಗೆಯ ಕೆರೆಗಳ ನಿರ್ಮಾಣ ಕಾರ್ಯದ ಪ್ರಯತ್ನವನ್ನು ನವಶಿಲಾಯುಗ ಕಾಲದ ಆರಂಭದಿಂದಲೂ ಕಾಣಬಹುದು. ಮಳೆಯ ನೀರನ್ನು ಸಂಗ್ರಹಿಸಿ ಹೆಚ್ಚುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ, ಆಹಾರ ಪೂರೈಕೆಗಾಗಿ ಹೆಚ್ಚುವರಿ ಭೂ ಭಾಗಗಳನ್ನು ವ್ಯವಸಾಯಕ್ಕೆ ಒಳಪಡಿಸಿಕೊಂಡು, ವ್ಯವಸಾಯ ಕ್ಷೇತ್ರಕ್ಕೆ ನೀರನ್ನು ಕೃತಕ ಮೂಲವಾದ ಕೆರೆಗಳಿಂದ ಪೂರೈಸಿಕೊಳ್ಳುತ್ತಿದ್ದನು.

ಪ್ರಪಂಚದಲ್ಲಿರುವ ಕೋಟ್ಯಂತರ ಜೀವರಾಶಿಗಳು, ಪ್ರಾಣಿಗಳು ನೀರಿನಿಂದಲೇ ಉಗಮ ಹೊಂದಿವೆ. ಮಾನವನ ಉಗಮ ಮತ್ತು ವಿಕಾಸದಲ್ಲಿ ನೀರಿನ ಪಾತ್ರ ಪ್ರಮುಖವಾದುದಾಗಿದೆ. ಪ್ರಾರಂಭದಿಂದಲೂ ನಮ್ಮದು ವ್ಯವಸಾಯ ಪ್ರಧಾನ ದೇಶವಾಗಿದ್ದು, ಪ್ರಜೆಗಳ ಕಲ್ಯಾಣವು ವ್ಯವಸಾಯ ಉತ್ಪನ್ನಗಳ ಮೇಲೆ ಅವಲಂಬಿತವಾಗಿದೆ. ಈ ಸಮೃದ್ಧವಾದ ವ್ಯವಸಾಯ

ಉತ್ಪನ್ನಗಳಿಗಾಗಿ ಭಾರತ ದೇಶವು ಮಳೆಯನ್ನು ಅವಲಂಬಿಸಿದೆ. ಆದರೆ ಈ ವಿಶಾಲವಾದ ದೇಶದಲ್ಲಿ ಪ್ರತಿ ವರ್ಷವೂ ಮಳೆಯ ಏರುಪೇರಿನಿಂದ ಒಂದಿಲ್ಲೊಂದು ಭಾಗವು ಅನಾವೃಷ್ಟಿ ಮತ್ತು ಅತಿವೃಷ್ಟಿಗಳಿಗೆ ಬಲಿಯಾಗಿ ಅದರಿಂದ ವ್ಯವಸಾಯ ಉತ್ಪನ್ನಗಳು ಕುಂಠಿತಗೊಂಡು, ಪ್ರಜೆಗಳು ಸಂಕಷ್ಟಗಳಿಗೆ ಈಡಾಗುತ್ತಿದ್ದ ನಿದರ್ಶನಗಳು ವಿಪುಲವಾಗಿ ತಿಳಿದುಬರುತ್ತವೆ. ಈ ದೇಶದಲ್ಲಿ ನೆರೆ ಮತ್ತು ಬರ ಎಂದಿನಿಂದಲೂ ಇರುವ ಸಮಸ್ಯೆಯಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಜನಸಂಖ್ಯೆ ಹೆಚ್ಚಳ ಹಾಗೂ ಅರಣ್ಯ ನಾಶದಿಂದ ಅವು ಇನ್ನೂ ತೀವ್ರವಾಗಿವೆ. ಈ ಸಮಸ್ಯೆಯ ತೀವ್ರತೆಯನ್ನು ಕಡಿಮೆ ಮಾಡಲು ಇರುವ ಒಂದು ಮಾರ್ಗ ನೀರನ್ನು ಜಲಾಶಯಗಳಲ್ಲಿ ಸಂಗ್ರಹಿಸುವುದು. ಅಂತಹ ಕೃತಕ ಸಂಗ್ರಹಗಳೇ ಕೆರೆ, ಕುಂಟೆಗಳಾಗಿವೆ. ಇವು ಮಾನವನ ಅಗತ್ಯತೆಗಳನ್ನು ಪೂರೈಸುವ ಪ್ರಾಥಮಿಕ ಮೂಲಗಳಾಗಿವೆ.[೧೮]

> ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ
> ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ
> ರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯೆಂತೆಲ್ಲವಂ ಪಿಂದೆ ತಾ
> ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳ್ಂ ಲಕ್ಷ್ಮೀಧರಾಮಾತ್ಯನಾ

ಈ ಮೇಲೆ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಅರಸ ಪ್ರೌಢದೇವರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಅಗಸೆಯಲ್ಲಿರುವ ಕ್ರಿ.ಶ. ೧೪೧೧ರ ಶಾಸನವು ತಿಳಿಸುತ್ತದೆ.[೧೯] ಇದರಿಂದ ಮಧ್ಯಕಾಲೀನ ಭಾರತದಲ್ಲಿ ನೀರಾವರಿ ವ್ಯವಸ್ಥೆ, ಕೆರೆಯನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು ಅತಿ ಮುಖ್ಯವಾದ ಮತ್ತು ಪುಣ್ಯದ ಕೆಲಸವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಕೆಲಸವನ್ನು ಮಾಡುವುದು ಸಾಮಾಜಿಕ ಹಾಗೂ ನೈತಿಕ ಜವಾಬ್ದಾರಿಯಾಗಿತ್ತೆಂದೂ ಸಹ ತಿಳಿದುಬರುತ್ತದೆ. ಭಾರತದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಕೆರೆಗಳು ಕಂಡುಬರುತ್ತಿವೆಯಾದರೂ ಅವುಗಳ ಸಂಖ್ಯೆ ದಕ್ಷಿಣ ಭಾರತದಲ್ಲಿ ಹೆಚ್ಚಾಗಿದೆ. ಉತ್ತರ ಭಾರತವು ಹಿಮಾಲಯ ಪರ್ವತ ಶ್ರೇಣಿಗಳಿಂದ ಕೂಡಿದ್ದು, ಹಲವಾರು ನದಿಗಳ ಉಗಮ ಸ್ಥಾನವಾಗಿದೆ. ಇದರಿಂದ ವರ್ಷವಿಡೀ ನದಿಗಳು ತುಂಬಿ ಹರಿಯುವುದರಿಂದ ಅಲ್ಲಿ ನೀರಿನ ಸಂಗ್ರಹದ ಅವಶ್ಯಕತೆ ಕಂಡುಬರುವುದಿಲ್ಲ. ದಕ್ಷಿಣ ಭಾರತದಲ್ಲಿ ಒಣ ಪ್ರದೇಶವೇ ಹೆಚ್ಚಾಗಿದ್ದು, ನೀರಿನ ಸಂಗ್ರಹದ ಅವಶ್ಯಕತೆ ಹೆಚ್ಚಾಗಿರುವುದರಿಂದ ಇಲ್ಲಿ ಜಲಾಶಯಗಳು, ಕೆರೆಗಳು ಮತ್ತು ಬಾವಿಗಳು ಹೆಚ್ಚಾಗಿ ಕಂಡು ಬರುತ್ತವೆ.

ದಕ್ಷಿಣ ಭಾರತವು ಭೌಗೋಳಿಕ ಪರಿಸರದಿಂದಾಗಿ, ಬೇಸಾಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕೆರೆಗಳನ್ನು ಅವಲಂಬಿಸಬೇಕಾಯಿತು. ಕೆರೆಗಳ ಗಾತ್ರವು ಅದು ಹೊಂದಿದ ಭೌಗೋಳಿಕ ಪರಿಸರವನ್ನೇ ಅವಲಂಬಿಸಿತ್ತು. ವಿಜಯನಗರದ ಆಡಳಿತಗಾರರು, ನೂತನ ಕೆರೆಗಳನ್ನು ನಿರ್ಮಿಸಿದರಲ್ಲದೆ, ಹಳೆಯ ಹಾಗೂ ಒಡೆದು ಹೋದ ಕೆರೆಗಳ ಪುನರ್‌ನಿರ್ಮಾಣವನ್ನು

ಕೈಗೆತ್ತಿಕೊಂಡರು. ಏಕೆಂದರೆ ಅಂದಿನ ಮಾನವೀಯ ಅವಶ್ಯಕತೆಗಳನ್ನು ಈ ಕೆರೆಗಳು ಪೂರೈಸುತ್ತಿದ್ದವು. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಅಂದಿನ ದಿನಗಳಲ್ಲಿ ಜನಸಂಖ್ಯೆಯ ಸಮಸ್ಯೆ, ಔದ್ಯೋಗೀಕರಣ, ಪರಿಸರ ಮಾಲಿನ್ಯ ಮುಂತಾದ ಸಮಸ್ಯೆಗಳಿರದೆ ಇದ್ದುದರಿಂದ, ಕೆರೆಗಳಲ್ಲಿ ಶೇಖರಿಸಿದ ನೀರನ್ನು ಕುಡಿಯಲು, ಬಟ್ಟೆ ಒಗೆಯಲು, ಸ್ನಾನ ಮಾಡುವ ಮುಂತಾದ ಕಾರ್ಯಗಳಿಗೂ ಉಪಯೋಗಿಸಲಾಗುತ್ತಿತ್ತು. ಹೀಗಾಗಿ ಕೆರೆಗಳು ಮಾನವರ ಜೀವನದಲ್ಲಿ ಪ್ರಮುಖ ಸ್ಥಾನ ಪಡೆದಿದ್ದವು.[೧೦]

ಕೆರೆಗಳ ಬಗೆಗೆ ಶಿಲಾಶಾಸನ, ತಾಮ್ರಪಟ ಶಾಸನಗಳು ವಿಪುಲವಾಗಿ ದೊರೆಯುತ್ತವೆ. ಶಾಸನಗಳಲ್ಲಿ ಕೆರೆಗಳನ್ನು ವಿವಿಧ ಹೆಸರುಗಳಿಂದ ಕರೆಯುತ್ತಿದ್ದುದನ್ನು ನಾವು ಕಾಣಬಹುದು. ಕೆರೆ, ಕಟ್ಟೆ, ಕುಂಟೆ, ಕಟ್ಟೈ, ಕೊಳ, ಕೊಳಂ, ಸಮುದ್ರ, ಸರೋವರ, ಏರಿ, ತಟಾಕ, ತೀರ್ಥ, ಡೋಣೆ, ಮದಗ ಮುಂತಾದ ಪದಗಳು ಬಳಕೆಯಲ್ಲಿದ್ದವು.[೧೧] ಕೃಷ್ಣದೇವರಾಯನ ತೆಲುಗು ಕೃತಿ ಆಮುಕ್ತಮಾಲ್ಯದ ನೀರಾವರಿ ಪ್ರಾಮುಖ್ಯತೆಯನ್ನು ಈ ರೀತಿ ಒತ್ತಿ ಹೇಳುತ್ತದೆ. 'ರಾಜ್ಯ ಕಿರಿದಾಗಿದ್ದಲ್ಲಿ ಅದರ ಧರ್ಮ ಹಾಗೂ ಅರ್ಥ ಎರಡೂ ಹೆಚ್ಚುವುದು ಕೆರೆಗಳನ್ನು, ನೀರಾವರಿ ಕಾಲುವೆಗಳನ್ನು ನಿರ್ಮಿಸಿದಾಗ ಮಾತ್ರ'[೧೨] ನಾಗರಿಕ ಜೀವನಕ್ಕೆ ನೀರು ಅತಿ ಅವಶ್ಯಕವಾಗಿದ್ದರಿಂದ ಕೆರೆಗಳನ್ನು ನಿರ್ಮಿಸುವ ಕಾರ್ಯಗಳಿಗೆ ವಿಜಯನಗರದ ಅರಸರು ಸ್ವತಃ ತಾವೇ ಪ್ರೋತ್ಸಾಹ ನೀಡುತ್ತಿದ್ದರು.

ಹೊಸಪೇಟೆ ತಾಲ್ಲೂಕಿನಾದ್ಯಂತ ಸುಮಾರು ೬೦ಕ್ಕೂ ಮಿಗಿಲಾದ ಕೆರೆಗಳಿವೆ. ಇವುಗಳಲ್ಲಿ ಸುಮಾರು ೫೫ಕ್ಕೂ ಅಧಿಕವಾದ ಕೆರೆಗಳು ವಿಜಯನಗರ ಕಾಲದಲ್ಲಿ ನಿರ್ಮಿಸಿದಂತಹ ಕೆರೆಗಳೇ ಆಗಿವೆ. ಅವುಗಳಲ್ಲಿ ಕೆಲವು ಕೆರೆಗಳು ವಿಜಯನಗರ ಪೂರ್ವದಲ್ಲಿಯೇ ಇದ್ದವು. ಅಂತಹ ಕೆಲವು ಕೆರೆಗಳನ್ನು ವಿಜಯನಗರ ಅರಸರ ಕಾಲದಲ್ಲಿ ವಿಸ್ತರಿಸಿರುವ ಸಾಧ್ಯತೆಗಳಿವೆ. ವಿಜಯನಗರ ಅರಸರುಗಳಲ್ಲಿ ಕೆರೆಗಳ ನಿರ್ಮಾಣಕ್ಕೆ ಭದ್ರ ಬುನಾದಿಯನ್ನು ಹಾಕಿದವನು 'ಮೊದನೆಯ ಬುಕ್ಕರಾಯ'(ಕ್ರಿ.ಶ. ೧೩೫೬-೭೭)ನೆಂಬುದಾಗಿ ತಿಳಿದುಬರುತ್ತದೆ. ಇವನ ಆಳ್ವಿಕೆಯ ಕಾಲದಲ್ಲಿ ಹಲವು ಕೆರೆಗಳು ನಿರ್ಮಾಣಗೊಂಡ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ.

ಕೆರೆಗಳು ವಿವಿಧ ಆಕಾರಗಳನ್ನು ಹೊಂದಿರುತ್ತಿದ್ದವು. ಕೆರೆಗಳ ಆಕಾರವು ಬಹುತೇಕವಾಗಿ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತಿದ್ದವು.(ವೃತ್ತಾಕಾರ, ಚತುಷ್ಕೋನ, ಬಹುಕೋನ, ಲಂಬಾಕಾರ, ಅರ್ಧಚಂದ್ರಕಾರ ಮತ್ತು ಆಯತಾಕಾರ) ಇದಕ್ಕೆ ಮೂಲಭೂತ ಕಾರಣವು ಆ ಪ್ರದೇಶ ಭೌಗೋಳಿಕ ಲಕ್ಷಣಗಳು. ಕೆರೆಗಳ ರಕ್ಷಣೆ ಮತ್ತು ದೀರ್ಘಕಾಲ ಬಾಳಿಕೆಗಾಗಿ, ಕೆರೆಯ ಏರಿಯನ್ನು ಯಾವಾಗಲೂ ಅಂಕುಡೊಂಕಾಗಿ ನಿರ್ಮಿಸುತ್ತಿದ್ದರು. ಇದರಿಂದಾಗಿ ನೀರಿನ ಒತ್ತಡವು ಕೆರೆಯ ಏರಿಯಲ್ಲಿ ಹಂಚಿ ಹೋಗಿ ಏರಿಯು ಸುರಕ್ಷಿತವಾಗಿರುತ್ತದೆ. ಒಮ್ಮೆ ಕೆರೆಕಟ್ಟೆ ಒಡೆದರೂ, ಏರಿಯ ಸಣ್ಣ ಭಾಗವು ಮಾತ್ರವೇ ಒಡೆಯುತ್ತಿತ್ತು. ಇದನ್ನು ದುರಸ್ತಿಗೊಳಿಸುವುದು ಸುಲಭವಾಗಿದ್ದ

ಕಾರಣದಿಂದ ಕೆರೆಯನ್ನು ಅಂಕುಡೊಂಕಾಗಿ ನಿರ್ಮಿಸುತ್ತಿದ್ದರು. ಇದು ನಮ್ಮ ಪೂರ್ವಜರು ತಮ್ಮ ದೀರ್ಘ ಅನುಭವದಿಂದ ಈ ವಿಷಯಗಳನ್ನು ಕಂಡುಕೊಂಡು ಅತ್ಯಂತ ವೈಜ್ಞಾನಿಕವಾಗಿ ತಮ್ಮ ದೈನಂದಿನ ಜೀವನದಲ್ಲಿ ಬಳಕೆಗೆ ತಂದಿರುವುದು ನಿಜಕ್ಕೂ ಶ್ಲಾಘನೀಯ.

**೧. ಕನ್ನಡಿ ಕೆರೆ**

ಹಂಪೆಯ ಬಳಿಯಲ್ಲಿ ಕನ್ನಡಿಯ ಕೆರೆ ಇತ್ತೆಂದು ವಿಜಯನಗರದ ಅರಸ ಪ್ರೌಢದೇವರಾಯನ ಮಂತ್ರಿಯಾದ ಲಕ್ಷ್ಮೀಧರನ ಕ್ರಿ.ಶ. ೧೪೧೦ರ ಶಾಸನವು ಉಲ್ಲೇಖಿಸುತ್ತದೆ.[೧೬] ಬಹುಶಃ ಈ ಕೆರೆಯು ಅತ್ಯಂತ ಸುಂದರವಾಗಿದ್ದು, ಅದರ ನೀರು ತಿಳಿಯಾಗಿದ್ದರಿಂದ ಅದನ್ನು ಕನ್ನಡಿ ಕೆರೆ ಎಂದು ಕರೆದಿರಬಹುದು. ಈಗ ಕೆರೆಯು ಸಂಪೂರ್ಣವಾಗಿ ನಶಿಸಿಹೋಗಿದೆ.

**೨. ಭೂಪತಿ ಕೆರೆ**

ಭೂಪತಿ ಕೆರೆಯು ಅಚ್ಯುತರಾಯ ಪೇಟೆಯ ದಕ್ಷಿಣಕ್ಕೆ ಇತ್ತೆಂದು ತಿಳಿದುಬರುತ್ತದೆ. ಅಚ್ಯುತರಾಯ ದೇವಸ್ಥಾನದ ಕ್ರಿ.ಶ. ೧೫೩೪ರ ಶಾಸನವು ಭೂಪತಿ ಕೆರೆಯನ್ನು ಕುರಿತು ಉಲ್ಲೇಖಿಸುತ್ತದೆ.[೧೭] ಈ ಕೆರೆಯು ಮಾತಂಗ ಪರ್ವತದ ಕೆಳಗಿರುವ ಕಣಿವೆಯಲ್ಲಿತ್ತೆಂಬುದಾಗಿ ಇತ್ತೀಚಿನ ಶೋಧಗಳಿಂದ ತಿಳಿದುಬರುತ್ತದೆ. ಆದರೆ, ಇಂದು ಕೆರೆಯ ರೂಪದಲ್ಲಿ ಇದು ಕಂಡು ಬರದಿದ್ದರೂ, ಒಂದು ಒಡ್ಡು ಕಟ್ಟಿ ಕೆರೆಯಂತೆ ನಿರ್ಮಿಸಲಾಗಿದೆ. ಅಚ್ಯುತಾಪುರದ ದಕ್ಷಿಣ ಗಡಿ ಭಾಗದಲ್ಲಿರುವ ಈ ನಿರ್ಮಿತಿಯನ್ನು ಗುರುತಿಸಲಾಗಿದೆ. ಇದು ಪೂರ್ಣ ಪ್ರಮಾಣದ ಕೆರೆಯಾಗಿರದೆ ನೀರಿನ ಸಂಗ್ರಾಹಕವಾಗಿದ್ದು, ಅಚ್ಯುತಾಪುರಕ್ಕೆ ಅಲ್ಲಿಂದಲೇ ನೀರು ಪೂರೈಸಲಾಗುತ್ತಿತ್ತು ಎಂಬುದಾಗಿ ತಿಳಿಯುತ್ತದೆ.

**೩. ಕಮಲಾಪುರ ಕೆರೆ**

ಕಮಲಾಪುರ ಕೆರೆಯು ವಿಜಯನಗರ ಕಾಲದ ಕೆರೆಗಳಲ್ಲಿ ಒಂದಾಗಿದೆ. ಈ ಕೆರೆಯು ಕಮಲಾಪುರ ಗ್ರಾಮದ ಪಶ್ಚಿಮಕ್ಕೆ ಇದ್ದು, ತಾಲ್ಲೂಕಿನ ಎರಡನೇ ಅತೀ ದೊಡ್ಡ ಕೆರೆಯಾಗಿದೆ. ಹೊಸಪೇಟೆಗೆ ಈ ಕೆರೆ ಏರಿಯ ಮೇಲಿರುವ ರಸ್ತೆಯ ಮೂಲಕ ಹಾದು ಹೋಗಬೇಕು. ಈ ಕೆರೆ ಏರಿಯು ಸುಮಾರು ೨ ಕಿ.ಮೀ. ಉದ್ದವನ್ನು ಹೊಂದಿದೆ. ಈ ಕೆರೆಯ ಬಗೆಗಿನ ಐತಿಹ್ಯ ಈ ರೀತಿ ಇದೆ.

ಈ ಕೆರೆಯನ್ನು ವಿಜಯನಗರದ ಅರಸ ಅಚ್ಯುತರಾಯ ಮಹಾರಾಜನ ಮಗನಾದ ಪ್ರೌಢ ದೇವರಾಯ ಮಹಾರಾಜನು ತನ್ನ ತಾಯಿಯ ನೆನಪಿಗಾಗಿ ನಿರ್ಮಿಸಿದನು. ಈ ಕೆರೆಗೆ ಏರಿಯನ್ನು ನಿರ್ಮಿಸಿದಾಗಲೆಲ್ಲಾ ಬಿದ್ದು ಹೋಗುತ್ತಿತ್ತಂತೆ. ಚಿಂತಿತನಾದ ದೇವರಾಯನು ಪಂಡಿತರಲ್ಲಿ ವಿಚಾರಿಸಲಾಗಿ, ಪಂಡಿತರು ೧೦೦ ಜನರನ್ನು ಬಲಿ ನೀಡಿದರೆ, ಏರಿಯು ಬಿದ್ದು ಹೋಗದೆ ದೃಢವಾಗಿ ನಿಲ್ಲುತ್ತದೆ ಎಂದರಂತೆ. ತಕ್ಷಣ ದೇವರಾಯನು ೧೦೦ ಜನರನ್ನು ಬಲಿ ನೀಡಿದನಂತೆ. ಇದಾದ ಮೇಲೆ ಕೆರೆಯ ಏರಿಯು ದೃಢವಾಗಿ ನಿಂತಿತಂತೆ ಎಂದು ಜನರು ವಿವರಿಸುತ್ತಾರೆ.

ಈ ಕೆರೆಯು, ವಿಜಯನಗರ ಪೂರ್ವಕಾಲದಲ್ಲಿ ಸಣ್ಣ ಕೆರೆಯಾಗಿದ್ದಿರಬೇಕು. ಕಾಲಕ್ರಮದಲ್ಲಿ ಈ ಪ್ರದೇಶವು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟ ನಂತರ ಕೆರೆಯನ್ನು ದೊಡ್ಡ ಪ್ರಮಾಣದಲ್ಲಿ ವಿಸ್ತರಿಸಿರುವ ಸಾಧ್ಯತೆ ಇದೆ. ಈ ಕೆರೆಗೆ ತುಂಗಭದ್ರಾ ನದಿಯಿಂದ ಬಸವಣ್ಣ ಕಾಲುವೆ ಮತ್ತು ರಾಯ ಕಾಲುವೆ ಎಂಬ ವಿಜಯನಗರ ಕಾಲದ ಎರಡು ಕಾಲುವೆಗಳ ಮೂಲಕ ನೀರು ಬಂದು ಶೇಖರಣೆಗೊಳ್ಳುತ್ತದೆ. ಈ ಕೆರೆಗೆ ನಾಲ್ಕು ತೂಬುಗಳು ಇದ್ದು, ಅವುಗಳಲ್ಲಿ ಎರಡಕ್ಕೆ ಮರದ ತುಂಡುಗಳನ್ನು ಅಳವಡಿಸಿದ್ದರೆ, ಉಳಿದ ಎರಡಕ್ಕೆ ಕಬ್ಬಿಣದ ಬಾಗಿಲುಗಳನ್ನು ಅಳವಡಿಸಲಾಗಿದೆ. ಈ ನಾಲ್ಕೂ ತೂಬುಗಳು ವಿವಿಧ ಎತ್ತರಗಳಲ್ಲಿದ್ದು, ಅವುಗಳಿಗೆ ಅನುಗುಣವಾಗಿ ಕಾಲುವೆಗಳು ಸಹ ವಿವಿಧ ಎತ್ತರಗಳಲ್ಲಿ ಇರುವುದನ್ನು ಗಮನಿಸಬಹುದು. ಕೆರೆಯ ಆಯಕಟ್ಟು ಪ್ರದೇಶದಲ್ಲಿ ಕಬ್ಬು, ಭತ್ತ, ಬಾಳೆ, ತೆಂಗು ಮುಂತಾದ ಬೆಳೆಗಳನ್ನು ಸರ್ವಕಾಲದಲ್ಲಿಯೂ ಬೆಳೆಯುತ್ತಾರೆ.

**೪. ರಾಯರ ಕೆರೆ**

ಹೊಸಪೇಟೆಯ ದಕ್ಷಿಣ ದಿಕ್ಕಿನಲ್ಲಿ ಈ ಕೆರೆಯು ಕಂಡುಬರುತ್ತದೆ. ಹೊಸಪೇಟೆಯಿಂದ ಮರಿಯಮ್ಮನಹಳ್ಳಿಗೆ ಹೋಗುವ ದಾರಿಯಲ್ಲಿ ಎಡಬದಿಗೆ ಕಂಡುಬರುವ ಅತೀ ವಿಶಾಲವಾದ ಕೆರೆಯನ್ನು 'ರಾಯರ ಕೆರೆ' ಎಂದು ಕರೆಯಲಾಗುತ್ತದೆ. ವಿಜಯನಗರ ಅರಸರ ಕಾಲದಲ್ಲಿ ಈ ಕೆರೆಯನ್ನು ಕಟ್ಟಲಾಯಿತಂತೆ. ನಗರಕ್ಕೆ ಹಾಗೂ ವ್ಯವಸಾಯಕ್ಕೆ ಬೇಕಾದ ನೀರಿನ ಪೂರೈಕೆಯನ್ನು ಈ ಕೆರೆಯಿಂದಲೇ ಮಾಡಲಾಗುತ್ತಿತ್ತು. ಆದರೆ ಈಗ ಈ ಕೆರೆಯಲ್ಲಿ ಒಂದು ತೊಟ್ಟು ನೀರು ಸಹ ಇಲ್ಲ. ಇದಕ್ಕೆ ಜನರು ಈ ಕೆಳಗಿನಂತೆ ಕಾರಣವನ್ನು ನೀಡುತ್ತಾರೆ.

ವಿಜಯನಗರ ಕಾಲದಲ್ಲಿ ಈ ಕೆರೆಯನ್ನು ಕಟ್ಟಲು ಒಬ್ಬ ಮೇಸ್ತ್ರಿಗೆ ಅವಕಾಶ ನೀಡಲಾಯಿತಂತೆ. ಸುತ್ತಲಿನ ಪ್ರದೇಶಗಳಲ್ಲಿ ಯಾರೂ ಕಟ್ಟಿರದಂತಹ ಉತ್ತಮವಾದ ಹಾಗೂ ಗಟ್ಟಿಯಾದ ಕೆರೆಯೊಂದನ್ನು ಕಟ್ಟಿ ಹೆಸರು ಪಡೆಯಬೇಕೆಂಬ ಆಸೆ ಆ ಮೇಸ್ತ್ರಿಯದಾಗಿತ್ತು. ಹಾಗೆ ಯೋಜಿಸಿದ ಮೇಸ್ತ್ರಿಯು ತುಂಬಾ ಶ್ರಮವಹಿಸಿ ವಿಸ್ತಾರವಾದ ಮತ್ತು ಆಳವಾದ, ಹಾಗೆಯೇ ಗಟ್ಟಿ ಏರಿಯಿರುವ ಕೆರೆಯನ್ನು ಕಟ್ಟಿಸಿದನಂತೆ. ಆದರೆ ದೊರೆಗಳು ಕಟ್ಟಿದವರಿಗೆ ಸರಿಯಾದ ಕೂಲಿ ನೀಡಲಿಲ್ಲವಂತೆ. ಮೇಸ್ತ್ರಿಯು ತನ್ನಲ್ಲಿದ್ದ ಒಡವೆ ಮತ್ತು ಆಸ್ತಿಯನ್ನು ಮಾರಿ ಕೂಲಿ ನೀಡಲಿಲ್ಲವಂತೆ. ಮೇಸ್ತ್ರಿಯು ತನ್ನಲ್ಲಿದ್ದ ಒಡವೆ ಮತ್ತು ಆಸ್ತಿಯನ್ನು ಮಾರಿ ಕೂಲಿ ನೀಡಿದನಂತೆ. ಹೀಗೆ ತನಗೆ ಅನ್ಯಾಯ ಮಾಡಿದ ಅರಸನಿಗೆ ಶಾಸ್ತಿ ಮಾಡದೆ ಬಿಡಲಾರೆನೆಂದು ನಿರ್ಧರಿಸಿದ ಮೇಸ್ತ್ರೀಯು, ಆ ಕೆರೆಯ ಏರಿಯ ಕೆಳಗೆ ಮೋಸದ ಕೊಳವೆಯೊಂದನ್ನು ಇರಿಸಿದನಂತೆ. ಈ ಕೊಳವೆಯ ಮೂಲಕ ನೀರೆಲ್ಲ ಹೊರಕ್ಕೆ ಹರಿದು ಕೆರೆ ಬರಿದಾಯಿತಂತೆ. ಅಂದಿನಿಂದ ಇಂದಿನವರೆಗೆ ಆ ಮೋಸದ ಕೊಳವೆಯ ಕಾರಣದಿಂದ ಕೆರೆಯಲ್ಲಿ ನೀರು ನಿಲ್ಲುವುದಿಲ್ಲ. ಮೇಸ್ತ್ರಿ ಹೀಗೆ ಮಾಡಿದ್ದರಿಂದಾಗಿ ಮುಂದೆ ವಿಜಯನಗರದಲ್ಲಿ ಬಹಳ ಕಾಲದವರೆಗೆ ನೀರಿಲ್ಲದೆ ಬರಗಾಲ ಉಂಟಾಗಿತ್ತೆಂದು

ಇಲ್ಲಿನ ಜನರು ತಿಳಿಸುತ್ತಾರೆ. ಇದರಿಂದ ಅಂದಿನ ಅರಸರು ಶ್ರಮಕ್ಕೆ ತಕ್ಕ ಕೂಲಿಯನ್ನು ನೀಡುತ್ತಿರಲಿಲ್ಲ ಎಂಬುದಕ್ಕೆ ಈ ಕತೆಯು ಐತಿಹ್ಯ ರೂಪದಲ್ಲಿ ಕಂಡು ಬರುತ್ತದೆ.

ಈ ಕೆರೆಯನ್ನು ಕೃಷ್ಣದೇವರಾಯನು ಕಟ್ಟಿಸಿದನೆಂದು ವಿವಿಧ ಮೂಲಗಳಿಂದ ತಿಳಿದುಬರುತ್ತದೆ. ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರ ಬರಹಗಳಿಂದ ಈ ಕೆರೆಯನ್ನು ಕುರಿತು ಮಾಹಿತಿಗಳು ತಿಳಿಯುತ್ತವೆ. ಅವರ ಬರಹಗಳಲ್ಲಿ ಕೆರೆಯನ್ನು ಕಟ್ಟಿಸಿದುದರ ಮಾಹಿತಿಯೊಂದಿಗೆ ಅನೇಕ ಕುತೂಹಲಕಾರಿಯಾದ ಸಂಗತಿಗಳಿವೆ. ಈ ಕೆರೆಯನ್ನು ಜೊ ಡಿ ಲ ಪೊಂಟೆ(Jao De La Pante) ಪೋರ್ಚುಗಲ್ಲಿನ ತಜ್ಞನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಕೆರೆಯನ್ನು ಎರಡು ಬೆಟ್ಟಗಳ ನಡುವೆ ನಿರ್ಮಿಸಿದುದರ ಕಾರಣವಾಗಿ ಬೆಟ್ಟಗಳ ಪ್ರದೇಶದಲ್ಲಿ ಬೀಳುವ ನೀರು ಬೆಟ್ಟಗಳ ನಡುವೆ ಸಂಗ್ರಹಿಸಿ ಮೂರು ಲೀಗ್ ದೂರದಿಂದ ಕಾಲುವೆಗಳ ಮೂಲಕ ಇಲ್ಲಿಗೆ ಹಾಯಿಸಲಾಗುತ್ತಿತ್ತು ಎಂದು ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿಗನಾದ **ಡೊಮಿಂಗೊಪಾಯಸ್** ದಾಖಲಿಸಿದ್ದಾನೆ. ಈ ಕೆರೆಯನ್ನು ಹೇಗೆ ನಿರ್ಮಿಸಲಾಯಿತು ಎಂಬ ವಿಷಯವನ್ನು ಸಹ ತಿಳಿಸುತ್ತಾನೆ.

ರಾಜನು, ಒಂದು ಬೆಟ್ಟವನ್ನು ಒಡೆದು ಆ ಪ್ರದೇಶದಲ್ಲಿ ಕೆರೆಯನ್ನು ಕಟ್ಟಿಸಿದ. ಆ ಪ್ರದೇಶದಲ್ಲಿ ಸುಮಾರು ಇಪ್ಪತ್ತು ಸಾವಿರ ಜನರು, ಇರುವೆಗಳಂತೆ ತಮ್ಮ ಕೆಲಸವನ್ನು ಮಾಡುತ್ತಿದ್ದರು. ಅವರುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಸಲುವಾಗಿ ರಾಜನ ಅನೇಕ ಮಂದಿ ಆಸ್ಥಾನಿಕರು ನಿಯೋಜಿತರಾಗಿದ್ದರು. ಆದಷ್ಟು ತ್ವರಿತದಲ್ಲಿ ಕೆಲಸವನ್ನು ಪೂರೈಸುವ ಉದ್ದೇಶದಿಂದ ಆಸ್ಥಾನಿಕರನ್ನು ನಿಯೋಜನೆ ಮಾಡಲಾಗಿತ್ತೆಂಬುದನ್ನು ತಿಳಿಸುತ್ತಾನೆ. ಇದಲ್ಲದೆ ಕೆರೆಯನ್ನು ಕುರಿತಂತೆ ಇದ್ದ ನಂಬಿಕೆಗಳ ಬಗೆಗೆ ಸಹ ಬೆಳಕನ್ನು ಚೆಲ್ಲುತ್ತಾನೆ. ಈ ಕೆರೆಯು ಪದೇ ಪದೇ ಒಡೆಯುತ್ತಿರಲಾಗಿ, ರಾಜನು ಬ್ರಾಹ್ಮಣರಲ್ಲಿ ವಿಚಾರಿಸಿದನು. ಅವರುಗಳು, ದೇವರು ಅಸಂತೃಪ್ತನಾಗಿದ್ದಾನೆಂದು, ಅವನಿಗೆ ಬಲಿಯನ್ನು ನೀಡಬೇಕು ಎಂದು ಸೂಚಿಸುತ್ತಾರೆ. ಅದರಂತೆ ರಾಜನು ನರಬಲಿಯನ್ನು ನೀಡಿ, ನರರ ಜೊತೆ ಕುದುರೆ ಮತ್ತು ಕೋಣಗಳನ್ನು ಬಲಿ ನೀಡಿದನೆಂಬುದಾಗಿ ದಾಖಲಿಸಿದ್ದಾನೆ.[೧೫]

ಈ ಕೆರೆಯನ್ನು ಕುರಿತು ಮತ್ತೊಬ್ಬ ಪೋರ್ಚುಗಲ್‌ನ ಪ್ರವಾಸಿಗನಾದ **ಫೆರ್ನಾವೊ ನ್ಯೂನಿಜ್** ಸಹ ದಾಖಲಿಸಿದ್ದಾನೆ. ರಾಜನು ರಾಣಿಯರ ಗೌರವಾರ್ಥವಾಗಿ ನಾಗಲಾಪುರವೆಂಬ ಪುರವನ್ನು ನಿರ್ಮಿಸಿ, ಗೋಡೆಗಳನ್ನು ನಿರ್ಮಿಸಿ ಅರಮನೆಯನ್ನು ಕಟ್ಟಿಸಿದನೆಂದು ತಿಳಿಸುತ್ತಾನೆ. ಅಲ್ಲಿಯ ದೊಡ್ಡ ಬೆಟ್ಟಗಳ ನಡುವೆ ಕೆರೆ ಕಟ್ಟಿಸಿದನೆಂದು ಬರೆದಿದ್ದಾನೆ. ರಾಜ್ಯದಲ್ಲಿ ಇಂತಹ ಕೆರೆಯನ್ನು ನಿರ್ಮಿಸಲು ಸಮರ್ಥರಿಲ್ಲದ ಕಾರಣ ಅವನು ಗೋವೆಯಲ್ಲಿದ್ದ ಪೋರ್ಚುಗೀಸಿನ ತಂತ್ರಜ್ಞನಾದ ಜೊ ಡಿ ಲ ಪೋಂಟೆಯನ್ನು ಆಹ್ವಾನಿಸಿ ಕೆರೆಯನ್ನು ಕಟ್ಟಿಸುತ್ತಾನೆ. ಮುಂದೆ ಈ ಕೆರೆಯು ಒಡೆಯಲಾಗಿ ಅದಕ್ಕೆ ತನ್ನ ಖೈದಿಗಳನ್ನು ಮತ್ತು ಕೋಣಗಳನ್ನು ಬಲಿ ಕೊಡುತ್ತಾನೆ ಎಂದು ದಾಖಲಿಸಿದ್ದಾನೆ.

ಕೆರೆಯ ಕಾಲುವೆಯನ್ನು ಕುರಿತು ತಿಳಿಸುತ್ತಾ ಆ ಕೆರೆಗೆ ಅನೇಕ ಕಾಲುವೆಗಳು ಏರಿಯಿಂದ ಹೊರಬರುತ್ತಿದ್ದು, ಅವುಗಳಿಂದ ನೀರನ್ನು ಹಾಯಿಸಿ ಬೇಸಾಯಕ್ಕೆ ಬಳಸಿ ಅಧಿಕ ಕೃಷಿಯನ್ನು ಪಡೆಯುತ್ತಿದ್ದರು ಎಂದು ಬಣ್ಣಿಸಿದ್ದಾನೆ. ಅಲ್ಲಿ ಮುಖ್ಯವಾಗಿ ಭತ್ತದ ಗದ್ದೆ ಮತ್ತು ತೋಟಗಳಿದ್ದವು. ಅವಲ್ಲದೆ ಆ ಕೆರೆಯ ಆಯಕಟ್ಟಿನ ಪ್ರದೇಶದ ಕೃಷಿಕರಿಗೆ ಒಂಬತ್ತು ವರ್ಷಗಳ ಕಾಲ ತೆರಿಗೆಯನ್ನು ವಿನಾಯಿತಿಗೊಳಿಸಿದ್ದನೆಂದು ದಾಖಲಿಸಿದ್ದಾನೆ.[೧೬] ಈ ಕೆರೆಯು ಅತ್ಯಂತ ದೊಡ್ಡದಾಗಿದ್ದು ಅದರಲ್ಲಿ ನೀರು ತುಂಬಿರುವುದನ್ನು ಇಲ್ಲಿಯವರೆಗೆ ಯಾರೂ ನೋಡಿಲ್ಲವೆಂದು ಸ್ಥಳೀಯರು ತಿಳಿಸುತ್ತಾರೆ.

**೫. ದಣ್ಣಾಯಕನ ಕೆರೆ**

ದಣ್ಣಾಯಕನ ಕೆರೆ ಹೊಸಪೇಟೆ ತಾಲ್ಲೂಕಿನ ಅತೀ ದೊಡ್ಡ ಕೆರೆಯಾಗಿದೆ. ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ದಣ್ಣಾಯಕನ ಕೆರೆ ಗ್ರಾಮದಲ್ಲಿ ಈ ಕೆರೆ ಕಂಡು ಬರುತ್ತದೆ. ಈ ಕೆರೆಯನ್ನು ಮುದ್ದ ಎಂಬ ದಂಡನಾಯಕ ಕಟ್ಟಿಸಿದನೆಂಬುದಾಗಿ ತಿಳಿದುಬರುತ್ತದೆ. ಈ ಕೆರೆಯ ಜಲಾನಯನ ಪ್ರದೇಶವು ೪೭.೭೭ ಮೈಲುಗಳು ಮತ್ತು ಅಚ್ಚುಕಟ್ಟು ಪ್ರದೇಶವು ೧೫೦೭.೫ ಎಕರೆಗಳು. ಕೆರೆ ಏರಿಯ ಉದ್ದ ೨೬.೨೫ ಮೀಟರ್, ಎತ್ತರ ೭.೯೬ ಮೀ. ಮತ್ತು ಏರಿಯ ಮೇಲ್ಭಾಗದ ಅಗಲ ೭.೯೬ ಮೀ. ಇದರ ಮೇಲೆ ಒಂದು ಎತ್ತಿನಗಾಡಿ ಹೋಗಬಹುದು. ಕೆರೆಗೆ ಎರಡು ಕಾಲುವೆಗಳಿದ್ದು, ಅವುಗಳು ೨,೧೦೦ ಮೀ. ಉದ್ದವಾಗಿವೆ. ಇದಕ್ಕೆ ಎರಡು ತೂಬುಗಳಿದ್ದು, ಅವುಗಳು ವಿವಿಧ ಎತ್ತರಗಳಲ್ಲಿ ಸುಮಾರು ಇಪ್ಪತ್ತು ಮೀಟರ್ ಅಂತರಗಳಲ್ಲಿವೆ. ತೂಬುಗಳನ್ನು ಹೊರಭಾಗದ ಇಳಿಜಾರಿನಲ್ಲಿ ಕಾಲುವೆಗೆ ಸೇರಿಸಲಾಗಿದೆ. ಇದರಿಂದಾಗಿ ಆಯಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿದು ಹೋಗುತ್ತದೆ.

**ಈ ಕೆರೆಯನ್ನು ಕುರಿತಂತೆ ಪ್ರಚಲಿತ ಐತಿಹ್ಯಗಳಿವೆ.**

೧. ಕೂಡ್ಲಿಗಿ ತಾಲೂಕು ಜರಿಮಲೆಯಲ್ಲಿ ಬರಗಾಲ ಕಾಣಿಸಿಕೊಳ್ಳಲು ಅಲ್ಲಿನ ಬಾರಿಕರ ಹೆಣ್ಣು ಮಗಳಾದ ಗಂಗಮ್ಮಳು ತನ್ನ ಎಳೆಯ ಮಗನಾದ ಮುದ್ದನೊಂದಿಗೆ ಬಿದಿರಹಳ್ಳಿಗೆ ಬಂದಳು. ಆಗ ಈ ಊರಲ್ಲಿ ಜಕ್ಕಪ್ಪಾಚಾರ್ಯ ಮತ್ತು ಜಯಲಕ್ಷ್ಮಮ್ಮ ಎಂಬ ಬ್ರಾಹ್ಮಣ ದಂಪತಿಗಳಿದ್ದರು. ಅವರ ಮನೆಯಲ್ಲಿ ಕಸ, ಮುಸುರೆ ಕೆಲಸಗಳನ್ನು ಮಾಡುತ್ತಾ ಗಂಗಮ್ಮ ಮುದ್ದನನ್ನು ಬೆಳೆಸಿದಳು. ದನ ಕಾಯಲು ಹೋದ ಮುದ್ದನಿಗೆ ಸರ್ಪವೊಂದು ನಿಧಿಗಳಿರುವ ಏಳು ತಾಣಗಳನ್ನು ಕನಸಿನಲ್ಲಿ ತೋರಿಸಿಕೊಟ್ಟಿತು. ಅದನ್ನು ದೊರಕಿಸಿಕೊಂಡ ಮುದ್ದನು ಏಳು ಕೆರೆಗಳನ್ನು, ಏಳು ದಿಡುಗುಗಳನ್ನು ಕಟ್ಟಿಸಿದನು. ಈ ರೀತಿಯ ಕೆಲಸಗಳಿಂದಾಗಿ ಪ್ರವರ್ಧಮಾನಕ್ಕೆ ಬಂದ ಮುದ್ದನು ಮುಂದೆ ಅರಸನ ಗಮನಕ್ಕೆ ಬಂದು ಈ ಪ್ರದೇಶದ ದಂಡನಾಯಕನಾಗುತ್ತಾನೆ. ಅವನಿಂದಾಗಿಯೇ ಈ ಊರು ಅಭಿವೃದ್ಧಿ ಹೊಂದುತ್ತದೆ. ಆತನ ಕೀರ್ತಿ ಹೆಚ್ಚಾದಂತೆ ಜನ ಈ ಊರನ್ನು ಬಿದಿರಹಳ್ಳಿ ಬದಲಿಗೆ 'ದಂಡನಾಯಕನ ಕೆರೆ' ಎಂದು ಕರೆಯತೊಡಗಿದರು.

೨. ವಿಜಯನಗರದ ಅರಸ ಅಚ್ಯುತರಾಯ ವಡ್ಡರನ್ನು ಕರೆಸಿ ಬಿದಿರಹಳ್ಳಿಯಲ್ಲಿ ವಿಶಾಲವಾದ ಕೆರೆಯೊಂದನ್ನು ಕಟ್ಟಿಸಿದನು. ಕೆರೆಕಟ್ಟುವ ಮೊದಲು ವಡ್ಡರಿಗೆ, ಅರಸನು ಕೆರೆ ಕಟ್ಟುವ ಕೆಲಸ ಸುಸೂತ್ರವಾಗಿ ಪೂರೈಸಿದರೆ ಕೊಳಗ ತುಂಬ ಹೊನ್ನು ಅಳೆದು ಕೊಡುವುದಾಗಿ ಮಾತು ಕೊಟ್ಟಿದ್ದ. ಅದರಂತೆ ಕೆರೆಯ ಕೆಲಸ ಪೂರೈಸಿದ ವಡ್ಡರು, ಅರಸನಲ್ಲಿಗೆ ಬಂದು ತಮ್ಮ ಮಾತನ್ನು ನಡೆಸಿಕೊಡಿರೆಂದು ಕೇಳಿಕೊಳ್ಳುತ್ತಾರೆ. ಗರ್ವಿಷ್ಠನಾದ ರಾಜನು ಅದನ್ನು ಅಷ್ಟು ಗಂಭೀರವಾಗಿ ಪರಿಗಣಿಸದೇ ಹಸುವಿನ ಗೊರಸಿನಿಂದ(ಹಸುವಿನ ಗೊರಸಿಗೂ 'ಕೊಳಗ' ಎನ್ನುವುದಿದೆ) ಚಿನ್ನ ಅಳೆದು ಕೊಡಲು ಮುಂದಾಗುತ್ತಾನೆ. ಇದರಿಂದ ಕುಪಿತರಾದ ವಡ್ಡರು ಆತನ ರಾಜ್ಯಕ್ಕೆ ದುರ್ಭಿಕ್ಷ ಬರಲೆಂದು ಶಪಿಸುತ್ತಾರೆ. ಶಾಪದ ಪರಿಣಾಮ ಕ್ರಮೇಣ ಗೋಚರವಾಗಲು ಪುರೋಹಿತರ ಸಲಹೆಯಂತೆ ಅದರ ಪರಿಹಾರಾರ್ಥವಾಗಿ ಅರಸ ೧೨ ವರ್ಷಗಳ ಕಾಲ ತೀರ್ಥಯಾತ್ರೆಗೆ ಹೋಗುವ ಕಾಲಾವಧಿಯಲ್ಲಿ ಮಂತ್ರಿಗಳ ಸೂಚನೆಯ ಮೇರೆಗೆ ರಾಜ್ಯವನ್ನು ನೋಡಿಕೊಳ್ಳುವ ಹೊಣೆಯನ್ನು 'ಬಿದಿರಹಳ್ಳಿ'ಯ ದಂಡನಾಯಕ ಮುದ್ದನಿಗೆ ವಹಿಸುತ್ತಾನೆ. ಅರಸನು ದೇಶಾಟನೆಯಿಂದ ಮರಳಿ ಬರಬೇಕಾದರೆ ಮುದ್ದನು ಕೆರೆ, ಬಾವಿ, ದೇವಾಲಯಗಳನ್ನು ಕಟ್ಟಿಸಿ ರಾಜ್ಯವನ್ನು ಸುಭಿಕ್ಷಗೊಳಿಸಿರುತ್ತಾನೆ. ಇದನ್ನು ಕಂಡು ಮೆಚ್ಚಿ ಅರಸನು ಮುದ್ದ ದಂಡನಾಯಕನನ್ನು ಸನ್ಮಾನಿಸಲು ಕರೆ ಕಳುಹಿಸುತ್ತಾನೆ. ಇದೇ ವೇಳೆಯಲ್ಲಿ ಯಾರೋ ಕಿಡಿಗೇಡಿಗಳು ದುರುದ್ದೇಶದಿಂದ ಮುದ್ದನಿಗೆ ಸುಳ್ಳು ಸುದ್ದಿ ಹಬ್ಬಿಸುತ್ತಾರೆ. ಈ ರೀತಿಯ ಕೆಲಸ ಕಾರ್ಯಗಳಿಗಾಗಿ ರಾಜ್ಯದ ಬೊಕ್ಕಸದ ಹಣವನ್ನು ಪೋಲು ಮಾಡಿದ್ದರಿಂದ ಅರಸನು ಮುದ್ದನನ್ನು ಶಿಕ್ಷಿಸಲು ಕರೆ ಕಳುಹಿಸಿದ್ದಾನೆ ಎಂದು ಹೇಳುತ್ತಾರೆ. ಇದರಿಂದ ನೊಂದ ಮುದ್ದನು ತಾನೇ ತನ್ನ ವಜ್ರದುಂಗುರವನ್ನು ತಿಂದು ಜೀವತೆತ್ತನು. ಅವನು ಮಡಿದ ನಂತರ ಅವನ ದೇಹವನ್ನು ಇಂದಿನ ರಾಯರ ಕೆರೆಯ ಏರಿಯಲ್ಲಿ ಸಮಾಧಿ ಮಾಡಲಾಯಿತು. ಆತ ಕಟ್ಟಿಸಿದನೆಂದು ಹೇಳಲಾಗುವ ವಿಶಾಲವಾದ ಕೆರೆ ಈ ಊರಲ್ಲಿರುವುದರಿಂದ ಆ ಕೆರೆಗೂ ಕೆರೆಯಿರುವ ಊರಿಗೂ 'ದಣ್ಣಾಯಕನ ಕೆರೆ' ಎಂಬ ಹೆಸರು ಬಳಕೆಗೆ ಬಂದಿದೆ.

**ಕೆರೆಗೆ ಬಲಿಯಾದ ಐತಿಹ್ಯಗಳು**

೧. ಊರ ತಳವಾರ ಕೆರೆಯನ್ನು ಕಾಯುತ್ತಿದ್ದನಂತೆ. ಹೀಗಿರಲು ಒಂದು ದಿನ ಕೆರೆಯೊಳಗಿಂದ ಗಂಗಮ್ಮ ಹೊರಗಡೆ ಹೊರಡಲನುವಾದಳಂತೆ. ಆಗ ತಳವಾರನು ಗಂಗಮ್ಮನೊಡನೆ 'ತಾಯೇ ನನ್ನನ್ನು ಕೆರೆಯನ್ನು ಕಾಯಲೋಸುಗ ನಿಯುಕ್ತಿಗೊಳಿಸಿದ್ದಾರೆ. ನೀನು ಹೊರ ಹೋದರೆ ಊರಿನಗೌಡರು, ಗ್ರಾಮಸ್ಥರು ನನ್ನ ಮೇಲೆ ಕೋಪಿಸಿಕೊಳ್ಳುತ್ತಾರೆ. ಹಾಗಾಗಿ ನಾನು ಊರವರಲ್ಲಿ ಈ ವಿಷಯ ತಿಳಿಸಿಬರುತ್ತೇನೆ. ಅಲ್ಲಿಯವರೆಗೆ ನೀನು ಹೊರ ಹೋಗಬಾರದು ಎಂದು ಮಾತು ಕೊಡು' ಎಂದು ಹೇಳಿದಾಗ, ಗಂಗಮ್ಮ ತಳವಾರನಿಗೆ 'ನೀನು ವಾಪಸ್ಸು ಬರುವವರೆಗೂ ನಾನು ಹೊರ ಹೋಗುವುದಿಲ್ಲ' ಎಂದು ಮಾತು ಕೊಟ್ಟಳಂತೆ. ಇದರಿಂದ ತಳವಾರನು ಊರಿನ ಜನರಿಗೆ ಈ ವಿಷಯವನ್ನು ತಿಳಿಸುತ್ತಾನೆ. ತಳವಾರನಿಂದ ವಿಷಯ ತಿಳಿದ ಊರವರೆಲ್ಲಾ,

ಗಂಗಮ್ಮ ಕೆರೆಯಿಂದ ಹೊರ ಹೋದರೆ ತಮ್ಮ ಊರಿಗೆ, ಪೈರಿಗೆ ಹಾನಿ ಸಂಭವಿಸುವುದೆಂದು ಭೀತಿಗೊಳಗಾದರಂತೆ. ಊರ ಪ್ರಮುಖರೆಲ್ಲಾ ಯೋಚಿಸುತ್ತಿರಲು, ತಳವಾರನಿಗೆ ಆತ ಹಿಂತಿರುಗಿ ಬರುವವರೆಗೆ ತಾನು ಕೆರೆಯಿಂದ ಹೊರ ಹೋಗುವುದಿಲ್ಲವೆಂದು ಗಂಗಮ್ಮ ಮಾತು ಕೊಟ್ಟಿರುವುದರಿಂದ, ಆತ ಕೆರೆಯ ಬಳಿಗೆ ಹೋಗದೇ ಇದ್ದರೆ ಆಕೆ ಕೆರೆಯೊಳಗೆ ಉಳಿದುಬಿಡುತ್ತಾಳೆ ಎಂದು ಊರವರು ಭಾವಿಸಿದರಂತೆ. ಹಾಗಾಗಿ, ತಳವಾರನನ್ನು ಊರಲ್ಲೇ ಉಳಿಯಲು ಹೇಳಿದರಂತೆ. ಆದರೆ, ತಳವಾರನು ತಾನು ಊರಲ್ಲೇ ಉಳಿದರೆ ಗಂಗಮ್ಮನಿಗೆ ಕೊಟ್ಟ ಮಾತು ಪಾಲಿಸಿದಂತಾಗುವುದಿಲ್ಲವೆಂದು ಆತ ಕೆರೆಯ ಕಡೆಗೆ ಹೊರಡಲು ಅನುವಾದನಂತೆ. ಎಷ್ಟು ಹೇಳಿದರೂ ಆತ ಊರಲ್ಲಿ ಉಳಿಯಲು ಒಪ್ಪದಿದ್ದಾಗ ಊರವರೆಲ್ಲಾ ಸೇರಿ ಆತನ ರುಂಡವನ್ನು ಕತ್ತರಿಸಿದರಂತೆ. ಅದರ ಕುರುಹೆಂದು ಊರ ಜನ ಈಗಲೂ ರುಂಡವಿಲ್ಲದ ಶಿಲೆಯಿಂದ ಮಾಡಿದ ಮುಂಡವೊಂದನ್ನು ತೋರಿಸುತ್ತಾರೆ. ರುಮಾಲು ಸುತ್ತಿದ್ದ ರುಂಡವು ಇತ್ತೀಚಿನವರೆಗೂ ಅಲ್ಲಿದ್ದು ಈಗ ಎಲ್ಲೋ ಕಾಣೆಯಾಗಿದೆ ಎನ್ನುತ್ತಾರೆ.

೨. ಮುದ್ದ ದಂಡನಾಯಕನು ಕೆರೆಯನ್ನು ಕಟ್ಟಿಸಿ ಅದಕ್ಕೆ ಏಳು ಮದಗಗಳನ್ನು (ತೂಬು) ನಿರ್ಮಿಸಿದನು. ಅದಕ್ಕೆ ಒಬ್ಬೊಬ್ಬರನ್ನೇ ಬಲಿ ಕೊಡುತ್ತಾ ಬಂದನು. ಆರು ಮದಗಗಳಿಗೆ ಬಲಿ ಕೊಟ್ಟು, ಏಳನೆಯದರ ಬಳಿ ಬಂದಾಗ ಅದು ಜಕ್ಕಪ್ಪಾಚಾರ್ಯರ ಮಗಳು ವೀರಮ್ಮಳನ್ನು ಬಲಿ ಕೊಡುವಂತೆ ಕೇಳುತ್ತದೆ. ಅವರದೇ ಮನೆಯಲ್ಲಿ ಉಪ್ಪುಂಡು ಬೆಳೆದ ಮುದ್ದನು ಇದರಿಂದ ದಂಗಾಗುತ್ತಾನೆ. ಈ ವಿಷಯವನ್ನು ತಿಳಿದ ವೀರಮ್ಮಳು ತಾನೇ ಸ್ವತಃ ಬಲಿಯಾಗಲು ಮುಂದೆ ಬಂದಳು. ಅದರಂತೆ ವೀರಮ್ಮಳನ್ನು ಏಳನೆಯ ಮದಗದಲ್ಲಿ ಜೀವಂತ ಸಮಾಧಿಗೊಳಿಸಲಾಯಿತು. ಆಕೆಯನ್ನೇ ಈಗ 'ಕನ್ನೆ ವೀರಾಂಬ' ದೇವತೆಯಾಗಿ ಪೂಜಿಸಲಾಗುತ್ತದೆ.

**೩. ಬಾಸಿಂಗರಾಯನ ಕೋಡಿ (ಕೆರೆಯಿಂದ ನೀರು ಹರಿದು ಹೋಗುವ ಜಾಗ)**

ಇಲ್ಲಿ ಹಿಂದೆ ಆಗ ತಾನೇ ಮದುವೆಯಾಗಿ ಬಂದಿದ್ದ, ಬಾಸಿಂಗವನ್ನು ಇನ್ನೂ ಬಿಚ್ಚದಿದ್ದ ಮದುಮಗನನ್ನು ಬಲಿ ಕೊಡಲಾಯಿತಂತೆ. ಆದ್ದರಿಂದ ಈ ಸ್ಥಳವನ್ನು 'ಬಾಸಿಂಗರಾಯನ ಕೋಡಿ' ಎಂದು ಕರೆಯುತ್ತಾರೆ.

ಪ್ರಸ್ತುತ ಅವಧಿಯಲ್ಲಿ ಕೆರೆಯಲ್ಲಿ ನೀರು ಉಕ್ಕಿ ಹರಿಯುವ ಪ್ರಸಂಗ ಬಂದರೆ ಕೆರೆಯಿಂದ ನೀರು ಹೊರ ಬರುವ ಸ್ಥಳದಲ್ಲಿ ಕೋಣವನ್ನು ಬಲಿಕೊಟ್ಟು, ಅದರ ತಲೆಯನ್ನು ಆ ಸ್ಥಳದಲ್ಲಿ ಹಾಕುತ್ತಾರೆ. ಇದರಿಂದ ಉಕ್ಕಿ ಹರಿಯುವ ನೀರು ಅಲ್ಲಿಗೆ ನಿಲ್ಲುತ್ತದೆ ಎಂಬ ನಂಬಿಕೆಯಿದೆ. ಇತ್ತೀಚಿನ ವರ್ಷಗಳಲ್ಲಿ ಆ ರೀತಿಯ ಬಲಿ ಕೊಡಲಾಗಿತ್ತು ಎಂದು ಸ್ಥಳೀಯರು ತಿಳಿಸುತ್ತಾರೆ.

**೪. ಉಡುಸಲಮ್ಮನ ಕೋಡಿ**

ಡಣಾಯಕನ ಕೆರೆಯ ಪಶ್ಚಿಮಕ್ಕೆ ಏರಿಯ ತುದಿಯಲ್ಲಿರುವ ಕೋಡಿಗೆ ಉಡುಸಲಮ್ಮ ಎಂಬ ಬಾರಿಕ ಜಾತಿಯ ಮಹಿಳೆಯನ್ನು ಬಲಿ ನೀಡಿ ಆ ಕೋಡಿಯ ಹತ್ತಿರದಲ್ಲಿಯೇ ಆಕೆಗೆ

ಒಂದು ಚಿಕ್ಕ ಗುಡಿಯನ್ನು ನಿರ್ಮಿಸಲಾಗಿದೆ. ಹೀಗಾಗಿ ಆ ಕೋಡಿಯನ್ನು 'ಉಡುಸಲಮ್ಮನ ಕೋಡಿ' ಎಂದು ಕರೆಯುತ್ತಾರೆ. ಈ ಗುಡಿಯು ಈಗ ಶಿಥಿಲಗೊಂಡಿದೆ.

### ೫. ಕೆರೆಗೆ ಹಾರವಾದ ಪದುಮಮ್ಮ

ಕೆಲವು ಶಕ್ತಿಶಾಲಿ ನಂಬುಗೆಗಳು, ಸಂಪ್ರದಾಯಗಳು, ವಿಧಿ ಕ್ರಿಯೆಗಳು, ಆಚರಣೆಗಳು ಮುಂತಾದವು ಸಾಮಾಜಿಕ ಮೌಲ್ಯಗಳಾಗಿವೆ. ಅವು ಜನಪದ ಆಶಯಗಳಾಗಿ ಬೆಳೆದುಬರುತ್ತವೆ. ಅಂಥ ಆಶಯಗಳಲ್ಲಿ 'ಕೆರೆಗೆಹಾರ'ವೂ ಒಂದು. ಹಿಂದೆ ಕಟ್ಟಡಗಳನ್ನು, ಕೆರೆ-ಬಾವಿಗಳನ್ನು ನಿರ್ಮಿಸುವಾಗ ನರಬಲಿ, ಪ್ರಾಣಿಬಲಿ ಸಹಜವಾದುದೇ ಆಗಿತ್ತು. ಆದರೆ, ದಣಾಯಕನ ಕೆರೆಗೆ ಬಾಣಂತಿಯನ್ನು ಬಲಿ ನೀಡಿರುವುದು ವಿಶೇಷವಾಗಿ ಕಂಡುಬರುತ್ತದೆ.

ಪದುಮಮ್ಮ ಎಂಬ ಹರಿಜನ ಜಾತಿಯ ಬಾಣಂತಿ ಮಹಿಳೆಯನ್ನು ಮತ್ತು ಆಕೆಯ ಹದಿನಾರು ದಿನದ ಕೂಸಿನೊಂದಿಗೆ ಕೆರೆಗೆ ಹಾರವಾಗಿ ನೀಡಲಾಗಿದೆ. ಪದುಮಮ್ಮನನ್ನು ಆಕೆಯ ಕಂದನೊಂದಿಗೆ ಶೃಂಗರಿಸಿ ವಾದ್ಯ, ಮೇಳಗಳೊಂದಿಗೆ ಊರಲ್ಲೆಲ್ಲಾ ಮೆರವಣಿಗೆ ಮಾಡಲಾಯಿತು. ಮೆರವಣಿಗೆಯನ್ನು ಕೆರೆಯ ಅಂಗಳಕ್ಕೆ ಬರಮಾಡಿಕೊಂಡು ಅಲ್ಲಿ ಕರಿಯ ಕಂಬಳಿಯ ಗದ್ದುಗೆ ಮಾಡಿ, ಪದುಮಮ್ಮನನ್ನು ಕೂಡಿಸಿ ಪೂಜೆ ಮಾಡಲಾಯಿತು. ಊರ ಮುತ್ತೈದೆಯರು ಪದುಮಮ್ಮಳಿಗೆ ಹೂ ಮುಡಿಸಿ, ಅರಿಶಿಣ, ಕುಂಕುಮ ಇಟ್ಟು ಒಡಲಕ್ಕಿ ಹಾಕಿದರು. ಸೇರಿದ್ದ ಅಪಾರ ಜನಸಮೂಹದ ಮಧ್ಯೆ ಊರ ಪ್ರಮುಖರು ಅವಳ ಕೈ ಹಿಡಿದು ಕೆರೆಯಲ್ಲಿ ತಂದು ನಿಲ್ಲಿಸಿದರು. ಕೆರೆಯಲ್ಲಿ ನೀರು ಹಂತ ಹಂತವಾಗಿ ಮೇಲೇರ ತೊಡಗಿತು. ಪ್ರತಿ ಹಂತದಲ್ಲೂ ಪದುಮಮ್ಮ ಮೊಲೆ ಉಣ್ಣುವ ಕೂಸನ್ನು ಈ ಕೆರೆಗಾಗಿ ಹಡದಿದ್ದನೇನೇ ಎಂದು ರೋದಿಸತೊಡಗಿದಳು. ಆದರೆ, ಅವಳ ರೋದನ ಅರಣ್ಯ ರೋಧನವಾಯಿತೆ ಹೊರತು ಅಲ್ಲಿದ್ದವರಾರೂ ತಡೆಯಲಿಲ್ಲ. ಕೆರೆಯಲ್ಲಿ ನೀರು ಹೆಚ್ಚಾಗತೊಡಗಿತು. ಮೊಣಕಾಲು, ನಡು, ಎದೆ, ಕುತ್ತಿಗೆ ನಂತರ ಮುಳುಗುವ ಹಂತಕ್ಕೆ ನೀರು ಬಂದು ಪದುಮಮ್ಮ ತನ್ನ ಹದಿನಾರು ದಿನದ ಕಂದನೊಂದಿಗೆ ಮುಳುಗಿ ಕೆರೆಗೆ ಹಾರವಾದಳು. ಈ ರೀತಿ ಕೆರೆಗೆ ಆಹುತಿಯಾದ ಪದುಮಮ್ಮ ಇಡೀ ಜನಸಮೂಹಕ್ಕೆ ಒಬ್ಬ ಶರಣೆಯಾಗಿ, ಅವರ ಪಾಲಿಗೆ ದೇವತೆಯಾಗಿ ಕಂಡು ಬಂದಿದ್ದಾಳೆ.

ಪದುಮಮ್ಮಳಂತಹ ದಲಿತ ಬಾಣಂತಿ ಮಹಿಳೆಯ ಬಲಿದಾನ ಇತಿಹಾಸದ ಪುಟಗಳಲ್ಲಿ ಅಧಿಕೃತವಾಗಿ ದಾಖಲಾಗಿಲ್ಲ. ಇತಿಹಾಸ ಸೇರದ ಹಾಗೂ ಧ್ವನಿಯಿಲ್ಲದ ಇಂತಹ ಅನೇಕ ಜನರ ಇತಿಹಾಸವನ್ನು ಅವಲೋಕಿಸಿದಾಗಲೆಲ್ಲ ಅದರಲ್ಲಿ ಎಲ್ಲಿಯೋ ಎಂತಹದೋ ಕೊರತೆ ಅಡಗಿದೆ ಎಂದೆನಿಸದಿರದು. ಇತರರ ಇತಿಹಾಸ ಸೃಷ್ಟಿಸಿಕೊಟ್ಟವರು ತಮ್ಮದೇ ಇತಿಹಾಸವನ್ನು ಸರಿಯಾಗಿ ದಾಖಲಿಸಿಕೊಳ್ಳಲಿಲ್ಲ ಎಂಬುದೇ ವಿಪರ್ಯಾಸದ ಸಂಗತಿ. ಇತಿಹಾಸ ಸೃಷ್ಟಿಸಿದವರೇ ಬೇರೆ, ಇತಿಹಾಸ ಪುಟಗಳಲ್ಲಿ ದಾಖಲುಗೊಂಡವರೇ ಬೇರೆ ಎಂಬುದಂತೂ ದೃಢಪಡುತ್ತದೆ.

### ೬. ಯಲ್ಲಪ್ಪಣ್ಣನ ಕೆರೆ

ಹೊಸಪೇಟೆ ನಗರದ ಈಗಿನ ಬಸವೇಶ್ವರ ಬಡಾವಣೆ ಪ್ರದೇಶದಲ್ಲಿ ಈ ಕೆರೆಯು ಕಂಡುಬರುತ್ತದೆ. ಯಲ್ಲಪ್ಪಣ್ಣ ಎಂಬ ವ್ಯಕ್ತಿ ಈ ಕೆರೆಯನ್ನು ನಿರ್ಮಿಸಿದನೆಂಬುದಾಗಿ ತಿಳಿದುಬರುತ್ತದೆ. ಈಗ ಕೆರೆಯು ಸಂಪೂರ್ಣ ಹಾಳಾಗಿದ್ದು, ಕೆರೆಯ ಅವಶೇಷಗಳು ಮಾತ್ರ ಕಂಡು ಬರುತ್ತವೆ.

ಈ ಕೆರೆಯು ನಾಲ್ಕು ದಿಕ್ಕುಗಳಲ್ಲಿ ತನ್ನ ಮೇರೆಗಳನ್ನು ಗುರುತಿಸಿಕೊಂಡಿತ್ತು. ಆ ಮೇರೆಗಳೆಂದರೆ ಪೂರ್ವಕ್ಕೆ - ವಿರುಪಾಪುರದ ದಿಬ್ಬ, ಪಶ್ಚಿಮಕ್ಕೆ - ಹೊಸೂರು ಬಾಗಿಲಿನಿಂದ ಕೃಷ್ಣದೇವರಾಯ ಕಾಲುವೆ ಮೇಲಿನವರೆಗಿನ ಪ್ರದೇಶ, ಉತ್ತರಕ್ಕೆ - ವಿರುಪಾಪುರ ರಾಯರ ಕಾಲುವೆಯ ತಟ ಹಾಗೂ ದಕ್ಷಿಣಕ್ಕೆ - ತಿರುಮಲದೇವಿಯರ ಪಟ್ಟಣದ ಕೋಟೆಯ ಅಗಳಿನವರೆಗೆ ವಿಸ್ತರಿಸಿತ್ತು. ಈ ಕೆರೆಯ ಏರಿಯನ್ನು ಈಗಿನ ಇಂದಿರಾನಗರ ಬಡಾವಣೆಯಿಂದ ಡ್ಯಾಂ ರಸ್ತೆಯಲ್ಲಿರುವ ವಿಜಯನಗರ ಕಾಲೇಜಿನವರೆಗೆ ಸ್ಥೂಲವಾಗಿ ಗುರುತಿಸಬಹುದು. ಈಗ ಈ ಏರಿಯ ಸಾಲಿನ ಮೇಲೆ ವಾಸ ಗೃಹಗಳು, ಅಂಗಡಿ - ಮುಂಗಟ್ಟುಗಳು ಮೊದಲಾದವು ನಿರ್ಮಾಣಗೊಂಡಿರುವ ಪ್ರಯುಕ್ತ ಹಾಗೂ ಬಹುಹಿಂದಿನಿಂದಲೂ ಕೆರೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹೂಳು ತುಂಬಿಕೊಂಡಿರುವ ಪ್ರಯುಕ್ತ ಏರಿಯ ಎತ್ತರವಾಗಲೀ ಕೆರೆಯ ಆಳವಾಗಲೀ ನಿರ್ದಿಷ್ಟವಾಗಿ ತಿಳಿದು ಬರುವುದಿಲ್ಲ. ಆದರೂ ವಿಜಯನಗರ ಕಾಲೇಜಿನ ಸಮೀಪದಲ್ಲಿ ಈ ಕೆರೆಯ ತೂಬಿನ ಅವಶೇಷಗಳು ಇಂದಿಗೂ ಕಂಡು ಬರುತ್ತವೆ. ನೀರು ಹೋಗಲು ನಿರ್ಮಿಸಲಾದ ಗಾರೆಗಚ್ಚಿನ ತೂಬು ಕಾಲುವೆಯ ಕುರುಹು ಸಹ ಕಂಡು ಬರುತ್ತದೆ.

ಕ್ರಿ.ಶ. ೧೫೨೧ರ ಕೃಷ್ಣದೇವರಾಯನ ಶಾಸನವು ತಿಳಿಸುವಂತೆ, ವಿಜಯನಗರ ಸಾಮ್ರಾಜ್ಯವನ್ನಾಳುತ್ತಿದ್ದ ಶ್ರೀ ಕೃಷ್ಣದೇವರಾಯನು ತಿರುಮಲದೇವಿಯರ ಪಟ್ಟಣದ ನಾಲ್ಕು ಬಾಗಿಲು ಬಳಿಯ ಶ್ರೀ ಕಾಶಿ ವಿಶ್ವೇಶ್ವರ ದೇವರ ಪ್ರತಿಷ್ಠಾಪನೆಯ ಕಾಲದಲ್ಲಿ ಆ ದೇವರ ಪೂಜೆ - ನೈವೇದ್ಯಗಳಿಗಾಗಿ ಆ ಪಟ್ಟಣದ ಕೋಟೆಗೆ ಪಶ್ಚಿಮಕ್ಕೆ ಇದ್ದ ಯಲ್ಲಪ್ಪಣ್ಣನ ಕೆರೆಯನ್ನು ಶ್ರೀ ಕಾಶಿ ವಿಶ್ವೇಶ್ವರ ದೇವರಿಗೆ ಧಾರೆಯನೆರೆದು ಕೊಟ್ಟನೆಂಬುದಾಗಿ ಶಾಸನ ತಿಳಿಸುತ್ತದೆ.[೧೭] ಶಾಸನದಿಂದ ತಿಳಿಯುವುದೇನೆಂದರೇ ಕೃಷ್ಣದೇವರಾಯ ದೇವರನ್ನು ಪ್ರತಿಷ್ಠಾಪಿಸುವುದಕ್ಕೆ ಮೊದಲೇ ಯಲ್ಲಪ್ಪಣ್ಣನ ಕೆರೆ ಇದ್ದಂತೆ ತೋರುತ್ತದೆ. ಆದ್ದರಿಂದ ಇದು ಕೃಷ್ಣದೇವರಾಯನ ಆಳ್ವಿಕೆಯ ಪೂರ್ವದ ಕೆರೆಯೇ ಇದ್ದಿರಬೇಕು.

### ೭. ಅಳ್ಳಿಕೆರೆ

ಅಳ್ಳಿಕೆರೆಯು ಕಮಲಾಪುರ ಗ್ರಾಮದ ಪೂರ್ವಕ್ಕೆ ಕನ್ನಡ ವಿಶ್ವವಿದ್ಯಾಲಯಕ್ಕೆ ಹೋಗುವ ಮಾರ್ಗದಲ್ಲಿದೆ. ಇದು ತುಂಗಭದ್ರಾ ನದಿಯಾಶ್ರಿತ ವಿಜಯನಗರ ಕಾಲದ ಕೆರೆಯಾಗಿದೆ. ಈ ಕೆರೆಯು ಬೆಟ್ಟಗಳ ಸಾಲಿನ ಮಧ್ಯೆ ಇದ್ದು, ಕಮಲಾಪುರ ನಿವಾಸಿಗಳು ಇದರ ಪ್ರಯೋಜನವನ್ನು ಹೊಂದುತ್ತಿದ್ದಾರೆ. ಈ ಕೆರೆಯ ನಿರ್ಮಾತೃ ಯಾರೆಂಬುದು ತಿಳಿದು ಬರುವುದಿಲ್ಲ. ಆದರೆ ಈ ಕೆರೆಯು ವಿಜಯನಗರ ಕಾಲದಲ್ಲಿಯೇ ಇತ್ತೆಂಬುದಕ್ಕೆ ಆಧಾರಗಳಿವೆ.

ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿಗನಾದ ಡೊಮಿಂಗೋ ಪಯಾಸ್ ವಿಜಯನಗರದ ಅಂದಿನ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ರಾಜಕೀಯ ವಿಷಯಗಳನ್ನು ಕುರಿತು ದಾಖಲಿಸುವಾಗ ಈ ಕೆರೆಯನ್ನು ಕುರಿತಂತೆ ಪ್ರಸ್ತಾಪಿಸುತ್ತಾನೆ. ವಿಜಯನಗರದಲ್ಲಿ ನವರಾತ್ರಿ ಹಬ್ಬವು ಹತ್ತು ದಿನಗಳ ಕಾಲ ನಡೆಯುತ್ತದೆ. ಈ ಹಬ್ಬದ ಸಂದರ್ಭದಲ್ಲಿ ಒಂಬತ್ತು ದಿನಗಳಾದ ನಂತರ ಹತ್ತನೆಯ ದಿನದಂದು ರಾಜನು ಆನೆಯ ಅಂಬಾರಿ ಮೇಲೆ ವಿಜಯನಗರ ಪಟ್ಟಣದ ಕೋಟೆ ಗೋಡೆಯ ಹೊರಗೆ ಸುಮಾರು ಒಂದು ಲೀಗ್‌ನಷ್ಟು (೬.೨೦ ಕಿ.ಮೀ.) ದೂರ ಪೂರ್ವಕ್ಕೆ ಬರುತ್ತಾನೆ. ಅಲ್ಲಿ ಒಂದು ವಿಶೇಷ ಗುಡಾರದಲ್ಲಿ ದೇವತೆಯ ಪೂಜೆಯನ್ನು ಮಾಡುತ್ತಾನೆ. ದಾರಿಯ ಇಕ್ಕೆಲಗಳಲ್ಲಿಯೂ ಸೈನಿಕರು, ಅಧಿಕಾರಿಗಳು ಮತ್ತು ಜನ ಸಮೂಹವೇ ಇರುತ್ತದೆ. ರಾಜನು ದಾರಿಯಲ್ಲಿ ಈ ಸ್ಥಳವನ್ನು ತಲುಪುವಾಗ ಒಂದು ಕೆರೆಯನ್ನು ಹಾದು ಹೋಗುತ್ತಾನೆ ಎಂದು ದಾಖಲಿಸಿದ್ದಾನೆ.[೧೬೮]

ಜಾನ್ ಎಂ. ಫ್ರಿಟ್ಜ್‌ರವರು ಪಯಾಸ್ ವರ್ಣಿಸಿ ವಿವರಿಸಿರುವ ಸ್ಥಳದ ಪರಿವೀಕ್ಷಣೆಯನ್ನು ನಡೆಸಿ, ಪಯಾಸ್ ವರ್ಣಿಸಿರುವ ಕೆರೆಯು ಅಳ್ಳಿಕೆರೆಯೆಂದು ಸರಿಯಾಗಿ ಗುರುತಿಸಿದ್ದಾರೆ. ಈ ಕೆರೆಯ ಸಮೀಪವೇ ದೇವತೆಯ ಪೂಜೆಗೆಂದು ಗುಡಾರವನ್ನು ಹಾಕಲಾಗುತ್ತಿತ್ತು ಎಂದು, ಆ ಗುಡಾರವು ಪಯಾಸ್ ವರ್ಣಿಸಿರುವಂತೆ ಬಟ್ಟೆಯದಲ್ಲವೆಂದು ಆದರೆ ಕಲ್ಲಿನಿಂದ ರಚಿಸಲ್ಪಟ್ಟ ಕಟ್ಟಡ ಎಂದು ಅಭಿಪ್ರಾಯಪಟ್ಟಿದ್ದಾರೆ. ಇಂದಿಗೂ ಒಂದು ಮಂಟಪವು ಕೆರೆಯ ಪಶ್ಚಿಮಕ್ಕೆ ಇದೆ. ಈ ಮಂಟಪದ ಸಮೀಪವೇ ಒಂದು ಚಿಕ್ಕ ಗುಡಿಯೂ ಇದೆ. ಈ ಮಂಟಪಕ್ಕೆ ಯಾವುದೇ ಮೆಟ್ಟಿಲುಗಳು ಇಲ್ಲದ ಕಾರಣ, ಬಹುಶಃ ಎತ್ತರ ವಾಹನ ಮೇಲಿನಿಂದ ಮಂಟಪಕ್ಕೆ ಪ್ರವೇಶ ಮಾಡುತ್ತಿದ್ದರು ಎಂದು ತಿಳಿಯುತ್ತದೆ.

ಈ ಕೆರೆಯ ಏರಿಯು ೨ ಕಿ.ಮೀ.ನಷ್ಟು ಉದ್ದವಿದ್ದು, ಎರಡು ತೂಬುಗಳನ್ನು ಒಳಗೊಂಡಿದೆ. ಇದರ ನೀರು ಸಂಗ್ರಹಣಾ ಸಾಮರ್ಥ್ಯವು ೧.೫ ಟಿ.ಎಂ.ಸಿ.ಯಷ್ಟಿದೆ(೪೫.೭ ಅಡಿಗಳು) ಈ ಕೆರೆಯು ಸುಮಾರು ೪೦೦ ಎಕರೆಗೆ ನೀರುಣಿಸುತ್ತದೆ. ಕಬ್ಬು, ಬಾಳೆ, ಭತ್ತ, ತೆಂಗು ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತಿದೆ.

**೮. ಕಂಪ್ಲಿಯ ಸೋಮಪ್ಪ ಕೆರೆ**

ಹೊಸಪೇಟೆ ತಾಲ್ಲೂಕಿನ ಎರಡನೆಯ ಪ್ರಮುಖ ಚಾರಿತ್ರಿಕ ಸ್ಥಳ ಕಂಪ್ಲಿ. ದರೋಜಿ ಗ್ರಾಮದ ಕೈಫಿಯತ್ತು ಕಂಪ್ಲಿಯ ಸೋಮೇಶ್ವರ ಗುಡಿಯನ್ನು ಕಟ್ಟಿದ ಸಂದರ್ಭವನ್ನು ಹೀಗೆ ವರ್ಣಿಸುತ್ತದೆ: "ಪೂರ್ವದಲ್ಲಿ ಕಲ್ಯಾಣ ಪಟ್ಟಣದ ಕಡೆಯಿದ್ದ ಸಿಂಧು ಬಲ್ಲಾಳರಾಯನು ಗೊಲ್ಲ ಕುಲ ಮಂದಿ ಕೂಡಿ ಗ್ರಾಮಾಂತರ ಮೇಲೆ ಬರುತ್ತಿರಲು, ಈತನು ತನ್ನ ಕುಲದೇವರು ಸೋಮೇಶ್ವರನನ್ನು ಬಂಡಿ ಮೇಲೆ ಹಾಕಿಕೊಂಡು ದೇಶದ ಮೇಲೆ ರಾಜ್ಯ ನೋಡಿಕೊಂಡು ಬರುವಾಗ ಈ ಸ್ಥಳಕ್ಕೆ ಬಂದು ಇಳಕೊಂಡು, ನಾಲ್ಕು ದಿವಸ ಇದ್ದು ಪುನಃ ಮುಂದಕ್ಕೆ

ರಾಜ್ಯದ ಮೇಲೆ ಹೋಗಬೇಕೆಂದು ಈ ದೇವರನ್ನು ಬಂಡಿ ಮೇಲೆ ಹಾಕಿಕೊಂಡು ಹೋಗುತ್ತಿರಲು. ಬಂಡಿ ಕೀಲು ಮುರಿದು ಬಿತ್ತು. ಮತ್ತೆ ಬಂಡಿ ಕೀಲು ಜೋಡಿಸಿಕೊಂಡು ಹೋಗಬೇಕೆಂದು ಮಾಡಿದಲ್ಲಿ ಮತ್ತೆ ಮುರಿಯಿತು. ಇದ ಕಂಡು ಬಲ್ಲಾಳರಾಯನು "ಈ ಹೊತ್ತು ನಿಂತು ನಾಳೆ ಹೋಗೋಣ" ಎಂದು ಮಾಡಿದಲ್ಲಿ ರಾತ್ರಿಯಲ್ಲಿ ದೇವರು (ಸೋಮೇಶ್ವರ) ಸ್ವಪ್ನದಲ್ಲಿ ಬಂದು "ಇನ್ನು ಮುಂದಕ್ಕೆ ನನ್ನ ಒಯ್ಯಬೇಡ. ನಾನು ಬರುವುದಿಲ್ಲ. ಇದೇ ಸ್ಥಳದಲ್ಲಿ ಇರತೀನಿ" ಎಂದು ಹೇಳಿ "ಗುಡಿ ಕಟ್ಟಿಸು" ಅಂತ ದೇವರು ಹೇಳಿದ ಪ್ರಕಾರಕ್ಕೆ ಗುಡಿಕಟ್ಟಿಸಿ, ಕೆರೆಕಟ್ಟಿಸಿ ದೇವರು ಪ್ರತಿಷ್ಠೆ ಮಾಡಿದರು".

ಕಂಪ್ಲಿ ಪ್ರದೇಶವು ಕದಂಬ, ಗಂಗ, ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟರ ಪ್ರಭುತ್ವಕ್ಕೆ ಒಳಪಟ್ಟಿತ್ತು. ರಾಷ್ಟ್ರಕೂಟರ ಮಾಂಡಲಿಕರಾಗಿದ್ದ ನೊಳಂಬ ಪಲ್ಲವರು ಮುಂದೆ ಕಲ್ಯಾಣಿ ಚಾಲುಕ್ಯರ ಸಾರ್ವಭೌಮತ್ವದಡಿಯಲ್ಲಿ ಕಂಪ್ಲಿಗೆ ಆಗಮಿಸಿ, ಕಂಪ್ಲಿಯನ್ನು ನೂತನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ನೊಳಂಬ ದೊರೆ 'ಪಲ್ಲವ ಪೆರ್ಮಾಡಿ' ಬಿರುದಾಂಕಿತ ಉದಯಾದಿತ್ಯನು, ಚಾಲುಕ್ಯ ದೊರೆ ಎರಡನೆಯ ಜಯಸಿಂಹದೇವನ ಸಾಮಂತನಾಗಿ ಕಂಪ್ಲಿ ಬೀಡಿನಿಂದ ಆಳಿದನೆಂದು ಕ್ರಿ.ಶ. ೧೦೧೮ರ ಶಾಸನವು ತಿಳಿಸುತ್ತದೆ. ಇವನು ಕಂಪ್ಲಿಯಲ್ಲಿ ಸೋಮೇಶ್ವರ ದೇವಾಲಯವನ್ನು, ಕೆರೆಯನ್ನು ಕಟ್ಟಿಸಿದನೆಂಬುದಾಗಿ ತಿಳಿದುಬರುತ್ತದೆ.

ಕಂಪ್ಲಿಯ ಸೋಮಪ್ಪ ಕೆರೆಯು ೨ ತೂಬುಗಳನ್ನು ಹೊಂದಿದ್ದು, ರಾಜಧಾನಿ ಕಂಪ್ಲಿಗೂ ವ್ಯವಸಾಯ ಭೂಮಿಗಳಿಗೂ ನೀರೊದಗಿಸುತ್ತಿತ್ತು ಎಂಬುದಾಗಿ ತಿಳಿಯುತ್ತದೆ. ಆದರೆ ಈ ಐತಿಹಾಸಿಕ ಕೆರೆಯು ಈಗ ನಿರಾಶ್ರಿತರ ತಾಣವಾಗಿ ಕಂಡುಬರುತ್ತದೆ. ಈ ಐತಿಹಾಸಿಕ ಕೆರೆಯ ಉಳಿವಿಗಾಗಿ ಅನೇಕ ಜನಪರ ಸಂಘಟನೆಗಳು ಹೋರಾಟ ಮಾಡಿವೆ. ಈಗ ಎಚ್ಚೆತ್ತುಕೊಂಡಿರುವ ಸ್ಥಳೀಯ ಆಡಳಿತ ಅಲ್ಲಿನ ನಿರಾಶ್ರಿತರನ್ನು ಅಲ್ಲಿಂದ ಬಿಡಿಸಿ, ಅವರನ್ನು ಬೇರೆಡೆ ಸ್ಥಳಾಂತರಿಸುವ ಕಾರ್ಯ ಪ್ರಗತಿಯಲ್ಲಿದೆ.

**೯. ನಾಗೇನಹಳ್ಳಿ ನಾಗಸಮುದ್ರ ಕೆರೆ**

ನಾಗಸಮುದ್ರ ಕೆರೆಯು ೨ ತೂಬುಗಳನ್ನು ಹೊಂದಿದ್ದು. ವಿಜಯನಗರದ ಅರಸ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ನಿರ್ಮಾಣಗೊಂಡಿದೆ. ನಾಗೇನಹಳ್ಳಿಯ ರಂಗನಾಥ ದೇವಾಲಯದಲ್ಲಿರುವ ಕ್ರಿ.ಶ. ೧೫೧೯ರ ಶಾಸನವು ತಿಳಿಸುವಂತೆ, ರಾಜಪುರೋಹಿತರಾದ ರಂಗನಾಥ ದೀಕ್ಷಿತರು ಕೃಷ್ಣದೇವರಾಯನಿಂದ ಗ್ರಾಮವೊಂದನ್ನು ಪಡೆದು, ದೊರೆಯ ತಾಯಿಯಾದ ನಾಗಲದೇವಿಗೆ ಪುಣ್ಯವಾಗಲೆಂದು ನಾಗೇಶ್ವರವೆಂಬ ಶಿವಸ್ಥಾನವನ್ನು, ನಾಗೇಂದ್ರಶಯನವೆಂಬ ವಿಷ್ಣು ಸ್ಥಾನವನ್ನು, ನಾಗಸಮುದ್ರವೆಂಬ ಕೆರೆಯನ್ನು ನಿರ್ಮಿಸಿ ಗ್ರಾಮವನ್ನು ನಾಗಲದೇವಿಪುರ ಎಂದು ಕರೆದು, ಅಗ್ರಹಾರವನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ನೀಡುತ್ತಾರೆ ಎಂಬುದಾಗಿ ತಿಳಿದುಬರುತ್ತದೆ.[೨೫]

## ೧೦. ವಿಠಲಾಪುರ ಕೆರೆ

ಕಂಪ್ಲಿ ಹೋಬಳಿಯ ರಾಮಸಾಗರ ಗ್ರಾಮದಲ್ಲಿ ವಿಠಲಾಪುರ ಕೆರೆ ಕಂಡು ಬರುತ್ತದೆ. ಈ ಕೆರೆಯನ್ನು ಕುರಿತು ಐತಿಹ್ಯವೊಂದಿದೆ. ಕುಮ್ಮಟದುರ್ಗದ ಅರಸನಾದ ಕಂಪಿಲರಾಯನ ಮಗ ಕುಮಾರರಾಮನು ರಾಮಸಾಗರ ಗ್ರಾಮದ ಬಳಿ ರಾಮಲಿಂಗೇಶ್ವರ ದೇವಸ್ಥಾನವನ್ನು ನಿರ್ಮಿಸಿ, ದೇವಸ್ಥಾನದ ಮುಂದುಗಡೆ ರಾಮಲಿಂಗ ಎಂಬ ಕೆರೆಯನ್ನು ನಿರ್ಮಿಸಿದನೆಂಬುದಾಗಿ ಐತಿಹ್ಯವಿದೆ. ಸ್ಥಳೀಯರು ಇದನ್ನು ರಾಮಲಿಂಗ ಕೆರೆ ಎಂದು ಕರೆದರೆ, ಸರ್ಕಾರಿ ದಾಖಲೆಗಳು ಈ ಕೆರೆಯನ್ನು 'ವಿಠಲಾಪುರ ಕೆರೆ' ಎಂದು ದಾಖಲಿಸಿವೆ.

## ೧೧. ಉಪ್ಪಾರಹಳ್ಳಿ ಕೆರೆ

ಕಂಪ್ಲಿ ಹೋಬಳಿಯ ಉಪ್ಪಾರಹಳ್ಳಿ ಗ್ರಾಮದಲ್ಲಿ ಈ ಕೆರೆಯು ಕಂಡುಬರುತ್ತದೆ. ಸ್ಥಳೀಯರು ತಿಳಿಸುವಂತೆ, ವಿಜಯನಗರ ಆಳ್ವಿಕೆಯ ಕಾಲದಲ್ಲಿ ಈ ಗ್ರಾಮವು ಉಪ್ಪನ್ನು ತಯಾರಿಸುವ ಕೇಂದ್ರವಾಗಿತ್ತು. ಇಲ್ಲಿನ ಕೆರೆಯ ನೀರನ್ನು ಬಳಸಿಕೊಂಡು ಉಪ್ಪು ತಯಾರಿಸಿ ಸರಬರಾಜು ಮಾಡಲಾಗುತ್ತಿತ್ತಂತೆ. ಆದರೆ ಉಪ್ಪು ತಯಾರಿಸಲಾಗುತ್ತಿದ್ದ ಯಾವ ಕುರುಹುಗಳು ಇಂದು ಕಂಡುಬರುವುದಿಲ್ಲ. ಮಳೆಯಾಶ್ರಿತ ಕೆರೆ ಆಗಿದ್ದರಿಂದ, ಈ ಕೆರೆಯು ಹೂಳು ತುಂಬಿಕೊಂಡು, ಹೆಚ್ಚಿನ ನೀರಿನ ಸಂಗ್ರಹಣೆಯ ಸಾಮರ್ಥ್ಯ ಕಳೆದುಕೊಂಡಿದೆ.

## ಬಯಕಾರ ರಾಮಪ್ಪ ಕಟ್ಟಿಸಿರುವ ಕೆರೆಗಳು

ಹೊಸಪೇಟೆ ತಾಲ್ಲೂಕಿನ ಕೆರೆಗಳನ್ನು ಕುರಿತು ಚರ್ಚಿಸುವಾಗ ಈ ದಿಸೆಯಲ್ಲಿ ಬಯಕಾರ ರಾಮಪ್ಪ ನಿರ್ಮಿಸಿದ ಕೆರೆಗಳ ಬಗ್ಗೆ ಚರ್ಚಿಸುವುದು ಉಚಿತವೆನಿಸುತ್ತದೆ. ಬಯಕಾರ ರಾಮಪ್ಪನು ಮೂಲತಃ ಆಂಧ್ರ ಪ್ರದೇಶದವನು. ಇವನು ಪೆದತಿಮ್ಮರಸಯ್ಯ ಮತ್ತು ಲಕುಲೀಶಮ್ಮರ ಮಗನಾಗಿದ್ದನು. ಬಯಕಾರ ರಾಮಪ್ಪ ಅಸಾಮಾನ್ಯ ಹಾಗೂ ದಕ್ಷ ಆಡಳಿತಗಾರ. ವಂಶದ ಘನತೆಯಿಂದಲೂ ಮನೆತನದ ಹಿರಿಯರ ಸ್ಥಾನಮಾನದಿಂದಲೂ ಇವನು ಉನ್ನತ ಹುದ್ದೆಯನ್ನು ಗಳಿಸಲಾಗಲಿಲ್ಲ. ವೈಯಕ್ತಿಕ ಸಾಧನೆಗಳ ಮೂಲಕ ಪ್ರವರ್ಧಮಾನಕ್ಕೆ ಬಂದ ಸ್ವಯಂ ನಿರ್ಮಿತ ವ್ಯಕ್ತಿತ್ವ ಇವನದು. ಮೊದಲಿಗೆ ಮಾಗಣೀಕಾರ, ಪಾರುಪತ್ಯಗಾರ ಮುಂತಾದ ಕಿರಿಯ ಹುದ್ದೆಗಳಲ್ಲಿ ದುಡಿದು ಅಪಾರವಾದ ಅನುಭವವನ್ನು ಗಳಿಸಿದ. ಈ ಹಂತಗಳಲ್ಲಿ ರಾಮಪ್ಪನು ಅಪ್ರತಿಮ ದಕ್ಷತೆಯನ್ನು ಪ್ರದರ್ಶಿಸಿ, ವಿಜಯನಗರ ಚಕ್ರವರ್ತಿಗಳ ಮೆಚ್ಚುಗೆಯನ್ನು ಸಂಪಾದಿಸಿದ. ಇವನಿಗೆ 'ಸಾಮ್ರಾಜ್ಯ ದುರಂದರ' ಎಂಬ ಬಿರುದು ದೊರೆಯಿತು. ರಾಮಪ್ಪನು ತನ್ನ ಸ್ವಂತ ಸಾಮರ್ಥ್ಯ ಮತ್ತು ಪ್ರತಿಭೆಯಿಂದ ಪ್ರಾಂತಾಧಿಕಾರಿಯ ಉನ್ನತ ಹುದ್ದೆಯನ್ನು ಗಳಿಸಿದ. ದೊರೆ ಅಚ್ಯುತದೇವರಾಯನ ಆಳ್ವಿಕೆಯ ಸಮಯದಲ್ಲಿ ಕ್ರಿ.ಶ. ೧೫೩೯ರಲ್ಲಿ ಕೊಂಡವೀಡು ದುರ್ಗದ ಅಧಿಪತಿಯಾಗಿ ನೇಮಕಗೊಂಡನು. ಅಳಿಯ ರಾಮರಾಯನ ಕಾಲದಲ್ಲಿ ಬ್ರಾಹ್ಮಣ ಅಧಿಕಾರಿಗಳನ್ನು ಆಡಳಿತದಿಂದ ದೂರವಿಟ್ಟಿದ್ದ ಸಮಯದಲ್ಲೂ ಅಧಿಕಾರದಲ್ಲಿ ಮುಂದುವರೆದ ಬ್ರಾಹ್ಮಣ ಉನ್ನತಾಧಿಕಾರಿಗಳಲ್ಲಿ ಇವನೂ ಒಬ್ಬ. ಕೊಂಡವೀಡುವಿನಂತಹ ಮಹತ್ವದ ದುರ್ಗದ ಅಧಿಪತಿಯಾಗಿ

ಅಧಿಕಾರದಲ್ಲಿ ಮುಂದುವರೆಯಬೇಕಾದರೆ ಇವನ ವ್ಯಕ್ತಿತ್ವದ ಹಿರಿಮೆ-ಗರಿಮೆಗಳ ಅರಿವು ಆಗುತ್ತದೆ. ರಾಮಪ್ಪ ಕೊಂಡವೀಡು ರಾಜ್ಯದ ಅಧಿಪತಿಯಾಗಿದ್ದರೂ ಹೊಸಪೇಟೆ ತಾಲ್ಲೂಕಿನ ತಿಮ್ಮಲಾಪುರ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೇ ಅವನ ಕಾರ್ಯಚಟುವಟಿಕೆಗಳು ಇದ್ದವು ಎಂಬುದು ಶಾಸನಗಳಿಂದ ತಿಳಿಯುತ್ತದೆ. ರಾಮಪ್ಪನು ಕೆಲವು ಅಗ್ರಹಾರಗಳನ್ನು ಸ್ಥಾಪಿಸಿ, ದೇವಾಲಯಗಳನ್ನು ನಿರ್ಮಿಸಿ, ಕೆರೆಗಳನ್ನು ಕಟ್ಟಿಸಿದನೆಂಬುದಾಗಿ ತನ್ನ ಶಾಸನಗಳಲ್ಲಿ ಹೇಳಿಕೊಂಡಿದ್ದಾನೆ.

ಬಯಕಾರ ರಾಮಪ್ಪನು ತನ್ನ ರಕ್ತಸಂಬಂಧಿಗಳಿಗೆ ಪುಣ್ಯವಾಗಲೆಂದು ಅವರ ಹೆಸರಿನಲ್ಲಿ ಒಟ್ಟು ಹದಿನಾರು ಕೆರೆಗಳನ್ನು ಕಟ್ಟಿಸಿದ್ದಾನೆ. ಅವುಗಳು ಈ ರೀತಿಯಾಗಿವೆ.

೧. ಬಾಚ ಸಮುದ್ರಂ, ೨. ರಾಮ ಸಮುದ್ರಂ, ೩. ಅಕ್ಕ ಸಮುದ್ರಂ, ೪. ಕಾಮ ಸಮುದ್ರಂ, ೫. ಅಮ್ಮ ಸಮುದ್ರಂ, ೬. ವೀರ ಸಮುದ್ರಂ, ೭. ಅಚ್ಯುತೇಂದ್ರ ಸಮುದ್ರಂ, ೮. ವೆಂಕಟೇಂದ್ರ ಸಮುದ್ರಂ, ೯. ಪಿಲನಕ್ಕ ಸಮುದ್ರಂ, ೧೦. ಚಿನತಿಪ್ಪ ಸಮುದ್ರಂ, ೧೧. ಪೆದಲಕ್ಕ ಸಮುದ್ರಂ, ೧೨. ಅಚ್ಯುತಮ್ಮ ಸಮುದ್ರಂ, ೧೩. ಲಿಂಗಾಲಯ್ಯ ತಟಾಕಂ, ೧೪. ವೆಂಕಟಯ್ಯ ತಟಾಕಂ, ೧೫. ಪೆದ ತಿಮ್ಮ ಸಮುದ್ರಂ, ೧೬. ಚಿನಬಾಚ ಸಮುದ್ರಂ..

ಮೇಲೆ ಉಲ್ಲೇಖಿಸಿದ ಹದಿನಾರು ಕೆರೆಗಳಲ್ಲಿ ಕೆಲವೊಂದು ಇಂದಿಗೂ ಬಳಕೆಯಲ್ಲಿವೆ. ನನ್ನ ಅಧ್ಯಯನವು ಹೊಸಪೇಟೆ ತಾಲ್ಲೂಕನ್ನು ಕೇಂದ್ರವಾಗಿರಿಸಿಕೊಂಡಿರುವುದರಿಂದ, ಹೊಸಪೇಟೆ ತಾಲ್ಲೂಕು ವ್ಯಾಪ್ತಿಗೆ ಒಳಪಡುವ ಕೆರೆಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಅವುಗಳೆಂದರೆ; ೧. ಕಾಮ ಸಮುದ್ರಂ, ೨. ಅಕ್ಕ ಸಮುದ್ರಂ, ೩. ಬಾಚ ಸಮುದ್ರಂ, ೪. ವೀರ ಸಮುದ್ರಂ, ೫. ಪೆದತಿಮ್ಮ ಸಮುದ್ರಂ, ೬. ಅಮ್ಮ ಸಮುದ್ರಂ.

**೧. ಕಾಮ ಸಮುದ್ರಂ**

ಹೊಸಪೇಟೆ ತಾಲ್ಲೂಕಿನ ಮಗಿ ಮಾವಿನಹಳ್ಳಿಯ ಕ್ರಿ.ಶ. ೧೫೪೪ರ ಶಾಸನವು, ಬಯಕಾರ ರಾಮಪ್ಪನು ತನ್ನ ಮಗಳಾದ ಕಾಮಮ್ಮನ ಹೆಸರಿನಲ್ಲಿ 'ಕಾಮ ಸಮುದ್ರ'ವನ್ನು ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ.[೧೪೦]

**೨. ಅಕ್ಕ ಸಮುದ್ರಂ**

ಪೋತಲಕಟ್ಟೆ ಗ್ರಾಮದ ಕೆರೆ ಕೋಡಿಯ ಸಮೀಪ ದೊರೆತ ಶಾಸನವು, ಬಯಕಾರ ರಾಮಪ್ಪನು ತನ್ನ ಮಗ ಅಂಕಪ್ಪನಿಗೆ ಪುಣ್ಯವಾಗಲಿ ಎಂದು ಕ್ರಿ.ಶ. ೧೫೪೯ರಲ್ಲಿ 'ಅಂಕ ಸಮುದ್ರ'ವನ್ನು ನಿರ್ಮಿಸಿದನು ಎಂದು ತಿಳಿಸುತ್ತದೆ.[೧೪೧] ಅಂಕ ಸಮುದ್ರವು ನಂತರದ ದಿನಗಳಲ್ಲಿ ಪೋತಲಕಟ್ಟೆ ಕೆರೆಯಾಯಿತೆಂದು ತಿಳಿದುಬರುತ್ತದೆ.

**೩. ಬಾಚ ಸಮುದ್ರಂ**

ಬಯಕಾರ ರಾಮಪ್ಪನಿಗೆ ತನ್ನ ಚಿಕ್ಕಪ್ಪನಾದ ಬಾಚರಸನೊಂದಿಗಿನ ಸಂಬಂಧವ ಎಳೆಗಳು ಪ್ರಬಲವಾಗಿದ್ದವು. ಇವನು ತನ್ನನ್ನು ಬಾಚರಸನ ಮಗನೆಂದು ಒಂದು ಶಾಸನದಲ್ಲಿ

ಹೇಳಿಕೊಂಡಿರುವುದು ಈ ವಾತ್ಸಲ್ಯ ಸಂಬಂಧದ ದ್ಯೋತಕವಾಗಿದೆ. ಚಿಕ್ಕಪ್ಪನೊಂದಿಗಿದ್ದ ಅಮರ ವಾತ್ಸಲ್ಯದ ನೆನಪಿಗಾಗಿ ತಿಮ್ಮಲಾಪುರದಲ್ಲಿ ಕ್ರಿ.ಶ. ೧೫೪೯ರಲ್ಲಿ 'ಬಾಚ ಸಮುದ್ರ' ಕೆರೆಯನ್ನು ನಿರ್ಮಿಸಿದನು.[೧೮೨] ಬಾಚ ಸಮುದ್ರವು ನಂತರದ ದಿನಗಳಲ್ಲಿ 'ಜಂಬಯ್ಯನ ಕೆರೆ' ಎಂದು ಕರೆಸಿಕೊಂಡಿತು.

**೪. ವೀರ ಸಮುದ್ರಂ**

ಬಯಕಾರ ರಾಮಪ್ಪನು ತನ್ನ ಪತ್ನಿ ವೀರಮ್ಮಳಿಗೆ ಪುಣ್ಯವಾಗಲಿ ಎಂದು ಕ್ರಿ.ಶ. ೧೫೪೯ರಲ್ಲಿ 'ವೀರ ಸಮುದ್ರ' ಕೆರೆಯನ್ನು ನಿರ್ಮಿಸಿದನೆಂಬುದಾಗಿ ಒಂಟಿಗೋಡು ತಾಂಡದ ಕೆರೆಯ ಸಮೀಪದ ಶಾಸನದಿಂದ ತಿಳಿದುಬರುತ್ತದೆ.[೧೮೩]

**೫. ಪೆದತಿಮ್ಮ ಸಮುದ್ರಂ**

ಬಯಕಾರ ರಾಮಪ್ಪನು ತನ್ನ ತಂದೆಯಾದ ಪೆದತಿಮ್ಮರಸಯ್ಯರಿಗೆ ಪುಣ್ಯವಾಗಲಿ ಎಂದು ಕ್ರಿ.ಶ. ೧೫೪೯ರಲ್ಲಿ 'ತಿಮ್ಮ ಸಮುದ್ರ' ಕೆರೆಯನ್ನು ಕಟ್ಟಿಸಿದನೆಂಬುದಾಗಿ ನಂದಿಬಂಡೆ ಕೆರೆಯ ಶಾಸನವು ದಾಖಲಿಸುತ್ತದೆ.[೧೮೪] ಪೆದತಿಮ್ಮರಸ್ಯಯ್ಯನು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ರಾಯಸನೆಂಬ ಅಧಿಕಾರಿಯಾಗಿದ್ದನು ಎಂಬುದಾಗಿ ತಿಳಿದುಬರುತ್ತದೆ. ತಿಮ್ಮಸಮುದ್ರವು ನಂತರದ ದಿನಗಳಲ್ಲಿ 'ನಂದಿಬಂಡೆ ಕೆರೆ' ಎಂದು ಕರೆಸಿಕೊಂಡಿತು.

**೬. ಅಮ್ಮ ಸಮುದ್ರಂ**

ಕ್ರಿ.ಶ. ೧೫೪೯ರಲ್ಲಿ ಬಯಕಾರ ರಾಮಪ್ಪನು ತನ್ನ ಚಿಕ್ಕಮ್ಮ ಹಾಗೂ ಬಾಚರಸನ ಹೆಂಡತಿಯಾದ ಅಮ್ಮಾಜಮ್ಮಳಿಗೆ ಪುಣ್ಯವಾಗಲಿಯೆಂದು ಅವಳ ಹೆಸರಿನಲ್ಲಿ 'ಅಮ್ಮ ಸಮುದ್ರ'ವೆಂಬ ಕೆರೆಯನ್ನು ಕಟ್ಟಿಸಿದನು ಎಂಬುದಾಗಿ ಶಾಸನದಿಂದ ತಿಳಿಯುತ್ತದೆ.[೧೮೫] ಅಮ್ಮ ಸಮುದ್ರವು ನಂತರದ ದಿನಗಳಲ್ಲಿ 'ಹಾರೋನಹಳ್ಳಿ ಕೆರೆ' ಎಂತಲೂ 'ಮಾರಗದಯ್ಯನ ಕೆರೆ' ಎಂತಲೂ ಕರೆಸಿಕೊಂಡಿತು(ಅಮ್ಮ ಸಮುದ್ರ ಕೆರೆಯು ಹಾರುವನ ಹಳ್ಳಿ ಎಂಬ ಗ್ರಾಮದಲ್ಲಿರುವುದರಿಂದ ಇದನ್ನು ಹಾರೋನಹಳ್ಳಿ ಕೆರೆ ಎಂತಲೂ ಕೆರೆಯ ಹತ್ತಿರವೇ ಮಾರಗದಯ್ಯ ಎಂಬ ಆಂಜನೇಯ ದೇವಸ್ಥಾನವಿರುವುದರಿಂದ ಇದನ್ನು ಮಾರಗದಯ್ಯನ ಕೆರೆ ಎಂತಲೂ ಕರೆಯುತ್ತಾರೆ).

**ಬಾವಿಗಳು**

ಹೊಸಪೇಟೆ ಪರಿಸರದ ಬಹುಪಾಲು ಭೂ ಪ್ರದೇಶವು ಅಲ್ಪಾವಧಿಯ ಮುಂಗಾರು ಮಳೆಯ ಮೇಲೆ ಅವಲಂಬಿತವಾಗಿತ್ತು. ತುಂಗಭದ್ರಾ ನದಿ ಸರ್ವಋತುವಿನಲ್ಲಿ ಹರಿಯುತ್ತಿದ್ದರೂ ಅದರ ಪ್ರಯೋಜನ ಕೆಲವೇ ಪ್ರದೇಶಗಳಿಗೆ ಸೀಮಿತವಾಗಿತ್ತು. ಕೆರೆ ಮತ್ತು ಹಳ್ಳಗಳು ಕೇವಲ ಮಳೆಗಾಲದಲ್ಲಿ ಮಾತ್ರ ಹರಿಯುತ್ತಿದ್ದವು. ಈ ಕಾರಣದಿಂದಾಗಿ ಸಮರ್ಪಕವಾದ ನೀರಿನ ವ್ಯವಸ್ಥೆಗೆ ಅಂದಿನವರು ವಿವಿಧ ಕ್ರಮಗಳನ್ನು ಕೈಗೊಂಡರು. ಅಂದರೆ ಪ್ರದೇಶಗಳ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಬಾವಿಗಳನ್ನು ಅಗೆದು ತಮ್ಮ ದಿನನಿತ್ಯದ ಕೆಲಸಗಳಿಗೆ ಮತ್ತು ಬೇಸಾಯಕ್ಕೆ ಬಳಸಿಕೊಂಡರು. ಹೀಗೆ ತೆಗೆಯಲಾದ ಬಾವಿಗಳಿಂದ ಅಂತರ್ಜಲ ನೀರು ಸದಾ ದೊರಕುತ್ತಿತ್ತು.[೧೮೬]

ಹೀಗಾಗಿ ನದಿ ಮತ್ತು ಕಾಲುವೆಗಳಿಂದ ದೂರದಲ್ಲಿರುವ ಪ್ರದೇಶಗಳಲ್ಲಿ ನೂರಾರು ಬಾವಿಗಳು ತಲೆ ಎತ್ತಿದವು. ಪ್ರಾಚೀನ ಕಾಲದಿಂದಲೂ ಬಾವಿಗಳಿಗೆ ಪವಿತ್ರ ಸ್ಥಾನವೂ ಇದ್ದುದ್ದರಿಂದ ಅವು ಅಧಿಕಸಂಖ್ಯೆಯಲ್ಲಿ ಜಾರಿಯಲ್ಲಿದ್ದವು.

ಬಾವಿಗಳು, ನೀರಾವರಿ ಉಪಯೋಗಕ್ಕಲ್ಲದೆ, ಮಾನವರ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಅಂಗಗಳಾಗಿದ್ದವು. ಅನೇಕ ವೇಳೆ ಅವು ದೇವಾಲಯದ ಹಾಗೂ ದೇವರುಗಳ ವಿವಿಧ ಕಾರ್ಯಗಳಿಗೆಂದೇ ನಿರ್ಮಿಸಲಾಗಿದ್ದವು. ಅನೇಕ ಶುಭ ಕಾರ್ಯಗಳಲ್ಲಿ ಜನರು ಇಂದಿಗೂ ಬಾವಿಗಳನ್ನು ಅವಲಂಬಿಸಿದ್ದಾರೆ. ಬಾವಿಯಲ್ಲಿ ಗಂಗಮ್ಮ ಇರುತ್ತಾಳೆ ಎಂಬುದು ಅನೇಕರ ಭಾವನೆಯಾಗಿದೆ.[೧೮೭] ವಿಜಯನಗರದ ಅರಸ ಪ್ರೌಢ ದೇವರಾಯನ ಮಂತ್ರಿಯಾಗಿದ್ದ ಲಕ್ಷ್ಮೀಧರನಿಗೆ ಅವನ ತಾಯಿಯ ಉಪದೇಶ 'ಕೆರೆಯಂ ಕಟ್ಟಿಸು ಬಾವಿಯಂ ಸವೆಯಿಸು' ಎಂಬುದನ್ನು ಸ್ಮರಿಸಬಹುದು. ಇದರಿಂದ ಬಾವಿಗಳನ್ನು ತೋಡಿಸುವುದು ಪುಣ್ಯದ ಕೆಲಸವಾಗಿತ್ತೆಂಬುದು ನಿರೂಪಿತವಾಗುತ್ತದೆ.

ಉದ್ಯಾನವನ ಹಾಗೂ ತೋಟಗಳನ್ನು ಬೆಳೆಸುವುದನ್ನು, ಬಹುಮುಖ್ಯವಾಗಿ ಅವುಗಳ ಬೆಳವಣಿಗೆಗೆ ನೀರಿನ ನಿರಂತರ ಅವಶ್ಯಕತೆಗಳನ್ನು ಮನಗಂಡ ಅಂದಿನ ಅರಸರುಗಳು ಬಾವಿಯ ನೀರಿನ ಉಪಯೋಗವನ್ನು ಕಂಡುಕೊಂಡು ಸುತ್ತಲೂ ಉದ್ಯಾನವನಗಳನ್ನು ಬೆಳೆಸುತ್ತಿದ್ದರು. ಉದ್ಯಾನವನಗಳು ಇರುವ ಸ್ಥಳಗಳಲ್ಲಿ ಬಾವಿಗಳನ್ನು ನಿರ್ಮಾಣ ಮಾಡುತ್ತಿದ್ದರು. ಬಾವಿಯಿಂದ ನೀರನ್ನು ಮೇಲೆತ್ತಿ ಕಾಲುವೆಗಳ ಮೂಲಕ ತೋಟಗಳಿಗೆ, ಉದ್ಯಾನವನಗಳಿಗೆ ಸರಬರಾಜು ಮಾಡುತ್ತಿದ್ದರು. ಇದು ಅಂದಿನ ಕಾಲದ ಸಾಮಾಜಿಕ ಉದ್ದೇಶಗಳಲ್ಲಿ ಒಂದಾಗಿತ್ತು ಎಂಬುದು ತಿಳಿಯುತ್ತದೆ. ಇದಲ್ಲದೆ ನಗರದ ಸೌಂದರ್ಯವನ್ನು ಹೆಚ್ಚಿಸಲು ಅಥವಾ ರಾಜಪರಿವಾರದವರ ಮತ್ತು ಪ್ರವಾಸಿಗರ, ಸಾರ್ವಜನಿಕರ ವಿಹಾರಾರ್ಥವಾಗಿ ಉದ್ಯಾನವನ, ತೋಟಗಳನ್ನು ಬೆಳೆಸುವುದು ಮುಖ್ಯ ಉದ್ದೇಶವಾಗಿತ್ತು.

ಹಿಂದಿನ ಕಾಲದಲ್ಲಿ ನೀರು ಎಲ್ಲಿ ದೊರೆಯಬಹುದು ಎಂಬುದನ್ನು ತಿಳಿಯಲು ವಿವಿಧ ಮಾರ್ಗಗಳನ್ನು ಜನರು ತಮ್ಮ ಅನುಭವದಿಂದ ಅರಿತಿದ್ದರು. ಈ ವಿಧಾನಗಳು ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನವಾಗಿದ್ದವು. ಜಲ ಸಂಶೋಧಕರು ತಮ್ಮದೇ ಆದ ವಿಧಾನಗಳಿಂದ ಎಲ್ಲಿ ನೀರು ದೊರೆಯಬಹುದು ಎಂಬ ಸ್ಥಳಗಳನ್ನು ಗುರುತಿಸುತ್ತಿದ್ದರು. ಆ ಸ್ಥಳಗಳಲ್ಲಿ ಬಾವಿಗಳನ್ನು ತೋಡಿಸುತ್ತಿದ್ದರು. ಇವುಗಳು ನೀರಾವರಿ ಉಪಯೋಗ ಮತ್ತು ಸಾರ್ವಜನಿಕರ ಹಿತಕ್ಕಾಗಿ ಅಲ್ಲದೇ ಅವುಗಳನ್ನು ನೀರಿನ ಅರವಟ್ಟಿಗೆಗಳಾಗಿ ಸಹ ಉಪಯೋಗಿಸಲಾಗುತ್ತಿತ್ತು. ಅರವಟ್ಟಿಗೆಗಳು ಅಂದಿನ ಪ್ರವಾಸಿಗರ ಮತ್ತು ಪ್ರಯಾಣಿಕರ ತಂಗುದಾಣಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಪ್ರಾಚೀನ ಕಾಲದಲ್ಲಿ ತೀವ್ರಗತಿಯ ಸಂಚಾರಿ ಸಾಧನಗಳು ಇಲ್ಲದೆ ಇದ್ದಾಗ ಪ್ರಯಾಣಿಕರು ಕಾಲ್ನಡಿಗೆಯಿಂದಲೇ ಪ್ರಯಾಣಿಸುತ್ತಿದ್ದರು. ಪ್ರಯಾಣಿಕರು ಪ್ರಯಾಣಿಸುವಾಗ ಬಾಯಾರಿಕೆ ನೀಗಿಸಲು ದಾರಿಯ ಪಕ್ಕದಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸುತ್ತಿದ್ದುದು ಕಂಡುಬರುತ್ತದೆ.

ಅರವಟ್ಟಿಗೆಗಳ ಪ್ರಾಚೀನತೆಯನ್ನು ಗಮನಿಸುವುದಾದರೆ ಅವುಗಳ ರಚನೆ ಹಾಗೂ ನಿರ್ಮಾಣ ಕಾರ್ಯವು ಮೌರ್ಯ ದೊರೆ ಅಶೋಕನಿಂದ ಪ್ರಾರಂಭವಾಯಿತೆಂದು ತಿಳಿಯುತ್ತದೆ. ಬೌದ್ಧ ಧರ್ಮ ಪ್ರಸಾರಕ್ಕಾಗಿ ಊರಿಂದ ಊರಿಗೆ, ದೇಶದಿಂದ ದೇಶಕ್ಕೆ ಸಂಚರಿಸುವ ಸಂದರ್ಭದಲ್ಲಿ ನೀರಿನ ಸೌಕರ್ಯಕ್ಕಾಗಿ ಅರವಟ್ಟಿಗೆಗಳನ್ನು ನಿರ್ಮಿಸಲಾಯಿತು. ಅರವಟ್ಟಿಗೆಗಳು ಸಾಮಾನ್ಯವಾಗಿ ದೇವಸ್ಥಾನಗಳಿಗೆ, ಅಗ್ರಹಾರಗಳಿಗೆ ಇಲ್ಲವೆ ಅನ್ನ ಛತ್ರಗಳಿಗೆ ಹೊಂದಿಕೊಂಡಿರುತ್ತಿದ್ದವು. ದಾನದ ರೂಪದಲ್ಲಿ ಬಂದ ಹಣದಿಂದ ಇವುಗಳನ್ನು ನಡೆಸಲಾಗುತ್ತಿತ್ತು. ಹೆಚ್ಚಿನ ಅರವಟ್ಟಿಗೆಗಳು ದೇವಾಲಯದ ಮಠಗಳಿಗೆ ಹೊಂದಿಕೊಂಡಿರದಿದ್ದರೂ ಇವು ರಸ್ತೆ ಬದಿಯಲ್ಲಿದ್ದು, ಪ್ರಯಾಣಿಕರ ದಾಹ ಇಂಗಿಸುತ್ತಿದ್ದವು. ಇವುಗಳನ್ನು ಧರ್ಮಸ್ಥಾನಗಳೆಂದೂ, ಇವುಗಳನ್ನು ನಡೆಸುವುದು ಸತ್ಕಾರ್ಯಗಳಲ್ಲಿ ಒಂದೆಂದು ತಿಳಿಯಲಾಗಿತ್ತು.

ಸಾಮಾನ್ಯವಾಗಿ, ನೀರಾವರಿಗೆಂದೇ ನಿರ್ಮಿಸಿದ ಬಾವಿಗಳು ಊರಿನಿಂದ ಹೊರಗಡೆಯ ಪ್ರದೇಶಗಳಾದ ಹೊಲ, ತೋಟ, ಗದ್ದೆಗಳಲ್ಲಿರುತ್ತಿದ್ದವು. ಆದರೆ ಜನರಿಗೆ ಕುಡಿಯಲು ಮತ್ತು ದೇವಸ್ಥಾನದಲ್ಲಿ ಧಾರ್ಮಿಕ ಕಾರ್ಯಗಳಿಗೆಂದೇ ತೆಗೆಸಿದ ಬಾವಿಗಳು ಜನವಸತಿ ಪ್ರದೇಶದಲ್ಲಿರುತ್ತಿದ್ದವು. ಇವುಗಳ ರಚನೆ ಸಂಕೀರ್ಣತೆಯಿಂದ ಕೂಡಿರುತ್ತಿತ್ತು. ಏಕೆಂದರೆ ಕೆಲವು ಬಾವಿಗಳು ದೇವತಾಮೂರ್ತಿಗಳಿಂದಲೂ, ಮಂಟಪಗಳಿಂದಲೂ, ನಾಲ್ಕು ಬದಿಯಲ್ಲಿ ಪಾವಟಿಗೆಗಳಿಂದಲೂ ಕೂಡಿರುತ್ತಿದ್ದವು.[೧೮೮] ಊರಿನಲ್ಲಿ ಕುಡಿಯುವ ನೀರಿನ ಸಮಸ್ಯೆ ಇದ್ದಂತಹ ಸಂದರ್ಭದಲ್ಲಿ ದೂರದಲ್ಲಿ ಇರುವಂತಹ ಬಾವಿಗಳಿಂದ ಕಾಲುವೆಗಳ ಮೂಲಕ ನೀರನ್ನು ಸರಬರಾಜು ಮಾಡಲಾಗುತ್ತಿತ್ತು.

ಬಾವಿಗಳನ್ನು ನೀರಿನ ಸೌಕರ್ಯಕ್ಕಲ್ಲದೆಯೇ ಧಾರ್ಮಿಕ ಉದ್ದೇಶಗಳಿಗೂ ಬಳಸಿಕೊಳ್ಳಲಾಗಿದೆ. ಬಾವಿಗಳು ಮುಖ್ಯವಾಗಿ ದೇವಾಲಯಗಳಿಗೆ ಹೊಂದಿಕೊಂಡಂತೆ ಇರುವುದರಿಂದಾಗಿ ಇವು ಧಾರ್ಮಿಕ ಕ್ಷೇತ್ರದಲ್ಲಿ ತಮ್ಮದೇ ಆದಂತಹ ಸ್ಥಾನಗಳನ್ನು ಪಡೆದುಕೊಂಡಿವೆ. ದೇವಾಲಯಗಳು ಇರುವಂತಹ ಪ್ರದೇಶಗಳಲ್ಲಿ ನೀರಿನ ಸೌಕರ್ಯ ಇಲ್ಲದಿದ್ದರೆ ಅಂತಹ ಸ್ಥಳಗಳಲ್ಲಿ ದೇವರು ಇರುವುದಿಲ್ಲ ಎಂಬ ಪ್ರಾಚೀನ ಪ್ರಚಲಿತ ನಂಬಿಕೆಯಿಂದಾಗಿ ಅಂದಿನ ಆಳರಸರು ದೇವಾಲಯವನ್ನು ಕಟ್ಟಿಸಿದರೆ ಅದರ ಮುಂಭಾಗ ಅಥವಾ ಎಡಭಾಗದಲ್ಲಿ ಬಾವಿಯನ್ನು ಕಟ್ಟಿಸುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ಇಂತಹ ಬಾವಿಗಳು ಹೊಸಪೇಟೆ ತಾಲ್ಲೂಕಿನಾದ್ಯಂತ ಕಂಡುಬರುತ್ತವೆ.

ಒಬ್ಬ ತಾಯಿಯು ತನ್ನ ಮಗನಿಗೆ ಹಾಲುಣಿಸುವಾಗ ಹಾಲು ಕಡಿಮೆಯಾದರೆ ಆ ತಾಯಿಯು ಬಾವಿಯ ನೀರನ್ನು ಪೂಜಿಸಿದರೆ ಮಗುವಿಗೆ ಸಾಕಾಗುವಷ್ಟು ಹಾಲು ವೃದ್ಧಿಯಾಗುತ್ತದೆ ಎಂಬುದು ಪ್ರಾಚೀನ ಕಾಲದ ನಂಬಿಕೆಯಾಗಿತ್ತು. ಮಧ್ಯಕಾಲೀನ ಸಂದರ್ಭದಲ್ಲಿ ಧಾರ್ಮಿಕವಾಗಿ ಒಳ್ಳೆಯ ಕಾರ್ಯಗಳನ್ನು ಮಾಡಬೇಕೆಂದರೆ, ಸಮಾಜದ ಉನ್ನತ ವರ್ಗದವರು ಬಾವಿಗಳನ್ನು ನಿರ್ಮಿಸುತ್ತಿದ್ದರು. ಒಬ್ಬ ವ್ಯಕ್ತಿ ತನ್ನ ಸ್ವಂತ ಖರ್ಚಿನಿಂದ ಬಾವಿಯನ್ನು ಕಟ್ಟಿಸಿ, ಸಾರ್ವಜನಿಕರ ಉಪಯೋಗಕ್ಕೆ ದಾನವಾಗಿ ನೀಡಿದರೆ, ಆತನಿಗೆ ಸಮಾಜದಲ್ಲಿ ಉನ್ನತ ಗೌರವಾದರಗಳು ದೊರೆಯುವುದರ ಜೊತೆಗೆ ಪೂಜ್ಯನೀಯ ಸ್ಥಾನವು ದೊರೆಯುತ್ತಿತ್ತು.

ದಕ್ಷಿಣ ಭಾರತದಾದ್ಯಂತ ವ್ಯಾಪಿಸಿದ್ದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ವಿಜಯನಗರ ಪಟ್ಟಣವು ಸುಮಾರು ೨೫ ಚದರ ಕಿ.ಮೀ.ಗಳಷ್ಟು ದೊಡ್ಡದಾಗಿತ್ತು. ಪಟ್ಟಣದ ಸುತ್ತ ಅನೇಕ ಜನನಿಬಿಡ ಉಪನಗರ ಪ್ರದೇಶಗಳೂ ಇದ್ದವು. ರಾಜಧಾನಿ ಮತ್ತು ಸುತ್ತಲಿನ ಉಪನಗರ ಪ್ರದೇಶಗಳಿಗೆ ಉತ್ತಮ ನೀರಿನ ಸೌಕರ್ಯವಿದ್ದುದು ತಿಳಿದಿರುವ ವಿಷಯ. ಶಾಸನಗಳಲ್ಲಿ ಉಲ್ಲೇಖಿತಗೊಂಡ ಬಾವಿಗಳ ಜೊತೆಗೆ, ಜನರ ದೈನಂದಿನ ಉಪಯೋಗಕ್ಕೆ, ಹೊಲ, ಗದ್ದೆ, ತೋಟ ಮತ್ತು ಪ್ರವಾಸಿಗಳಿಗೆ ಒದಗಿಸಿದ್ದ ನೀರಿನ ಸೌಕರ್ಯಗಳನ್ನು ಗಮನದಲ್ಲಿಟ್ಟುಕೊಂಡು ಅಂದಿನ ಕಾಲದಲ್ಲಿ ನಿರ್ಮಾಣಗೊಂಡ ಬಾವಿಗಳ ಪ್ರಾಮುಖ್ಯತೆಯನ್ನು ಈ ಕೆಳಗಿನಂತೆ ಪರಿಶೀಲಿಸಲಾಗಿದೆ.

**೧. ಮಹಾದೇವಿಯಕ್ಕ ಬಾವಿ**

ವಿರೂಪಾಕ್ಷ ದೇವಾಲಯದ ತೇರುಬೀದಿಯ ಎದುರು ಬಸವಣ್ಣನ ದಕ್ಷಿಣಕ್ಕೆ ಬಂಡೆಯ ಮೇಲಿನ ಶಾಸನ 'ಮಹಾದೇವಿಯಕ್ಕ ಬಾವಿ' ಮತ್ತು 'ಕೆಳಬಾವಿ'ಯನ್ನು ಉಲ್ಲೇಖಿಸಿದೆ.[೧೮] ದೊಡ್ಡ ಗುಂಡೊಂದು ಈ ಬಾವಿಯನ್ನು ಭಾಗಶಃ ಮುಚ್ಚಿದೆ ಎಂದು ಹೇಳಲಾಗಿದೆಯಾದರೂ ಈಗ ಈ ಬಾವಿ ಸಂಪೂರ್ಣ ಮುಚ್ಚಿ ಹೋಗಿದೆ. ಬಾವಿಯನ್ನು 'ಮಹಾದೇವಿಯಕ್ಕ' ಎಂಬುವಳು ಕಟ್ಟಿಸಿರಬೇಕೆಂದು ತಿಳಿಯುತ್ತದೆ. ಆದ್ದರಿಂದ ಅದಕ್ಕೆ ಆ ಹೆಸರು ಬಂದಿರಬಹುದು. ಇದರ ಕೆಳಗೆ ಇದ್ದಿರಬಹುದಾದ ಬಾವಿಯನ್ನು 'ಕೆಳಬಾವಿ' ಎಂದು ಶಾಸನದಲ್ಲಿ ಕರೆಯಲಾಗಿದೆ. ಇದು ಇಂದು ಕಂಡುಬರುವುದಿಲ್ಲ.

**೨. ಬಿಳಿಯ ಬಾವಿ**

ವಿಠ್ಠಲ ದೇವಾಲಯದ ಮುಂದಿರುವ ಮಂಟಪದ ದಕ್ಷಿಣ ಗೋಡೆಯಲ್ಲಿ ಕ್ರಿ.ಶ. ೧೫೧೩ರ ಶಾಸನ 'ಕಂಪಿಲೆಯ ಮಾಗಣೆಯಲೂ ಸಾಯಣಪುರದ ಗ್ರಾಮ ೧ ಗುಡ ಸೀಮೇಲೂ ಬಿಳಿಯ ಬಾ(ವಿ)ಯ' ಎಂದು ಉಲ್ಲೇಖಿಸುತ್ತದೆ.[೧೯] ಬಹುಶಃ ಈ ಬಾವಿಯ ನೀರು ಬಹಳ ತಿಳಿಯಾಗಿದ್ದರಿಂದ ಇದನ್ನು 'ಬಿಳಿಯ ಬಾವಿ' ಎಂದು ಕರೆದಿರಬಹುದು. ಈ ಬಾವಿ ಇಂದು ಕಾಣಸಿಗುವುದಿಲ್ಲ.

**೩. ನಡಬಾವಿ ಮತ್ತು ಕಪ್ಪಿಲೆಯ ಬಾವಿ**

ಕಮಲಾಪುರದ ಕೇಂದ್ರ ಪ್ರಾಚ್ಯವಸ್ತು ಸಂಗ್ರಹಾಲಯದ ಬಳಿ ರಸ್ತೆ ಬದಿಯಲ್ಲಿರುವ ಗುಂಡಿನಲ್ಲಿರುವ ಕ್ರಿ.ಶ. ೧೫೩೧ರ ಶಾಸನವು ಎರಡು ವಿಧವಾದ ಬಾವಿಗಳನ್ನು ಸೂಚಿಸುತ್ತದೆ.

೧. **ನಡಬಾವಿ:-** ಬಾವಿಯ ಸುತ್ತಲೂ ಪಾವಟಿಗೆ ಅಥವಾ ಸೋಪಾನ ಹೊಂದಿರುವ ಬಾವಿ.

೨. **ಕಪ್ಪಿಲೆಯ ಬಾವಿ:-** ದೊಡ್ಡ ತೊಗಲಿನ ಚೀಲವನ್ನು ನಿರ್ಮಿಸಿ, ಹಗ್ಗದ ಸಹಾಯದಿಂದ ನೀರನ್ನು ಎತ್ತಿ ತೋಟಗಳಿಗೆ ಹರಿಸಲಾಗುತ್ತಿತ್ತು.

'ನಡಬಾವಿ'ಯನ್ನು ಕುಂತೂರ ಯತಿರಾಜ ದೇವನಮಗ ವಲ್ಲಭಯ್ಯ ಕಟ್ಟಿಸಿದರೆ, 'ಕಪ್ಪಿಲೆಯ ಬಾವಿ'ಯನ್ನು ಕೊಂಡಮರಸಯ್ಯ ಕಟ್ಟಿಸಿದನೆಂಬುದಾಗಿ ತಿಳಿಸುತ್ತದೆ.[೧೯೧] ಕಪಿಲಾಶ್ರಮ ಬಳಿಯ ಶಾಸನವೂ ಕೂಡಾ 'ಕಪ್ಪಿಲೆಯ ಬಾವಿ'ಯನ್ನು ಉಲ್ಲೇಖಿಸುತ್ತದೆ.[೧೯೨] ಬಹುಶಃ ಈ ಬಾವಿ ಕಪಿಲಾಶ್ರಮದ ಪಕ್ಕದಲ್ಲೇ ಇದ್ದಿರಬೇಕು. ಹೀಗಾಗಿ ಈ ಆಶ್ರಮದ ಹೆಸರೇ ಈ ಬಾವಿಗೆ ಬಂದಿರಬಹುದು. ಈ ಬಾವಿಯೂ ಈಗ ಕಂಡು ಬರುವುದಿಲ್ಲ.

**೪. ಅಗಸರ ಬಾವಿ**

ಕ್ರಿ.ಶ. ೧೫೫೯ರ ಹಂಪಿ ಶಾಸನವು ತಿಳಿಸುವಂತೆ, ವಿಠ್ಠಲ ದೇವಾಲಯದ ತೇರುಬೀದಿಯ ಉತ್ತರಕ್ಕೆ 'ಅಗಸರ ಬಾವಿ' ಇತ್ತೆಂದು ತಿಳಿಸುತ್ತದೆ.[೧೯೩] ಬಹುಶಃ ಅಗಸರು ಬಟ್ಟೆಯನ್ನು ತೊಳೆಯಲು ಈ ಬಾವಿಯ ನೀರನ್ನು ಬಳಸುತ್ತಿದ್ದರೆಂದು ತೋರುತ್ತದೆ. ಹೀಗಾಗಿ ಈ ಬಾವಿಗೆ 'ಅಗಸರ ಬಾವಿ' ಎಂಬ ಹೆಸರು ಬಂದಿರಬಹುದು. ಆದರೆ ಈ ಬಾವಿ ಇಂದು ಇಲ್ಲ.

**೫. ಅಶ್ವತ್ಥ ಬಾವಿ**

ಈಗಿನ ಗಾಯತ್ರಿ ಪೀಠದ ದಕ್ಷಿಣಕ್ಕಿರುವ ದಾರಿಯ ಪಕ್ಕದಲ್ಲಿರುವ ಗುಂಡಿನ ಮೇಲಿನ ಕ್ರಿ.ಶ. ೧೩೯೦ರ ಶಾಸನವು 'ಕ್ರಿಯಾಶಕ್ತಿ ವೊಡೆಯರ ಸಿಷ್ಯ ಭಕ್ತರ ನಾಗಪ್ಪಗಳು ಮಾಡಿಸಿದಂಥಾ ವಿನಾಯಕ ಅಶ್ವತ್ಥ ಬಾವಿಯನೂ' ಎಂದಿದೆ. ಈ ಬಾವಿಯನ್ನು ಕ್ರಿಯಾಶಕ್ತಿ ಒಡೆಯರ ಶಿಷ್ಯ ಭಕ್ತರ ನಾಗಪ್ಪ ಎಂಬುವವನು ಕಟ್ಟಿಸಿದನೆಂದು ಶಾಸನ ತಿಳಿಸುತ್ತದೆ.[೧೯೪] ಈ ಬಾವಿಯಲ್ಲದೆ ಇವನು ವಿನಾಯಕ ಮೂರ್ತಿಯನ್ನು ಮಾಡಿಸಿದನೆಂದು ತಿಳಿಸುತ್ತದೆ. ಈ ಬಾವಿ ವಿನಾಯಕನ ಪೂಜೆಗಾಗಿ ಭಕ್ತರ ನಾಗಪ್ಪ ಮಾಡಿಸಿರಬಹುದು. ಆದರೆ, ಈ ಬಾವಿ ಇಂದು ಕಾಣಸಿಗುವುದಿಲ್ಲ.

**೬. ಅರೆಶಂಕರ ಬಾವಿ**

ಪ್ರಸ್ತುತ ತಳವಾರಘಟ್ಟ ಬಾಗಿಲೆಂದು ಕರೆಯುವ ಬಾಗಿಲಿನ ಮೂಲ ಹೆಸರು 'ಅರೆಶಂಕರ ಬಾಗಿಲು'. ವಿಠ್ಠಲ ದೇವಾಲಯದ ಗರ್ಭಗೃಹದ ಪಶ್ಚಿಮ ಅಧಿಷ್ಠಾನದಲ್ಲಿರುವ ಕ್ರಿ.ಶ. ೧೫೫೯ರ ಶಾಸನವು 'ವಿಜಯನಾಗರಕ್ಕೆ ಬಹ ದಾರಿ ಮೇರೆ ತೆಂಕಲೂ ಅರೆಶಂಕರನ ಬಾವಿ ಬಾಗಿಲಿಂದ' ಎಂದಿದೆ.[೧೯೫] ಮೇರೆಯನ್ನು ಹೇಳುವ ಸಂದರ್ಭದಲ್ಲಿ ಈ ಬಾವಿಯ ಪ್ರಸ್ತಾಪ ಬಂದಿದೆ. ಅರೆಶಂಕರನ ಪೂಜೆಗಾಗಿ ಈ ಬಾವಿ ನಿರ್ಮಾಣಗೊಂಡಿರಬೇಕು. ಈ ಬಾವಿಗೆ ಬಾಗಿಲಿತ್ತೆಂದು ಶಾಸನ ಹೇಳುತ್ತದೆ. ಆದರೆ ಇಂದು ಈ ಬಾವಿ ಕಂಡುಬರುವುದಿಲ್ಲ.

**೭. ಬೆನಕನ ಬಾವಿ**

ಅರಮನೆಯ ಪ್ರದೇಶದಿಂದ ಮಾತಂಗ ಪರ್ವತಕ್ಕೆ ಹೋಗುವ ಕಾಲುದಾರಿಯ ಕಣಿವೆಯಲ್ಲಿ ದೇವಾಲಯದ ಹಿಂಬದಿಗೆ ದೊಡ್ಡ ಗುಂಡಿನಲ್ಲಿರುವ ಕ್ರಿ.ಶ. ೧೫೬೧ರ ಶಾಸನವು 'ಬೆನಕನ ಬಾವಿ' ಕುರಿತು ಉಲ್ಲೇಖಿಸುತ್ತದೆ.[೧೯೬] ಈ ಬಾವಿ ಚಿಕ್ಕದಿದ್ದು, ಮೆಟ್ಟಿಲುಗಳನ್ನು ಹೊಂದಿದೆ. ಶಾಸನ ಪಕ್ಕದಲ್ಲಿ ಗಣೇಶನ ಅಪೂರ್ಣವಾದ ಶಿಲ್ಪವಿದೆ. ಹೀಗಾಗಿ ಈ ದೇವರ ಹೆಸರೇ ಈ ಬಾವಿಗೆ ಬಂದಿರಬೇಕು. ಈ ಬಾವಿ ಬೆನಕನ ಪೂಜೆಗಾಗಿ ನೀರು ತರಲು ನಿರ್ಮಾಣವಾಗಿರಬೇಕು. ಈಗ ಈ ಬಾವಿ ಜೀರ್ಣಾವಸ್ಥೆಯಲ್ಲಿ ಇಂದಿಗೂ ಅಸ್ತಿತ್ವದಲ್ಲಿದೆ.

### ೮. ಲಿಂಗ ಬಾವಿ

ಬೇಟೆಕಾರರ ಹೆಬ್ಬಾಗಿಲಿನ ಈಶಾನ್ಯಕ್ಕೆ ಶಿಥಿಲವಾದ ದೇವಸ್ಥಾನದ ಉತ್ತರ ಗೋಡೆಯಲ್ಲಿರುವ ಗುಂಡಿನ ಮೇಲಿರುವ ತೆಲುಗು ಭಾಷೆಯ ಶಾಸನವೊಂದು 'ಲಿಂಗ ಬಾವಿ'ಯನ್ನು ಉಲ್ಲೇಖಿಸುತ್ತದೆ. ಇದೇ ಶಾಸನದ ಹತ್ತಿರ ಬಾವಿಗೆ ಕಟ್ಟಲಾದ ಕಲ್ಲಿನ ಮೇಲಿರುವ ಶಾಸನವೂ ಕೂಡಾ 'ಲಿಂಗ ಬಾವಿ'ಯನ್ನು ಉಲ್ಲೇಖಿಸುತ್ತದೆ.[೧೯೭] ಬಹುಶಃ ಈ ಬಾವಿ ತಾನು ಹೊಂದಿದ ದೇವರನ್ನು ಸೂಚಿಸುತ್ತದೆ. ಈ ಬಾವಿ ಈಗ ಕಂಡುಬರುವುದಿಲ್ಲ.

### ೯. ರಂಗನಾಥ ಬಾವಿ

ಮಾಲ್ಯವಂತ ದೇವಾಲಯದ ಉತ್ತರಕ್ಕಿರುವ ಗುಂಡಿನ ಮೇಲಿನ ತೆಲುಗು ಶಾಸನವು 'ರಂಗನಾಥ ಬಾವಿ'ಯನ್ನು ಕುರಿತು ಉಲ್ಲೇಖಿಸುತ್ತದೆ. ಈ ಬಾವಿಯನ್ನು ತಿರಿ ವಿದಿ' ಚಿಟಿನಾಗಿ ನೇನಿಯ ಮಗ ಚಿನ್ನನಾಯಂಡು ಕಟ್ಟಿಸಿದನೆಂಬುದಾಗಿ ಶಾಸನ ಹೇಳುತ್ತದೆ.[೧೯೮] ಬಹುಶಃ ಈ ಬಾವಿ ರಂಗನಾಥ ದೇವರ ಪೂಜೆಗಾಗಿ ಕಟ್ಟಿಸಿದುದಾಗಿರಬೇಕು. ಈಗ ಈ ಬಾವಿ ಸಂಪೂರ್ಣವಾಗಿ ಹಾಳಾಗಿದ್ದು, ಅದರ ಅವಶೇಷಗಳು ಮಾತ್ರ ಕಂಡುಬರುತ್ತವೆ.

### ೧೦. ಅಹಮ್ಮದ್‌ಖಾನನ ಬಾವಿ

ಸಿಂಘಾರದ ಹೆಬ್ಬಾಗಿಲಿನಿಂದ ಈಶಾನ್ಯಕ್ಕೆ ಮುಸ್ಲಿಮರು ವಾಸಿಸುತ್ತಿದ್ದ ಪ್ರದೇಶವು ಕಂಡು ಬರುತ್ತದೆ. ಈ ಪ್ರದೇಶದಲ್ಲಿ ಅನೇಕ ಗೋರಿಗಳು ಮತ್ತು ಎರಡು ಮಸೀದಿಗಳಿವೆ. ಒಂದು ಮಸೀದಿಯಲ್ಲಿರುವ ಕ್ರಿ.ಶ. ೧೪೩೯ರ ಶಾಸನದಿಂದ ಅದೊಂದು ಧರ್ಮಶಾಲೆಯಾಗಿತ್ತೆಂಬುದು ತಿಳಿಯುತ್ತದೆ. ಈ ಶಾಸನದ ಪ್ರಕಾರ ಈ ಧರ್ಮಶಾಲೆ ಮತ್ತು ಪಕ್ಕದಲ್ಲಿರುವ ಬಾವಿಯನ್ನು ಕಟಿಗೆಯ ಅಹಮ್ಮದ್ ಖಾನನು ತನ್ನ ಅರಸ ಎರಡನೆಯ ದೇವರಾಯನಿಗೆ ಧರ್ಮವಾಗಬೇಕೆಂದು ಕಟ್ಟಿಸಿದನು.[೧೯೯] ಮಸೀದಿ ಅಥವಾ ಧರ್ಮಶಾಲೆಗೆ ಬರುವವರ ಉಪಯೋಗಕ್ಕಾಗಿ ಈ ಬಾವಿಯನ್ನು ಕಟ್ಟಿಸಿದನು. ಈ ಬಾವಿ ಇಂದಿಗೂ ಅಸ್ತಿತ್ವದಲ್ಲಿದೆ.

### ೧೧. ಲಿಂಗಾಲಯ್ಯನ ಬಾವಿ

ತಿಮ್ಮಲಾಪುರದ ಈಶ್ವರ ದೇವಾಲಯದ ರಥ ಬೀದಿಯ ಎಡಕ್ಕೆ ಕೋಟೆಯ ಒಳಗೆ ಇರುವ ಬಾವಿಯನ್ನು 'ಲಿಂಗಾಲಯ್ಯನ ಬಾವಿ' ಎಂದು ಕರೆಯುತ್ತಾರೆ. ಈ ಪಾಳುಬಾವಿಯ ಬಳಿಯಿರುವ ಕ್ರಿ.ಶ. ೧೫೩೯ರ ಶಾಸನವು ತಿಳಿಸುವಂತೆ, ಬಯಕಾರ ರಾಮಪ್ಪನು ತನ್ನ ಮಗ ಲಿಂಗಾಲಯ್ಯನಿಗೆ ಪುಣ್ಯವಾಗಬೇಕೆಂದು ಬಾವಿ ಕಟ್ಟಿಸಿ ಅದಕ್ಕೆ 'ಲಿಂಗಾಲಯ್ಯನ ಬಾವಿ' ಎಂದು ಹೆಸರಿಟ್ಟನು.[೨೦೦]

### ೧೨. ಸೂಳೆ ಬಾವಿ

ಈ ಬಾವಿಯು ಮಲಪನಗುಡಿ ಗ್ರಾಮದ ರಸ್ತೆ ಬದಿಯಲ್ಲಿ ಕಂಡುಬರುತ್ತದೆ. ಈ ಬಾವಿಯನ್ನು 'ಸೂಳೆಬಾವಿ' ಅಥವಾ 'ಸುಳಿಬಾವಿ' ಎಂದು ಕರೆಯುತ್ತಾರೆ. ಸಂಗಮ ವಂಶದ

ದೊರೆ ಒಂದನೇ ದೇವರಾಯನ ಆಳ್ವಿಕೆಯ ಕಾಲದಲ್ಲಿ ಈ ಬಾವಿಯು ನಿರ್ಮಾಣವಾಗಿದೆ ಎಂದು ಆ ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದ ಶಿಲಾಶಾಸನದಿಂದ ಮಾಹಿತಿಯು ಸಿಗುತ್ತದೆ. ಇದನ್ನು ಸೂಳೆಯರು ನಿರ್ಮಿಸಿದ್ದರೆಂದು ತಿಳಿದುಬರುತ್ತದೆ. ಸಮಾಜ ಗೌರವ ನೀಡದಿದ್ದರೂ, ಗೌರವಕ್ಕೆ ಯೋಗ್ಯವಾದ ಕೆಲಸವನ್ನು ವಿಜಯನಗರ ಕಾಲದ ಅಂದಿನ ಸೂಳೆಯರು ಈ ಬಾವಿಯನ್ನು ನಿರ್ಮಿಸುವುದರ ಮೂಲಕ ತೋರಿಸಿಕೊಟ್ಟಿದ್ದಾರೆ. ಅವರು ಮಾಡುವ ವೃತ್ತಿಯಿಂದ ಎಲ್ಲರೂ ಕೂಡಿಕೊಂಡು ದುಡ್ಡು ಹಾಕಿ ಈ ಬಾವಿಯನ್ನು ತೋಡಿಸಿದ್ದರೆಂದು ಇಲ್ಲಿನ ಸ್ಥಳೀಯರು ವಿವರಿಸುತ್ತಾರೆ.

ಈ ಬಾವಿಯು ಸುಂದರ ಕೆತ್ತನೆಗಳಿಂದ ಕೂಡಿದ್ದು, ಮುಸ್ಲಿಂ ಶೈಲಿಯ ಕಮಾನುಗಳನ್ನು, ಉಬ್ಬು ಕೆತ್ತನೆಯಲ್ಲಿ ಆಂಜನೇಯನ ಸುಂದರಮೂರ್ತಿಯನ್ನು ಕಾಣಬಹುದು. ಬಾವಿಯ ಕೆಳಗೆ ಇಳಿಯಲು ಮೆಟ್ಟಿಲುಗಳನ್ನು ಮಾಡಲಾಗಿದೆ. ಈ ಬಾವಿಯು ಅಂದಿನ ಪ್ರಯಾಣಿಕರಿಗೆ, ಪ್ರವಾಸಿಗರಿಗೆ, ಸ್ಥಳೀಯರಿಗೆ ಊಟ ಮಾಡಿ, ನೀರು ಕುಡಿದು ವಿಶ್ರಾಂತಿ ಪಡೆಯಲು ಅನುಕೂಲಕರವಾಗಿತ್ತೆಂದು ತಿಳಿದುಬರುತ್ತದೆ. ಈ ಬಾವಿಯು ಇಂದಿಗೂ ಯಾವ ಧಕ್ಕೆಗೂ ಒಳಗಾಗದೆ ಸುಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

ಮಲಪನಗುಡಿ ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದ ಮುಂದಿರುವ ಕ್ರಿ.ಶ. ೧೪೧೨ರ ಶಾಸನವು ಈ ಬಾವಿಯನ್ನು 'ಮಾಳಿಗೆಕೂಪಾರಾಮ'ವೆಂದು ಉಲ್ಲೇಖಿಸುತ್ತದೆ. ವಿಜಯನಗರದ ಅರಸ ಒಂದನೇ ದೇವರಾಯನ ಕಾಲದಲ್ಲಿ ಕ್ರಿ.ಶ. ೧೪೧೨ರಲ್ಲಿ ಬಿಸಿಲಹಳ್ಳಿಯ ಕಣಿವೆ ಮತ್ತು ಬಡವಲಿಯ ಕಣಿವೆ ಹಾದಿ ಕೂಡಿದ ಮಹಾಪಥದಲ್ಲಿ ಬುಳ್ಳೆನಾಯ್ಕನ ಮಗ ಹೆಗ್ಗಡೆ ಸೋವಣ್ಣ ಅರವಟ್ಟಿಗೆಯನ್ನಿಕ್ಕಿಸಿ ಮಾಳಿಗೆಕೂಪಾರಾಮವನ್ನು ಮಾಡಿಸಿದನು.[೨೦೧]

ಮಾಳಿಗೆಕೂಪಾರಾಮವು ಮಾಳಿಗೆ, ಕೂಪ ಮತ್ತು ಆರಾಮ ಎಂಬ ಮೂರು ಶಬ್ದಗಳಿಂದ ಕೂಡಿದೆ. ಮಾಳಿಗೆ ಎಂದರೆ ಮೇಲ್ಚಾವಣಿ, ಕೂಪ ಎಂದರೆ ಬಾವಿ ಮತ್ತು ಆರಾಮ ಎಂದರೆ ವಿಶ್ರಾಂತಿಗಾಗಿ ಮಾಡಿದ ತೋಟ ಅಥವಾ ವನ ಎಂಬ ಅರ್ಥವಿದೆ. ಈ ಬಾವಿಯ ಉದ್ದೇಶವೆಂದರೆ, ವಿಜಯನಗರದ ಹೆದ್ದಾರಿಯಲ್ಲಿ ಹೋಗುವ ಪ್ರಯಾಣಿಕರಿಗೆ ಅರವಟ್ಟಿಗೆಯನ್ನು ರಚಿಸಿ ಬಾಯಾರಿಕೆಯನ್ನು ಇಂಗಿಸುವುದು ಹಾಗೂ ಅವರ ಮಾರ್ಗಾಯಾಸ ಪರಿಹಾರಕ್ಕೆ ತೋಟ ನಿರ್ಮಿಸಿದ್ದರು. ಹೀಗಾಗಿ ಬಾವಿಯ ಬಳಿ ಗಿಡ, ಮರಗಳ ತೋಪನ್ನು ನಿರ್ಮಿಸಲಾಗಿತ್ತು. ಹೀಗೆ ಈ ಅರವಟ್ಟಿಗೆ ಹಾಗೂ ತೋಟದ ಉಸ್ತುವಾರಿಗೆಂದೇ ಬುಳ್ಳಯ್ಯ ನಾಯ್ಕನ ಮಗನಾದ ಹೆಗ್ಗಡೆ ಸೋವಣ್ಣ ಎಂಬ ದಾನಿಯು ಭೂಮಿಯನ್ನು ನೀಡಿದ್ದನು. ಹೀಗೆ ಭೂಮಿಯಿಂದ ಬಂದ ಆದಾಯವನ್ನು ಹಲವಾರು ಮಂದಿ ಹಂಚಿಕೊಳ್ಳಬೇಕೆಂಬ ಕರಾರಿನಂತೆ, ಅರವಟ್ಟಿಗೆಯ ಆದಾಯದ ಮೂರಾಂಶವನ್ನು, ಮಾಲೀಕನಾದ ವಿರುಪಣ್ಣನು ಪಡೆಯೆ ಮಿಕ್ಕ ಮೂರಾಂಶ

ಆದಾಯವನ್ನು ಅರವಟ್ಟಿಗೆಗೆ ನೀರು ಹೊತ್ತು ಹಾಕುವರ, ಗಡಿಗೆ ಮುಂತಾದ ಸಾಮಗ್ರಿಗಳ ಖರೀದಿ ಮಾಡಲು, ತೋಟಕ್ಕೆ ನೀರು ಹಾಕುವವರ ಕೂಲಿ ಹಾಗೂ ಇತರ ದುರಸ್ತಿ ಕಾರ್ಯಗಳಿಗೆ ಉಪಯೋಗಿಸಲಾಗುತ್ತಿತ್ತು. ಅಲ್ಲದೆ 'ಹೀಗೆ ದಾನ ಪಡೆದ ವಿರುಪಣ್ಣ ಮತ್ತು ಅವನ ವಂಶಜರು ಈ ಕಾರ್ಯವನ್ನು ಮುಂದುವರೆಸಿಕೊಂಡು ಹೋಗಬೇಕು. ಒಂದು ವೇಳೆ ಅವರು ಈ ಕಾರ್ಯದಲ್ಲಿ ತಪ್ಪಿದರೆ, ಯಾವ ಧರ್ಮಿಷ್ಠನಾದರೂ ಈ ಶಾಸನವನ್ನು ಬಹಿರಂಗವಾಗಿ ಓದಿ, ಜನತೆಗೆ ತಿಳಿಸಿ, ಈ ಧಾರ್ಮಿಕ ಕಾರ್ಯವನ್ನು ಮುಂದುವರೆಸಿಕೊಂಡು ಹೋಗಬಹುದು ಹಾಗೂ ಉತ್ಪನ್ನದ ಆದಾಯವನ್ನೂ ಪಡೆಯಬಹುದು' ಎಂದೇ ಸೂಚಿಸಿದೆ. ಇದೊಂದು ಬಾವಿಗಳ ಬಗೆಗೆ ಹಾಗೂ ಅವುಗಳ ಉಪಯುಕ್ತತೆಗೆ ಉತ್ತಮ ಉದಾಹರಣೆಯಾಗಿದೆ. ಈ ದೃಷ್ಟಾಂತವು ಅಂದಿನ ದಿನಗಳಲ್ಲಿಯ ಸಮಾಜದಲ್ಲಿ ದಾರಿ ಹೋಕರಿಗೂ, ಪ್ರಯಾಣಿಕರ ಬಗೆಗೂ ಇದ್ದ ಸದ್ಭಾವನೆಯನ್ನು ಸೂಚಿಸುತ್ತದೆ. ವಿಜಯನಗರ ಆಡಳಿತದಲ್ಲಿ ಅಂದಿನ ಜನಜೀವನದಲ್ಲಿ ಬಾವಿಗಳ ಪಾತ್ರವನ್ನು ಎತ್ತಿತೋರಿಸಲು ಇದೊಂದು ಉತ್ತಮ ನಿದರ್ಶನ ಹಾಗೂ ಪ್ರವಾಸಿಗಳಿಗೆ ರಸ್ತೆ ಬದಿಯ ಸೌಲಭ್ಯಗಳು ಹೇಗಿರಬೇಕೆಂಬುದಕ್ಕೆ 'ಮಾಳಿಗೆಕೂಪಾರಾಮ'ವು ಉತ್ತಮ ಉದಾಹರಣೆಯಾಗಿ ನಿಲ್ಲುತ್ತದೆ.

**೧೩. ಜಂಬುನಾಥ ಬಾವಿ**

ಹೊಸಪೇಟೆಯ ಜಂಬುನಾಥ ದೇವಸ್ಥಾನದ ಪ್ರಾಂಗಣದಲ್ಲಿ ಈ ಬಾವಿ ಕಂಡುಬರುತ್ತದೆ. ದೇವಸ್ಥಾನ ಮತ್ತು ಬಾವಿಯು ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ರಚನೆಗೊಂಡದ್ದು ಎಂದು ತಿಳಿದುಬರುತ್ತದೆ. ಈ ಬಾವಿಯ ನೀರನ್ನು ದೇವರ ಅಭಿಷೇಕ ಹಾಗೂ ಧಾರ್ಮಿಕ ಕಾರ್ಯಗಳಿಗೆ ಉಪಯೋಗಿಸಲಾಗುತ್ತಿತ್ತು.

ಈ ಬಾವಿ ಮತ್ತು ಅದರ ವಿನ್ಯಾಸವನ್ನು ಗಮನಿಸಿದರೆ ವಿಜಯನಗರ ಕಾಲದವರು ಹೊಂದಿದ್ದ ಅಗಾಧ ಜಲತಂತ್ರ ವಿಷಯದ ಬಗ್ಗೆ ತಿಳಿದುಬರುತ್ತದೆ. ಈ ಬಾವಿಯಲ್ಲಿ ಗುಡ್ಡಗಳ ಶಿಲಾಬಂಡೆಗಳಿಂದ ಒಸರಿ ಬರುವ ಊಟೆಯಿಂದ ಹೊರಹೊಮ್ಮಿದ ನೀರು ಸಂಗ್ರಹವಾಗುತ್ತದೆ. ಇದಕ್ಕೆಂದೇ ಒಂದು ಚೌಕಾಕಾರದ ಕಣಶಿಲೆ ಬಂಡೆಗಳ ಕುಂಡವನ್ನು ರಚಿಸಲಾಗಿದೆ. ಈ ಕುಂಡದಲ್ಲಿ ನೀರಿನ ಮಟ್ಟವು ಒಂದು ಎತ್ತರಕ್ಕೆ ಬಂದ ಮೇಲೆ ಹೆಚ್ಚುವರಿ ನೀರು ತಾನೇ ತಾನಾಗಿ ಹರಿದು ಹೋಗುವ ವ್ಯವಸ್ಥೆ ಮಾಡಲಾಗಿದೆ. ಕಡು ಬೇಸಿಗೆಯ ಬರಗಾಲ ಸಮಯದಲ್ಲೂ ಇದು ತನ್ನ ಮಟ್ಟವನ್ನು ಕಾದುಕೊಂಡು ಬರುತ್ತದೆ ಎಂದೂ ಇದು ಬತ್ತಿ ಹೋಗದ ಸರ್ವಋತು ಚಿಲುಮೆಯಾಗಿದೆ. ಇದರ ನೀರು ಸಿಹಿಯಾಗಿದ್ದು, ಅನೇಕ ಖನಿಜ ಲವಣಗಳಿಂದ ಕೂಡಿದ್ದು, ರೋಗ ನಿವಾರಕ ಶಕ್ತಿಯನ್ನು ಹೊಂದಿದೆ. ಈ ಬಾವಿಯ ಮೇಲ್ಭಾಗದಲ್ಲಿ ಶಿಖರವನ್ನು ರಚಿಸಿರುವುದರಿಂದ ಸೂರ್ಯನ ಬಿಸಿಲು ಈ ಬಾವಿಯಲ್ಲಿ ಬೀಳುವುದಿಲ್ಲ. ಹೀಗಾಗಿ ಬಾವಿಯ ನೀರು ಸದಾಕಾಲ ತಣ್ಣಗೆ ಇರುತ್ತದೆ.

**ಉಲ್ಲೇಖ ಹಾಗೂ ಟಿಪ್ಪಣಿಗಳು**

೧. ರಾಮಣ್ಣ, ೭೦ ವಯಸ್ಸು, ವೇಷಗಾರ ವೃತ್ತಿ, ವೆಂಕಟಾಪುರ ಕ್ಯಾಂಪ್.

೨. ಎಚ್. ವಿರೂಪಾಕ್ಷ, ೪೫ ವಯಸ್ಸು, ವ್ಯವಸಾಯ, ಆನೆಗೊಂದಿ.

೩. ಬ್ರಹ್ಮಾನಂದಸ್ವಾಮೀಜಿ, ೪೬ ವಯಸ್ಸು, ದುರ್ಗಾದೇವಿಪೀಠದ ಮುಖ್ಯಸ್ಥರು, ಆನೆಗೊಂದಿ.

೪. ಅದೇ.

೫. ಕುಮಾರ, ೪೦ ವಯಸ್ಸು, ವಿರೂಪಾಪುರಗಡ್ಡೆ.

೬. ನರಸಿಂಹಮೂರ್ತಿ, ೪೦ ವಯಸ್ಸು, ಅರ್ಚಕರು, ಕಮಲಾಪುರ.

೭. ನಾರಾಯಣಪ್ಪ, ೬೨ ವಯಸ್ಸು, ವ್ಯವಸಾಯ, ಕತ್ರಿ.

೮. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೯. ನಾಗರಾಜಪ್ಪ, ೬೫ ವಯಸ್ಸು, ಪುಸ್ತಕ ವ್ಯಾಪಾರಿ, ಆನೆಗೊಂದಿ.

೧೦. ಲಕ್ಷ್ಮೀದೇವಮ್ಮ, ೭೪ ವಯಸ್ಸು, ಕೂಲಿ, ವೆಂಕಟಾಪುರ.

೧೧. ಬಸವರಾಜಪ್ಪ, ೫೦ ವಯಸ್ಸು, ವ್ಯವಸಾಯ, ಬಸವನದುರ್ಗ.

೧೨. ರಾಮಚಂದ್ರ, ೪೫ ವಯಸ್ಸು, ವ್ಯವಸಾಯ, ಹನುಮನಹಳ್ಳಿ.

೧೩. ಅನಂತಪದ್ಮನಾಭ ಆಚಾರ್ಯ, ೪೦ ವಯಸ್ಸು, ಅರ್ಚಕರು, ಉತ್ತರಪ್ರದೇಶ.

೧೪. ಗುಂಡಾಚಾರ್, ೭೦ ವಯಸ್ಸು, ಅರ್ಚಕರು, ಕಮಲಾಪುರ.

೧೫. ಜೆ. ಗಿಡ್ಡಪ್ಪ, ೭೪ ವಯಸ್ಸು, ವ್ಯವಸಾಯ, ಕಮಲಾಪುರ.

೧೬. ಕೃಷ್ಣಭಟ್, ೪೨ ವಯಸ್ಸು, ವ್ಯವಸಾಯ, ಹಂಪಿ.

೧೭. ಕಾಳಮ್ಮ, ೬೪ ವಯಸ್ಸು, ಕೂಲಿ, ಕಮಲಾಪುರ.

೧೮. ದೇಸಾಯಿ ಗೋವಿಂದರಾವ್, ೮೦ ವಯಸ್ಸು, ರೈತ ಮುಖಂಡರು, ಕಮಲಾಪುರ.

೧೯. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೧೭

೨೦. ಭರಮಪ್ಪ, ೪೮ ವಯಸ್ಸು, ಪೂಜಾರಿ, ಕಮಲಾಪುರ.

೨೧. ಬಸಪ್ಪ ಎಸ್.(ಸಂ), ೧೯೭೦, **ಶಿವತತ್ವ ಚಿಂತಾಮಣಿ(ಲಕ್ಕಣ್ಣ ದಂಡೇಶ),** ಪುಟ ೪೪೦.

೨೨. ಗುಂಡಾಚಾರ್, ೭೦ ವಯಸ್ಸು, ಅರ್ಚಕರು, ಕಮಲಾಪುರ.

೨೩. ದೇವಕುಂಜರಿ ಡಿ., ೧೯೯೨, **ಹಂಪಿ,** ಪುಟ ೬೨.

೨೪. ನರಸಿಂಹಮೂರ್ತಿ, ೪೦ ವಯಸ್ಸು, ಅರ್ಚಕರು, ಕಮಲಾಪುರ.

೨೫. ಶ್ರೀನಿವಾಸ ಶ್ರೇಷ್ಠಿ, ೬೫ ವಯಸ್ಸು, ವ್ಯಾಪಾರಿ, ಹಂಪಿ.

೨೬. ಜೆ. ಬಸಪ್ಪ, ೬೫ ವಯಸ್ಸು, ವ್ಯವಸಾಯ, ಕಮಲಾಪುರ.

೨೭. ಗುಂಡಾಚಾರ್, ೭೦ ವಯಸ್ಸು, ಅರ್ಚಕರು, ಕಮಲಾಪುರ.

೨೮. ಎಚ್. ಮಂಜುನಾಥ, ೪೬ ವಯಸ್ಸು, ವ್ಯವಸಾಯ, ಆನೆಗೊಂದಿ.

೨೯. ಎಚ್. ವಿರೂಪಾಕ್ಷ, ೪೫ ವಯಸ್ಸು, ವ್ಯವಸಾಯ, ಆನೆಗೊಂದಿ.

೩೦. ಕಾಳಮ್ಮ, ೬೪ ವಯಸ್ಸು, ಕೂಲಿ, ಕಮಲಾಪುರ.

೩೧. ವೇಣುಗೋಪಾಲ, ೪೩ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೩೨. ಶ್ರೀನಿವಾಸ, ೪೫ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೩೩. ಕೃಷ್ಣಮೂರ್ತಿ, ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೩೪. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೧೬.

೩೫. ಕೃಷ್ಣಮೂರ್ತಿ, ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೩೬. ಜಗದೀಶ(ಲೇ), ೨೦೦೬, 'ಹಂಪಿ ಮೆಟ್ಟಿಲು ಪುಷ್ಕರಣಿಯ ನಿರ್ಮಾಣ ತಾಂತ್ರಿಕತೆ', **ಹಂಪಿ ಪರಂಪರೆ**(ದೇವರಕೊಂಡಾರೆಡ್ಡಿ(ಸಂ)), ಪುಟ ೪೧೯.

೩೭. ಮಾರಮ್ಮ, ೬೫ ವಯಸ್ಸು, ಕೂಲಿ, ಕಮಲಾಪುರ.

೩೮. ಕೃಷ್ಣಮೂರ್ತಿ, ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೩೯. ದೇವಕುಂಜರಿ ಡಿ., ೧೯೯೨, **ಹಂಪಿ,** ಪುಟ ೬೨.

೪೦. ನಾಗರಾಜಪ್ಪ, ೬೫ ವಯಸ್ಸು, ಪುಸ್ತಕ ವ್ಯಾಪಾರಿ, ಆನೆಗೊಂದಿ.

೪೧. ಜೆ.. ಬಸಪ್ಪ, ೬೫ ವಯಸ್ಸು, ವ್ಯವಸಾಯ, ಕಮಲಾಪುರ.

೪೨. ಕೃಷ್ಣಮೂರ್ತಿ, ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೪೩. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೪೪. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೧೪.

೪೫. ಅದೇ., ಪುಟ ೧೭೮.

೪೬. ವಾಸುದೇವನ್ ಸಿ.ಎಸ್.(ಲೇ), ೨೦೦೬, 'ವಿಜಯನಗರ ಪಟ್ಟಣದ ಪ್ರಮುಖರ ಮನೆಗಳು', **ಹಂಪಿ ಪರಂಪರೆ**(ದೇವರಕೊಂಡಾರೆಡ್ಡಿ(ಸಂ)), ಪುಟ ೩೩೧.

೪೭. ಕೊಟ್ರೇಶ ಎಂ.(ಲೇ), ೨೦೦೫, 'ಹಂಪಿ ಕೋಟೆಯ ಪ್ರವೇಶ ದ್ವಾರಗಳು', **ವಿಜಯನಗರ ಅಧ್ಯಯನ, ಸಂಪುಟ–೧೦**(ಗೋಪಾಲ್ ಆರ್. ಹಾಗೂ ಇತರರು(ಸಂ)), ಪುಟ ೧೪೧.

೪೮. ಕೊಟ್ರೇಶ ಎಂ.(ಲೇ), ೨೦೦೬, 'ಹಂಪಿಯ ರಕ್ಷಣಾ ವಾಸ್ತು', **ಹಂಪಿ ಪರಂಪರೆ**(ದೇವರಕೊಂಡಾರೆಡ್ಡಿ(ಸಂ)), ಪುಟ ೨೫೨.

೪೯. ಜೆ. ಗಿಡ್ಡಪ್ಪ, ೭೪ ವಯಸ್ಸು, ವ್ಯವಸಾಯ, ಕಮಲಾಪುರ.

೫೦. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೧೩.

೫೧. ಸೋಮಶೇಖರ್ ಎಸ್.ವೈ., ೧೯೯೭, **ಹಂಪಿಯ ಬಜಾರುಗಳು,** ಪುಟ ೧೯.

೫೨. ಕೆಂಚಮ್ಮ, ೬೮ ವಯಸ್ಸು, ಕೂಲಿ, ಹಂಪಿ.

೫೩. ಎಲ್. ಜೂಲ್ಯಾನಾಯ್ಕ, ೮೮ ವಯಸ್ಸು, ರೈತ, ಕಡ್ಡಿರಾಮಪುರ.

೫೪. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೨೨೮,** ಪುಟ ೧೭೮.

೫೫. ಬಾಲಸುಬ್ರಮಣ್ಯ(ಲೇ), ೨೦೦೬, 'ಕಾರಂಜಿ ಹಾಗೂ ಜಲಕ್ರೀಡಾ ಸೌಧಗಳು', **ಹಂಪಿ ಪರಂಪರೆ** (ದೇವರಕೊಂಡಾರೆಡ್ಡಿ(ಸಂ)), ಪುಟ ೪೨೪.

೫೬. ರುದ್ರಸ್ವಾಮಿ, ೭೬ ವಯಸ್ಸು, ನಿವೃತ್ತ ಶಿಕ್ಷಕರು, ಕಮಲಾಪುರ.

೫೭. ಕೊಟ್ರಯ್ಯ ಸಿ.ಟಿ.ಯಂ.(ಲೇ), ೨೦೦೬, 'ಬಾವಿ ಮತ್ತು ಊಟೆ ಬಾವಿ ನೀರಾವರಿ', **ಹಂಪಿ ಪರಂಪರೆ**(ದೇವರಕೊಂಡಾರೆಡ್ಡಿ(ಸಂ)), ಪುಟ ೪೯೦.

೫೮. ಲಾಭನಕೇರಿ ನೀಲಮ್ಮ, ೭೬ ವಯಸ್ಸು, ರೈತರು, ಮಲಪನಗುಡಿ.

೫೯. ದೇವೇಂದ್ರದಾಸ್, ೫೫ ವಯಸ್ಸು, ಪೂಜಾರಿ, ವೆಂಕಟಾಪುರ.

೬೦. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೨೯,** ಪುಟ ೧೬೩.

೬೧. ಬೇವಿನಮರದ ಕಣಿಮೆಪ್ಪ, ೭೮ ವಯಸ್ಸು, ವ್ಯವಸಾಯ, ಅನಂತಶಯನಗುಡಿ.

೬೨. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೨೯ ಮತ್ತು ೩೦,** ಪುಟ ೧೬೩ ಮತ್ತು ೧೬೬

೬೩. ಮಾಯಪ್ಪ, ೬೮ ವಯಸ್ಸು, ಬೇಸಾಯ, ನಂದಿಬಂಡೆ.

೬೪. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೫೧,** ಪುಟ ೧೮೩.

೬೫. ಅಜ್ಜಯ್ಯಸ್ವಾಮಿ, ೭೮ ವಯಸ್ಸು, ನಿವೃತ್ತ ಶಿಕ್ಷಕರು, ಕಡ್ಡಿರಾಂಪುರ.

೬೬. ಚಂದ್ರನಾಯ್ಕ, ೪೫ ವಯಸ್ಸು, ವ್ಯವಸಾಯ, ಕಡ್ಡಿರಾಂಪುರ.

೬೭. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೨೨೮,** ಪುಟ ೧೭೮.

೬೮. ಹನುಮಂತಪ್ಪ, ೬೦ ವಯಸ್ಸು, ವ್ಯವಸಾಯ, ಚಿಕ್ಕಜಾಯಿಗನೂರು.

೬೯. ಜಂಬಣ್ಣ, ೭೫ ವಯಸ್ಸು, ವ್ಯವಸಾಯ, ನಾಗೇನಹಳ್ಳಿ.

೭೦. ಮುರಿಗೆಪ್ಪ, ೬೦ ವಯಸ್ಸು, ಗ್ರಾಮಪಂಚಾಯತಿ ನೌಕರ, ತಿಮ್ಮಲಾಪುರ.

೭೧. ಶ್ರೀನಿವಾಸಮೂರ್ತಿ, ೬೫ ವಯಸ್ಸು, ನಿವೃತ್ತ ಶಿಕ್ಷಕರು, ಹೊಸಪೇಟೆ.

೭೨. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ–೩೧,** ಪುಟ ೧೬೭.

೭೩. ರಾಮನಾಯ್ಕ, ೫೮ ವಯಸ್ಸು, ಕೂಲಿ, ರಾಜಾಪುರ.

೭೪. ಹನುಮಂತಪ್ಪ, ೬೫ ವಯಸ್ಸು, ವ್ಯವಸಾಯ, ವಡ್ಡರಹಳ್ಳಿ.

೭೫. ಹೊನ್ನೂರಪ್ಪ, ೭೨ ವಯಸ್ಸು, ವ್ಯವಸಾಯ, ವಡ್ಡರಹಳ್ಳಿ.

೭೬. ಪಂಪಾಪತೆಪ್ಪ, ೬೮ ವಯಸ್ಸು, ವ್ಯವಸಾಯ, ಇಂಗಳಗಿ.

೭೭. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ–೩೧,** ಪುಟ ೧೬೯.

೭೮. ದೇವಪ್ಪ, ೭೦ ವಯಸ್ಸು, ಕೂಲಿ, ಸಣಾಪುರ.

೭೯. ಉಡೇದ ಭೀಮಪ್ಪ, ೬೮ ವಯಸ್ಸು, ವ್ಯವಸಾಯ, ರಾಮಸಾಗರ.

೮೦. ಚೆನ್ನವೀರಯ್ಯಸ್ವಾಮಿ, ೭೦ ವಯಸ್ಸು, ಅರ್ಚಕರು, ರಾಮಸಾಗರ.

೮೧. ಸಣ್ಣರಾಮಪ್ಪ, ೭೦ ವಯಸ್ಸು, ವ್ಯವಸಾಯ, ಜೀರಿಗನೂರು.

೮೨. ಅಂಕ್ಲಪ್ಪ, ೬೦ ವಯಸ್ಸು, ಕೂಲಿ, ಪಾಪಿನಾಯಕನಹಳ್ಳಿ.

೮೩. ಖಾಸಿಂ, ೬೦ ವಯಸ್ಸು, ಕೂಲಿ, ಕಂಪ್ಲಿ.

೮೪. ಅಯ್ಯನಗೌಡ, ೭೮ ವಯಸ್ಸು, ವ್ಯವಸಾಯ, ಕಾಕುಬಾಳು.

೮೫. ವೇಣುಗೋಪಾಲ, ೪೩ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೮೬. ಕೃಷ್ಣಮೂರ್ತಿ ದೀಕ್ಷಿತ್, ೬೨ ವಯಸ್ಸು, ವೈದ್ಯರು, ಬುಕ್ಕಸಾಗರ.

೮೭. ಚಿದಾನಂದಮೂರ್ತಿ ಎಂ., ೨೦೦೨, **ಜನ-ಜನಪದ-ಜಾನಪದ,** ಪುಟ ೬೯.

೮೮. ವೀರಣ್ಣದಂಡೆ, ೧೯೯೩, **ಕನ್ನಡ ಜಾನಪದ ಪ್ರಜ್ಞೆ,** ಕಲಬುರ್ಗಿ; ಪುಟ ೧೬೧.

೮೯. ಲಿಂಗಯ್ಯ.ಡಿ. ಮತ್ತು ಸಂಧ್ಯಾರೆಡ್ಡಿ.ಕೆ.ಆರ್., ೨೦೦೬, **ಜಾನಪದ: ಸ್ವರೂಪ ಮತ್ತು ಸಾಹಿತ್ಯ** ಪುಟ ೩೪.

೯೦. ಲಕ್ಕಪ್ಪಗೌಡ.ಎಚ್.ಜೆ.(ಪ್ರ.ಸಂ.), ಬಸವರಾಜ ನೆಲ್ಲಿಸರ(ಸಂ)., ೧೯೯೧, **ಜಾನಪದ ಮತ್ತು ಪೂರಕ ಕ್ಷೇತ್ರಗಳು,** ಪುಟ ೩೫.

೯೧. ಚಿದಾನಂದಮೂರ್ತಿ ಎಂ., ೨೦೦೨, **ಜನ-ಜನಪದ-ಜಾನಪದ,** ಪುಟ ೭೧.

೯೨. ವೀರಣ್ಣದಂಡೆ, ೧೯೯೩, **ಕನ್ನಡ ಜಾನಪದ ಪ್ರಜ್ಞೆ**, ಪುಟ ೧೬೨.

೯೩. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು**, ಪುಟ ೪೮.

೯೪. ಸಿದ್ಧಲಿಂಗೇಶ್ವರಸ್ವಾಮಿ, ೧೯೮೩, **ಶ್ರೀ ಪಂಪಾ ಮಹಾತ್ಮೆ**, ಪುಟ ೩೨.

೯೫. ಸಾಲಿಗ್ರಾಮವೆಂಬ ದುಂಡಾಗಿರುವ ಕಪ್ಪು ಬಣ್ಣದ ಶಿಲೆಗಳನ್ನು ಪೂಜಿಸುವುದು ಅತ್ಯಂತ ಪವಿತ್ರವೆಂದು ಭಾವಿಸಲಾಗಿದೆ. ಇದರಲ್ಲಿ ಅನೇಕ ಬಗೆಯ ಸಾಲಿಗ್ರಾಮಗಳಿವೆ. ಅವುಗಳಲ್ಲಿ ಮುಖ್ಯವಾಗಿ ಶಿವ ಸಾಲಿಗ್ರಾಮ, ನರಸಿಂಹ ಸಾಲಿಗ್ರಾಮ, ವಿಷ್ಣು ಸಾಲಿಗ್ರಾಮ ಮುಂತಾದವುಗಳು. ಸಾಲಿಗ್ರಾಮ ಲಿಂಗಪೂಜೆಯು ಕೋಟಿಲಿಂಗ ಪೂಜೆಗೆ ಸಮಾನವಾಗಿದೆಯೆಂದೂ ಸಾಲಿಗ್ರಾಮ ತೀರ್ಥದ ಸ್ನಾನ, ಪಾನ, ಪ್ರೋಕ್ಷಣೆಯೂ ಸಹ ಕೋಟಿ ತೀರ್ಥಗಳಷ್ಟು ಪವಿತ್ರವೆಂದು ವರಾಹ, ಪದ್ಮ, ಮತ್ಸ್ಯ ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆ.

೯೬. ಶಿವರುದ್ರಪ್ಪ ಜಿ.ಎಸ್.(ಪ್ರಸಂ.), ವಿದ್ಯಾಶಂಕರ್.ಎಸ್., ನಾರಾಯಣ.ಕೆ.ವಿ., ಸೂರ್ಯನಾಥ ಕಾಮತ್(ಸಂ), ೧೯೮೨, **ಸಾಧನೆ (ಸಂಪುಟ-೧೧, ಸಂಚಿಕೆ-೩)**, ಪುಟ ೯೫.

೯೭. ರಘುಪತಿ ಭಟ್ಟ ಕೆಮ್ಮೂರು, ೧೯೭೯, **ತುಳುನಾಡಿನ ಸ್ಥಳನಾಮಗಳು**, ಪುಟ ೧.

೯೮. ಅದೇ., ಪುಟ ೨.

೯೯. ಜವರೇಗೌಡ.ದೇ., ೧೯೯೦, **ಸ್ಥಳನಾಮ ವ್ಯಾಸಂಗ**, ಪುಟ ೩೦, ೩೧.

೧೦೦. ರಘುಪತಿ ಭಟ್ಟ ಕೆಮ್ಮೂರು, ೧೯೭೯, **ತುಳುನಾಡಿನ ಸ್ಥಳನಾಮಗಳು**, ಪುಟ ೧೧.

೧೦೧. ವಿಶ್ವನಾಥ, ೧೯೯೬, **ಸ್ಥಳನಾಮಗಳು**, ಪುಟ ೧೮.

೧೦೨. ನೇಗಿನಹಾಳ ಎಂ.ಬಿ.(ಸಂ)., ೧೯೯೯, **ಜಾನಪದ ಸಾಹಿತ್ಯ ದರ್ಶನ(ಭಾಗ-೨೩)**, ಪುಟ ೧೬.

೧೦೩. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೧, ೩, ೪**, ಪುಟ ೧೩೮-೧೪೦.

೧೦೪. ಅದೇ., **ಶಾಸನ ಸಂಖ್ಯೆ-೨೫**, ಪುಟ ೧೫೯.

೧೦೫. ಅದೇ., **ಶಾಸನ ಸಂಖ್ಯೆ-೧೪**, ಪುಟ ೧೫೦.

೧೦೬. ಅದೇ., **ಶಾಸನ ಸಂಖ್ಯೆ-೨೯**, ಪುಟ ೧೬೩.

೧೦೭. ಅದೇ., **ಶಾಸನ ಸಂಖ್ಯೆ-೧೭**, ಪುಟ ೧೫೩.

೧೦೮. ಅದೇ., **ಶಾಸನ ಸಂಖ್ಯೆ-೩೧**, ಪುಟ ೧೬೭

೧೦೯. ಅದೇ., **ಶಾಸನ ಸಂಖ್ಯೆ-೨೮**, ಪುಟ ೧೬೩.

೧೧೦. ಅದೇ., **ಶಾಸನ ಸಂಖ್ಯೆ-೧೮**, ಪುಟ ೧೫೨.

೧೧೧. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೩೨೨**, ಪುಟ ೨೩೩.

೧೧೨. ಅದೇ., **ಶಾಸನ ಸಂಖ್ಯೆ-೫೫,** ಪುಟ ೪೩.

೧೧೩. ಅದೇ., **ಶಾಸನ ಸಂಖ್ಯೆ-೫೪,** ಪುಟ ೩೭.

೧೧೪. ಅದೇ., **ಶಾಸನ ಸಂಖ್ಯೆ-೫೫,** ಪುಟ ೪೩.

೧೧೫. ಅದೇ., **ಶಾಸನ ಸಂಖ್ಯೆ-೫೪,** ಪುಟ ೩೬.

೧೧೬. ಅದೇ., **ಶಾಸನ ಸಂಖ್ಯೆ-೨೫೧,** ಪುಟ ೧೯೩.

೧೧೭. ಅದೇ., **ಶಾಸನ ಸಂಖ್ಯೆ-೨೨೮,** ಪುಟ ೧೭೮.

೧೧೮. ಅದೇ., **ಶಾಸನ ಸಂಖ್ಯೆ-೩೪,** ಪುಟ ೧೯.

೧೧೯. ಅದೇ., **ಶಾಸನ ಸಂಖ್ಯೆ-೭೪,** ಪುಟ ೭೦.

೧೨೦. ಅದೇ., **ಶಾಸನ ಸಂಖ್ಯೆ-೭೪,** ಪುಟ ೭೨.

೧೨೧. ಅದೇ., **ಶಾಸನ ಸಂಖ್ಯೆ-೩೩,** ಪುಟ ೧೭.

೧೨೨. ಅದೇ., **ಶಾಸನ ಸಂಖ್ಯೆ-೨೫೦,** ಪುಟ ೧೯೧.

೧೨೩. ಅದೇ., **ಶಾಸನ ಸಂಖ್ಯೆ-೩೯೬,** ಪುಟ ೨೭೭.

೧೨೪. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೩೮,** ಪುಟ ೧೭೪.

೧೨೫. ಅದೇ., **ಶಾಸನ ಸಂಖ್ಯೆ-೩೧,** ಪುಟ ೧೬೯.

೧೨೬. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೩೨೬,** ಪುಟ ೨೩೮.

೧೨೭. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೩೧,** ಪುಟ ೧೬೯.

೧೨೮. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೧೩೨,** ಪುಟ ೧೦೬.

೧೨೯. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೩೨,** ಪುಟ ೧೭೦.

೧೩೦. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೩೨೬,** ಪುಟ ೨೩೮.

೧೩೧. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೪೪,** ಪುಟ ೧೮೦.

೧೩೨. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೭೩,** ಪುಟ ೬೭.

೧೩೩. ಅದೇ., **ಶಾಸನ ಸಂಖ್ಯೆ-೭೪,** ಪುಟ ೭೨.

೧೩೪. ಅದೇ., **ಶಾಸನ ಸಂಖ್ಯೆ-೭೪,** ಪುಟ ೭೨.

೧೩೫. ಅದೇ., **ಶಾಸನ ಸಂಖ್ಯೆ-೧೮೩,** ಪುಟ ೧೩೬.

೧೩೬. ಅದೇ., **ಶಾಸನ ಸಂಖ್ಯೆ-೨೬೫,** ಪುಟ ೨೦೩.

೧೩೭. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೩೧,** ಪುಟ ೧೬೯.

೧೩೮. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೭೪,** ಪುಟ ೭೦.

೧೩೯. ಅದೇ., **ಶಾಸನ ಸಂಖ್ಯೆ-೨೫೦,** ಪುಟ ೧೯೧.

೧೪೦. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೩೯,** ಪುಟ ೧೭೫.

೧೪೧. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೭೪,** ಪುಟ ೭೨.

೧೪೨. ಅದೇ., **ಶಾಸನ ಸಂಖ್ಯೆ-೩೮೨,** ಪುಟ ೨೬೯.

೧೪೩. ಅದೇ., **ಶಾಸನ ಸಂಖ್ಯೆ-೩೩,** ಪುಟ ೧೭.

೧೪೪. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೪೫,** ಪುಟ ೧೮೦.

೧೪೫. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೨೬೫,** ಪುಟ ೨೦೨.

೧೪೬. ಅದೇ., **ಶಾಸನ ಸಂಖ್ಯೆ-೨೦೮,** ಪುಟ ೧೬೪.

೧೪೭. ಅದೇ., **ಶಾಸನ ಸಂಖ್ಯೆ-೩೩,** ಪುಟ ೧೭.

೧೪೮. ಅದೇ., **ಶಾಸನ ಸಂಖ್ಯೆ-೨೦೪,** ಪುಟ ೧೫೮.

೧೪೯. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೫೧,** ಪುಟ ೧೮೩.

೧೫೦. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೭೪,** ಪುಟ ೭೨.

೧೫೧. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೬೧,** ಪುಟ ೧೯೨.

೧೫೨. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೧೩೨,** ಪುಟ ೧೦೬.

೧೫೩. ನೇಗಿನಹಾಳ ಎಂ.ಬಿ.(ಸಂ), ೧೯೯೯, **ಜಾನಪದ ಸಾಹಿತ್ಯ ದರ್ಶನ(ಭಾಗ–೨೩),** ಪುಟ ೧೬.

೧೫೪. ಜವರೇಗೌಡ.ದೇ., ೨೦೦೧, **ಜಾನಪದ ಅಧ್ಯಯನ,** ಪುಟ ೨೯೩.

೧೫೫. ರಾಜೇಂದ್ರ.ಡಿ.ಕೆ.(ಸಂ)., ೧೯೭೩, **ನಮ್ಮ ಸುತ್ತಿನ ನಂಬಿಕೆಗಳು,** ಪುಟ ೩.

೧೫೬. ಶಿವರುದ್ರಪ್ಪ.ಜಿ.ಎಸ್.(ಸಂ)., ೧೯೮೧, **ಕರ್ನಾಟಕ ಜಾನಪದ,** ಪುಟ ೧೭೦.

೧೫೭. ದಾಸೇಗೌಡ.ಜಿ.ವಿ., ೨೦೦೭, **ನಮ್ಮ ಜನಪದ ನಂಬಿಕೆಗಳು,** ಪುಟ ೨.

೧೫೮. ಮಲ್ಲಿಕಾರ್ಜುನ.ಶಿ.ಲಠ್ಠೆ.(ಸಂ), ೧೯೮೦, **ಉತ್ತರ ಕರ್ನಾಟಕದ ಜನಪದ ನಂಬಿಕೆಗಳು,** ಪುಟ ೧೦.

೧೫೯. ಲಿಂಗಯ್ಯ.ಡಿ. ಮತ್ತು ಸಂಧ್ಯಾರೆಡ್ಡಿ.ಕೆ.ಆರ್., ೨೦೦೬, **ಜಾನಪದ: ಸ್ವರೂಪ ಮತ್ತು ಸಾಹಿತ್ಯ** ಪುಟ ೨೭.

೧೬೦. ಮಲ್ಲಿಕಾರ್ಜುನ.ಶಿ.ಲಠ್ಠೆ.(ಸಂ), ೧೯೮೦, **ಉತ್ತರ ಕರ್ನಾಟಕದ ಜನಪದ ನಂಬಿಕೆಗಳು,** ಪುಟ ೧೧.

೧೬೧. ನೇಗಿನಹಾಳ ಎಂ.ಬಿ.(ಸಂ)., ೧೯೯೯, **ಜಾನಪದ ಸಾಹಿತ್ಯ ದರ್ಶನ(ಭಾಗ-೨೩),** ಪುಟ ೧೯.

೧೬೨. ದಾಸೇಗೌಡ.ಜಿ.ವಿ., ೨೦೦೭, **ನಮ್ಮ ಜನಪದ ನಂಬಿಕೆಗಳು,** ಪುಟ ವಿಷಯಸೂಚಿ.

೧೬೩. ಜವರೇಗೌಡ.ದೇ., ೨೦೦೧, **ಜಾನಪದ ಅಧ್ಯಯನ,** ಪುಟ ೧೦೭.

೧೬೪. ರಾಜೇಂದ್ರ.ಡಿ.ಕೆ.(ಸಂ), ೧೯೭೩, **ನಮ್ಮ ಸುತ್ತಿನ ನಂಬಿಕೆಗಳು,** ಪುಟ ೫ ಮತ್ತು ೧೦.

೧೬೫. ಮಲ್ಲಿಕಾರ್ಜುನ.ಶಿ.ಲಠ್ಠೆ.(ಸಂ), ೧೯೮೦, **ಉತ್ತರ ಕರ್ನಾಟಕದ ಜನಪದ ನಂಬಿಕೆಗಳು,** ಪುಟ ೧೨.

೧೬೬. ಮಂಜುನಾಥ ಬೇವಿನಕಟ್ಟಿ, ೨೦೦೭, **ಕನ್ನಡ ಜನಪದ ನಂಬಿಕೆಗಳು,** ಪುಟ ೫೨-೫೩.

೧೬೭. ವಾಸುದೇವನ್.ಸಿ.ಎಸ್., ೨೦೦೧, **ಹಂಪಿ ಪರಿಸರದ ಕೆರೆಗಳು,** ಪುಟ ೪.

೧೬೮. ದೀಕ್ಷಿತ್.ಜಿ.ಎಸ್., ಕುಪ್ಪುಸ್ವಾಮಿ.ಜಿ.ಆರ್., ಮೋಹನ್.ಎಸ್.ಕೆ.(ಮೂಲ), ನೀಲತ್ತಹಳ್ಳಿ ಕಸ್ತೂರಿ(ಅನು), ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ,** ಪುಟ ೧.

೧೬೯. ದೇವರಾಜ್.ಡಿ.ವಿ., ಚನ್ನಬಸಪ್ಪ ಎಸ್. ಪಾಟೀಲ(ಸಂ), ೧೯೯೬, **ವಿಜಯನಗರ ಅಧ್ಯಯನ(ಸಂ:೧),** ಪುಟ ೬೨.

೧೭೦. ಕೊಟ್ರಯ್ಯ.ಸಿ.ಟಿ.ಯಂ.(ಮೂಲ), ಧ್ರುವನಾರಾಯಣ.ಎಂ.(ಅನು), ೨೦೦೧, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪುಟ ೭೦.

೧೭೧. ಅದೇ., ಪುಟ ೭೧.

೧೭೨. ದೀಕ್ಷಿತ್.ಜಿ.ಎಸ್., ಕುಪ್ಪುಸ್ವಾಮಿ.ಜಿ.ಆರ್., ಮೋಹನ್.ಎಸ್.ಕೆ.(ಮೂಲ), ಸೀಲತ್ತಹಳ್ಳಿ ಕಸ್ತೂರಿ(ಅನು), ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ,** ಪುಟ ೯.

೧೭೩. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೬೯,** ಪುಟ ೬೨.

೧೭೪. ಅದೇ., **ಶಾಸನ ಸಂಖ್ಯೆ-೧೩೨,** ಪುಟ ೧೦೬.

೧೭೫. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೬೧.

೧೭೬. ಅದೇ., ಪುಟ ೧೬೬.

೧೭೭. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೪,** ಪುಟ ೧೪೦.

೧೭೮. ವಿವೇಕ ರೈ ಬಿ.ಎ.(ಸಂ), ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪುಟ ೮೪.

೧೭೯. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೨೮,** ಪುಟ ೧೬೨.

೧೮೦. ಅದೇ., **ಶಾಸನ ಸಂಖ್ಯೆ-೫೩,** ಪುಟ ೧೮೬.

೧೮೧. ಅದೇ., **ಶಾಸನ ಸಂಖ್ಯೆ-೬೧,** ಪುಟ ೧೯೨.

೧೮೨. ಅದೇ., **ಶಾಸನ ಸಂಖ್ಯೆ-೫೩,** ಪುಟ ೧೮೫.

೧೮೩. ಅದೇ., **ಶಾಸನ ಸಂಖ್ಯೆ-೫೭,** ಪುಟ ೧೯೦.

೧೮೪. ಅದೇ., **ಶಾಸನ ಸಂಖ್ಯೆ-೫೧,** ಪುಟ ೧೮೩.

೧೮೫. ಅದೇ., **ಶಾಸನ ಸಂಖ್ಯೆ-೫೬,** ಪುಟ ೧೮೮.

೧೮೬. ಕೊಟ್ರಯ್ಯ.ಸಿ.ಟಿ.ಯಂ.(ಮೂಲ), ಧ್ರುವನಾರಾಯಣ.ಎಂ.(ಅನು), ೨೦೦೧, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪುಟ ೧೦೨.

೧೮೭. ಅದೇ., ಪುಟ ೧೦೩.

೧೮೮. ಅದೇ., ಪುಟ ೧೦೪.

೧೮೯. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೧೦೬,** ಪುಟ ೯೩.

೧೯೦. ಅದೇ., **ಶಾಸನ ಸಂಖ್ಯೆ-೨೦೮,** ಪುಟ ೧೬೪.

೧೯೧. ಅದೇ., **ಶಾಸನ ಸಂಖ್ಯೆ-೩೨೨,** ಪುಟ ೨೩೪.

೧೯೨. ಅದೇ., **ಶಾಸನ ಸಂಖ್ಯೆ-೩೯೮,** ಪುಟ ೨೮೫.

೧೯೩. ಅದೇ., **ಶಾಸನ ಸಂಖ್ಯೆ-೧೯೧,** ಪುಟ ೧೪೬.

೧೯೪. ಅದೇ., **ಶಾಸನ ಸಂಖ್ಯೆ-೬೨,** ಪುಟ ೫೨.

೧೯೫. ಅದೇ., **ಶಾಸನ ಸಂಖ್ಯೆ-೯೧,** ಪುಟ ೧೪೬.

೧೯೬. ಅದೇ., **ಶಾಸನ ಸಂಖ್ಯೆ-೨೪೧,** ಪುಟ ೧೮೭.

೧೯೭. ಅದೇ., **ಶಾಸನ ಸಂಖ್ಯೆ-೩೬೬–೬೭,** ಪುಟ ೨೬೨–೬೩.

೧೯೮. ಅದೇ., **ಶಾಸನ ಸಂಖ್ಯೆ-೩೬೯,** ಪುಟ ೨೬೪.

೧೯೯. ಅದೇ., **ಶಾಸನ ಸಂಖ್ಯೆ-೩೧೧,** ಪುಟ ೨೨೪.

೨೦೦. ಅದೇ., **ಶಾಸನ ಸಂಖ್ಯೆ-೪೩,** ಪುಟ ೨೯೭.

೨೦೧. ಕೊಟ್ರಯ್ಯ ಸಿ.ಟಿ.ಯಂ.(ಲೇ), ೨೦೦೬, 'ಬಾವಿ ಮತ್ತು ಊಟೆ ಬಾವಿ ನೀರಾವರಿ', **ಹಂಪಿ ಪರಂಪರೆ**(ದೇವರಕೊಂಡಾರೆಡ್ಡಿ(ಸಂ)), ಪುಟ ೪೯೦.



ಅಧ್ಯಾಯ : ನಾಲ್ಕು

# ವ್ಯಕ್ತಿಪ್ರಧಾನ ಐತಿಹ್ಯಗಳು

೪.೧. ಪೌರಾಣಿಕ ವ್ಯಕ್ತಿಪ್ರಧಾನ ಐತಿಹ್ಯಗಳು

೪.೨. ಐತಿಹಾಸಿಕ(ಚಾರಿತ್ರಿಕ) ವ್ಯಕ್ತಿಪ್ರಧಾನ ಐತಿಹ್ಯಗಳು

## ಅಧ್ಯಾಯ : ನಾಲ್ಕು

# ವ್ಯಕ್ತಿಪ್ರಧಾನ ಐತಿಹ್ಯಗಳು

ಎಲ್ಲ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಯಾವ ವ್ಯಕ್ತಿ ಅಸಾಮಾನ್ಯ ಸಾಧನೆಗಳನ್ನೆಸಗಿರುತ್ತಾನೋ, ತನ್ನ ತಾಳ್ಮೆ-ಸನ್ನಡತೆಗಳಿಂದಾಗಿ ಯಾರು ಪ್ರಖ್ಯಾತರಾಗಿರುತ್ತಾರೋ ಅಂಥವರ ಮೇಲೆ ಒಂದಿಲ್ಲಾದರೊಂದು ಐತಿಹ್ಯ ಹುಟ್ಟಿಕೊಳ್ಳುತ್ತದೆ. ಸಮಾಜಸೇವೆ, ಪರೋಪಕಾರ, ಸಾಹಸಕಾರ್ಯ, ಶೌರ್ಯ ಪ್ರದರ್ಶನ ಮೊದಲಾದ ಕಾರ್ಯಗಳನ್ನೆಸಗಿ ಪ್ರಖ್ಯಾತರಾದವರ ಬಗೆಗೂ - ಕಳ್ಳತನ, ಕೊಲೆ, ಸುಲಿಗೆ, ದರೋಡೆ, ವಿಧ್ವಂಸಕ ಕೃತ್ಯಗಳು - ಇತ್ಯಾದಿಗಳನ್ನೆಸಗಿ ಕುಖ್ಯಾತರೆನಿಸಿದವರ ಬಗೆಗೂ ಐತಿಹ್ಯಗಳು ಹುಟ್ಟಿಕೊಳ್ಳುವುದು ಸ್ವಭಾವಿಕ. ಈ ಐತಿಹ್ಯಗಳಲ್ಲಿ ಅಸಾಮಾನ್ಯನಾದ ಅಥವಾ ವಿಶಿಷ್ಟನಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳು ಈ ವ್ಯಕ್ತಿಯ ಸಾಧನೆಗೆ ಹೇಗೆ ಪೋಷಕವಾಗಿಯೇ ಬರುತ್ತವೆ ಎಂಬುದನ್ನು ಪರಿಶೀಲಿಸಲಾಗಿದೆ. ವ್ಯಕ್ತಿಯೊಬ್ಬ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಆ ಸ್ಥಳದ ಮಹತ್ವವನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಲೂಬಹುದು.

ವ್ಯಕ್ತಿಪ್ರಧಾನ ಐತಿಹ್ಯಗಳನ್ನು ಎರಡು ರೀತಿಯಾಗಿ ವಿಭಜಿಸಬಹುದು. 'ಪುರಾಣ'ದ ಹಾಗೂ 'ಚರಿತ್ರೆ'ಯ ನೆಲೆಗಳಲ್ಲಿ ರೂಪುಗೊಂಡ ಎರಡು ಬಗೆಯ ಐತಿಹ್ಯಗಳು ಎಲ್ಲೆಡೆ ಜನಜನಿತವಾಗಿವೆ. ಅವುಗಳನ್ನು ವಿಸ್ತೃತವಾಗಿ ವಿಶ್ಲೇಷಿಸಬೇಕಾದ ಅಗತ್ಯತೆಯಿದೆ.

### ೪.೧. ಪೌರಾಣಿಕ ವ್ಯಕ್ತಿಪ್ರಧಾನ ಐತಿಹ್ಯಗಳು

ವೈಯಕ್ತಿಕ ಜೀವನದಲ್ಲಿ ಮೂಡಿಬಂದ ಭಯವನ್ನು ಹೋಗಲಾಡಿಸಿಕೊಳ್ಳಲು ಜನರು ಐತಿಹಾಸಿಕ ವ್ಯಕ್ತಿಗಳನ್ನು ದೇವರಂತೆ ಪೂಜಿಸಿ ಅವರಿಗೆ ಗುಡಿ-ಗುಂಡಾರಗಳನ್ನು ಕಟ್ಟಿಸಿ, ಅವರ ಶಕ್ತಿ ಅದೇ ಪ್ರದೇಶದಲ್ಲಿ ನೆಲೆಯೂರುವಂತೆ ಮಾಡಲು ಅವರನ್ನು ಪೌರಾಣಿಕ ವ್ಯಕ್ತಿಗಳನ್ನಾಗಿಸಿದರು. ಇಲ್ಲಿ ಪೌರಾಣಿಕ ವ್ಯಕ್ತಿಗಳು ಐತಿಹಾಸಿಕ ವ್ಯಕ್ತಿಗಳಾಗಿ ರೂಪುತಳೆದು ವರ್ತಮಾನದ ವಿವರಣೆಯನ್ನು ನಿಯಂತ್ರಿಸುತ್ತಾರೆ ಎಂದು ತಿಳಿದುಬರುತ್ತದೆ. ಆದ್ದರಿಂದ ಹೊಸಪೇಟೆ ಪರಿಸರದಲ್ಲಿ ಈ ಕೆಳಗಿನ ಪೌರಾಣಿಕ ವ್ಯಕ್ತಿಪ್ರಧಾನ ಐತಿಹ್ಯಗಳು ಲಭ್ಯವಾಗಿವೆ.

೧. ಉಗುಳದಮ್ಮಲ ಮಾರಿ

೨. ಮೂಲ ವಿರೂಪಾಕ್ಷ ಕಥೆ

೩. ಪಟ್ಟಣದ ಎಲ್ಲಮ್ಮ

೪. ಹನುಮನ ಸೆಳೆವು

೫. ಚಿತ್ರಾಂಗಿ, ರತ್ನಾಂಗಿ ಮಹಲ್/ಕಮಲಮಹಲ್

೬. ಹೊಸೂರಮ್ಮ ದೇವಿ(ರೇಣುಕೆ)

೭. ಉಗ್ರನರಸಿಂಹ (ಲಕ್ಷ್ಮೀನರಸಿಂಹ)

೮. ಉದ್ಧಾನವೀರಭದ್ರ

೯. ಯಂತ್ರೋದ್ಧಾರಕ

೧೦. ಹನುಮಪಾದ

೧೧. ವೆಂಕಟೇಶ್ವರ ದೇವಸ್ಥಾನ

೧೨. ಗುಡ್ಡದ ತಿಮ್ಮಪ್ಪ

೧೩. ಕೋಣದಮ್ಮ

೧೪. ಒಪ್ಪತ್ತೇಶ್ವರರ ಗದ್ದುಗೆ

೧೫. ಕುರುಗೋಡು ನೀಲಮ್ಮ

## ೧. ಉಗುಳುದಮ್ಮಲ ಮಾರಿ

ಹಂಪಿಯ ವಿರೂಪಾಕ್ಷ ದೇವಾಲಯದಿಂದ ವಿಜಯವಿಠ್ಠಲ ದೇವಾಲಯದ ಹಾದಿಯಲ್ಲಿ ಬಂದರೆ ಕಲ್ಲುಬಂಡೆಯ ಮೇಲೆ ತಲೆಯ ಮೇಲೆ ಕೈಹೊತ್ತಿರುವ ಜೋಡಿ ರೇಖಾಚಿತ್ರಗಳು ಕಂಡುಬರುತ್ತವೆ. ಈ ಸ್ಥಳಕ್ಕೆ ಭೇಟಿ ನೀಡುವ ಹಾಗೂ ಇವುಗಳ ಬಗ್ಗೆ ತಿಳಿದಿರುವ ಹಲವಾರು ಜನರು ಎಲೆ, ಅಡಿಕೆ ಜಗಿದು ಇಲ್ಲವೇ ಹಾಗೆಯೇ ಈ ರೇಖಾಚಿತ್ರಗಳ ಮೇಲೆ ಉಗುಳಿ ಹೋಗುತ್ತಾರೆ. ಇದಕ್ಕೆ ಕಾರಣ ಕೇಳಿದರೆ ಅವರು ಈ ಕೆಳಗಿನಂತೆ ವಿವರಣೆಯನ್ನು ನೀಡುತ್ತಾರೆ: ಹಿಂದೆ ಈ ರಾಜ್ಯದಲ್ಲಿ ಇಬ್ಬರು ಹೆಂಗಸರು ಇದ್ದರು. ಅವರು ಮಾಡಬಾರದ ಎಲ್ಲಾ ಪಾಪ ಕಾರ್ಯಗಳನ್ನು ಮಾಡಿ, ಕೊನೆಗೆ ಹಂಪಿಯ ಪುಣ್ಯಕ್ಷೇತ್ರಕ್ಕೆ ಬಂದು ಪ್ರಾಣ ಬಿಟ್ಟರು. ಸಾಯುವಾಗ ತಮ್ಮ ಪಾಪ ಕಾರ್ಯಗಳ ಪರಿಹಾರಕ್ಕಾಗಿ "ನಾಲ್ವರು ನಡೆದಾಡುವ ದಾರಿಯಲ್ಲಿ ನಮ್ಮ ಚಿತ್ರ ಬಿಡಿಸಿ" ಎಂದು ಹೇಳಿ ಪ್ರಾಣ ಬಿಟ್ಟರು.[೧] ಹೀಗಾಗಿ ಅವರ ಗುರುತಿನ ಚಿತ್ರಣವನ್ನು ಅಲ್ಲಿ ಬಿಡಿಸಲಾಗಿದ್ದು, ಅವರ ಪಾಪ ಪರಿಹಾರಕ್ಕಾಗಿ ಜನರು ಈಗಲೂ ಉಗುಳಿ ಹೋಗುತ್ತಾರೆ. ಹೀಗಾಗಿ ಅವರಿಗೆ 'ಉಗುಳುದಮ್ಮಲ ಮಾರಿ' ಎಂಬ ಹೆಸರು ಬಂತು.

ಇನ್ನೊಂದು ಐತಿಹ್ಯದ ಪ್ರಕಾರ, ಹಂಪಿಯ ಜಾತ್ರೆಗೆಂದು ಕುಟುಂಬ ಸಮೇತ ಬಂದಿದ್ದವರಲ್ಲಿ ಸೊಸೆಯೊಬ್ಬಳು ತಮ್ಮ ಪಕ್ಕದ ಜಿಡಾರದ ಯುವಕನೊಂದಿಗೆ ಅಕ್ರಮ ಸಂಬಂಧವನ್ನು ಹೊಂದಿದ್ದಳು. ಇದನ್ನು ತಿಳಿದ ಅವಳ ಮನೆಯವರು ಆಕೆಯನ್ನು ಹೊರಹಾಕಿದರು. ಆಗ ಸೊಸೆಯು ತಾನು ಅಕ್ರಮ ಸಂಬಂಧ ಹೊಂದಿಲ್ಲವೆಂದು ವಿರೂಪಾಕ್ಷನ ಮೇಲೆ ಆಣೆ ಮಾಡಿ ಹೇಳಿದಳು. ಇದರಿಂದ ವಿರೂಪಾಕ್ಷನು ಅವಳಿಗೆ ಶಾಪವನ್ನು ನೀಡಿದನು. ಪರಿಣಾಮವಾಗಿ ಅವಳು ಕಲ್ಲಾದಳು.[೨] ಅಂದಿನಿಂದ ಜನರು ಈ ಕಲ್ಲಿಗೆ ಗೌರವ ನೀಡದೇ ಅವಳ ಅನೈತಿಕ ಸಂಬಂಧವನ್ನು ಕಂಡು ಉಗುಳಲು ಪ್ರಾರಂಭಿಸಿದರು. ಕೊನೆಗೆ ಇದರಿಂದಾಗಿ ಈಕೆ 'ಉಗುಳುದಮ್ಮ ಮಾರಿ'ಯಾದಳು.

## ೨. ಮೂಲ ವಿರೂಪಾಕ್ಷನ ಕಥೆ

ಈಗ ಕಾಣುವ ವಿರೂಪಾಕ್ಷನ ಗುಡಿಯಲ್ಲಿ ಮೊದಲು ವಿರೂಪಾಕ್ಷ ಇರಲಿಲ್ಲ. ಈಗಿನ ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿರುವ ಏಕಶಿಲೆಯ ಬೆಟ್ಟವಾದ ಹೇಮಕೂಟದಲ್ಲಿ ಮೊದಲು ವಿರೂಪಾಕ್ಷನ ಗುಡಿ ಇತ್ತು. ಇಲ್ಲಿಂದ ವಿರೂಪಾಕ್ಷ ಸ್ಥಳ ಬದಲಾವಣೆ ಮಾಡಿ ಈಗಿರುವಲ್ಲಿಗೆ ಬಂದ. ಇದಕ್ಕೆ ಕಾರಣಗಳಿವೆ. ಮೂಲತಃ ವಿರೂಪಾಕ್ಷ ತುಂಬ ಸೌಮ್ಯ ದೇವರು. ಆತನಿಗೆ ಕೋಪವೆಂಬುದಿಲ್ಲ. ಪಂಪಾಂಬಿಕೆಯನ್ನು ಮದುವೆ ಮಾಡಿಸುವ ಕಾರಣಕ್ಕಾಗಿ ಶಿವನ ದೀರ್ಘ ತಪಸ್ಸನ್ನು ಕೆಡಿಸಿ, ಕಣ್ಣು ತೆರೆಸಲು ದೇವತೆಗಳು ಮನ್ಮಥನನ್ನು ಇಲ್ಲಿಗೆ ಕಳಿಸುತ್ತಾರೆ. ಮನ್ಮಥನು ತನ್ನ ಬಾಣಗಳಿಂದ ಶಿವನ ತಪಸ್ಸನ್ನು ಕೆಡುವಂತೆ ಮಾಡಿದಾಗ, ಶಿವ ತನ್ನ ಮೂರನೇ ಕಣ್ಣಿನಿಂದ ಮನ್ಮಥನನ್ನು ಸುಟ್ಟು ಹಾಕುತ್ತಾನೆ. ಆ ವೇಳೆಗೆ ಶಿವನ ಎದುರಿನ ಬಂಡೆಯೂ ಕರಗಿ ನೀರಾಗಿ ಹೊಂಡವಾಗುತ್ತದೆ. ಇದಕ್ಕೆ 'ಮನ್ಮಥಕುಂಡ' ಅಥವಾ 'ಮನ್ಮಥಹೊಂಡ' ಎಂದು ಕರೆಯುತ್ತಾರೆ. ಹೀಗೆ ಶಿವನು ಮೊದಲಿಗೆ ನೆಲೆಸಿದ್ದ ಈ ಸ್ಥಳದಲ್ಲಿ ಶಿವಲಿಂಗದ ಸಣ್ಣ ಗುಡಿಯೊಂದಿದ್ದು ಇದಕ್ಕೆ 'ಮೂಲ ವಿರೂಪಾಕ್ಷನ ಗುಡಿ' ಎಂದು ಕರೆಯುತ್ತಾರೆ.

ಕುರುಬ ಸಮುದಾಯದವರು ಈ ಗುಡಿಯನ್ನು 'ಬೀರದೇವರಗುಡಿ' ಎಂದು ಕರೆಯುತ್ತಾರೆ. ಇದಕ್ಕೆ ಕಾರಣ ಕೇಳಿದರೆ, ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ 'ಹಕ್ಕ-ಬುಕ್ಕರು' ಕುರುಬ ಜಾತಿಯವರಾಗಿದ್ದು, ಅವರು ಅರಸರಾದ ಮೇಲೆ ತಮ್ಮ ವಂಶದ ಮೂಲ ದೇವರಾದ ಬೀರಪ್ಪನಿಗೆ ಈ ಗುಡಿಯನ್ನು ಕಟ್ಟಿಸಿದರು[೩] ಎಂದು ಮಾಹಿತಿ ನೀಡುತ್ತಾರೆ.

## ೩. ಪಟ್ಟಣದ ಎಲ್ಲಮ್ಮ

ಹಂಪಿಯ ಹಜಾರರಾಮಚಂದ್ರ ದೇವಸ್ಥಾನದ ಮುಂಭಾಗದಲ್ಲಿರುವ ಹಳೆಯ ಪಟ್ಟಣದ ದೇವತೆಯೇ ಪಟ್ಟಣದ ಎಲ್ಲಮ್ಮ. ಈಕೆಯ ಬಗೆಗೆ ಬೇರೆ ಬೇರೆ ರೀತಿಯ ಕತೆಗಳಿವೆ.

ಮುಖ್ಯವಾಗಿ ವಿಜಯನಗರದ ಅರಸರು ಬೇರೆ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಯುದ್ಧಕ್ಕೆ ಹೊರಡುವ ಮುನ್ನ ಈಕೆಯ ಅಪ್ಪಣೆ ಪಡೆದು, ವಿಜಯ ತಾಂಬೂಲ ಪಡೆದು ಹೋಗುತ್ತಿದ್ದರಂತೆ. ಈಕೆಯೇ ವಿಜಯನಗರ ಪಟ್ಟಣದ ಮುಖ್ಯ ರಕ್ಷಕ ದೈವವಾಗಿ ಪಟ್ಟಣವನ್ನು ರಕ್ಷಿಸುತ್ತಿದ್ದಳಂತೆ.

ಇನ್ನೂ ಕೆಲವರ ಪ್ರಕಾರ ವಿಜಯನಗರ ಉದಯವಾಗುವ ಕಾಲದಲ್ಲಿ ಈ ರಾಜ್ಯವನ್ನು ಕಟ್ಟಿದ ರಾಜರು ಹಾಗೂ ಸೈನಿಕರಿಗೆ ಈಕೆ ಕೊಟ್ಟಣದಿಂದ ನೆಲ್ಲನ್ನು ಕುಟ್ಟಿ ಗಂಜಿ ಮಾಡಿಕೊಟ್ಟು

ಸಹಾಯ ಮಾಡಿದಳಂತೆ. ಹೀಗಾಗಿ ಈಕೆಗೆ 'ಕೊಟ್ಟೂರ ಎಲ್ಲಮ್ಮ' ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ. ಅಂದಿನ ಅರಸರು ಮೊದಲು ಎಲ್ಲಮ್ಮನ ದರ್ಶನ ಮಾಡಿ ನಂತರ ವಿರೂಪಾಕ್ಷನ ದರ್ಶನ ಮಾಡುತ್ತಿದ್ದರಂತೆ.[೪]

ಎಲ್ಲಮ್ಮನನ್ನು ಪ್ರಸನ್ನಗೊಳಿಸುವ ಸಲುವಾಗಿ ಕೋಣ, ಕುರಿ, ಕೋಳಿ, ಮೇಕೆಗಳನ್ನು ಬಲಿ ನೀಡಲಾಗುತ್ತಿತ್ತೆಂದು ತಿಳಿದುಬರುತ್ತದೆ. ಈಗಲೂ ಕೂಡ ಈ ಬಲಿ ನೀಡುವ ಸಂಪ್ರದಾಯ ನಡೆದುಕೊಂಡು ಬಂದಿದೆ.

**೪. ಹನುಮನ ಸೆಳವು**

ಹಂಪಿ ಪರಿಸರವನ್ನು ಪುರಾತನ ಕಿಷ್ಕಿಂಧೆ ಎಂದು ಭಾವಿಸಲಾಗುತ್ತಿದೆ. ಪುರಾತನ ಕಿಷ್ಕಿಂಧೆಗೆ ಸಂಬಂಧಿಸಿದಂತೆ ಅನೇಕ ಐತಿಹ್ಯಗಳು ಇಲ್ಲಿ ಪ್ರಚಲಿತದಲ್ಲಿವೆ. ಅದರಲ್ಲಿ ಹನುಮನ ಸೆಳವು ಮುಖ್ಯವಾದುದು. ಇದಕ್ಕೆ ಸಂಬಂಧಿಸಿದ ಐತಿಹ್ಯ ಈ ರೀತಿ ಇದೆ.

ಹನುಮಂತನ ತಾಯಿ ಅಂಜನಾದೇವಿ. ಹಂಪಿ ಹೊಳೆಯ ಪಕ್ಕದಲ್ಲಿರುವ 'ಅಂಜನಾದ್ರಿ' ಪರ್ವತದಲ್ಲಿ ವಾಸಿಸುತ್ತಿದ್ದಳು. ಇವಳು ವಾಯುವಿನ ಸಹವಾಸದಿಂದಾಗಿ ಹನುಮಂತನಿಗೆ ಜನ್ಮ ನೀಡುತ್ತಾಳೆ. ಜನ್ಮ ನೀಡಿದ ವೇಳೆಯಲ್ಲಿ ತನ್ನ ದೇಹವನ್ನು ತೊಳೆಯಲು ಆಕೆಗೆ ನೀರು ಬೇಕಾಗಿತ್ತು. ಆದರೆ ಮೊದಲೇ ತಂದು ಇಟ್ಟುಕೊಂಡಿದ್ದ ನೀರು ಮುಗಿದು ಹೋಗಿತ್ತು. ಆಕೆಯ ಮನೆ ಇರುವುದು ಬೆಟ್ಟದ ಮೇಲೆ. ಇಂತಹ ವೇಳೆಯಲ್ಲಿ ಅಂಜನಾದೇವಿ ಚಿಂತಾಕ್ರಾಂತಳಾಗಿ ಕುಳಿತಿರುವಾಗ ಬಾಲ ಹನುಮಂತನು ಬೆಟ್ಟದಿಂದ ಹಾರಿ ಬಂದು ಹರಿಯುವ ಹೊಳೆಗೆ ತನ್ನ ಕೈಯನ್ನು ಅಡ್ಡಮಾಡಿ, ಅಂಜನಾದ್ರಿ ಬೆಟ್ಟದ ಕಡೆಗೆ ನೀರು ಹರಿದು ಹೋಗುವಂತೆ ಮಾಡುತ್ತಾನೆ. ಅಂದಿನಿಂದ ಹಂಪಿ ಹೊಳೆಯು ಋಷ್ಯಮೂಕ ಪರ್ವತವನ್ನು ಬಳಸಿ ಎರಡು ಭಾಗವಾಗಿ ಹರಿಯಲು ಆರಂಭಿಸಿತು.[೫] ಮೊದಲು ವಿರೂಪಾಕ್ಷ ದೇವಸ್ಥಾನದ ಎದುರು ಭಾಗದಲ್ಲಿ ಮಾತ್ರ ಹರಿಯುತ್ತಿದ್ದ ಹಂಪಿ ಹೊಳೆಯು ಈ ಘಟನೆಯ ಅನಂತರ ಋಷ್ಯಮೂಕ ಪರ್ವತದ ಎಡಬಲಗಳಲ್ಲಿ ಹರಿಯತೊಡಗಿತು. ಹೀಗೆ ಹಂಪಿ ಹೊಳೆಯು ಎರಡು ಭಾಗವಾಗಿ ಹರಿಯುವ ಸ್ಥಳಕ್ಕೆ 'ಹನುಮನ ಸೆಳವು' ಎಂಬ ಹೆಸರು ಬಂತು.

**೫. ಚಿತ್ರಾಂಗಿ, ರತ್ನಾಂಗಿ ಮಹಲ್(ಕಮಲಮಹಲ್)**

ಹಂಪಿಯ ಈಗಿನ ಕಮಲ ಮಹಲನ್ನು ಜನರು 'ಚಿತ್ರಾಂಗಿ', 'ರತ್ನಾಂಗಿ ಮಹಲ್' ಎಂದು ಕರೆಯುತ್ತಾರೆ. ಚಿತ್ರಾಂಗಿ, ರತ್ನಾಂಗಿ ಎಂಬಿಬ್ಬರು ದೊಂಬರ ಹುಡುಗಿಯರು ಒಮ್ಮೆ ವಿಜಯನಗರ ಸಾಮ್ರಾಜ್ಯಕ್ಕೆ ದೊಂಬರಾಟ ನಡೆಸಲು ಬಂದಿದ್ದರು. ಇವರ ರೂಪ, ಲಾವಣ್ಯ ಕೌಶಲ್ಯಕ್ಕೆ ಮನಸೋತ ಕೃಷ್ಣದೇವರಾಯನು ಇವರನ್ನು ಪ್ರೀತಿಸಿ ಮದುವೆ ಆದನಂತೆ. ಇವರುಗಳ ನೆನಪಿಗಾಗಿ ಒಂದು ಮಹಲನ್ನು ಕಟ್ಟಿಸಿದನಂತೆ. ಅದನ್ನು 'ಚಿತ್ರಾಂಗಿ', 'ರತ್ನಾಂಗಿ' ಮಹಲ್ ಎಂದು ಕರೆಯುತ್ತಾರೆ.[೬] ಈ ಮಹಲ್ ಬೇಸಿಗೆಯ ದಿನದಲ್ಲೂ ತಂಪಾಗಿರಲಿ ಎಂಬ ಉದ್ದೇಶದಿಂದ ಹಿಂದಿನ ಅರಸರು ಕೊಳವೆಯ ಮೂಲಕ ಮಹಲ್‌ನ ಸುತ್ತಲೂ ನೀರಿನ ಸಂಪರ್ಕವನ್ನು

ಕಲ್ಪಿಸಿದ್ದರು. ಇದರಿಂದ ಸಂಪೂರ್ಣ ಕಟ್ಟಡವೇ ತಂಪಾಗಿರುತ್ತಿದ್ದರಿಂದ ಅಂದಿನ ರಾಣಿಯರು ಬೇಸಿಗೆಯ ದಿನಗಳಲ್ಲಿ ಈ ಮಹಲ್‌ನಲ್ಲಿ ತಂಗಿ ವಿಶ್ರಮಿಸುತ್ತಿದ್ದರಂತೆ.

ಈ ಮಹಲ್ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದ ಮಾದರಿಯಲ್ಲಿದ್ದು, ಮೇಲಿಂದ ನೋಡಿದಾಗ 'ಕಮಲದ ಹೂ ಅರಳಿದ' ಹಾಗೆ ಕಾಣಿಸುವುದರಿಂದ ಇದನ್ನು 'ಕಮಲ್ ಮಹಲ್' ಎಂತಲೂ ಕರೆಯುತ್ತಾರೆಂದು ನಿರೂಪಕರು ತಿಳಿಸುತ್ತಾರೆ.

**೬. ಹೊಸೂರಮ್ಮದೇವಿ(ರೇಣುಕೆ)**

ಹೊಸಪೇಟೆ ಹೋಬಳಿಯ ಹೊಸೂರು ಗ್ರಾಮದಲ್ಲಿ ಹೊಸೂರಮ್ಮದೇವಿ ದೇವಸ್ಥಾನವಿದೆ. ಈ ದೇವಿಯ ಬಗ್ಗೆ ಐತಿಹ್ಯವೊಂದು ಹೀಗಿದೆ: ಹೊಸೂರಮ್ಮ(ರೇಣುಕೆ) ತನ್ನ ಪತಿವ್ರತಾ ಪ್ರಭಾವದಿಂದ ಹಾವನ್ನು ಸಿಂಬೆಯನ್ನಾಗಿ ಮಾಡಿಕೊಂಡು ಅದರ ಮೇಲೆ ನೀರು ತುಂಬಿದ ಉಸುಕಿನ ಕೊಡವನ್ನು ಇರಿಸಿಕೊಂಡು ನದಿಯಿಂದ ದಿನಾಲು ತಲೆಯ ಮೇಲೆ ಹೊತ್ತುಕೊಂಡು ಬಂದು, ತನ್ನ ಪತಿ ಜಮದಗ್ನಿ ಪೂಜೆಯಲ್ಲಿ ಸಹಾಯ ಮಾಡುತ್ತಿದ್ದಳು. ಒಮ್ಮೆ ಜಮದಗ್ನಿಯು ದೇವರ ಪೂಜೆಯಲ್ಲಿ ನಿರತನಾಗಿದ್ದಾಗ, ರೇಣುಕೆಯು ಪೂಜೆಗೆಂದು ನೀರು ತರಲು ತುಂಗಭದ್ರಾ ನದಿಗೆ ಹೋದಳು. ಆಕೆಗೆ, ಚಿತ್ರರಥನೆಂಬ ಗಂಧರ್ವನು ತನ್ನ ವನಿತೆಯರೊಂದಿಗೆ ಜಲಕ್ರೀಡೆ ಯಾಡುತ್ತಿದ್ದನು. ಅವರು ಜಲಕ್ರೀಡೆಯಾಡುವುದನ್ನು ರೇಣುಕೆಯು ಮೈಮರೆತು ನೋಡತೊಡಗಿದಳು. ಇದರಿಂದ ಅವಳ ಮನಸ್ಸು ಚಂಚಲವಾಗತೊಡಗಿತು. ಆ ಸಮಯದಲ್ಲಿ ಪೂಜೆಯ ನೆನಪಾಗಿ ತಕ್ಷಣ ಎಚ್ಚೆತ್ತುಕೊಂಡು, ದಿನನಿತ್ಯದಂತೆ ನದಿಯ ದಡದಲ್ಲಿದ್ದ ಉಸುಕನ್ನು ತೆಗೆದುಕೊಂಡು ಕೊಡವನ್ನು ಮಾಡತೊಡಗಿದಳು. ಎಷ್ಟು ಪ್ರಯತ್ನಪಟ್ಟರೂ ರೇಣುಕೆಯಿಂದ ಉಸುಕಿನ ಕೊಡ ತಯಾರಿಸಲು ಆಗಲಿಲ್ಲ. ಬರಿಗೈಯಲ್ಲಿ ವಾಪಸ್ಸು ಆಶ್ರಮಕ್ಕೆ ಹಿಂದಿರುಗಿದಳು.

ಬರಿಗೈಯಿಂದ ಬಂದ ಪತ್ನಿಯನ್ನು ಕಂಡು ಜಮದಗ್ನಿ ತನ್ನ ದಿವ್ಯಜ್ಞಾನದಿಂದ ಎಲ್ಲವನ್ನು ತಿಳಿದುಕೊಂಡು ಅವಳಿಗೆ ಶಾಪ ನೀಡಿ, ತನ್ನ ಮಕ್ಕಳಿಗೆ ರೇಣುಕೆಯ ತಲೆ ಕಡಿಯುವಂತೆ ಹೇಳಿದನು. ನಾಲ್ಕು ಮಕ್ಕಳು ಹೆತ್ತ ತಾಯಿಯನ್ನು ಕೊಲ್ಲುವುದು ಮಹಾಪಾಪ ಈ ಕೆಲಸ ತಮ್ಮಿಂದ ಸಾಧ್ಯವಿಲ್ಲವೆಂದು ತಾಯಿಯ ತಲೆ ಕಡಿಯಲು ಹಿಂಜರಿದರು. ಆದರೆ ಕೊನೆಯ ಮಗ ಪರಶುರಾಮನು ಪಿತೃವಾಕ್ಯ ಪರಿಪಾಲಕನಾಗಿ ತಂದೆಯ ಆಜ್ಞೆಯನ್ನು ಮೀರದೇ, ಹುಲಿಗಿ ಪ್ರದೇಶದ ನದಿಯ ದಡದಲ್ಲಿ ನಿಂತು ತಾಯಿಯ ತಲೆ ಕಡಿದನು. ತಲೆಯ ಭಾಗ ನದಿಯ ಆಚೆಯಲ್ಲಿ ಬಿತ್ತು. ಉಳಿದ ಪಾದದ ಭಾಗ ಹುಲಿಗಿ ಪ್ರದೇಶದಲ್ಲಿ ಬಿತ್ತು. ಇಲ್ಲಿ ಬಿದ್ದದ್ದು (ಹೊಸಪೇಟೆ) ಹೊಸೂರಮ್ಮ, ನದಿ ಆಚೆಯಲ್ಲಿ ಬಿದ್ದದ್ದು ಹುಲಿಗೆಮ್ಮ ಎಂದು ಜನರು ನಿರೂಪಣೆಯನ್ನು ನೀಡುತ್ತಾರೆ.[೬]

ಹೊಸೂರಮ್ಮನನ್ನು ಕ್ರಿ.ಶ. ೧೫೧೩ರ ಕೃಷ್ಣದೇವರಾಯನ ಶಾಸನವು 'ಎಕ್ಕನಾಥೆ' ಎಂದೂ, ಕ್ರಿ.ಶ. ೧೬ನೆಯ ಶತಮಾನದ ಶಾಸನವು 'ಮಹಾಮಾಯಿ' ಎಂದು ಕರೆದಿವೆ.[೭]

## ೭. ಉಗ್ರನರಸಿಂಹ(ಲಕ್ಷ್ಮೀನರಸಿಂಹ)

ಕ್ರಿ.ಶ. ೧೫೨೮ರಲ್ಲಿ ಶ್ರೀಕೃಷ್ಣದೇವರಾಯನು 'ಆರ್ಯಕೃಷ್ಣಭಟ್ಟ' ಎಂಬ ಶಿಲ್ಪಿಯಿಂದ ಈ ವಿಗ್ರಹವನ್ನು ನಿರ್ಮಿಸಿದನು.[೯] ಈ ವಿಗ್ರಹವು ೨೨ ಅಡಿ ಎತ್ತರದ ಏಕಶಿಲೆಯಿಂದ ಕೂಡಿದ್ದಾಗಿದೆ. ಈ ವಿಗ್ರಹದ ಬಗೆಗಿನ ಐತಿಹ್ಯವೇನೆಂದರೆ, ಯಾವುದೇ ಪ್ರಾಣಿಗಳಿಂದ, ಮಾನವನಿಂದ, ದೇವತೆಗಳಿಂದ, - ಹಗಲಿನಲ್ಲಿ, ರಾತ್ರಿಯಲ್ಲಿ ತನಗೆ ಮರಣ ಬರಬಾರದೆಂದು ವರ ಪಡೆದ, ಋಷಿಮುನಿಗಳ ಪೀಡಕ, ಲೋಕ ಕಂಟಕನಾದ ಹಿರಣ್ಯಕಶಪುನನ್ನು ಸಂಹರಿಸಲು ಶ್ರೀಹರಿ ನರಸಿಂಹನ ಅವತಾರವನ್ನು ತಾಳಿದನೆಂಬ ಪ್ರತೀತಿ ಇದೆ.

ಹಿರಣ್ಯಕಶಪುನನ್ನು ಸಂಹರಿಸಿ ಬಂದು ಅದೇ ಸಿಟ್ಟಿನಲ್ಲಿ, ಉಗ್ರಾವತಾರದಲ್ಲಿ ಲಕ್ಷ್ಮಿಯನ್ನು ತನ್ನ ಎಡತೊಡೆಯ ಮೇಲೆ ಕೂಡಿಸಿಕೊಂಡು ಯೋಗಾಸನವನ್ನು ಮಾಡಿದನೆಂಬ ನಂಬಿಕೆಯಿದೆ. ಆದ್ದರಿಂದ ಈ ವಿಗ್ರಹಕ್ಕೆ 'ಲಕ್ಷ್ಮೀನರಸಿಂಹ', 'ಯೋಗಲಕ್ಷ್ಮೀನರಸಿಂಹ', 'ಉಗ್ರನರಸಿಂಹ' ಎಂಬಿತ್ಯಾದಿ ಹೆಸರುಗಳಿಂದ ಕರೆಯುತ್ತಾರೆಂದು ನಿರೂಪಕರು ತಿಳಿಸುತ್ತಾರೆ.[೧೦]

ಕ್ರಿ.ಶ. ೧೫೬೫ರ ತಾಳಿಕೋಟೆ ಯುದ್ಧಾನಂತರ ವಿಜಯನಗರ ಸಾಮ್ರಾಜ್ಯವು ಶತ್ರುಗಳ ದಾಳಿಗೆ ತುತ್ತಾದಾಗ ಈ ವಿಗ್ರಹವನ್ನು ಧಕ್ಕೆ ಮಾಡಿರುವುದು ಕಂಡು ಬರುತ್ತದೆ.

## ೮. ಉದ್ಧಾನ ವೀರಭದ್ರ

ಹಂಪಿಯಲ್ಲಿ ಸಿಗುವ ಏಕಶಿಲಾ ವಿಗ್ರಹಗಳಲ್ಲಿಯೇ ಅತ್ಯಂತ ಮಹತ್ವದೆನಿಸಿದ ಉದ್ಧಾನ ವೀರಭದ್ರ ದೇವರ ಎತ್ತರ ೧೦ ಅಡಿಗಳು. ಈ ಶಿಲ್ಪವು ದಿನೇ ದಿನೇ ಬೆಳೆಯುತ್ತಿತ್ತಂತೆ. ಹೆಚ್ಚು ಬೆಳೆದಂತೆಲ್ಲಾ ಪೂಜಿಸಲು ಅನಾನುಕೂಲವಾಗಬಹುದೆಂಬ ದೃಷ್ಟಿಯಿಂದ ಈ ಶಿಲ್ಪದ ತಲೆಗೆ ದೊಡ್ಡದಾದ ಮೊಳೆಯನ್ನು ಹೊಡೆದು ಬೆಳವಣಿಗೆಯನ್ನು ನಿಲ್ಲಿಸಲಾಗಿದೆ ಎಂಬ ವಿವರಣೆ ಇದೆ.[೧೧] ವಿಜಯನಗರವು ಶತ್ರುಗಳು ದಾಳಿಗೆ ತುತ್ತಾದಾಗ ಈ ವಿಗ್ರಹವು ಯಾವುದೇ ಧಕ್ಕೆಗೆ ಒಳಗಾಗದೇ ಇರುವುದರಿಂದ ದಿನವೂ ಪೂಜಿಸಲ್ಪಡುತ್ತದೆ. ದೇವಸ್ಥಾನದ ಮುಂಭಾಗದ ಶಾಸನದಲ್ಲಿ ಇದನ್ನು 'ಮುದ್ದುವೀರಣ್ಣ ದೇವಸ್ಥಾನ'[೧೨] ಎಂದು ಕರೆಯಲಾಗಿದೆ.

**ಉದ್ಧಾನ ವೀರಭದ್ರನ ಬಗ್ಗೆ ಸ್ಥಳೀಯ ಜನರ ನಂಬಿಕೆಯ ಪ್ರಕಾರ,**

ದಕ್ಷನ ಮಿತಿಮೀರಿದ ಅಹಂನ್ನು ಸಹಿಸಿದ ಶಿವನು ತನ್ನ ಜಿವರಿನಿಂದ ವೀರಭದ್ರನನ್ನು ಸೃಷ್ಟಿಸಿದನು. ಲೋಕಪಾಲಕ ವೀರಭದ್ರ, ಶಿವನ ಆಜ್ಞೆಯನ್ನು ಪಾಲಿಸಿ ದಕ್ಷಬ್ರಹ್ಮನ ತಲೆ ತೆಗೆದನು. ಇದರಿಂದ ದಕ್ಷಬ್ರಹ್ಮನ ಹೆಂಡತಿಯಾದ 'ಪ್ರಸೂತಿ'ಯು ವೀರಭದ್ರನ ಕಾಲಿಗೆ ಬಿದ್ದು, ಪತಿಗೆ ಜೀವದಾನ ಮಾಡೆಂದು ಕೇಳಿಕೊಂಡಾಗ, ವೀರಭದ್ರನು 'ದೀರ್ಘ ಸುಮಂಗಲೀ ಭವ' ಎಂದು ಆಶೀರ್ವದಿಸಿದನು. ಪತಿಯನ್ನು ಕೊಂದು ಪತ್ನಿಗೆ ಈ ರೀತಿ ಆಶೀರ್ವದಿಸಿ ವೀರಭದ್ರನು ಇಕ್ಕಟ್ಟಿಗೆ ಸಿಲುಕಿದನು. ಪ್ರಸೂತಿ ದೇವಿಯ ಭಕ್ತಿಯ ಮನವಿಯನ್ನು ಮನ್ನಿಸಿ, ಯಜ್ಞಕುಂಡದ ಹತ್ತಿರ ಬಿದ್ದಿದ್ದ ಕುರಿ ತಲೆಯನ್ನು ದಕ್ಷಬ್ರಹ್ಮನಿಗಿಟ್ಟು ಜೀವದಾನ ಮಾಡಿದನೆಂಬ ಐತಿಹ್ಯವಿದೆ.[೧೩]

## ೯. ಯಂತ್ರೋದ್ಧಾರಕ

ವಿಜಯನಗರದ ದೊರೆ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಆಸ್ಥಾನ ಗುರುಗಳಾಗಿದ್ದ ವ್ಯಾಸರಾಯರು ಒಂದು ದಿನ ಕೋದಂಡರಾಮ ದೇವಸ್ಥಾನದ ಹತ್ತಿರ ಧ್ಯಾನದಲ್ಲಿ ನಿರತರಾಗಿದ್ದರು. ಆ ಸಮಯದಲ್ಲಿ ಕೋತಿಗಳ ಹಿಂಡೊಂದು ಅವರ ಧ್ಯಾನವನ್ನು ಭಂಗ ಮಾಡಿದವಂತೆ. ಇದರಿಂದ ಕ್ರೋಧಗೊಂಡ ವ್ಯಾಸರಾಯರು ಒಂದು ಮಂಡಲ ರಚಿಸಿ, ಆ ಮಂಡಲದಲ್ಲಿ ಕೋತಿಗಳನ್ನೆಲ್ಲಾ ದಿಗ್ಬಂಧನಗೊಳಿಸಿ ಅವುಗಳ ಉಪಟಳದಿಂದ ಪಾರಾದರಂತೆ.

ಈ ರೀತಿಯಾಗಿ ವ್ಯಾಸರಾಯ ಗುರುಗಳಿಂದ ರಚನೆಗೊಂಡ ಆ ಮಂಡಲ ಕೋನಾಕೃತಿಯು ಕಾಲಾಂತರದಲ್ಲಿ ಜನರಿಂದ ಪೂಜೆಗೊಳಪಟ್ಟಿತಂತೆ. ಈ ಮಂಡಲವು ಜನರ ಇಷ್ಟಾರ್ಥ ನೆರವೇರಿಸುವ ಮಂದಿರವಾಗಿ ರೂಪುಗೊಂಡಿತು. ಆದ್ದರಿಂದ ಇದಕ್ಕೆ 'ಯಂತ್ರೋದ್ಧಾರಕ ಆಂಜನೇಯಸ್ವಾಮಿ', 'ಯಂತ್ರೋದ್ಧಾರಕ ಪ್ರಾಣದೇವರು' ಎಂಬ ಹೆಸರುಗಳಿಂದ ಕರೆಯಲಾಯಿತು ಎಂದು ನಿರೂಪಕರು ತಿಳಿಸುತ್ತಾರೆ.[೧೪]

## ೧೦. ಹನುಮಪಾದ

ಹನುಮಪಾದವು ತಳವಾರಘಟ್ಟ ರಸ್ತೆಯ ಎಡಭಾಗದ ಹೊಲವೊಂದರ ಎತ್ತರವಾದ ಗುಡ್ಡದ ಮೇಲೆ ಕಂಡು ಬರುತ್ತದೆ. ಇದನ್ನು 'ಹನುಮಪಾದ' ಎಂದು ಕರೆಯುತ್ತಾರೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದಾಗ ಸೀತೆಯನ್ನು ಹುಡುಕುವ ಕೆಲಸ ಹನುಮನಿಗೆ ಬರುತ್ತದೆ. ಆಗ ರಾಮನ ಆಜ್ಞೆಯಂತೆ ಹನುಮನು ಈ ಎತ್ತರವಾದ ಬೆಟ್ಟದಿಂದ ಜಿಗಿದನೆಂಬ ನಂಬಿಕೆಯಿದೆ. ಇದಕ್ಕೆ ಪುರಾವೆ ಎಂಬಂತೆ ಬೆಟ್ಟದ ಮೇಲೆ ಮೂಡಿರುವ ಹೆಜ್ಜೆಯ ಗುರುತೇ ಕಾರಣವಾಗಿದೆಯೆಂದು ನಿರೂಪಕರು ತಿಳಿಸುತ್ತಾರೆ.[೧೫]

ಮುಸ್ಲಿಂ ಸಮುದಾಯದವರು ಈ ಹೆಜ್ಜೆಯ ಗುರುತನ್ನು 'ಸೂಫಿ ಸಂತನ ಪಾದ'ವೆಂದು ವಾದಿಸುತ್ತಾರೆ. ಇದಕ್ಕೆ ಕಾರಣ ಕೇಳಲಾಗಿ ವಿಜಯನಗರ ರಾಜ್ಯದಲ್ಲಿ ಮುಸ್ಲಿಂ ಪಂಥದ ಪವಾಡ ಪುರುಷನಿದ್ದನಂತೆ. ಆತನು ಮೆಕ್ಕಾಗೆ ಹೋಗುವ ಸಂದರ್ಭ ಬಂದಾಗ ಈ ಬೆಟ್ಟದಿಂದ ಜಿಗಿದು, ಮೆಕ್ಕಾಗೆ ಹೋದನಂತೆ. ಈ ಬೆಟ್ಟದ ಮೇಲೆ ಒಂದು ಪಾದದ ಹೆಜ್ಜೆ ಗುರುತು ಇದ್ದು, ಇನ್ನೊಂದು ಪಾದದ ಹೆಜ್ಜೆ ಗುರುತು ಮೆಕ್ಕಾದಲ್ಲಿ ಕಂಡು ಬರುತ್ತದೆ ಎಂಬ ವಿಚಾರವನ್ನು ನಿರೂಪಕರು ತಿಳಿಸುತ್ತಾರೆ.[೧೬]

ವಿಷ್ಣು ಭೂಲೋಕಕ್ಕೆ ಬಂದಾಗ ಮೊದಲು ಕಾಲೂರಿದ್ದು ಈ ಸ್ಥಳದಲ್ಲೇ. ಅವನು ಕಾಲೂರಿದ್ದರಿಂದ ಈ ಬೆಟ್ಟದ ಮೇಲೆ ಹೆಜ್ಜೆ ಗುರುತು ಮೂಡಿದೆ ಎಂಬ ವಿವರಣೆಯೂ ಇದೆ. ಈ ಹೆಜ್ಜೆಯ ಗುರುತಿಗೆ ಹನುಮಪಾದ, ಸೂಫಿಸಂತನಪಾದ, ಶಿವನಪಾದ, ವಿಷ್ಣುಪಾದ ಎಂಬ ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದೆ.

ಮಳೆಗಾಲದಲ್ಲಿ ಪಾಚಿ ಕಟ್ಟಿದ ಬಂಡೆಯ ಮೇಲೆ ಜನ ತಿರುಗಾಡಿದ್ದಾದರೆ, ಅವರ ಹೆಜ್ಜೆ ಮುದ್ರೆಗೊಳ್ಳುತ್ತದೆ. ಎಂದೋ ಯಾರೋ ಉಳಿಯಿಂದ ಮನುಷ್ಯನ ಹೆಜ್ಜೆಯನ್ನು ಕೊರೆದಿರುತ್ತಾನೆ.

ಅದನ್ನು ನೋಡಿದ ಬೇರೆ ಜನ, ಅದು ದೇವರ ಹೆಜ್ಜೆಯೇ ಇರಬೇಕು. ಅಮಾನುಷ ವ್ಯಕ್ತಿಗಲ್ಲದೆ ಕಲ್ಲಿನ ಮೇಲೆ ಹೆಜ್ಜೆ ಊರುವ ಶಕ್ತಿ ಯಾರಿಗಿದೆ ಎಂಬ ತರ್ಕದೊಂದಿಗೆ ಈ ಐತಿಹ್ಯ ಹುಟ್ಟಿಕೊಂಡಿರುವ ಸಾಧ್ಯತೆಯಿದೆ.

## ೧೧. ವೆಂಕಟೇಶ್ವರ ದೇವಸ್ಥಾನ

ಕಂಪ್ಲಿ ಹೋಬಳಿಯ ನಂ. ೨ ಮುದ್ದಾಪುರ(ಇಟಗಿ ಮುದ್ದಾಪುರ) ಎಂಬ ಗ್ರಾಮದಲ್ಲಿ ಈ ದೇವಸ್ಥಾನ ಕಂಡುಬರುತ್ತದೆ. ವಿಜಯನಗರದ ಅರಸ ಮುಮ್ಮಡಿ ದೇವರಾಯನ ತಾಯಿಗೆ ತಿರುಪತಿಗೆ ಹೋಗಬೇಕೆಂದು ಸ್ವಪ್ನವಾಯಿತಂತೆ. ಆದರೆ, ಬಹಳ ವಯಸ್ಸಾದ್ದರಿಂದ ಅಷ್ಟು ದೂರ ಪ್ರಯಾಣ ಮಾಡಿ ಹೋಗಲು ಅವರಿಂದಾಗಲಿಲ್ಲ. ಈ ವಿಚಾರವನ್ನು ಮಗನಾದ ಮುಮ್ಮಡಿ ದೇವರಾಯನಿಗೆ ತಿಳಿಸಲು, ಮುಮ್ಮಡಿ ದೇವರಾಯನು ಅಷ್ಟು ದೂರ ಹೋಗುವ ಬದಲು ತಮ್ಮ ರಾಜ್ಯದ ಪ್ರಶಸ್ತ ಸ್ಥಳದಲ್ಲಿ ವೆಂಕಟೇಶ್ವರ ಗುಡಿಯನ್ನು ಕಟ್ಟಿಸಿ ದೇವರನ್ನು ಪೂಜಿಸಿದರಾಗದೇ ಎಂದು ಆಲೋಚಿಸಿದನಂತೆ. ಹೀಗೆ ಈ ದೇವಾಲಯ ನಿರ್ಮಾಣವಾಗಿದೆ ಎಂಬ ವಿವರಣೆ ಇದೆ.[೧೭]

ಮುದ್ದಾಪುರದ ವೆಂಕಟೇಶ್ವರ ದೇವಾಲಯದ ಮೂರ್ತಿಯನ್ನು ರಾಘವೇಂದ್ರಸ್ವಾಮಿಗಳ ಗುರುಗಳಾದ ಮಂತ್ರಾಲಯದ ಸುರೇಂದ್ರತೀರ್ಥರು ಪ್ರತಿಷ್ಠಾಪಿಸಿದರೆಂಬ ಪ್ರತೀತಿ ಇದೆ.

## ೧೨. ಗುಡ್ಡದ ತಿಮ್ಮಪ್ಪ

ಕಮಲಾಪುರ ಹೋಬಳಿಯ ವೆಂಕಟಾಪುರ ಕ್ಯಾಂಪ್ ಗ್ರಾಮದ ಬಲಗಡೆಯ ಬೆಟ್ಟದ ಮೇಲೆ ಈ ದೇವಸ್ಥಾನ ಕಂಡುಬರುತ್ತದೆ. ಶ್ರೀ ವಿಷ್ಣು ತನ್ನ ದಶಾವತರದಲ್ಲಿ ಪ್ರಥಮ ಅವತಾರವಾದ ಮತ್ಸ್ಯಾವತರಾದಲ್ಲಿ ಗುಡ್ಡದ ಬಂಡೆಯೊಂದರಲ್ಲಿ ಒಡಮೂಡಿದ್ದಕ್ಕಾಗಿ ಈ ದೇವಸ್ಥಾನವನ್ನು 'ಗುಡ್ಡದ ತಿಮ್ಮಪ್ಪ' ಎಂದು ಕರೆಯಲಾಗುತ್ತದೆ.

ಆನೆಗೊಂದಿ ಸಂಸ್ಥಾನದ ರಾಣಿಯು ತಿರುಪತಿ ತಿಮ್ಮಪ್ಪನ ಪರಮಭಕ್ತೆಯಾಗಿದ್ದಳು. ಹೀಗಿರುವಾಗ ಒಮ್ಮೆ ರಾಣಿಗೆ ವಿಷಯಶೀತ ಜ್ವರ ಬಂದು ಹಾಸಿಗೆ ಹಿಡಿದಳು. ತನ್ನ ಸಾವು ಸಮೀಪಿಸುತ್ತಿದೆ ಎಂದು ಗೊತ್ತಾಗಿ ತಿರುಪತಿ ತಿಮ್ಮಪ್ಪನಲ್ಲಿ ನಿನ್ನ ದರ್ಶನವಾಗದೇ ನಾನು ಜೀವ ಬಿಡೇನು ಎಂದು ಹೇಳಿ ಮಲಗಿದಳು. ಕನಸಿನಲ್ಲಿ ರಾಣಿಗೆ ತಿರುಪತಿ ತಿಮ್ಮಪ್ಪ ಕಾಣಿಸಿಕೊಂಡು ನೀನೇನು ಚಿಂತೆ ಮಾಡಬೇಡ. ನೀನಿರುವಲ್ಲಿಗೆ ನಾನೇ ಬರುತ್ತೇನೆ. ನಾನು ನಿಮ್ಮ ಸಂಸ್ಥಾನದ ಪೂರ್ವದ ಗುಡ್ಡದಲ್ಲಿ ಕಾಣಿಸಿಕೊಂಡು ದರ್ಶನ ನೀಡುತ್ತೇನೆ ಎಂದು ಹೇಳಿದಂತಾಯಿತಂತೆ. ಈ ವಿಷಯವನ್ನು ರಾಜನಿಗೆ ತಿಳಿಸಲಾಗಿ, ರಾಜನು ರಾಣಿಯ ಮಾತಿನಂತೆ ಹುಡುಕಿಸಲಾಗಿ, ತಿರುಪತಿ ತಿಮ್ಮಪ್ಪನು ಮತ್ಸ್ಯಾವತಾರದಲ್ಲಿ ಗುಡ್ಡದ ಬಂಡೆಯೊಂದರಲ್ಲಿ ಒಡಮೂಡಿ ದರ್ಶನ ನೀಡಿದನೆಂಬುದಾಗಿ ತಿಳಿದುಬರುತ್ತದೆ.[೧೮]

ಗುಡ್ಡದ ತಿಮ್ಮಪ್ಪನು ಆನೆಗೊಂದಿ ಸಂಸ್ಥಾನ ಹಾಗೂ ವಿಜಯನಗರ ಸಾಮ್ರಾಜ್ಯದ ಆರಾಧ್ಯ ದೈವವಾಗಿದ್ದನೆಂದು, ಹರಿದಾಸರು, ಯತಿಗಳು ಈತನ ದರ್ಶನ ಪಡೆದು ಸ್ತೋತ್ರ ಮಾಡಿರುವರೆಂಬ

ಪ್ರತೀತಿ ಇದೆ. ಗುಡ್ಡದ ತಿಮ್ಮಪ್ಪನಿಗೆ ಮಹಾಮಂಗಳಾರತಿ ಮಾಡುವ ಸಂದರ್ಭದಲ್ಲಿ ಈ ದೇವಸ್ಥಾನದ ಕಿಂಡಿಯಿಂದ ಆನೆಗೊಂದಿ ಸಂಸ್ಥಾನಿಕರಿಗೆ ಹಾಗೂ ವಿಜಯನಗರದ ಅರಸರಿಗೆ ಕಾಣಿಸುತ್ತಿತ್ತೆಂಬ ಮಾಹಿತಿಯೂ ಇದೆ.[೧೯]

### ೧೩. ಕೋಣದಮ್ಮ

ಹಂಪಿಯ ಕೃಷ್ಣ ಬಜಾರಿನ ಪಕ್ಕದಲ್ಲಿ 'ಕೋಣದಮ್ಮ' ದೇವಸ್ಥಾನ ಕಂಡು ಬರುತ್ತದೆ. ಈ ದೇವಿಯು ಕೃಷ್ಣಾಪುರ ಪೇಟೆಯ ಆರಾಧ್ಯ ದೈವ ಆಗಿದ್ದಳೆಂದು ತಿಳಿದುಬರುತ್ತದೆ.

ಕೃಷ್ಣ ಬಜಾರು ಪ್ರಮುಖ ವ್ಯಾಪಾರ ಮಾರುಕಟ್ಟೆಯಾಗಿ ಕಾರ್ಯ ನಿರ್ವಹಿಸುತ್ತಿದ್ದುದರಿಂದ ಅಲ್ಲಿ ದವಸ-ಧಾನ್ಯಗಳನ್ನು ಮಾರಾಟ ಮಾಡುತ್ತಿದ್ದ ವ್ಯಾಪಾರಿಗಳು ಹಾಗೂ ಸೋಮವಾರದಂದು ನಡೆಯುತ್ತಿದ್ದ ವಾರದ ಸಂತೆಯ ವ್ಯಾಪಾರಿಗಳು ಕೋಣದಮ್ಮನನ್ನು ವಿಶೇಷವಾಗಿ ಪೂಜಿಸುತ್ತಿದ್ದರು. ವಿಜಯನಗರದ ಅರಸರು ಯುದ್ಧಗಳಿಗೆ ಹೋಗುವಾಗ ಕೋಣದಮ್ಮನಿಗೆ ಕೋಣವನ್ನು ಬಲಿ ಕೊಟ್ಟು ರಣವೀಳ್ಯವನ್ನು ಪಡೆದು ಮುನ್ನಡೆಯುತ್ತಿದ್ದರೆಂಬುದಾಗಿ ಮಾಹಿತಿ ಇದೆ.[೨೦]

ಈ ದೇವಿಯನ್ನು ಪ್ರಸನ್ನಗೊಳಿಸುವ ಸಲುವಾಗಿ ಅಂದಿನ ಅರಸರು, ವ್ಯಾಪಾರಿಗಳು ಮತ್ತು ಜನಸಾಮಾನ್ಯರು ಕೋಣವನ್ನು ಬಲಿ ಕೊಡುತ್ತಿದ್ದುದ್ದರಿಂದ ಈ ದೇವಿಯನ್ನು 'ಕೋಣದಮ್ಮ' ಎಂದು ಕರೆಯಲಾಗುತ್ತದೆ.

### ೧೪. ಒಪ್ಪತ್ತೇಶ್ವರರ ಗದ್ದುಗೆ

ಮರಿಯಮ್ಮನಹಳ್ಳಿ ಹೋಬಳಿಯ ನಾಗಲಾಪುರ ಗ್ರಾಮದಲ್ಲಿ 'ಒಪ್ಪತ್ತೇಶ್ವರರ ಗದ್ದುಗೆ' ಕಂಡುಬರುತ್ತದೆ. ವಿಜಯನಗರದ ಅರಸ ಸದಾಶಿವರಾಯನ ದಂಡನಾಯಕ ಮಲ್ಲಣ್ಣನಾಯಕನು ಬೇಟೆಗೆಂದು ನಾಗಲಾಪುರದ ಅರಣ್ಯ ಪ್ರದೇಶಕ್ಕೆ ಬಂದಿದ್ದಾಗ ಅಲ್ಲೊಂದು ವಿಶಿಷ್ಟವಾದ ಗದ್ದುಗೆಯನ್ನು ಕಂಡು ಆಕರ್ಷಿತನಾದನು. ಈ ವಿಷಯವಾಗಿ ಅರಸನ ಬಳಿ ತಾನು ಕಂಡದ್ದನ್ನು ಬಿನ್ನವಿಸಿದನಂತೆ. ಈ ವಿಷಯವನ್ನು ಕೇಳಿ ಉತ್ಸುಕನಾದ ದೊರೆಯು ಹಾಗಿದ್ದಲ್ಲಿ ತಾನೂ ಅದೇ ಪ್ರದೇಶಕ್ಕೆ ಬೇಟೆಯಾಡಲು ಹೋಗಬೇಕೆಂದು ತೀರ್ಮಾನಿಸಿ ಸದಾಶಿವರಾಯನು ತನ್ನ ಪತ್ನಿ ನಾಗಲಾದೇವಿ ಮತ್ತು ಪರಿವಾರ ಸಮೇತನಾಗಿ ಅದೇ ಸ್ಥಳಕ್ಕೆ ಬೇಟೆಯಾಡಲು ಹೋದನು. ಬೇಟೆಯಾಡಿ ಅವರೆಲ್ಲಾ ವಿಶ್ರಾಂತಿ ಪಡೆಯುತ್ತಿರಲು ವಿಶಿಷ್ಟವಾದ ಕಾಂತಿಯೊಂದು ರಾಣಿಗೆ ಕಂಡುಬಂತಂತೆ. ಅದನ್ನು ಹಿಂಬಾಲಿಸಿಕೊಂಡು ಆಕೆ ಹೋಗುತ್ತಿರಲು ಅದು ಗದ್ದುಗೆಯಲ್ಲಿ ಲೀನವಾಯಿತಂತೆ. ಗದ್ದುಗೆಯಲ್ಲಿ ಸಮಾಧಿಸ್ಥನಾದ ಸಾಧುವೊಬ್ಬ ಕಾಣಿಸಿಕೊಂಡು ತಾನು ಒಪ್ಪತ್ತೇಶ್ವರ ಸ್ವಾಮಿ ಎಂದೂ ಬಹಳ ವರ್ಷಗಳ ಹಿಂದೆ ತಾನಿಲ್ಲಿ ಸಮಾಧಿಗೊಂಡಿರುವುದನ್ನು ಹೇಳಿದನಂತೆ. ಸ್ವಲ್ಪ ಹೊತ್ತಲ್ಲೇ ಆತ ಅದೃಶ್ಯನಾಗಿ, ಕಾಂತಿ ಮತ್ತೆ ಕಾಣಿಸಿಕೊಂಡು ಆಕೆಯನ್ನು ಯಥಾ ಸ್ಥಾನಕ್ಕೆ ಕರೆದೊಯ್ದಿತಂತೆ. ರಾಣಿಯು ನಡೆದ ಘಟನೆಯನ್ನು ರಾಜನಿಗೆ ಹೇಳಿದಳಂತೆ. ಇಬ್ಬರೂ ಒಂದು ತೀರ್ಮಾನಕ್ಕೆ ಬಂದು ಆ ಗದ್ದುಗೆಯ ಎದುರುಗಡೆ ಗುಡಿಯೊಂದನ್ನು

ಕಟ್ಟಿಸಿ ಅದನ್ನು 'ಜಪ್ಪತ್ತೇಶ್ವರ ದೇವಾಲಯ(ಮಠ)'ವೆಂದು ಕರೆದರಂತೆ. ನಾಗಲಾದೇವಿಯಿಂದಾಗಿಯೇ ಆ ಊರಿಗೆ ಮುಂದೆ 'ನಾಗಲಾಪುರ'ವೆಂಬ ಹೆಸರು ಪ್ರಾಪ್ತವಾಯಿತಂತೆ.[೨೦]

### ೧೫. ಕುರುಗೋಡು ನೀಲಮ್ಮ

ಹೊಸಪೇಟೆ ಹೋಬಳಿಯ ಹೊಸೂರು ಗ್ರಾಮಕ್ಕೆ ಸೇರುವ ಹಿಪ್ಪತ್ತೇರಿ ಗ್ರಾಮದಲ್ಲಿದ್ದ (ಈಗ ಮಾಗಾಣೆಯಾಗಿದೆ) ನೀಲಮ್ಮ ಎಂಬ ಶಿವಶರಣೆಯು ಕುರುಗೋಡಿನಿಂದ ಬಂದವಳು. ಕುರುಗೋಡು ದೊಡ್ಡ ಬಸಪ್ಪನ ಹೆಂಡತಿಯೇ ನೀಲಮ್ಮ. ಟಿಪ್ಪುಸುಲ್ತಾನ್ ಮಾತಾಡದ ದೇವರುಗಳನ್ನು(ಮೂರ್ತಿಗಳನ್ನು) ನಾಶಪಡಿಸುತ್ತಿದ್ದ. ಮತಾಂಧನಾಗಿದ್ದ ಆತನೊಂದಿಗೆ ಮಾತಾಡಬಾರದೆಂದು ನಿಶ್ಚಯಿಸಿ ಕುರುಗೋಡಿನಿಂದ ಹಿಪ್ಪತ್ತೇರಿ ಗ್ರಾಮಕ್ಕೆ ವಲಸೆ ಬಂದು ಇಲ್ಲೇ ನೆಲೆ ನಿಂತಳಂತೆ.[೨೧]

## ೪.೨. ಐತಿಹಾಸಿಕ(ಚಾರಿತ್ರಿಕ) ವ್ಯಕ್ತಿಪ್ರಧಾನ ಐತಿಹ್ಯಗಳು

ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಅಲ್ಲಿ ಸ್ಥಳದ ಮಹತ್ವವನ್ನು ಮೀರಿ ಆ ವ್ಯಕ್ತಿಯ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಲೂಬಹುದು. ಇಂಥ ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳನ್ನು 'ಐತಿಹಾಸಿಕ(ಚಾರಿತ್ರಿಕ) ವ್ಯಕ್ತಿಪ್ರಧಾನ ಐತಿಹ್ಯ'ಗಳೆಂದು ಕರೆಯಲಾಗಿದೆ.

ಐತಿಹಾಸಿಕ ವ್ಯಕ್ತಿಗಳಲ್ಲಿ ಕುಮಾರರಾಮ, ಕೃಷ್ಣದೇವರಾಯ, ವಿಕ್ರಮಾದಿತ್ಯ, ಕುಮಾರವ್ಯಾಸ, ಹರಿಹರ, ರಾಘವಾಂಕ, ಮಧ್ವಾಚಾರ್ಯರು ಮೊದಲಾದವರು ಸೇರ್ಪಡೆಯಾಗುತ್ತಾರೆ. ಇಂಥ ಐತಿಹ್ಯಗಳ ಅಭ್ಯಾಸಕ್ಕೆ ಅನ್ಯಶಿಸ್ತುಗಳ ಜ್ಞಾನವನ್ನು ನಾವು ಪಡೆಯಬೇಕಾಗುತ್ತದೆ. ಏಕೆಂದರೆ ಪೌರಾಣಿಕ ಮತ್ತು ಐತಿಹಾಸಿಕ ವ್ಯಕ್ತಿಗಳ ಮೂಲ ಸ್ವರೂಪವನ್ನು ಪತ್ತೆ ಹಚ್ಚುವುದು ತ್ರಾಸದಾಯಕ ಕೆಲಸ. ಭಾರತದಲ್ಲಿ ಇತಿಹಾಸ ಮತ್ತು ಪುರಾಣ ಒಂದೆಂಬಂತೆ ನಿರೂಪಿತವಾಗಿರುವುದೇ ಇದಕ್ಕೆ ಕಾರಣ.

ಹೊಸಪೇಟೆ ಪರಿಸರದಲ್ಲಿ ಈ ಕೆಳಗಿನ ಐತಿಹಾಸಿಕ(ಚಾರಿತ್ರಿಕ) ವ್ಯಕ್ತಿಪ್ರಧಾನ ಐತಿಹ್ಯಗಳು ಲಭಿಸುತ್ತವೆ.

೧. ತಳವಾರಪ್ಪನ ಕಲ್ಲು

೨. ತುಲಾಭಾರ

೩. ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿಗಳು

೪. ಹೊಳೆ ಹೊನ್ನೂರುಸ್ವಾಮಿ ದರ್ಗಾ

೫. ತೆನಾಲಿರಾಮನ ಮಂಟಪ

೬. ಕಂಪಣ್ಣ

೭. ಚಂಡಿಕೇಶ್ವರ

೮. ಹರಿಹರ, ರಾಘವಾಂಕರ ಬಗ್ಗೆ

೯. ಪುರಂದರದಾಸರ ಮಂಟಪ

೧೦. ಮುದ್ದ ದಣ್ಣಾಯಕ

೧೧. ಕನ್ಯೆ ವೀರಾಂಬ

೧೨. ಗಾದಿರಿರಾಮ

೧೩. ಕಾಟಪ್ಪನಕಲ್ಲು

೧೪. ಪಾಪಿನಾಯಕ

೧೫. ಕೊಡಪಾಲನಾಯಕ

೧೬. ಮಲ್ಲಪ್ಪನಾಯಕ

೧೭. ಕಟಿಗೆಯ ಅಹಮದ್‌ಖಾನ್

**೧. ತಳಾವರಪ್ಪನ ಕಲ್ಲು**

ಹಂಪಿಯ ವಿರೂಪಾಕ್ಷ ದೇವಾಲಯದ ಪ್ರವೇಶ ದ್ವಾರದ ಪಕ್ಕದಲ್ಲಿ ಕಂಡುಬರುವ ಸುಮಾರು ಮೂರುವರೆ ಅಡಿ ಎತ್ತರದ ಕಲ್ಲನ್ನು 'ತಳವಾರಪ್ಪನ ಕಲ್ಲು' ಎಂದು ಕರೆಯುತ್ತಾರೆ. ಇದಕ್ಕೆ 'ಚಿಕ್ಕೆಯ್ಯನ ಕಲ್ಲೂ' ಎಂಬ ಹೆಸರೂ ಇದೆ. ಈ ಕಲ್ಲಿನ ಕುರಿತು ಲಭ್ಯ ಇರುವ ಕತೆಯ ಪ್ರಕಾರ -

ತಳವಾರಪ್ಪ ಎಂಬ ಅಗಸನು 'ಹಂಪಮ್ಮ - ಪಂಪಾಪತಿ'ಯ ಶಯನಗೃಹವನ್ನು ಸ್ವಚ್ಛಗೊಳಿಸುವ ಕೆಲಸ ಮಾಡುತ್ತಿದ್ದನಂತೆ. ಒಮ್ಮೆ ಜಾತ್ರೆಯ ದಿವಸ ರಾತ್ರಿ ಸಮಯದಲ್ಲಿ ಎಂದಿನಂತೆ ಪೂಜಾರರು ಹಂಪಮ್ಮ - ಪಂಪಾಪತಿ ವಿಗ್ರಹಗಳನ್ನು ಶಯನಗೃಹಕ್ಕೆ ಸೇರಿಸಿ ಬಾಗಿಲು ಹಾಕುತ್ತಾರೆ. ಹಾಗೆ ಮಾಡುವುದು ಪದ್ಧತಿ. ಒಳಗೆ ಯಾರನ್ನೂ ಸೇರಿಸದೆ ಶಯನಗೃಹದ ಬಾಗಿಲು ಬಿಗಿ ಮಾಡಿ ಪೂಜಾರರು ಹಿಂದೆ ಬರುತ್ತಾರೆ. ಇದನ್ನು ದಿನಾಲೂ ಗಮನಿಸುತ್ತಿದ್ದ ತಳವಾರಪ್ಪನು ಒಬ್ಬ ಪೂಜಾರರನ್ನು ಕೇಳುತ್ತಾನೆ. ಸ್ವಾಮೀ, ಏಕೆ ದಿನಾಲೂ ಆ ದೇವರ ವಿಗ್ರಹಗಳನ್ನು ಶಯನಗೃಹದಲ್ಲಿರಿಸಿ ಬಾಗಿಲು ಬಿಗಿ ಮಾಡುತ್ತೀರಿ ಎಂದು ಕೇಳಿದಾಗ, ಆಗ ಪೂಜಾರರು ಆ ವಿಗ್ರಹಗಳು ಮಧ್ಯರಾತ್ರಿಯ ಸಮಯದಲ್ಲಿ ಹಂಪಮ್ಮ-ಪಂಪಾಪತಿಯರು ವಿಗ್ರಹ ರೂಪ ಬಿಟ್ಟು ನಿಜರೂಪಿನಲ್ಲಿ ಅಲ್ಲೆ ಬಂದು ಮಲಗುತ್ತಾರೆ ಎಂದು ಹೇಳಿದರು. ಆಗ ತಳವಾರಪ್ಪನು ಅವರ ನಿಜರೂಪವನ್ನು ನೋಡಲು ನಿಶ್ಚಯಿಸಿ, ಶಯನಗೃಹವನ್ನು ಸ್ವಚ್ಛ ಮಾಡುವ ನೆಪದಲ್ಲಿ ಒಳಗೆ ಹೋಗಿ ಶಯನಗೃಹದ ಮಂಚದ ಅಡಿಯಲ್ಲಿ ಅಡಗಿ ಕುಳಿತುಕೊಂಡನು. ಎಂದಿನಂತೆ ಪೂಜಾರರು ಬಂದು ಹಂಪಮ್ಮ-ಪಂಪಾಪತಿಯ ವಿಗ್ರಹಗಳನ್ನು ಶಯನಗೃಹದ ಮಂಚದ ಮೇಲಿಟ್ಟು ಬಾಗಿಲು

ಜಿಗಿ ಮಾಡಿ ಬರುತ್ತಾರೆ. ತಳವಾರಪ್ಪ ಎಚ್ಚರವಾಗಿಯೇ ಮಂಚದ ಕೆಳಗೆ ಕಾದು ಕುಳಿತನು. ಸುಮಾರು ಮಧ್ಯರಾತ್ರಿಯ ಸಮಯದಲ್ಲಿ ಹಂಪಮ್ಮ-ಪಂಪಾಪತಿಯರು ನಿಜರೂಪದಲ್ಲಿ ಪ್ರತ್ಯಕ್ಷರಾಗಿ ಇನ್ನೇನು ಹಾಸಿಗೆಯಲ್ಲಿ ಮಲಗಬೇಕು ಎಂದುಕೊಳ್ಳುವ ಹೊತ್ತಿಗೆ ಹಂಪಮ್ಮನಿಗೆ ಸಂಶಯ ಬರುತ್ತದೆ. ಆಕೆ ಪಂಪಾಪತಿಯನ್ನು ಕುರಿತು ಯಾಕೋ ಈ ಶಯನಗೃಹದಲ್ಲಿ ನರವಾಸನೆ ಬರುತ್ತಿದೆಯಲ್ಲ? ಎಂದು ಕೇಳುತ್ತಾಳೆ. ಪಂಪಾಪತಿ ತನ್ನ ದಿವ್ಯದೃಷ್ಟಿಯಿಂದ ನೋಡಲು ತಳವಾರಪ್ಪನು ಕಾಣಿಸಿಕೊಳ್ಳುತ್ತಾನೆ. ಅವನನ್ನು ಮಂಚದ ಅಡಿಯಿಂದ ಹೊರಗೆ ಬರುವಂತೆ ಪಂಪಾಪತಿ ಹೇಳುತ್ತಾನೆ ಮತ್ತು ನಿನಗೆ ಏನು ಬೇಕು? ಎಂದು ಕೇಳುತ್ತಾನೆ. ಆಗ ತಳವಾರಪ್ಪ “ನಾನು ನಿಮ್ಮ ಭಕ್ತನಾಗಿದ್ದು, ನಿಮ್ಮ ದರ್ಶನ ಮಾಡುವ ಆಸೆಯಿತ್ತು. ಈಗ ನಿಮ್ಮ ದರ್ಶನವಾಯಿತು. ನನಗೆ ಇಷ್ಟೇ ಸಾಕು, ಮತ್ತೇನು ಬೇಡ” ಎಂದು ಹೇಳುತ್ತಾನೆ. ಆಗ ಹಂಪಮ್ಮ-ಪಂಪಾಪತಿಯರು ಸರಿ ನಿನಗೆ ಒಳ್ಳೆಯದಾಗಲಿ ಎಂದು ಆಶೀರ್ವದಿಸಿದರು. ಜೊತೆಗೆ “ನೀನು ಇಲ್ಲಿಂದ ಹೋಗುವಾಗ ಹಿಂದಿರುಗಿ ನೋಡಬೇಡ, ಹಾಗೇನಾದರೂ ನೋಡಿದಲ್ಲಿ ನಿನ್ನ ತಲೆ ಸಿಡಿದು ಹೋಳಾಗುತ್ತದೆ” ಎಂಬ ಎಚ್ಚರಿಕೆಯನ್ನು ಕೊಟ್ಟರು. ಆಗಲಿ ಎಂದು ಹೇಳಿ ತಳವಾರಪ್ಪ ಶಯನಗೃಹದಿಂದ ಹೊರಬರುವಾಗ ಯಾಕೋ ಹಿಂದೆ ತಿರುಗಿ ನೋಡುತ್ತಾನೆ. ತಕ್ಷಣ ತಳವಾರಪ್ಪನ ತಲೆಸಿಡಿದು ಎರಡು ಹೋಳಾಗುತ್ತದೆ ಮತ್ತು ಆ ಹೋಳುಗಳು ಕಲ್ಲಾಗುತ್ತವೆ. ಆ ಕಲ್ಲನ್ನು ಗುಡಿಯ ಇದಿರಿನಲ್ಲಿ ನಿಲ್ಲಿಸಲಾಯಿತು. ಅಂದಿನಿಂದ ಆ ಕಲ್ಲಿಗೆ ‘ತಳವಾರಪ್ಪನಕಲ್ಲು’ ಎಂದು ಕರೆಯುತ್ತಿದ್ದಾರೆ.[೨೩] ಈಗಲೂ ಈ ಕಲ್ಲಿಗೆ ಕುಂಕುಮ ಮತ್ತು ಎಣ್ಣೆಯನ್ನು ಹಾಕಿ ಪೂಜೆ ಸಲ್ಲಿಸುವ ಆಚರಣೆ ಜಾರಿಯಲ್ಲಿದೆ.

### ೨. ತುಲಾಭಾರ

ಹಂಪಿಯ ವಿಜಯವಿಠ್ಠಲ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಇರುವ ಈ ಸ್ಥಳವು ವಿಠ್ಠಲ ದೇವಸ್ಥಾನದ ಆವರಣದ ಪಕ್ಕದಲ್ಲಿ ಹೆಬ್ಬಾಗಿಲಿನ ಆಕಾರದಲ್ಲಿ ‘ತುಲಾಭಾರ’ ಕಂಡು ಬರುತ್ತದೆ. ಇದರ ಬಗೆಗೆ ಬೇರೆ ಬೇರೆ ರೀತಿಯ ಐತಿಹ್ಯಗಳು ಲಭ್ಯವಿವೆ.

ವಿಜಯನಗರ ಸಾಮ್ರಾಜ್ಯದಲ್ಲಿ ಬಲು ವಿಜೃಂಭಣೆಯಿಂದ ನಡೆಯುತ್ತಿದ್ದ ವಿಜಯದಶಮಿಯ ದಿನದಂದು ವಿಜಯನಗರದ ದೊರೆಗಳು ತುಲಾಭಾರ ಮಾಡಿಸಿ, ತಮ್ಮಷ್ಟೇ ಭಾರದ ಧನ, ಕನಕಾದಿಗಳನ್ನು ಪ್ರಜೆಗಳಿಗೆ ದಾನ ಮಾಡುತ್ತಿದ್ದುದರಿಂದ ಇದಕ್ಕೆ ತುಲಾಭಾರವೆಂದು ಕರೆಯಲಾಗುತ್ತದೆ.[೨೪]

ಮತ್ತೊಂದು ಹೇಳಿಕೆಯಂತೆ, ವಿಜಯನಗರದ ಅರಸರು ತಮ್ಮ ರಾಜ ಗುರುಗಳನ್ನು, ಯತಿಗಳನ್ನು ವಿಜಯದಶಮಿಯ ಸಂದರ್ಭದಲ್ಲಿ ತುಲಾಭಾರ ಮಾಡುತ್ತಿದ್ದರಂತೆ.[೨೫]

ಇನ್ನೂ ಕೆಲವರ ಪ್ರಕಾರ ರಾಜರುಗಳು ತಮ್ಮ ದೇಹ ತೂಕಗಳನ್ನು ನೋಡಿಕೊಳ್ಳಲು ಈ ತುಲಾಭಾರವನ್ನು ಬಳಸುತ್ತಿದ್ದರಂತೆ.[೨೬]

**೩. ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿಗಳು**

ವಿಜಯನಗರ ಅರಸರ ಕಾಲದಲ್ಲಿ ಹಂಪಿ ಧಾರ್ಮಿಕ ಕೇಂದ್ರವಾಗಿತ್ತಲ್ಲದೇ, ಒಂದು ಪ್ರಮುಖ ವ್ಯಾಪಾರ ಕೇಂದ್ರವೂ ಆಗಿತ್ತು. ಬೇರೆ ಪ್ರದೇಶದಿಂದ ಬಂದ ವ್ಯಾಪಾರಿಯೊಬ್ಬನು ಸಾಸಿವೆ ಮತ್ತು ಕಡಲೆಕಾಳು ವ್ಯಾಪಾರ ಮಾಡುತ್ತಿದ್ದನು. ಅಂದು ಇಲ್ಲಿನ ಮಾರುಕಟ್ಟೆಯಲ್ಲಿ ಅವನಿಗೆ ವ್ಯಾಪಾರವೇ ಆಗಲಿಲ್ಲ. ಇದರಿಂದ ದಿಕ್ಕು ತೋಚದಂತಾದ ವ್ಯಾಪಾರಿಯು ವಿರೂಪಾಕ್ಷನನ್ನು ಬೇಡಿಕೊಂಡನು. ದೈವಸಂಕಲ್ಪ ಎಂಬಂತೆ ಅಂದಿನ ಮಾರುಕಟ್ಟೆಯಲ್ಲಿ ತನ್ನ ನಿರೀಕ್ಷೆಗೂ ಮೀರಿ ಹೆಚ್ಚಿನ ಲಾಭವನ್ನು ಗಳಿಸಿದನು. ಇದಕ್ಕೆಲ್ಲಾ ದೈವಸಂಕಲ್ಪವೇ ಕಾರಣ ಎಂದು ಬಗೆದು ವ್ಯಾಪಾರದಿಂದ ಬಂದಂತಹ ಹೆಚ್ಚಿನ ಲಾಭವನ್ನು ಧಾನ್ಯಗಳ ಹೆಸರಿನಲ್ಲಿ ಅಂದರೆ ಸಾಸಿವೆಯಿಂದ ಬಂದಂತಹ ಲಾಭದಿಂದ ಸಾಸಿವೆ ಗಣಪತಿಯನ್ನು, ಕಡಲೆಕಾಳಿನಿಂದ ಬಂದಂತಹ ಲಾಭದಿಂದ ಕಡಲೆಕಾಳು ಗಣಪತಿಯನ್ನು ಕೆತ್ತಿಸಿದನು.[೨೭] ಇಂತಹ ಕಾರಣಗಳಿಂದಾಗಿ ಹಂಪಿ ಪರಿಸರದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಅಂದಿನ ವ್ಯಾಪಾರಿಗಳು ಯಾವುದೇ ಮೋಸ, ವಂಚನೆ ಮಾಡದೇ ಶುದ್ಧ ವ್ಯಾಪಾರವನ್ನು ಮಾಡಿ, ವ್ಯಾಪಾರದಿಂದ ಬಂದಂತಹ ಹೆಚ್ಚಿನ ಲಾಭವನ್ನು ತಾವಿಟ್ಟುಕೊಳ್ಳದೇ ಧಾರ್ಮಿಕ ಕೆಲಸಗಳಿಗೆ ವಿನಿಯೋಗಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಈ ಮಾತಿಗೆ ಮೇಲಿನ ಕಥೆಯೇ ಸಾಕ್ಷಿಯಾಗಿದೆ ಎಂದು ಹೇಳಬಹುದು.

**೪. ಹೊಳೆ ಹೊನ್ನೂರುಸ್ವಾಮಿ ದರ್ಗಾ**

ವಿಜಯವಿಠ್ಠಲ ದೇವಸ್ಥಾನದ ಹಿಂಭಾಗದಲ್ಲಿ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಹೊಳೆ ಹೊನ್ನೂರುಸ್ವಾಮಿ ದರ್ಗಾ ಕಂಡುಬರುತ್ತದೆ. ವಿಜಯನಗರ ಅರಸರ ಕಾಲದಲ್ಲಿ ದೇಶ ಸಂಚಾರ ಮಾಡುತ್ತಾ ಬಂದ ಮುಸ್ಲಿಂ ಪಂಥದ ಈ ಸಂತನು ಇಲ್ಲಿಯ ಜನರ ಪ್ರೀತಿ, ವಿಶ್ವಾಸಗಳನ್ನು ಗಳಸಿ ಇಲ್ಲೇ ನೆಲೆಯೂರಿ, ತನ್ನ ಕೊನೆಯುಸಿರನ್ನು ಇಲ್ಲೇ ಬಿಟ್ಟನಂತೆ. ಅಂದಿನ ರಾಜರು ಇವನ ಒಳ್ಳೆತನಕ್ಕೆ ಮೆಚ್ಚಿ ಮುಸ್ಲಿಂ ಸಂಪ್ರದಾಯದ ಪ್ರಕಾರವೇ ಅಂತ್ಯಸಂಸ್ಕಾರ ನಡೆಸಿದರಂತೆ. ಈಗಲೂ ಈ ದರ್ಗಾಕ್ಕೆ ಬೇರೆ ಬೇರೆ ಪ್ರದೇಶಗಳಿಂದ ಅನೇಕರು ಹಿಂದೂ, ಮುಸ್ಲಿಂರೆನ್ನದೇ, ಯಾವ ಜಾತಿಯ ಭೇದ, ಭಾವವಿಲ್ಲದೆ ಪೂಜೆಯನ್ನು ಸಲ್ಲಿಸುತ್ತಾರೆ.[೨೮]

**೫. ತೆನಾಲಿರಾಮನ ಮಂಟಪ**

ತೆನಾಲಿರಾಮನ ಮಂಟಪವು ಮಾತಂಗ ಪರ್ವತ ಮತ್ತು ಆನೆಲಾಯದ ನಡುವೆ ಎತ್ತರವಾದ ಕಲ್ಲುಗುಡ್ಡದ ಮೇಲೆ ಕಂಡುಬರುತ್ತದೆ. ವಿಜಯನಗರದ ದೊರೆ ಕೃಷ್ಣದೇವರಾಯನು ಹಲವು ರಾಜ್ಯಗಳನ್ನು ಗೆದ್ದು, ಸಾಮ್ರಾಜ್ಯ ವಿಸ್ತಾರ ಮಾಡಿ, ಕಪ್ಪಕಾಣಿಕೆಗಳ ಹೆಚ್ಚಳದಿಂದ ಸಂತೋಷ ಗೊಳ್ಳುತ್ತಾನೆ. ತನ್ನ ಸಾಮ್ರಾಜ್ಯದಲ್ಲಿ ಶಾಶ್ವತವಾಗಿ ಉಳಿಯುವಂಥ ಅದ್ಭುತವಾದ ಹಾಗೂ ವಿಶೇಷವಾದ ಕಲಾತ್ಮಕ ದೇವಾಲಯ ಹಾಗೂ ಕಟ್ಟಡ ಕಟ್ಟಬೇಕೆಂದು ನಿಶ್ಚಯಿಸುತ್ತಾನೆ. ಎಲ್ಲರನ್ನೂ ಕರೆದು ಸಭೆ ಸೇರಿಸಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ. ಇದಕ್ಕೆ ಎಲ್ಲರೂ ಒಪ್ಪುತ್ತಾರೆ. ಅವಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಾರೆ. ಇದೇ ರೀತಿ ತೆನಾಲಿರಾಮನೂ

ಸಹ ತಾನೊಂದು ವಿಶೇಷ ಕಟ್ಟಡ ಕಟ್ಟಲು ಒಪ್ಪಿಕೊಳ್ಳುತ್ತಾನೆ. ಅರಸನು ಎಲ್ಲರಿಗೂ ಕೆಲವು ದಿನಗಳ ಸಮಯವನ್ನು ನೀಡಿ, ಉತ್ತಮ ಕಟ್ಟಡಗಳಿಗೆ ಬಹುಮಾನವನ್ನು ಕೂಡ ಘೋಷಿಸುತ್ತಾನೆ. ತೆನಾಲಿರಾಮನು ಕಟ್ಟಡಕ್ಕಾಗಿ ನೀಡಿದ ಎಲ್ಲಾ ಹಣವನ್ನು ಹಾಗೆಯೇ ಇಟ್ಟುಕೊಂಡು ತನ್ನ ಬರವಣಿಗೆಯ ಕೆಲಸದಲ್ಲಿ ಮಗ್ನನಾಗುತ್ತಾನೆ.

ಒಮ್ಮೆ ರಾಜನು ಸಭೆ ಕರೆದು, ಈಗ ನಾನು ನಿಮಗೆ ಕೊಟ್ಟ ಸಮಯ ಮುಗಿಯಿತು. ನೀವುಗಳು ಏನೇನು ವಿಶೇಷವಾದ, ಕಲಾತ್ಮಕ ಗುಡಿ-ಗುಂಡಾರಗಳನ್ನು ನಿರ್ಮಿಸಿದ್ದೀರಿ? ಅವುಗಳನ್ನು ನೋಡಲು ನಾಳೆ ಬರುತ್ತೇನೆ ಎಂದು ಹೇಳುತ್ತಾನೆ. ಇದನ್ನು ಕೇಳಿಸಿಕೊಂಡ ತೆನಾಲಿರಾಮನು ಈಗಿನ ಮಾತಂಗ ಪರ್ವತದ, ಆನೆಲಾಯದ(ಹಿಂದುಗಡೆ) ನಡುವೆ ಕಂಡುಬರುವ ಎತ್ತರವಾದ ಕಲ್ಲುಗುಡ್ಡದಲ್ಲಿ ನಿಂತಿರುವ, ಒಂಟಿ ಗುಡ್ಡದ ತುದಿಯಲ್ಲಿ ನಾಲ್ಕು ಕಂಬಗಳ ಮಂಟಪವನ್ನು ಕೆಲವೇ ಗಂಟೆಗಳಲ್ಲಿ ಕಟ್ಟಿಸಿಬಿಡುತ್ತಾನೆ. ರಾಜನು ಹೊಸದಾಗಿ ಕಟ್ಟಿದ ಗುಡಿ-ಗುಂಡಾರಗಳಿಗೆ ಭೇಟಿ ನೀಡಲು ಬಂದಾಗ ಎಲ್ಲರೂ ತಮಗೆ ಇಷ್ಟವಾದ ದೇವರಮೂರ್ತಿ ಮತ್ತು ಮಂಟಪಗಳನ್ನು ನಿರ್ಮಿಸಿದ್ದರು. ಆದರೆ ಕಡಿಮೆ ಖರ್ಚಿನಲ್ಲಿ ಗುಡ್ಡದ ಮೇಲಿನ ಬಂಡೆಯ ಮೇಲೆ, ಸಾಹಸದಿಂದ ಕಲ್ಲು, ಕಂಬಗಳನ್ನು ಸಾಗಿಸಿ ಕಟ್ಟಿಸಿದ್ದ ಮಂಟಪವನ್ನು ನೋಡಿ ದೊರೆ ಆಶ್ಚರ್ಯಚಕಿತನಾಗಿ, ತೆನಾಲಿರಾಮನ ಸಾಹಸವನ್ನು ಮೆಚ್ಚಿ, ಅವನಿಗೆ ಮೊದಲ ಬಹುಮಾನವನ್ನು ನೀಡಿದ.[೨೯] ಈ ತೆನಾಲಿರಾಮನ ಮಂಟಪವು ಈಗಲೂ ಸುಸ್ಥಿತಿಯಲ್ಲಿರುವುದನ್ನು ನಾವು ಕಾಣಬಹುದಾಗಿದೆ.

ಇನ್ನೂ ಕೆಲವರ ಪ್ರಕಾರ ಇದನ್ನು 'ಪಹರೆ ಕಾಯುವವರ ಮಂಟಪ' ಎಂದು ಕರೆಯುತ್ತಾರೆ. ವಿಜಯನಗರ ಸಾಮ್ರಾಜ್ಯಕ್ಕೆ ಶತ್ರುಗಳ ಭೀತಿ ಇದ್ದುದ್ದರಿಂದ, ಶತ್ರು ಸೈನ್ಯವು ಗುಪ್ತವಾಗಿ ರಾಜ್ಯದ ಒಳಗಡೆ ನುಗ್ಗಬಹುದೆಂಬ ಭೀತಿಯಿಂದ, ಅಂದಿನ ಅರಸರು ರಾಜ್ಯದ ಸುರಕ್ಷತೆಗಾಗಿ ಎತ್ತರವಾದ ಕಲ್ಲುಗುಡ್ಡಗಳಲ್ಲಿ ಇಂತಹ ಮಂಟಪಗಳನ್ನು ನಿರ್ಮಿಸುತ್ತಿದ್ದರು. ಪಹರೆ ಕಾಯುವ ಸೈನಿಕರು ಹಗಲು, ರಾತ್ರಿ ಎನ್ನದೇ ಈ ಮಂಟಪಗಳಲ್ಲಿ ಸದಾ ಎಚ್ಚರಿಕೆಯಿಂದ ಇರುತ್ತಿದ್ದರೆಂದು ನಿರೂಪಕರು ಮಾಹಿತಿಯನ್ನು ನೀಡುತ್ತಾರೆ.[೩೦]

**೬. ಕಂಪಣ್ಣ**

ಹಿಂದೆ ಕಂಪಣ್ಣ ಎಂಬ ರಾಜನಿದ್ದನು. ಅವನ ರಾಜ್ಯದಲ್ಲಿ ಜಾತಿ ಇಲ್ಲದ ಜಾತಿಯವನೊಬ್ಬನಿದ್ದ. ಅವನ ಹೆಸರು ವಕ್ಕಲು ಮುದ್ದೇಗೌಡ. ಮುದ್ದೇಗೌಡನ ಹೆಂಡತಿ ಗೌರಮ್ಮ. ಈ ದಂಪತಿಗಳಿಗೆ ಏಳು ಜನ ಮಕ್ಕಳು. ಇವರಲ್ಲಿ ಸತವಂತಿ ಎನ್ನುವವಳು ಕೊನೆಯವಳು. ಸತವಂತಿಯನ್ನು ಕಂಪಣ್ಣ ರಾಜನ ಮಗನು ಮೋಹಿಸಿದನು. ಇದರಿಂದ ಕೋಪಗೊಂಡ ಕಂಪಣ್ಣ ರಾಜನು ಮಗನ ತಲೆಯನ್ನು ಕತ್ತರಿಸಿದನು. ಜಾತಿ ಇಲ್ಲದ ಜಾತಿಯವರಾದ ವಕ್ಕಲು ಮುದ್ದೇಗೌಡ ಮತ್ತು ಅವನ ಕುಟುಂಬವನ್ನು ಕಾವೇರಿ ದೇಶಕ್ಕೆ ಓಡಿಸಿದನು. ಈ ಸಮಯದಲ್ಲಿ ಹಂಪಿ ಹೊಳೆ ಉಕ್ಕಿ ಹರಿದು ಸತವಂತಿಗೆ ದಾರಿ ಬಿಡುತ್ತದೆ.

ಆದರೆ ಕಂಪಣ್ಣ ರಾಜನನ್ನು ತಡೆಯುತ್ತದೆ[೩೧] ಎಂಬ ಐತಿಹ್ಯವಿದೆ. ಇಲ್ಲಿ ಹಂಪಿ ಹೊಳೆಯು ರಕ್ಷಕ ದೈವವಾಗಿ ಕಾಣಿಸಿಕೊಂಡಿದೆ.

**೭. ಚಂಡಿಕೇಶ್ವರ**

ಹಂಪಿಯ ವಿರೂಪಾಕ್ಷ ಲಿಂಗದ ಉತ್ತರಕ್ಕೆ ಚಂಡಿಕೇಶ್ವರ ದೇವಸ್ಥಾನವಿದೆ. ಈ ದೇವರ ಬಗ್ಗೆ ಇರುವ ಐತಿಹ್ಯವೇನೆಂದರೆ, ಈ ಚಂಡಿಕೇಶ್ವರನು ಸದಾ ಶಿವಧ್ಯಾನಾಸಕ್ತನಾಗಿರುತ್ತಾನೆ. ಈ ದೇವರಿಗೆ ಕಿವಿ ಕೇಳಿಸುವುದಿಲ್ಲವೆಂದು, ಚಪ್ಪಾಳೆ ತಟ್ಟಿ ಎಚ್ಚರಿಸಿ ದರ್ಶನ ಪಡೆಯುತ್ತಾರೆಂಬುದು ಒಂದೆಡೆಯಾದರೆ, ಶಿವಧ್ಯಾನಾಸಕ್ತನಾದ ಚಂಡಿಕೇಶ್ವರನು ಶಿವಧ್ಯಾನದಿಂದ ಹೊರಬರಲು ಚಪ್ಪಾಳೆ ತಟ್ಟಲಾಗುತ್ತದೆಂಬ ಇನ್ನೊಂದು ಐತಿಹ್ಯವಿದೆ.

ಇದೊಂದು ವಿರೂಪಾಕ್ಷನ ದರ್ಶನ ಪಡೆದ ಭಕ್ತಾಧಿಗಳ 'ಹಾಜರಿ ಪುಸ್ತಕ' ಎಂತಲೂ ವಾಡಿಕೆಯಲ್ಲಿ ಕರೆಯುತ್ತಾರೆ. ಶ್ರೀ ವಿರೂಪಾಕ್ಷೇಶ್ವರನ ದರ್ಶನ ಮಾಡಿದಷ್ಟು ಪುಣ್ಯ ಚಂಡಿಕೇಶ್ವರನ ದರ್ಶನದಿಂದ ಲಭಿಸುತ್ತದೆ ಎಂಬ ಮಾತಿದೆ.[೩೨]

**೮. ಹರಿಹರ, ರಾಘವಾಂಕರ ಬಗ್ಗೆ**

ರಾಘವಾಂಕನು ಹರಿಹರನ ಸೋದರ ಅಳಿಯ ಮತ್ತು ಶಿಷ್ಯನೂ ಹೌದು. ಇವರ ಬಗ್ಗೆ ಐತಿಹ್ಯವೊಂದು ಹೀಗಿದೆ. ರಾಘವಾಂಕ 'ಹರಿಶ್ಚಂದ್ರ ಕಾವ್ಯ'ವನ್ನು ಬರೆದು ಹರಿಹರನಿಗೆ ತೋರಿಸಲು, ಹರಿಹರನು ಈ ಕಾವ್ಯವು ಭೂ ರಮಣನ ಕಥೆಯೆಂದು ಒಪ್ಪಿಕೊಳ್ಳದೇ ತಿರಸ್ಕರಿಸಿದನು. ತಿರಸ್ಕರಿಸಿದ್ದರ ಬಗ್ಗೆ ಶಿಷ್ಯ ರಾಘವಾಂಕ ಕಾರಣ ಕೇಳಲು ಹರಿಶ್ಚಂದ್ರನಿಗೆ ದೇವರು ಕರುಣಿಸಿದಾಗ ಕೈವಲ್ಯವನ್ನು ಪಡೆಯದೇ ತಿರುಗಿ ಸಾಮ್ರಾಜ್ಯವನ್ನು ಪಡೆದನಲ್ಲ, ಆದ್ದರಿಂದ ಆತ ಭಕ್ತನಲ್ಲ ಎನ್ನುವನು. ಆದರೆ ಶಿಷ್ಯ ಸುಮ್ಮನಿರದೆ, ಆತ ಸತ್ಯಕ್ಕಾಗಿ ತನ್ನ ಸತಿ, ಸುತನಲ್ಲದೇ, ತನ್ನನ್ನೂ ಮಾರಿಕೊಂಡನಲ್ಲ. ಆದ್ದರಿಂದ ಹರಿಶ್ಚಂದ್ರ ದೊಡ್ಡವನು ಎಂದು ಮುಂತಾಗಿ ವಾದಿಸುವನು. ಇದರಿಂದ ಕುಪಿತನಾದ ಹರಿಹರನು ರಾಘವಾಂಕನ ಕಪಾಳಕ್ಕೆ ಹೊಡೆಯಲಾಗಿ, ರಾಘವಾಂಕನ ಹಲ್ಲುಗಳು ಮುರಿದು ಹೋದವು. ಇದರಿಂದ ರಾಘವಾಂಕನು ಧಾರ್ಮಿಕ ಕಾವ್ಯಗಳನ್ನು ಬರೆದು ಗುರು ಕಾರುಣ್ಯಕ್ಕೆ ಒಳಗಾಗಿ ಮತ್ತೆ ಹಲ್ಲುಗಳನ್ನು ಪಡೆದನೆಂಬ ಐತಿಹ್ಯವು, ಹಂಪಿ ಪರಿಸರದಲ್ಲಿ ಪ್ರಚಲಿತವಾದ ಐತಿಹ್ಯವಾಗಿದೆ.[೩೩]

**೯. ಪುರಂದರದಾಸರ ಮಂಟಪ**

ಪುರಂದರದಾಸರ ಮಂಟಪವು ವಿಜಯವಿಠ್ಠಲ ದೇವಸ್ಥಾನದ ಹಿಂದೆ, ತುಂಗಭದ್ರಾ ನದಿ ತೀರದಲ್ಲಿ ಕಂಡುಬರುತ್ತದೆ. ಈ ಮಂಟಪವು ಸಣ್ಣ ಗೋಪುರವನ್ನು ಹೊಂದಿದ್ದು, ಇದು ಪುರಂದರದಾಸರ ವಾಸಸ್ಥಾನವಾಗಿತ್ತೆಂದು ತಿಳಿದುಬರುತ್ತದೆ. ಪುರಂದರದಾಸರು ಮತ್ತು ಅವರ ಪತ್ನಿ ರುಕ್ಮಿಣಿಬಾಯಿ ಜೊತೆಗೂಡಿ ಇಲ್ಲೇ ವಾಸಿಸುತ್ತಿದ್ದರಂತೆ. ವಿಠ್ಠಲನ ಭಕ್ತರಾಗಿದ್ದ ದಾಸರು ವಿಠ್ಠಲನ ಸನ್ನಿಧಾನದಲ್ಲೇ ಕೀರ್ತನೆಗಳನ್ನು ರಚಿಸಿ ಹಾಡುತ್ತಿದ್ದರಂತೆ.[೩೪] ಇದಕ್ಕೆ ಸಾಕ್ಷಿ ಎಂಬಂತೆ

ಈ ಮಂಟಪದಲ್ಲಿ ದಾಸರು ತಮ್ಮ ಕೈಯಲ್ಲಿ ತಾಳ, ತಂಬೂರಿ, ಹೆಗಲಿಗೆ ಜೋಳಿಗೆಯನ್ನು ಹಾಕಿಕೊಂಡಿರುವ ಶಿಲ್ಪದ ಮೂಲಕ ತಿಳಿದುಬರುತ್ತದೆ. ನದಿಗೆ ಹೆಚ್ಚಿನ ಪ್ರಮಾಣದ ನೀರು ಬಂದಾಗ ಈ ಮಂಟಪವು ಸಂಪೂರ್ಣವಾಗಿ ಮುಳುಗಡೆಯಾಗುವುದನ್ನು ನಾವು ಈಗಲೂ ಕಾಣಬಹುದಾಗಿದೆ.

### ೧೦. ಮುದ್ದ ದಣ್ಣಾಯಕ

ಕೂಡ್ಲಿಗಿ ತಾಲೂಕು ಜರಿಮಲೆಯಲ್ಲಿ ಭೀಕರ ಬರಗಾಲ ಕಾಣಿಸಿಕೊಳ್ಳಲು ಅಲ್ಲಿನ ಬಾರಿಕರ ಹೆಣ್ಣುಮಗಳಾದ ಗಂಗಮ್ಮಳು ತನ್ನ ಎಳೆಯ ಮಗುವಾದ ಮುದ್ದನೊಂದಿಗೆ 'ಬಿದಿರಹಳ್ಳಿ'ಗೆ ಬಂದಳು. ಆಗ ಈ ಊರಲ್ಲಿ ಜಕ್ಕಪ್ಪಾಚಾರ್ಯ ಮತ್ತು ಜಯಲಕ್ಷ್ಮಮ್ಮ ಎಂಬ ಬ್ರಾಹ್ಮಣ ದಂಪತಿಗಳಿದ್ದರು. ಅವರ ಬಳಿಯಲ್ಲಿದ್ದು ಗಂಗಮ್ಮ ಮುದ್ದನನ್ನು ಬೆಳೆಸಿದಳು. ದನಕಾಯಲು ಹೋದ ಮುದ್ದನಿಗೆ ಸರ್ಪವೊಂದು ನಿಧಿಗಳಿರುವ(ಕೊಪ್ಪರಿಗೆ ನಿಧಿ) ಏಳು ತಾಣಗಳನ್ನು ಕನಸಿನಲ್ಲಿ ತೋರಿಸಿಕೊಟ್ಟಿತು. ಅದನ್ನು ದೊರಕಿಸಿಕೊಂಡ ಮುದ್ದನು ಏಳುಕೆರೆಗಳನ್ನು, ಏಳು ದಿಡುಗುಗಳನ್ನು ಕಟ್ಟಿಸಿದನು. ಈ ರೀತಿ ಪ್ರವರ್ಧಮಾನಕ್ಕೆ ಬಂದ ಮುದ್ದನು ಮುಂದೆ ವಿಜಯನಗರದ ಅರಸನ ಗಮನಕ್ಕೆ ಬಂದು ಈ ಪ್ರದೇಶದ ದಂಡನಾಯಕನಾಗುತ್ತಾನೆ. ಅವನಿಂದಾಗಿ ಈ ಊರು ಅಭಿವೃದ್ಧಿ ಹೊಂದುತ್ತದೆ. ಆತನ ಕೀರ್ತಿ ಹೆಚ್ಚಾದಂತೆ ಜನ ಈ ಊರನ್ನು ಬಿದಿರಹಳ್ಳಿ ಬದಲಿಗೆ 'ದಂಡನಾಯಕನಕೆರೆ' ಎಂದು ಕರೆಯತೊಡಗಿದರು.[೩೪]

### ೧೧. ಕನ್ಯೆ ವೀರಾಂಬ

ದಂಡನಾಯಕನ ಕೆರೆಯಲ್ಲಿರುವ 'ಕನ್ಯೆ ವೀರಾಂಬ'ಳ ಬಗೆಗೆ ಐತಿಹ್ಯವೊಂದಿದೆ. ಮುದ್ದ ದಂಡನಾಯಕ ಮತ್ತು ಅವನ ತಾಯಿಗೆ ಆಶ್ರಯ ನೀಡಿದ್ದ ಜಕ್ಕಪ್ಪಾಚಾರ್ಯ ಮತ್ತು ಜಯಲಕ್ಷ್ಮಮ್ಮ ಎಂಬ ಬ್ರಾಹ್ಮಣ ದಂಪತಿಗಳ ಪುತ್ರಿಯೇ 'ವೀರಾಂಬ'.

ಮುದ್ದ ದಂಡನಾಯಕನು ಬಿದಿರಹಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿ ಅದಕ್ಕೆ ಏಳು ಮದಗಗಳನ್ನು(ತೂಬು) ನಿರ್ಮಿಸಿದನು. ಅವುಗಳಿಗೆ ಒಬ್ಬೊಬ್ಬರನ್ನೇ ಬಲಿ ಕೊಡುತ್ತಾ ಬಂದ. ಆರು ಮದಗ(ತೂಬು)ಗಳಿಗೆ ಬಲಿಕೊಟ್ಟು, ಏಳನೆಯದರ ಬಳಿ ಬಂದಾಗ ಅದು ಜಕ್ಕಪ್ಪಾಚಾರ್ಯರ ಮಗಳು ವೀರಾಂಬಳನ್ನು ಬಲಿ ಕೊಡುವಂತೆ ಕೇಳುತ್ತದೆ. ಅವರದೇ ಮನೆಯಲ್ಲಿ ಉಪ್ಪುಂಡು ಬೆಳೆದ ಮುದ್ದನು ಇದರಿಂದ ದಂಗಾಗುತ್ತಾನೆ. ಈ ವಿಷಯವನ್ನು ತಿಳಿದ ವೀರಾಂಬಳು ತಾನೇ ಸ್ವತಃ ಬಲಿಯಾಗಲು ಮುಂದೆ ಬರುತ್ತಾಳೆ. ಅದರಂತೆ ವೀರಾಂಬಳನ್ನು ಏಳನೆಯ ತೂಬಿನಲ್ಲಿ ಜೀವಂತ ಸಮಾಧಿಗೊಳಿಸಲಾಯಿತು. ಆಕೆಯನ್ನೇ ಈಗ 'ಕನ್ಯೆ ವೀರಾಂಬ' ದೇವತೆಯಾಗಿ ಪೂಜಿಸಲಾಗುತ್ತದೆ.[೩೫]

### ೧೨. ಗಾದಿರಿರಾಮ

ಗಾದಿರಿರಾಮ ಎಂಬುವವನು ಚಿತ್ರದುರ್ಗದ ಮದಕರಿನಾಯಕನ ಸೇನಾಪತಿಯಾಗಿ ಸೇವೆ ಸಲ್ಲಿಸುತ್ತಿದ್ದನು. ಇವನು ಬಹಳ ವೀರಾವೇಶದಿಂದ ಹೋರಾಡುತ್ತಿದ್ದ ಸೈನಿಕನಾಗಿದ್ದ. ಇವನನ್ನು

ಮದಕರಿನಾಯಕನ ಹೆಂಡತಿ ತನ್ನ ಸ್ವಂತ ಮಗನಂತೆ ಕಾಣುತ್ತಿದ್ದಳು. ಇದನ್ನು ಕಂಡ ಉಳಿದವರು ಮತ್ಸರದಿಂದ ಮದಕರಿನಾಯಕನಲ್ಲಿ, ಗಾದಿರಿರಾಮನು ನಿಮ್ಮ ಪತ್ನಿಯಲ್ಲಿ ಅನುರಕ್ತನಾಗಿದ್ದಾನೆ ಎಂದು ಇಲ್ಲಸಲ್ಲದ ಅಪವಾದಗಳನ್ನು ಹೊರಿಸಿದರು. ಇದು ನಿಜವೆಂದೇ ನಂಬಿದ ಮದಕರಿನಾಯಕನು ಯಾವ ಯೋಚನೆಯನ್ನು ಮಾಡದೇ, ಕೂಡಲೇ ಗಾದಿರಿರಾಮನಿಗೆ ಮರಣದಂಡನೆಯನ್ನು ವಿಧಿಸಿದನು. ಈ ವಿಷಯವನ್ನು ತಿಳಿದ ಮದಕರಿ ನಾಯಕನ ಪತ್ನಿ ಗಾದಿರಿರಾಮನನ್ನು ಕರೆಯಿಸಿ ಈ ದಿನವೇ ನೀನು ಚಿತ್ರದುರ್ಗವನ್ನು ಬಿಟ್ಟು ಹೋಗೆಂದು ಹೇಳಿದಳು. ಗಾದಿರಿರಾಮನು ಏಕೆ ಎಂದು ಪ್ರಶ್ನಿಸಲಾಗಿ, ಇದು ನಿನ್ನ ತಾಯಿಯ ಆಜ್ಞೆ ಪ್ರಶ್ನಿಸಬೇಡ ಎಂದಳು. ಇದರಿಂದ ಗಾದಿರಿರಾಮನು ಪ್ರಶ್ನಿಸದೇ ಇದ್ದಕ್ಕಿದ್ದ ಹಾಗೇ ಹೋಗು ಎಂದರೇ ನಾನು ಎಲ್ಲಿ ಹೋಗಲಿ ಅಮ್ಮ ಎಂದಾಗ, ನೀನು ಕೊಟ್ಟೂರಿಗೆ ಹೋಗಿ ತಲೆಮರೆಸಿಕೊ ಎಂದಳು. ಅದರಂತೆ ಗಾದಿರಿರಾಮನು ಒಂದು ಮೇಣೆಯಲ್ಲಿ ಅವಿತುಕೊಂಡು ಕೊಟ್ಟೂರಿಗೆ ಬಂದನು. ಆಗ ಕೊಟ್ಟೂರೇಶ್ವರ, ಇಲ್ಲಿಯೂ ನೀನು ಇರಬೇಡ, ದುರ್ಗದ ಸೈನಿಕರು ನಿನ್ನನ್ನು ಹುಡುಕಿಕೊಂಡು ಇಲ್ಲಿಗೂ ಬರಬಹುದು. ಮುಂದೆ ಒಬ್ಬ ಪವಾಡ ಪುರುಷರಿರುವ ಸ್ಥಳದಲ್ಲಿ ನಿನಗೆ ಮೋಕ್ಷ ಪ್ರಾಪ್ತಿಯಾಗುತ್ತದೆ. ಆದ್ದರಿಂದ ನೀನು ಅಲ್ಲಿಗೆ ಹೋಗು ಎಂದಾಗ ಮತ್ತೆ ಗಾದಿರಿರಾಮನು ಈಗಿನ ಮರಿಯಮ್ಮನಹಳ್ಳಿ ಹೋಬಳಿಯ ನಾಗಲಾಪುರ ಗ್ರಾಮಕ್ಕೆ ಬಂದನು.

ನಾಗಲಾಪುರ ಗ್ರಾಮವು ಹರಪನಹಳ್ಳಿ ಪಾಳೆಯಗಾರನಾದ ಸೋಮಶೇಖರ ನಾಯಕನ ಕಂದಾಯ ಗ್ರಾಮವಾಗಿತ್ತು. ನಾಗಲಾಪುರ ಗ್ರಾಮದವರು ಕಂದಾಯ ನೀಡಲಿಲ್ಲ ಎಂಬ ಕಾರಣಕ್ಕೆ ಸೋಮಶೇಖರ ನಾಯಕನ ಸೈನಿಕರು ಹಿಂಸಿಸುತ್ತಿದ್ದರು. ಇದನ್ನು ತಿಳಿದ ಗಾದಿರಿರಾಮನು ವೀರಾವೇಶದಿಂದ ಹೋರಾಡಿ ಸೋಮಶೇಖರ ನಾಯಕನ ಹಣದ ಪೆಟ್ಟಿಗೆಯನ್ನೇ ಹೊತ್ತು ತಂದು ಒಪ್ಪತ್ತೇಶ್ವರರ ಮುಂದೆ ಇರಿಸಿದನಂತೆ. ಒಪ್ಪತ್ತೇಶ್ವರರು ಆ ರೀತಿ ಮಾಡುವುದು ಒಳ್ಳೆಯದಲ್ಲ. ಅದನ್ನು ಎಲ್ಲಿ ತಂದಿದ್ದೆಯೋ ಅಲ್ಲಿಯೇ ಮರಳಿಸಿ ಬಿಡು ಎಂದು ಹೇಳುತ್ತಿರುವಾಗ ಸೋಮಶೇಖರ ನಾಯಕನ ಸೈನಿಕರು ಬಂದು ಗಾದಿರಿರಾಮನನ್ನು ಸೆರೆಹಿಡಿದು, ಎಳೆದೊಯ್ಯುವಾಗ ಊರಿನ ಉತ್ತರ ಭಾಗದಲ್ಲಿ ಭೀಕರ ಹೋರಾಟವೇ ಏರ್ಪಟ್ಟಿತು. ವೀರಾವೇಶದಿಂದ ಗಾದಿರಿರಾಮ ಹೋರಾಡುತ್ತಿರುವಾಗ ಶತ್ರು ಸೈನಿಕರು ಹಿಂದಿನಿಂದ ಬಂದು ಕೊಂದರು. ಹೋರಾಡಿ ಮಡಿದ ಗಾದಿರಿರಾಮನಿಗೆ ಒಪ್ಪತ್ತೇಶ್ವರರು ಮೋಕ್ಷವನ್ನು ನೀಡಿದರಂತೆ. ಗಾದಿರಿರಾಮನು ಹೋರಾಡಿ ಮಡಿದ ಆ ಸ್ಥಳವನ್ನು 'ರಾಮಪ್ಪನ ಓಣಿ' ಎಂದು ಕರೆಯುತ್ತಾರೆ.[೩೨] ಶತ್ರುಗಳ ಜೊತೆ ಹೋರಾಡಿ ಮಡಿದ ಸ್ಮರಣಾರ್ಥವಾಗಿ ಅದೇ ಸ್ಥಳದಲ್ಲಿ ಕಲ್ಲೊಂದನ್ನು ನೆಡಲಾಯಿತಂತೆ. ಅದನ್ನು 'ರಾಮಣ್ಣನ ಕಲ್ಲು' ಎಂಬುದಾಗಿ ಇಂದು ಕರೆಯುತ್ತಾರೆ(ವೀರಗಲ್ಲು-ಕುದುರೆ ಮೇಲೆ ಕುಳಿತ ವೀರನಶಿಲ್ಪ). ಇಪ್ಪತ್ತು ವರ್ಷಗಳ ಹಿಂದೆ ಹಳೆಯ ಶಿಲ್ಪದ ಬದಲಿಗೆ ಹೊಸ ಶಿಲ್ಪವೊಂದನ್ನು ನಿರ್ಮಿಸಿ ನಿಲ್ಲಿಸಲಾಗಿದೆ.

### ೧೩. ಕಾಟಪ್ಪನ ಕಲ್ಲು

ಕಾಟಪ್ಪ ಎಂಬುವವನು ಕುಮಾರರಾಮನ ಸೇನಾನಾಯಕನಾಗಿದ್ದನು. ಕಮಲಾಪುರ ಹೋಬಳಿಯ ಕಾಕುಬಾಳು ಗ್ರಾಮದ ದಕ್ಷಿಣ ಗುಡ್ಡದಲ್ಲಿ ಆಯುಧ ಮತ್ತು ಟಂಕಸಾಲೆಯನ್ನು

ಹೊಂದಿದ್ದನೆಂಬ ಐತಿಹ್ಯವಿದೆ. ಈಗ ಆ ಪ್ರದೇಶವನ್ನು 'ಕಾಟಪ್ಪನ ಕಲ್ಲು' ಎಂದು ಕರೆಯಲಾಗುತ್ತದೆ. ಈಗಲೂ ಬೂದಿ ಮತ್ತು ಕಬ್ಬಿಣದ ತುಣುಕುಗಳು ಅಲ್ಲಿ ಕಂಡುಬರುತ್ತವೆ.[೩೮]

### ೧೪. ಪಾಪಿನಾಯಕ

ಹಿಂದೆ ವಿಜಯನಗರ ಅರಸರ ಆಡಳಿತದ ಕಾಲದಲ್ಲಿ ಪಾಪಯ್ಯ ಎಂಬ ಪಾಳೆಯಗಾರನಿದ್ದನು. ಇವನು ಯುದ್ಧ ಸಂದರ್ಭದಲ್ಲಿ ಸೈನಿಕರ ಜಮಾವಣೆ ಹಾಗೂ ಕಂದಾಯ ವಸೂಲಿಯಂತಹ ಕೆಲಸಗಳನ್ನು ಕೂಡ ನಿರ್ವಹಿಸುತ್ತಿದ್ದನು. ಇವನ ದಕ್ಷತೆಯನ್ನು ಮೆಚ್ಚಿ ಅಂದಿನ ಅರಸರು ಒಂದು ಗ್ರಾಮವನ್ನು ಉಂಬಳಿಯಾಗಿ ನೀಡಿದರು. ಆತನಿಂದಾಗಿಯೇ ಉಂಬಳಿಯಾಗಿ ಬಂದ ಗ್ರಾಮವನ್ನು 'ಪಾಪಿನಾಯಕನಹಳ್ಳಿ' ಎಂಬ ಹೆಸರಿನಿಂದ ಕರೆಯಲಾಯಿತೆಂಬ ಐತಿಹ್ಯವಿದೆ.[೩೯]

### ೧೫. ಕೊಡಪಾಲನಾಯಕ

ಕೊಡಪಾಲನಾಯಕ ಎಂಬುವನು ರಾಜನು ಎಲ್ಲಿಗೆ ಹೋದರೂ ಆತನಿಗೆ ಕೊಡೆ ಹಿಡಿಯುವ ಕಾಯಕದವನಾಗಿದ್ದ. ಕುದುರೆಯ ಮೇಲೆ ಕುಳಿತು ಐದು ಲಿಂಗಗಳನ್ನು ಸುತ್ತುವವರೆಗೆ ಕುದುರೆಯ ವೇಗದಲ್ಲಿ ಸುತ್ತಾಡಿ ಕೊಡೆ ಹಿಡಿದನು. ಲಿಂಗದರ್ಶನ ಮಾಡಿ ಊರಿಗೆ ಬಂದ ರಾಜನಿಗೆ ತೊಂದರೆಯಾದಾಗ, ತಲೆಯಿಂದ ರಕ್ತ ತೆಗೆದು ನೀರು ಕುಡಿಸಿದರಂತೆ. ಆದರೆ, ನೀರಡಿಸಿ ಆಂಜನೇಯ ಗುಡಿಗೆ ಹೋದ ಕೊಡಪಾಲನಾಯಕನಿಗೆ ಗುಡಿಯ ಬಾಗಿಲು ಬಡಿದು ತಲೆಯಲ್ಲಿ ರಕ್ತ ಬಂದಿತೆಂದು ಸುಣ್ಣದ ನೀರು ಕುಡಿಯುವುದರಿಂದ ಸುಧಾರಿಸಿಕೊಂಡನೆಂಬ ಐತಿಹ್ಯವಿದೆ.[೪೦]

### ೧೬. ಮಲ್ಲಪ್ಪನಾಯಕ

ವಿಜಯನಗರ ಕಾಲದಲ್ಲಿ ಕ್ರೀಡೆಗಳಿಗೆ ಸಾರ್ವತ್ರಿಕ ಪ್ರಾಮುಖ್ಯತೆಯಿತ್ತು. ಆಗಿನ ಜನರ ಶಕ್ತಿ, ಸಾಹಸ ಪ್ರದರ್ಶನಕ್ಕೆ ದ್ವಂದ್ವ ಯುದ್ಧ, ಜಟ್ಟಿಕಾಳಗ, ಮಲ್ಲಯುದ್ಧ, ಕತ್ತಿಯುದ್ಧ ಮೊದಲಾದವುಗಳು ಕ್ರೀಡೆಯ ಮುಖ್ಯ ಸಾಧನಗಳಾಗಿದ್ದವು. ರಾಜರೇ ಪ್ರದರ್ಶನಗಳಲ್ಲಿ ಭಾಗಿಗಳಾಗಿ ಮಾರ್ಗದರ್ಶಕರಾಗುತ್ತಿದ್ದರು.

ಮಲ್ಲಪ್ಪ ನಾಯಕ ಎಂಬ ಜಟ್ಟಿಯು ತನ್ನ ದೈಹಿಕ ಶಕ್ತಿ ಮತ್ತು ಯುಕ್ತಿಗಳಿಂದ ಪ್ರಸಿದ್ಧನಾಗಿದ್ದನು. ಒಮ್ಮೆ ಕುಸ್ತಿಯಲ್ಲಿ ಬಲಾಢ್ಯ ಜಟ್ಟಿಯನ್ನು ಸೋಲಿಸಿ, ವಿಜಯನಗರದ ಅರಸ ಪ್ರೌಢದೇವರಾಯನಿಂದ ಪ್ರಶಂಸೆಗೆ ಒಳಗಾಗಿ ಒಂದು ಗ್ರಾಮವನ್ನು ಬಹುಮಾನವಾಗಿ ಪಡೆದುಕೊಂಡನು. ಮಲ್ಲಪ್ಪನಾಯಕನು ಬಹುಮಾನವಾಗಿ ದೊರೆತ ಗ್ರಾಮದಲ್ಲಿ ತಮ್ಮ ಮನೆದೇವರಾದ ಮಲ್ಲಿಕಾರ್ಜುನ ದೇವಾಲಯವನ್ನು ನಿರ್ಮಿಸಿದನು. ಹಾಗಾಗಿ ಈ ಊರಿಗೆ ಮಲ್ಲಪ್ಪನಗುಡಿ, ಮಲಪನಗುಡಿ ಎಂಬ ಹೆಸರು ಬಂತೆಂಬ ಐತಿಹ್ಯವಿದೆ.[೪೧]

### ೧೭. ಕಟಿಗೆಯ ಅಹಮದ್‌ಖಾನ್

ಕಟಿಗೆಯ ಅಹಮದ್‌ಖಾನ್ ವಿಜಯನಗರದ ಅರಸ ೨ನೇ ದೇವರಾಯನ ಕಾಲದಲ್ಲಿ ಉನ್ನತ ಹುದ್ದೆಯಲ್ಲಿದ್ದನು. ಅಹಮದ್‌ಖಾನನು ತನ್ನ ಅರಸ ದೇವರಾಯನಿಗೆ ಧರ್ಮವಾಗಬೇಕೆಂದು

ಕ್ರಿ.ಶ. ೧೪೪೯ರಲ್ಲಿ ಒಂದು ಧರ್ಮಶಾಲೆಯನ್ನು ನಿರ್ಮಿಸಿದನು. ರಾಜಧಾನಿಗೆ ಬರುವವರ ಉಪಯೋಗಕ್ಕಾಗಿ ಬಾವಿಯನ್ನು ತೋಡಿಸಿದ್ದನು ಎಂಬುದಾಗಿ ತಿಳಿದುಬರುತ್ತದೆ.[೪೨] ಈ ಧರ್ಮಶಾಲೆಯು ಈಗಿನ ತಳವಾರಘಟ್ಟಕ್ಕೆ ಹೋಗುವ ಮಾರ್ಗದ ಉತ್ತರ ದಿಕ್ಕಿನಲ್ಲಿ ಕಂಡುಬರುತ್ತದೆ. ಅಲ್ಲಿ ಅನೇಕ ಗೋರಿಗಳು ಮತ್ತು ಎರಡು ಮಸೀದಿಗಳು ಕಂಡು ಬರುವುದರಿಂದ ಈ ಪ್ರದೇಶವು ವಿಜಯನಗರ ಕಾಲದಲ್ಲಿ ಮುಸ್ಲಿಮರು ವಾಸಿಸುತ್ತಿದ್ದ ಪ್ರದೇಶವಾಗಿತ್ತೆಂದು ತಿಳಿಯುತ್ತದೆ.[೪೩]

## ಉಲ್ಲೇಖ ಹಾಗೂ ಟಿಪ್ಪಣಿಗಳು

೧. ಸಿದ್ಧಮ್ಮ, ೫೮ ವಯಸ್ಸು, ಕೂಲಿ, ಪ್ರಕಾಶನಗರ, ಹಂಪಿ.

೨. ಕೆಂಚಮ್ಮ, ೬೮ ವಯಸ್ಸು, ಕೂಲಿ, ಹಂಪಿ.

೩. ಶಿವಯ್ಯಸ್ವಾಮಿ, ೫೦ ವಯಸ್ಸು, ವ್ಯವಸಾಯ, ಹಂಪಿ.

೪. ಭರಮಪ್ಪ, ೪೮ ವಯಸ್ಸು, ಪೂಜಾರಿ, ಕಮಲಾಪುರ.

೫. ನಾರಾಯಣಪ್ಪ, ೬೨ ವಯಸ್ಸು, ವ್ಯವಸಾಯ, ಕತ್ರಿ

೬. ರಾಮಣ್ಣ, ೭೦ ವಯಸ್ಸು, ವೇಷಗಾರ ವೃತ್ತಿ, ವೆಂಕಟಾಪುರ ಕ್ಯಾಂಪ್.

೭. ರಮೇಶ್‌ಶಾಸ್ತ್ರಿ, ೬೫ ವಯಸ್ಸು, ಅರ್ಚಕರು, ಹೊಸೂರು.

೮. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧(ಬಳ್ಳಾರಿ ಜಿಲ್ಲೆ), ಶಾಸನ ಸಂಖ್ಯೆ-೧೮ ಮತ್ತು ೧೯,** ಪುಟ ೧೫೨–೧೫೩.

೯. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೮೧,** ಪುಟ ೮೦.

೧೦. ಶ್ರೀನಿವಾಸ ಶ್ರೇಷ್ಠಿ, ೬೫ ವಯಸ್ಸು, ವ್ಯಾಪಾರಿ, ಹಂಪಿ.

೧೧. ವಿರೇಶಯ್ಯ ಸ್ವಾಮಿ, ೬೫ ವಯಸ್ಸು, ಪೂಜಾರಿ, ಕಮಲಾಪುರ.

೧೨. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೮೪,** ಪುಟ ೮೪.

೧೩. ಶಿವಯ್ಯ ಸ್ವಾಮಿ, ೫೦ ವಯಸ್ಸು, ವ್ಯವಸಾಯ, ಹಂಪಿ.

೧೪. ಗುಂಡಾಚಾರ್, ೭೦ ವಯಸ್ಸು, ಅರ್ಚಕರು, ಕಮಲಾಪುರ.

೧೫. ಶ್ರೀನಿವಾಸ, ೪೫ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೧೬. ವಿ. ಖಾದರ್‌ವಲಿ, ೬೫ ವಯಸ್ಸು, ವ್ಯವಸಾಯ, ಕಮಲಾಪುರ.

೧೭. ಪಂಪಣ್ಣ, ೬೫ ವಯಸ್ಸು, ವ್ಯವಸಾಯ, ಇಟಗಿ.

೧೮. ಸತ್ಯನಾರಾಯಣರಾವ್, ೬೪ ವಯಸ್ಸು, ಧರ್ಮಕರ್ತರು, ಕಮಲಾಪುರ.

೧೯. ದೇವೇಂದ್ರದಾಸ್, ೫೫ ವಯಸ್ಸು, ಪೂಜಾರಿ, ವೆಂಕಟಾಪುರ.

೨೦. ಕೆಂಚಮ್ಮ, ೬೮ ವಯಸ್ಸು, ಕೂಲಿ, ಹಂಪಿ.

೨೧. ಶ್ರೀ ಮರಿಮಹಾಂತಸ್ವಾಮಿಗಳು, ೭೨ ವಯಸ್ಸು, ೧೩ನೇ ಪೀಠಾಧ್ಯಕ್ಷರು, ಒಪ್ಪತ್ತೇಶ್ವರ ಮಠ, ನಾಗಲಾಪುರ.

೨೨. ನೀಲಮ್ಮ, ೭೬ ವಯಸ್ಸು, ಕೂಲಿ, ಹೊಸಪೇಟೆ.

೨೩. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೨೪. ವೇಣುಗೋಪಾಲ, ೪೩ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೨೫. ನರಸಿಂಹಮೂರ್ತಿ, ೪೦ ವಯಸ್ಸು, ಅರ್ಚಕರು, ಕಮಲಾಪುರ.

೨೬. ಶ್ಯಾಮಸುಂದರ್, ೫೬ ವಯಸ್ಸು, ಬ್ಯಾಂಕ್ ನೌಕರ, ಬೆಂಗಳೂರು.

೨೭. ಶ್ರೀನಿವಾಸ ಶ್ರೇಷ್ಠಿ, ೬೫ ವಯಸ್ಸು, ವ್ಯಾಪಾರಿ, ಹಂಪಿ.

೨೮. ವಿ. ಖಾದರ್‌ವಲಿ, ೬೫ ವಯಸ್ಸು, ವ್ಯವಸಾಯ, ಕಮಲಾಪುರ.

೨೯. ಕೃಷ್ಣಮೂರ್ತಿ, ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೩೦. ಶ್ರೀನಿವಾಸ, ೪೫ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೩೧. ಮಂಜುನಾಥ, ೪೫ ವಯಸ್ಸು, ಕೂಲಿ, ಪ್ರಕಾಶನಗರ, ಹಂಪಿ.

೩೨. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೩೩. ಶ್ರೀನಿವಾಸಮೂರ್ತಿ, ೬೫ ವಯಸ್ಸು, ನಿವೃತ್ತ ಶಿಕ್ಷಕರು, ಹೊಸಪೇಟೆ.

೩೪. ನರಸಿಂಹಮೂರ್ತಿ, ೪೦ ವಯಸ್ಸು, ಅರ್ಚಕರು, ಕಮಲಾಪುರ.

೩೫. ಮಾಸಲವಾಡ ಸೋಮಪ್ಪ, ೭೦ ವಯಸ್ಸು, ವ್ಯವಸಾಯ, ಡಣಾಯಕನಕೆರೆ.

೩೬. ಬಿ.ಎಂ. ತೋಟಪ್ಪಯ್ಯ ಸ್ವಾಮಿ, ೭೮ ವಯಸ್ಸು, ನಾಟಕಕಾರರು, ಡಣಾಯಕನಕೆರೆ.

೩೭. ಜಿ. ಪಾಲಾಕ್ಷಪ್ಪ, ೮೦ ವಯಸ್ಸು, ಜ್ಯೋತಿಷ್ಯಕಾರರು, ನಾಗಲಾಪುರ.

೩೮. ಅಯ್ಯನಗೌಡ, ೭೮ ವಯಸ್ಸು, ರೈತ, ಕಾಕುಬಾಳು.

೩೯. ಪಂಪಾಪತಿ, ೬೫ ವಯಸ್ಸು, ವ್ಯವಸಾಯ, ಪಾಪಿನಾಯಕನಹಳ್ಳಿ.

೪೦. ಹುಲುಗಪ್ಪ, ೬೨ ವಯಸ್ಸು, ಪೂಜಾರಿ, ಕೊಂಡನಾಯಕನಹಳ್ಳಿ.

೪೧. ಕೋರೆಪ್ಪ, ೮೦ ವಯಸ್ಸು, ರೈತ, ಮಲಪನಗುಡಿ.

೪೨. ದೇವರಕೊಂಡಾರೆಡ್ಡಿ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩(ಹಂಪಿ ಶಾಸನಗಳು), ಶಾಸನ ಸಂಖ್ಯೆ-೩೧೧**, ಪುಟ ೨೨೪.

೪೩. ವಿ. ಖಾದರ್‌ವಲಿ, ೬೫ ವಯಸ್ಸು, ವ್ಯವಸಾಯ, ಕಮಲಾಪುರ.



## ಅಧ್ಯಾಯ : ಐದು

# ಘಟನಾಪ್ರಧಾನ ಐತಿಹ್ಯಗಳು

'ಘಟನೆ' (Incident) ಎಂಬುದು ಹೇಗೆ? ಎಲ್ಲಿ? ಏನು? ಘಟಿಸುತ್ತದೆಯೋ ಆ ವಿವರಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವುದು 'ಘಟನಾಕೇಂದ್ರಿತ ಐತಿಹ್ಯ'ವಾಗಿರುತ್ತದೆ. ಈ ಬಗೆಗೆ ಇನ್ನಷ್ಟು ವಿವರ, ವಿಶ್ಲೇಷಣೆಗಳ ಜೊತೆಗೆ ಹೊಸಪೇಟೆಯ ಆ ಬಗೆಯ ಘಟನೆಗಳನ್ನು ಹೀಗೆ ವಿಭಾಗ ಮಾಡಿ ವಿಶ್ಲೇಷಿಸಲಾಗಿದೆ.

ಘಟನಾಪ್ರಧಾನ ಐತಿಹ್ಯಗಳಲ್ಲಿ ಒಂದು ನಿರ್ದಿಷ್ಟ ಘಟನೆಯೇ ಪ್ರಧಾನವಾಗಿದ್ದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಹಲವು ಬಾರಿ ಒಬ್ಬ ವ್ಯಕ್ತಿಯೇ ಇರುವುದರ ಬದಲಾಗಿ ಜನರ ಗುಂಪು ಅಥವಾ ಜನ ಸಮೂಹಗಳೂ ಕಾಣಿಸಿಕೊಳ್ಳುವುದು ಉಂಟು. ಇಂಥ ನಿರ್ದಿಷ್ಟ ಘಟನೆಯೊಂದು ಸಮೂಹದ ಮೇಲೆ ಹೇಗೆ ಪರಿಣಾಮ ಬೀರುತ್ತವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ನಿರ್ದಿಷ್ಟ ಘಟನೆಯ ಹಿನ್ನೆಲೆಯಲ್ಲಿ ಈ ಕೆಳಗಿನ ಘಟನಾಪ್ರಧಾನ ಐತಿಹ್ಯಗಳು ಲಭಿಸುತ್ತವೆ.

೧. ಅಕ್ಕ-ತಂಗಿಯರ ಗುಂಡು

೨. ಐಡಿಗುಡ್ಡ

೩. ಗಂಡ - ಹೆಂಡಿರ ಗುಂಡು

೪. ಗುಲಗಂಜಿ ಮಾಧವರಾಯ

೫. ಗೋಪುರದಮ್ಮನ ಗೋಪುರ

೬. ಪತಕನಿ ಮಡು

೭. ಬಡವಿಲಿಂಗ

೮. ಮನ್ಮಥ ಹೊಂಡ

೯. ಸೀತೆ ಸೆರಗು

೧೦. ರತ್ನಕೂಟ

೧೧. ತಳವಾರಘಟ್ಟ

೧೨. ಚೋಳದರಾಶಿ ಗುಡ್ಡ

೧೩. ಹಂಪಿಯ ಕಲ್ಲು-ಬಂಡೆಗಳು

೧೪. ಗುಗ್ಗರಿ ಗುಂಡಯ್ಯ

೧೫. ಲಂಬಾಣಿ ಕೊಡುಗೆ

೧೬. ಕೆಂಚನಕಟ್ಟೆ

**೧. ಅಕ್ಕ-ತಂಗಿಯರ ಗುಂಡು**

ಕಮಲಾಪುರದಿಂದ ಹಂಪಿಗೆ ಹೋಗುವ ದಾರಿಯ ಎಡಬದಿಗೆ ಒಂದಕ್ಕೊಂದು ತಾಗಿ ನಿಂತ ಎರಡು ಬೃಹದಾಕಾರವಾದ ಗುಂಡುಗಳಿವೆ ಇವುಗಳಿಗೆ ಅಕ್ಕ-ತಂಗಿಯರ ಗುಂಡು ಎಂಬ ಹೆಸರಿದೆ. ಈ ಗುಂಡುಗಳ ಬಗೆಗೆ ಹಲವಾರು ಕಥೆಗಳು ಕಂಡುಬರುತ್ತವೆ.

ಭೋಜರಾಜ ಎಂಬ ಅರಸನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರಂತೆ. ಆ ರಾಜನು ತನ್ನ ಮಕ್ಕಳಿಗಿಂತ ಸಕಲ ವಿದ್ಯಾ ಪಾರಂಗತರು ಬೇರೆ ಯಾರೂ ಇಲ್ಲವೆನ್ನುವಷ್ಟರಮಟ್ಟಿಗೆ ಅವರಿಗೆ ವಿದ್ಯೆಯನ್ನು ನೀಡಿದ್ದನು. ಒಮ್ಮೆ ಅವರಿಬ್ಬರು ತಂದೆಯಲ್ಲಿಗೆ ಬಂದು ಅಪ್ಪಾಜಿ, ನಿನ್ನಿಷ್ಟದಂತೆ ನಾವು ಸಕಲ ವಿದ್ಯಾ ಪಾರಂಗತರಾದೆವು. ಆದರೆ ದೇಶ ಪರ್ಯಟನೆ ಮಾಡಿ, ನಮಗಿಂತಲೂ ಹೆಚ್ಚಿನವರು ಯಾರಾದರೂ ಇರಬಹುದೇ ಎಂದು ನೋಡಬೇಕಾಗಿದೆ. ಆದ್ದರಿಂದ ನಮ್ಮನ್ನು ದೇಶ ಪರ್ಯಟನೆಗೆ ಕಳುಹಿಸಿಕೊಡಿ ಎಂದು ಕೇಳಿದರು. ಆಗ ಭೋಜರಾಜನು ಮಕ್ಕಳ ಇಷ್ಟದಂತೆ ಅವರಿಗೆ ಪ್ರವಾಸಕ್ಕೆ ಬೇಕಾದ ಸಕಲ ಸಿದ್ಧತೆಗಳನ್ನು ಮಾಡಿ ಅವರನ್ನು ಕಳುಹಿಸಿಕೊಟ್ಟನು. ಆ ರಾಜಕುಮಾರಿಯರು ಹಲವಾರು ದೇಶಗಳನ್ನು ಸುತ್ತಿ ಹಂಪಿಗೆ ಬಂದರು. ಹಂಪಿಯನ್ನು ಕಾಲ್ನಡಿಗೆಯಲ್ಲಿಯೇ ಸುತ್ತಿದ ಅವರಿಗೆ ಬೇಸರ ಬಂದು 'ಈ ಹಾಳು ಹಂಪಿಗೆ ಬರುವುದರ ಬದಲು ಯಾವುದಾದರೂ ಕೊಂಪೆಗೆ ಹೋಗಬಹುದಿತ್ತು' ಎಂದರಂತೆ. ಈ ಮಾತು ಅಲ್ಲೇ ತಪಸ್ಸು ಮಾಡುತ್ತಿದ್ದ ಒಬ್ಬ ಋಷಿಗೆ ಇವರ ಮಾತು ಕೇಳಿಸಿತು. ಅವನು ಸಿಟ್ಟಾಗಿ 'ಇಂತಹ ಪವಿತ್ರವಾದ ನೆಲಕ್ಕೆ ಹೀಗೆ ಹೇಳುವ ನೀವುಗಳು ಕಲ್ಲಾಗಿ' ಎಂದು ಶಾಪ ನೀಡಿದನು. ಅಂದಿನಿಂದ ಅವರಿಬ್ಬರು ಕಲ್ಲಾದರು ಮತ್ತು ಆ ಕಲ್ಲುಗಳಿಗೆ ಅಕ್ಕ-ತಂಗಿಯರ ಕಲ್ಲು ಎಂಬ ಹೆಸರು ಬಂದಿತು.[೧]

ಇನ್ನೊಂದು ಐತಿಹ್ಯದ ಪ್ರಕಾರ - ಹಿಂದೆ ಹಂಪಿಯಲ್ಲಿ ಒಬ್ಬ ಗೌಡ ಇದ್ದನಂತೆ. ಆ ಗೌಡನ ಮಗ ಒಂದೇ ಮನೆಯಿಂದ ಅಕ್ಕ-ತಂಗಿಯರಿಬ್ಬರನ್ನು ಮದುವೆಯಾದನಂತೆ. ಅವನು ಮದುವೆಯಾದ ಕೆಲವು ದಿನಗಳಿಗೆ ಹಂಪಿಗೆ ಬರಗಾಲ ಬಂದಿತು. ಬರಗಾಲದ ಕಷ್ಟಗಳನ್ನು ಅಕ್ಕ ಸಹಿಸುತ್ತಿದ್ದಳು. ಆದರೆ ತಂಗಿಗೆ ಸಹಿಸಲು ಕಷ್ಟವಾಗುತ್ತಿತ್ತು. ಇದಕ್ಕಾಗಿ ಆಕೆ ತನ್ನ ತವರು

ಮನೆಗೆ ಹಿಂದಿರುಗಲು ಯೋಚಿಸಿದಳಂತೆ. ಇದನ್ನು ತಿಳಿದ ಅಕ್ಕ 'ತಂಗಿ, ನನ್ನನ್ನು ಬಿಟ್ಟು ತವರಿಗೆ ಹೋಗಬೇಡ, ಹುಟ್ಟಿದ ಮನೆಗೂ ಮೆಟ್ಟಿದ ಮನೆಗೂ ಅದು ಶ್ರೇಯಸ್ಸು ಅಲ್ಲ. ನಿನ್ನ ಭಾರವನ್ನೆಲ್ಲಾ ನನ್ನ ಮೇಲೆ ಹಾಕು. ಸತ್ತರೆ ಇಬ್ಬರೂ ಇಲ್ಲೇ ಸಾಯೋಣ' ಎಂದು ಹೇಳಿ ತಂಗಿಯನ್ನು ತನ್ನ ಹೆಗಲ ಮೇಲೆ ಒರಗಿಸಿಕೊಂಡಳಂತೆ. ಅವರು ಹಾಗೇ ಕಲ್ಲಾದರು.[೨] ಈಗಲೂ ಅಕ್ಕನ ತೋಳಿನ ಮೇಲೆ ತಂಗಿ ಒರಗಿರುವುದನ್ನು ಕಾಣಬಹುದು.

### ೨. ಏಡಿಗುಡ್ಡ

ಹಂಪಿಯ ತುಲಾಭಾರದ ಬಲಬದಿಗೆ ಕಂಡು ಬರುವ ಒಂದು ಸ್ಥಳಕ್ಕೆ 'ಏಡಿಗುಡ್ಡ' ಎಂದು ಹೆಸರು. ಕೋಟೆ ಗೋಡೆಗೆ ಅಂಟಿಕೊಂಡಂತೆ ಏಕಶಿಲಾ ಹಾಸಿಗೆಯ ಮೇಲೆ ಕಲ್ಲಿನ ಒಂದು ಸಣ್ಣ ಪೊಟರೆ ಇದ್ದು, ಇಲ್ಲಿ ನೀರು ಸದಾ ಜಿನಗುತ್ತಿರುತ್ತದೆ. ಈ ಸ್ಥಳದಲ್ಲಿ ಸುಮಾರು ಎಂಟು ಅಡಿ ಉದ್ದದ ಸರ್ಪದ ಕೆತ್ತನೆ ಇದೆ. ಅದರ ಪಕ್ಕದಲ್ಲಿ ಮತ್ತೊಂದು ಸಣ್ಣ ಸರ್ಪ ಇದೆ. ಈ ಸಣ್ಣ ಸರ್ಪವು ಪರಸ್ಪರ ಎದುರು-ಬದುರಾಗಿರುವ ಬರಿಗಾಲಿನ ಎರಡು ಹೆಜ್ಜೆ ಗುರುತುಗಳ ಸುತ್ತ ಸುತ್ತಿಕೊಂಡಿದೆ. ಇದರ ಬಗೆಗಿನ ಕಥೆಯೊಂದು ಹೀಗಿದೆ.

ಹಿಂದೆ, ಒಮ್ಮೆ ಅಗ್ನಿ ಪ್ರಳಯದಿಂದ ಭೂ ಮಂಡಲವೇ ಸುಟ್ಟು ಭಸ್ಮವಾಗಿತ್ತು. ಆ ಕಾಲದಲ್ಲಿ ಅಣ್ಣ-ತಂಗಿಯರಿಬ್ಬರು ಇಲ್ಲಿನ ಏಡಿಗುಡ್ಡದೊಳಗೆ ಸೇರಿಕೊಂಡು ಜೀವ ಉಳಿಸಿಕೊಂಡರು. ಇಂತಹ ವೇಳೆಯಲ್ಲಿ ಶಿವ-ಪಾರ್ವತಿಯರು ಭೂ ಲೋಕವನ್ನು ಸುತ್ತಲು ಬಂದರು. ಭೂಲೋಕದಲ್ಲಿ 'ನಮ್ಮನ್ನು ಪೂಜಿಸುವವರು ಹಾಗೂ ಆರಾಧಿಸುವವರು ಯಾರೂ ಇಲ್ಲವಲ್ಲ. ಮುಂದೆ ಮಾನವ ಸಂತತಿಯ ಸೃಷ್ಟಿ ಹೇಗೆ? ಎಂದು ಅವರಿಗೆ ಚಿಂತೆಯಾಯಿತು. ಹೀಗೆ ಚಿಂತಿಸುತ್ತಾ ಆಕಾಶ ಮಾರ್ಗವಾಗಿ ಅವರು ಹೋಗುತ್ತಿರುವಾಗ ಕಲ್ಲಿನ ಪೊಟರೆಯಿಂದ ಸೂಜಿ ಗಾತ್ರದ ಹೊಗೆ ಕಂಡಿತು. ತಕ್ಷಣ ಪಾರ್ವತಿ ಶಿವನಿಗೆ ಅದನ್ನು ತೋರಿಸಿದಳು. ಆಗ ಶಿವ ಆಲಿಕಲ್ಲಿನ ಮಳೆ ಬರುವಂತೆ ಮಾಡುತ್ತಾನೆ. ಮಳೆಯಿಂದಾಗಿ ನೆಲ ತಂಪಾಗುತ್ತದೆ. ಬೆಂಕಿ ಆರಿ ಹೋಗುತ್ತದೆ. ಶಿವನು ಅಡಗಿ ಕುಳಿತ ಅಣ್ಣ-ತಂಗಿಯರನ್ನು ಕಲ್ಲಿನ ಪೊಟರೆಯಿಂದ ಹೊರಬರುವಂತೆ ಹೇಳುತ್ತಾನೆ. ಹೆದರುತ್ತಾ ಹೊರಬಂದ ಅಣ್ಣ-ತಂಗಿಯರನ್ನು ಕುರಿತು ನೀವುಗಳು ಯಾರು? ಎಂದು ಕೇಳುತ್ತಾನೆ. ಆಗ 'ನಾವು ಅಣ್ಣ, ತಂಗಿ ಇಲ್ಲಿ ರಕ್ಷಣೆ ಪಡೆದು ಇದ್ದೇವೆ' ಎಂದರಂತೆ. ಶಿವ-ಪಾರ್ವತಿಯರು 'ನೋಡಿ ಪ್ರಪಂಚವೇ ಭಸ್ಮವಾಗಿದೆ. ಭೂಮಿಯ ಮೇಲೆ ನಿಮ್ಮನ್ನು ಬಿಟ್ಟರೆ ಒಂದು ಜೀವಾತ್ಮವೂ ಇಲ್ಲ. ಆದ್ದರಿಂದ ನಿಮ್ಮಿಂದಲೇ ಭೂಮಿಯ ಮೇಲೆ ಜೀವಿಗಳ ಸೃಷ್ಟಿಯಾಗಬೇಕು' ಎಂದರಂತೆ. ಅದಕ್ಕೆ ಆ ಅಣ್ಣ-ತಂಗಿ 'ಇದು ಸಾಧ್ಯವಿಲ್ಲ - ಇದಕ್ಕೆ ನಾವು ಒಪ್ಪುವುದಿಲ್ಲ' ಎನ್ನುತ್ತಾರೆ. ಆಗ ಶಿವ-ಪಾರ್ವತಿ "ಈ ಇಬ್ಬರಿಂದಲೇ ಈ ಭೂಮಿಯ ಮೇಲೆ ಮಾನವ ಸಂತತಿ ಹುಟ್ಟುವುದು. ಇಲ್ಲದಿದ್ದರೆ ಬೇರೆ ಯಾರಿಂದಲೂ ಇದು ಸಾಧ್ಯವಿಲ್ಲ" ಎಂಬುದನ್ನು ಮನಗಂಡು, ಅವರ ಬುದ್ಧಿ ಮರೆವು ಮಾಡಿದರು. ಅನಂತರ ಇಬ್ಬರನ್ನು ಪರಸ್ಪರ ಎದುರು-ಬದರು ನಿಲ್ಲಿಸಿ 'ನೀವುಗಳು ಏನಾಗಬೇಕು?' ಎಂದು ಕೇಳಿದರು. ಆಗ ಅಣ್ಣ-ತಂಗಿ ಇಬ್ಬರು ನಾವು ಗಂಡ-

ಹೆಂಡಿರಾಗಬೇಕು ಎಂದು ಹೇಳಿದರು. ತಕ್ಷಣ ಶಿವನು ತನ್ನ ಕೊರಳ ಸರ್ಪವನ್ನು ಅವರಿಗೆ ರಕ್ಷಣೆಯಾಗಿಟ್ಟು, ಭೂಮಿಯ ಮೇಲೆ ಮಾನವ ಸಂತತಿ ಬೆಳವಣಿಗೆಗೆ ಅನುವು ಮಾಡಿದನಂತೆ.[೬] ಈ ಹಿನ್ನೆಲೆಯಲ್ಲಿ ಭೂಲೋಕದಲ್ಲಿ ಮಾನವ ಸಂತತಿಯ ಹುಟ್ಟು ಅಣ್ಣ-ತಂಗಿಯಿಂದಲೇ ಆಯಿತು ಎಂಬುದು ಐತಿಹ್ಯ ರೂಪದಲ್ಲಿ ಮೂಡಿಬಂದಿದೆ.

**೩. ಗುಲಗಂಜಿ ಮಾಧವರಾಯ**

ಹಂಪಿಯ ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿ ಒಂದು ಸಣ್ಣ ಗುಡಿ ಇದೆ. ಅದನ್ನು 'ಗುಲಗಂಜಿ ಮಾಧವರಾಯರ ಗುಡಿ' ಎಂದು ಕರೆಯುತ್ತಾರೆ. ಈ ಗುಡಿಗೆ ಆ ಹೆಸರು ಬರಲು ವಿಶೇಷ ಕಾರಣಗಳಿವೆ. ಹಂಪಿಯನ್ನು 'ದಕ್ಷಿಣಕಾಶಿ' ಎಂದು ಕರೆಯುತ್ತಾರೆ. ಉತ್ತರ ಕಾಶಿಗಿಂತ ಇದನ್ನು ಮಿಗಿಲಾಗಿರಿಸಬೇಕೆಂದು ಇಲ್ಲಿನ ಜನರು ಹಂಪಿಯಲ್ಲಿ ಸಾಕಷ್ಟು ಗುಡಿ-ಗುಂಡಾರಗಳನ್ನು ಕಟ್ಟಿಸಿದರಂತೆ. ದಾನ-ಧರ್ಮ ಮಾಡಿದರಂತೆ. ಕೊನೆಗೆ ಒಂದು ದಿನ ಕಾಶಿ ಹೆಚ್ಚೋ, ಹಂಪಿ ಹೆಚ್ಚೋ ಎಂದು ತೂಗಿ ನೋಡಲು ನಿಶ್ಚಯಿಸಿ, ಎರಡೂ ಪುಣ್ಯ ಕ್ಷೇತ್ರಗಳನ್ನು ತಕ್ಕಡಿಯಲ್ಲಿ ಹಾಕಿ ತೂಗಿದರಂತೆ. ಆಗ ಕಾಶಿಯ ಭಾರವೇ ಒಂದು ಗುಲಗಂಜಿಯಷ್ಟು ಹೆಚ್ಚಾಯಿತು. ಇದರಿಂದ ಚಿಂತಿತರಾದ ಜನರು ವಿರೂಪಾಕ್ಷ ಗುಡಿಯ ಹಿಂಬದಿಯಲ್ಲಿ ಒಂದು ಗುಲಗಂಜಿ ತೂಕದಷ್ಟು ಭಾರದ ಗುಡಿಯೊಂದನ್ನು ಕಟ್ಟಿದರು. ಮತ್ತೆ ಎರಡೂ ಕ್ಷೇತ್ರಗಳನ್ನು ತೂಗಿದಾಗ ಅವು ಸಮಾನವಾಗಿದ್ದವು. ಹೀಗೆ ಗುಲಗಂಜಿ ತೂಕದ ಗುಡಿ ಕಟ್ಟಿದ್ದರಿಂದ ಆ ಗುಡಿಗೆ 'ಗುಲಗಂಜಿ ಮಾಧವರಾಯರ ಗುಡಿ' ಎಂಬ ಹೆಸರು ಬಂತಂತೆ.[೭]

**೪. ಗಂಡ-ಹೆಂಡಿರ ಗುಂಡು**

ಕಂಪ್ಲಿಗೆ ಹೋಗುವ ಮಾರ್ಗದಲ್ಲಿ, ವೆಂಕಟಾಪುರ ಗ್ರಾಮದ ಸಮೀಪ ಎರಡು ಮಾನವಾಕೃತಿಯ ಕಲ್ಲು ಗುಂಡುಗಳಿದ್ದು, ಅವನ್ನು 'ಗಂಡ-ಹೆಂಡಿರಗುಂಡು' ಎಂದು ಕರೆಯಲಾಗುತ್ತದೆ. ಇದಕ್ಕೆ ಈ ಹೆಸರು ಬರಲು ಕಾರಣಗಳಿವೆ.

ಹಿಂದೆ ಒಂದು ಊರಿನಲ್ಲಿ ಗಂಡ-ಹೆಂಡರಿಬ್ಬರಿದ್ದರಂತೆ. ಅವರಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ಯೋಚಿಸಿದ ದಂಪತಿಗಳು ಹಂಪಿಗೆ ಹರಕೆ ಹೋರಲು ಬಂದರು. ಪಂಪಾ ಕ್ಷೇತ್ರವನ್ನು ಪೂರ್ತಿ ಸುತ್ತಿದ ನಂತರ ಮಾಲ್ಯವಂತದಲ್ಲಿ ಪೂಜೆ ಮಾಡಿದರು. ಪೂಜೆ ಮುಗಿಸಿ ಹಿಂದಿರುಗಿ ಬರುವಾಗ ದಾರಿಯಲ್ಲಿ ಎರಡು ಕಲ್ಲು ಗುಂಡುಗಳು ಅಡ್ಡ ಬಿದ್ದಿದ್ದವಂತೆ. ಮಹಾಶಿವಭಕ್ತರಾದ ಗಂಡ-ಹೆಂಡಿರಿಬ್ಬರು, ಆ ಕಲ್ಲುಗುಂಡುಗಳನ್ನು ಎತ್ತಿ ನಿಲ್ಲಿಸಿದರಂತೆ. ಈ ಕಾರಣವಾಗಿ ಅವುಗಳನ್ನು 'ಗಂಡ-ಹೆಂಡಿರ ಗುಂಡು' ಎಂದು ಕರೆಯಲಾಗುತ್ತದೆಂದು ಸ್ಥಳೀಯ ಜನರು ತಿಳಿಸುತ್ತಾರೆ.[೮] ಭಕ್ತಿಗೆ ಎಂತಹ ಶಕ್ತಿ ಇದೆ ಎಂಬುದನ್ನು ಪ್ರಚುರಪಡಿಸುವ ಹಿನ್ನೆಲೆಯಲ್ಲಿ ಈ ಐತಿಹ್ಯ ಹುಟ್ಟಿಕೊಂಡಿದೆ.

**೫. ಗೋಪುರದಮ್ಮನ ಗೋಪುರ**

ಹಂಪಿಯ ವಿರೂಪಾಕ್ಷ ದೇವಾಲಯದ ಪ್ರವೇಶ ದ್ವಾರದ ಮೊದಲನೆಯ ದೊಡ್ಡ ಗೋಪುರವನ್ನು 'ಹಿರಿಯ ಗೋಪುರ' ಅಥವಾ 'ಬಿಷ್ಟಪ್ಪಯ್ಯನ ಗೋಪುರ' ಎಂದು ಕರೆಯುತ್ತಾರೆ.

ಜಿಷ್ಟಪ್ಪಯ್ಯ ಎಂಬುವವನು ಈ ಗೋಪುರವನ್ನು ಕಟ್ಟಿಸಿದನೆಂದು ಜನ ಹೇಳುತ್ತಾರೆ. ಈ ಗೋಪುರದ ಮೊದಲಿನ ಎರಡು ಅಂತಸ್ತುಗಳನ್ನು ಕಲ್ಲಿನಿಂದ ಕಟ್ಟಲಾಗಿದ್ದು, ಉಳಿದ ಎಂಟು ಅಂತಸ್ತುಗಳನ್ನು ಗಾರೆಯಿಂದ ನಿರ್ಮಿಸಲಾಗಿದೆ. ಈ ಗೋಪುರವನ್ನು ನಿರ್ಮಿಸುವಾಗ ಕಟ್ಟಡ ಪದೇ ಪದೇ ಕುಸಿದು ಬೀಳುತ್ತಿತ್ತಂತೆ. ಆಗ ಹಿರಿಯರೆಲ್ಲ ಸೇರಿ ಪಂಚಾಂಗ ತೆಗೆಸಿ ಕಾರಣ ಕೇಳಿದಾಗ ಗರ್ಭಿಣಿ ಹೆಂಗಸನ್ನು ಬಲಿ ಕೊಡಬೇಕೆಂದು ತಿಳಿದುಬರುತ್ತದೆ. ಆದರಂತೆ ಜಿಷ್ಟಪ್ಪಯ್ಯನು ಗರ್ಭಿಣಿಯಾಗಿದ್ದ ತನ್ನ ಹಿರಿಯ ಸೊಸೆಯನ್ನು ಗೋಪುರದ ಗೋಡೆಯ ನಡುವೆ ಸೇರಿಸಿ ಗೋಪುರ ಕಟ್ಟುತ್ತಾರೆ. ಆಗ ಗೋಪುರ ಕುಸಿದು ಬೀಳುವುದು ನಿಲ್ಲುತ್ತದೆ. ಹೀಗೆ ಗೋಪುರ ಕಟ್ಟಲು ಪ್ರಾಣ ನೀಡಿದ ಆ ಹೆಂಗಸಿಗೆ 'ಗೋಪುರದಮ್ಮ' ಎಂದು ಹೆಸರಾಯಿತು. ಒಮ್ಮೊಮ್ಮೆ ಪಶ್ಚಿಮ ದಿಕ್ಕಿನಿಂದ ಪೂರ್ವದಿಕ್ಕಿಗೆ ಜೋರಾಗಿ ಗಾಳಿ ಬೀಸಿದಾಗ ಗೋಪುರದಮ್ಮ ಲಾಲಿ ಹಾಡುವುದು ಜನರಿಗೆ ಕೇಳಿಸುತ್ತದಂತೆ.[೬]

ಈ ರೀತಿಯ ಬಲಿಯ ಐತಿಹ್ಯ ಚರಿತ್ರೆಯಲ್ಲಿ ದಾಖಲಾಗುವುದರಿಂದ, ಬಲಿಯಾದವರನ್ನು ದೈವತ್ವಕ್ಕೇರಿಸಿ ಪೂಜಿಸುವ ಪರಿಪಾಠ ಜನಸಾಮಾನ್ಯರಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಐತಿಹ್ಯ ಮೂಡಿಬಂದಿದೆ.

### ೬. ಪತಕನಿಮಡು

ಹಿಂದೆ ವಿಜಯನಗರದಲ್ಲಿ ಮುತ್ತೂರ ಯಜಮಾನ ಎಂಬ ಪಾಳೇಗಾರನಿದ್ದನು. ಒಂದು ದಿನ ಉತ್ತರ ದಿಕ್ಕಿನಿಂದ ಇನ್ನೊಬ್ಬ ಪಾಳೇಗಾರ ಇವನ ಮೇಲೆ ದಾಳಿ ನಡೆಸಲು ಬಂದನು. ಆಗ ಮತ್ತೂರ ಯಜಮಾನನು ಕುಲಗುರುಗಳ ಸಲಹೆಯನ್ನು ಪಡೆದು, ಗುರುಗಳ ಸಲಹೆಯಂತೆ ರಾತ್ರಿಯಿಡೀ ಹಂಪಿ ಹೊಳೆಯನ್ನು ಪ್ರಾರ್ಥಿಸಿದನು. ಬೆಳಿಗ್ಗೆ ವಿರೋಧಿ ಪಾಳೇಗಾರನ ಸೈನ್ಯ ನೀರಿಗಿಳಿಯುತ್ತಿದ್ದಂತೆ ಅನಿರೀಕ್ಷಿತ ಪ್ರವಾಹ ಬಂದು ಇಡೀ ಸೈನ್ಯವೇ ನೀರಿನಲ್ಲಿ ಕೊಚ್ಚಿಕೊಂಡು ಹೋಯಿತಂತೆ. ಕೊಚ್ಚಿಕೊಂಡು ಹೋದ ಸ್ಥಳವನ್ನು 'ಪತಕನಿಮಡು' ಎಂದು ಕರೆಯುತ್ತಾರೆ.[೭] ಈ ಸ್ಥಳ ಈಗ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾಗಿದೆ ಎಂದು ಜನರು ಹೇಳುತ್ತಾರೆ.

ತಾನು ನಂಬಿದ ದೈವ ತನ್ನನ್ನು ಕೈ ಬಿಡದು ಎಂಬ ಮಾತಿನಂತೆ, ಹಂಪಿ ಹೊಳೆಯು ಇಲ್ಲಿ ರಕ್ಷಕ ದೈವವಾಗಿ ಐತಿಹ್ಯದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ.

### ೭. ಬಡವಿಲಿಂಗ

ಹಂಪಿಯ ಲಕ್ಷ್ಮೀನರಸಿಂಹನ ವಿಗ್ರಹದ ಸಮೀಪದಲ್ಲಿ ಕಂಡುಬರುವ ಏಕಶಿಲೆಯ ಬೃಹದಾಕಾರದ ಶಿವಲಿಂಗವನ್ನು 'ಬಡವಿಲಿಂಗ' ಎಂದು ಕರೆಯುತ್ತಾರೆ. ಈ ಹೆಸರು ಬರಲು ಎರಡು ಕಾರಣಗಳನ್ನು ನೀಡಲಾಗುತ್ತಿದೆ.

೧. ಒಬ್ಬ ಬಡ ಮುದುಕಿಯು ಹಂಪಿಯ ಸಮೀಪದ ಗ್ರಾಮವೊಂದರಲ್ಲಿ ವಾಸವಾಗಿದ್ದಳು. ಆಕೆ ದೊಡ್ಡ ಶಿವಭಕ್ತೆಯಾಗಿದ್ದಳು. ಪ್ರತಿದಿನ ಮುಂಜಾನೆ ಮತ್ತು ಸಂಜೆಯ ಸಮಯದಲ್ಲಿ

ತಪ್ಪದೇ ಶಿವಪೂಜೆ ಮಾಡುತ್ತಿದ್ದಳು. ಆಕೆ ಆ ಸಮಯದಲ್ಲಿ ಎಲ್ಲೇ ಇರಲಿ, ಶಿವಲಿಂಗವನ್ನು ಅಂಗೈಯಲ್ಲಿ ಇಟ್ಟುಕೊಂಡು ಸ್ವಲ್ಪ ಹೊತ್ತು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿಕೊಳ್ಳುತ್ತಿದ್ದಳು. ಆಕೆ ಎಲ್ಲಿಗಾದರೂ ಪರಸ್ಥಳಕ್ಕೆ ಹೋಗಬೇಕಾದರೆ ಶಿವಪೂಜೆ ತಪ್ಪಬಹುದೆಂಬ ಭಯದಿಂದ ಶಿವಲಿಂಗವನ್ನು ತನ್ನ ಸೀರೆಯ ಸೆರಗಿನಲ್ಲಿ ಮಡಚಿ ಇಟ್ಟುಕೊಳ್ಳುತ್ತಿದ್ದಳಂತೆ. ಸೂರ್ಯನು ಮುಳುಗಿದ ತಕ್ಷಣ ಆಕೆ ಶಿವಲಿಂಗವನ್ನು ತೆಗೆದು ಪೂಜಿಸುತ್ತಿದ್ದಳಂತೆ. ಒಮ್ಮೆ ಆಕೆಯು ಹಂಪಿಯಲ್ಲಿ ಗದ್ದೆ ಕೆಲಸ ಮಾಡಲು ಬಂದಳು. ಕೆಲಸ ಮಾಡಿ ಆಕೆಗೆ ಬಾಯಾರಿಕೆಯಾಯಿತು. ನೀರಿಗಾಗಿ ಸುತ್ತಮುತ್ತ ನೋಡಿದಾಗ ಅಲ್ಲಿನ ಒಂದು ತಗ್ಗಿನಲ್ಲಿ ಸ್ವಲ್ಪ ನೀರು ನಿಂತಿದ್ದು ಕಣ್ಣಿಗೆ ಬಿತ್ತು. ಮುದುಕಿಯು ಅಲ್ಲಿಗೆ ಹೋಗಿ ಕುಳಿತುಕೊಂಡು ಬಾಗಿ ಬೊಗಸೆಯಿಂದ ನೀರು ಕುಡಿದಳು. ಆಗ ಆಕೆಯ ಸೀರೆಯ ಸೆರಗಿನಲ್ಲಿದ್ದ ಶಿವಲಿಂಗವು ನೀರಿನಲ್ಲಿ ಬಿದ್ದು ಬಿಟ್ಟಿತು. ಆಕೆಗೆ ಬಹಳ ದುಃಖವಾಯಿತು. ಎಷ್ಟು ಹುಡುಕಾಡಿದರೂ ಶಿವಲಿಂಗ ಮಾತ್ರ ಸಿಗಲೇ ಇಲ್ಲ. ಸಂಜೆಯಾಯಿತು. ಶಿವಪೂಜೆಯ ಹೊತ್ತು ಸಮೀಪಿಸಿತು. ಆಗ ಆಕೆ 'ಅಯ್ಯೋ ಶಿವನನ್ನು ನೀರು ಪಾಲು ಮಾಡಿದೆನಲ್ಲಾ, ನನ್ನ ಈ ತಪ್ಪಿಗೆ ಪರಿಹಾರವೇ ಇಲ್ಲವೇ' ಎಂದು ಅಳುತ್ತಾ ಅಲ್ಲಿಯೇ ಕುಳಿತು ಬಿಟ್ಟಳಂತೆ. ಹೀಗೆ ಆಕೆ ಅನ್ನ, ನೀರನ್ನು ಬಿಟ್ಟು ಶಿವನನ್ನೇ ಧ್ಯಾನಿಸುತ್ತಾ ಅದೇ ಸ್ಥಳದಲ್ಲಿ ಇದ್ದು ಬಿಟ್ಟಳಂತೆ. ಆಗ ಆಕೆಯ ಭಕ್ತಿಗೆ ಮೆಚ್ಚಿ ಶಿವನು ಆ ನೀರಿನಿಂದ ಅದ್ಭುತ ಲಿಂಗಾಕಾರದಲ್ಲಿ ಮೇಲಕ್ಕೆ ಎದ್ದು ಬಂದನಂತೆ. ಅಂದಿನಿಂದಲೂ ಆ ಲಿಂಗಕ್ಕೆ 'ಬಡವಿಲಿಂಗ' ಎಂದು ಹೆಸರಾಗಿದೆ.[೮]

೨. ಇನ್ನೂ ಕೆಲವರು ಪ್ರಕಾರ, ಒಮ್ಮೆ ಪಂಪಾಪತಿ ಜಾತ್ರೆ ನಡೆಯುವಾಗ ಎಲ್ಲಾ ಭಕ್ತರೂ ಅಲ್ಲಿಗೆ ಬಂದು ಸೇರಿದರು. ಆಗ ಪಾರ್ವತಿಯು ಶಿವನನ್ನು ಕುರಿತು ನಮ್ಮ ಭಕ್ತರೆಲ್ಲಾ ಸುಡುವ ಬಿಸಿಲಿನಲ್ಲಿ ಬೇಯುತ್ತಿದ್ದಾರೆ. ನಾವು ಬೇಗ ಅಲ್ಲಿಗೆ ಹೋಗೋಣವೆಂದು ಹೇಳಿದಳು. ಆಗ ಶಿವನು 'ನನ್ನ ಭಕ್ತ ಬಂದಿಲ್ಲ, ಅವನು ಬರೋವವರೆಗೂ ನಾನು ರಥೋತ್ಸವಕ್ಕೆ ಬರುವುದಿಲ್ಲ' ಎಂದು ಹೇಳಿದನು. ಆಗ ಪಾರ್ವತಿಯು 'ಸ್ವಾಮಿ, ಇಷ್ಟೊಂದು ಭಕ್ತ ಸಮೂಹ ನೆರೆದಿರುವಾಗ ಇನ್ನೂ ನನ್ನ ಭಕ್ತ ಬಂದಿಲ್ಲ ಅಂತಿದ್ದೀರಲ್ಲ. ಯಾರು ಆ ಭಕ್ತ? ಎಂದು ಕೇಳಿದಾಗ ಶಿವನು 'ನೋಡು ಪಾರ್ವತಿ, ನನ್ನ ನಿಜವಾದ ಭಕ್ತ ಅಲ್ಲಿ ಬರುತ್ತಿದ್ದಾನೆ' ಎಂದು ಹೇಳಿ ಒಬ್ಬನನ್ನು ತೋರಿಸುತ್ತಾನೆ. ಆಗ ಪಾರ್ವತಿಯು ಇಷ್ಟೊಂದು ಜನ ಇರೋವಾಗ, ನೀವು ಅವನನ್ನೇ ನನ್ನ ಭಕ್ತ ಎನ್ನಲು ಕಾರಣವೇನು? ಎಂದು ಕೇಳಿದಾಗ, ಶಿವನು ಭಕ್ತರ ಪರೀಕ್ಷೆಗೆ ಸಜ್ಜಾಗುತ್ತಾನೆ. ಪಾರ್ವತಿಯನ್ನು ಕುರಿತು 'ನೋಡು ನನ್ನ ಭಕ್ತನ ಭಕ್ತಿ ಪರೀಕ್ಷೆಗಾಗಿ ನಾವು ಒಂದು ಆಟವನ್ನು ಆಡೋಣ, ನಾನು ನೀರಿನಲ್ಲಿ ಬಿದ್ದೋಗ್ತೀನಿ. ನೀನು ನನ್ನ ಗಂಡನನ್ನು ಕಾಪಾಡಿ, ಕಾಪಾಡಿ ಅಂತ ಎಲ್ಲರನ್ನೂ ಕೂಗು. ನಿಜವಾದ ಭಕ್ತ ಬಂದು ನನ್ನನ್ನು ಕಾಪಾಡುತ್ತಾನೆ ಎಂದು ಹೇಳಿ ಶಿವನು ನೀರಿನಲ್ಲಿ ಬಿದ್ದಂತೆ ನಟಿಸುತ್ತಾನೆ. ಪಾರ್ವತಿಯು ನನ್ನ ಗಂಡ ನೀರಿನಲ್ಲಿ ಬಿದ್ದೋಗಿದ್ದಾರೆ ಕಾಪಾಡಿ, ಕಾಪಾಡಿ' ಎಂದು ಕೂಗುತ್ತಾಳೆ. ಜಾತ್ರೆಗೆ ಹೋಗುವ

ಜನರನ್ನು ಕೈ ಮುಗಿದು ಕೇಳಿಕೊಳ್ಳುತ್ತಾಳೆ. ಆದರೆ ಅವರೆಲ್ಲ 'ಹೋಗಮ್ಮೋ ನಾವೇ ಜಾತ್ರೆಗ ಹೊತ್ತಾಗಿ ಹೋಗ್ತಾ ಇದ್ದೀವಿ ಮಧ್ಯೆ ನಿನ್ನದೊಂದು ಗೋಳು' ಎಂದುಕೊಂಡು ಹಾಗೆಯೇ ಹೊರಟು ಹೋದರು. ಯಾರೂ ಸಹಾಯಕ್ಕೆ ಬರಲಿಲ್ಲ. ಆಗ ತಮ್ಮ ಧಣಿಯ ಮನೆಯಲ್ಲಿ ಕೆಲಸವನ್ನು ಮುಗಿಸಿ ತುಂಬ ಆತುರಾತುರರಾಗಿ ಜಾತ್ರೆಗೆ ಬರುತ್ತಿದ್ದ ಇಬ್ಬರು ದಂಪತಿ ಈ ಕೂಗನ್ನು ಕೇಳಿ ಅಲ್ಲಿಗೆ ಹೋಗುತ್ತಾರೆ. ತಾವು ಧರಿಸಿದ್ದ ಸೀರೆ, ಪಂಚೆಗಳನ್ನು ಕಳಚಿ ಎಸೆದು, ನೀರಿನಲ್ಲಿ ಬಿದ್ದಿದ್ದ ಮಾರುವೇಷದ ಶಿವನನ್ನು ಮೇಲಕ್ಕೆ ಎತ್ತಿದರಂತೆ. ಆಗ ಶಿವ ಮೆಚ್ಚಿ 'ನಿಮಗೆ ಏನು ಬೇಕು' ಎಂದು ಕೇಳಿದಾಗ ಆ ದಂಪತಿಗಳು 'ಸ್ವಾಮಿ, ನಮ್ಮಂತಹ ಸಾಮಾನ್ಯ ಜನರಿಗೆ ನಿನ್ನ ದರ್ಶನ ದೊರಕುವುದು ಬಹಳ ಕಷ್ಟ. ಆದ್ದರಿಂದ ಬಡವರ ಹೆಸರಿನಲ್ಲಿ ಒಂದು ಲಿಂಗ ಸ್ಥಾಪಿಸು, ಇದರಿಂದ ಎಲ್ಲಾ ಜನಸಾಮಾನ್ಯರಿಗೂ ನಿನ್ನ ದರ್ಶನವಾಗುತ್ತದೆ' ಎಂದು ಕೇಳಿಕೊಂಡರಂತೆ. ಅದರಂತೆ ಶಿವ ಅವರಿಗೆ ಅನುಗ್ರಹಿಸಿ ಅವರ ಕೋರಿಕೆಯಂತೆ ಇತರ ಶಿವಲಿಂಗಗಳಿಗಿಂತ ದೊಡ್ಡದಾದ ಶಿವಲಿಂಗವನ್ನು ಸ್ಥಾಪಿಸಿದ. ಅಂದಿನಿಂದ ಇದನ್ನು 'ಬಡವರ ಲಿಂಗ' ಅಥವಾ ಬಡವಿ ಲಿಂಗ' ಎಂದು ಕರೆಯುತ್ತಾರೆ.[೯]

'ಶಿವ ಒಲಿದರೆ ಕೊರಡು ಕೊನರುವುದಯ್ಯ' ಎಂಬ ವಚನದಂತೆ, ಶಿವ ತನ್ನ ಭಕ್ತರ ಭಕ್ತಿಯನ್ನು ಪರೀಕ್ಷಿಸಿ, ನಿಜವಾದ ಭಕ್ತರನ್ನು ಪಡೆದ ನಿದರ್ಶನ ಈ ಮೇಲಿನ ಎರಡು ಐತಿಹ್ಯಗಳಲ್ಲಿ ಮೂಡಿಬಂದಿದೆ.

**೮. ಮನ್ಮಥಹೊಂಡ**

ಹಂಪಿಯ ವಿರೂಪಾಕ್ಷೇಶ್ವರ ದೇವಸ್ಥಾನದ ಪಕ್ಕದಲ್ಲಿ 'ಮನ್ಮಥಹೊಂಡ' ಕಂಡು ಬರುತ್ತದೆ. ಇದನ್ನು 'ಮನ್ಮಥಕುಂಡ' ಎಂತಲೂ ಕರೆಯುತ್ತಾರೆ. ಇದರ ಬಗೆಗಿನ ಐತಿಹ್ಯ ಈ ರೀತಿಯಿದೆ. ಶಿವನ ಘೋರ ತಪಸ್ಸನ್ನು ಭಂಗಗೊಳಿಸಿದ ಮನ್ಮಥನನ್ನು ಸುಟ್ಟು ಬಿಡಲು ಶಿವನು ಮೂರನೇ ಕಣ್ಣನ್ನು ತೆರೆದಾಗ ಮನ್ಮಥ ಸುಟ್ಟು ಹೋದ. ಜೊತೆಗೆ ಶಿವನ ಕಣ್ಣೆದುರಿದ್ದ ಬಂಡೆಯೂ ಕರಗಿ ನೀರಾಗಿ ಹರಿಯಿತು. ಹಾಗೆ ಬಂಡೆ ಕರಗಿದ ಜಾಗವೇ 'ಮನ್ಮಥಹೊಂಡ'. 'ಫಲಪೂಜೆ' ಮತ್ತು 'ಹಂಪಿಜಾತ್ರೆ'ಯ ದಿವಸ ಪಂಪಾಪತಿ ಮತ್ತು ಹಂಪಮ್ಮನವರು ಈ ಹೊಂಡದ ತೆಪ್ಪದಲ್ಲಿ ವಿಹರಿಸುತ್ತಾರೆ[೧೦] ಎಂಬ ಐತಿಹ್ಯವಿದೆ.

**೯. ಸೀತೆ ಸೆರಗು**

ಹಂಪಿಯ ಸುಗ್ರೀವ ಗುಹೆಯ ಎದುರಿಗಿರುವ ಬಂಡೆಯ ಮೇಲೆ ಪಟ್ಟೆ ರೀತಿಯಲ್ಲಿ ಕಂಡು ಬರುವ ಬಿಳಿಯ ಗೆರೆಗಳನ್ನು 'ಸೀತೆಯ ಸೆರಗು' ಎಂದು ಕರೆಯಲಾಗುತ್ತದೆ. ಸುಗ್ರೀವನ ಗುಹೆಯಲ್ಲಿದ್ದ ಸೀತೆಯನ್ನು ರಾವಣನು ಬಲತ್ಕಾರದಿಂದ ಎಳೆದೊಯ್ಯುವಾಗ ಸೀತೆಯ ಸೆರಗು ಬಂಡೆಯ ಮೇಲೆ ಬಿದ್ದು ಈ ಗುರುತು ಆಯಿತು ಎಂಬ ನಂಬಿಕೆಯಿದೆ. ಮುಂದೆ ಸುಗ್ರೀವಾದಿ ಕಪಿಗಳು ಈ ಸೆರಗಿನ ಗುರುತನ್ನು ಆಧರಿಸಿಯೇ ಸೀತೆಯನ್ನು ಪತ್ತೆ ಮಾಡಲು ಸಾಧ್ಯವಾಯಿತು ಎಂದು ಜನ ಹೇಳುತ್ತಾರೆ.[೧೧]

ಸಾಮಾನ್ಯ ಕಲ್ಲಾಗಿ ಕಾಣುವ ಒಂದು ವಸ್ತು ಜನಪದರ ಕಣ್ಣಿಗೆ ಯಾವುದೋ ಮಹತ್ವಕಥೆಯನ್ನು ಸಾರುವ, ಯಾವುದೋ ಮಹಾನ್‌ವ್ಯಕ್ತಿಯ ಅಪೂರ್ವ ಸಾಹಸ ಕಥೆಯನ್ನು ಬಣ್ಣಿಸುವ, ನೀತಿಯನ್ನೋ, ಸತ್ಯವನ್ನೋ ಸಾರುವ ಸಜೀವ ವಸ್ತುಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ನೈಸರ್ಗಿಕವಾಗಿ ಒಡಮೂಡಿದ ಪಟ್ಟೆ ರೀತಿಯ ಬಿಳಿಯ ಗೆರೆಗಳನ್ನು 'ಸೀತೆ ಸೆರಗು' ಎಂದು ಕರೆಯಲಾಗಿದೆ.

### ೧೦. ರತ್ನಕೂಟ

ಹಂಪಿಯ ಹೇಮಕೂಟದ ಬಲಭಾಗಕ್ಕೆ 'ರತ್ನಕೂಟ' ಕಂಡು ಬರುತ್ತದೆ. ರತ್ನಕೂಟದ ಬಗ್ಗೆ ಎರಡು ಐತಿಹ್ಯಗಳಿವೆ.

ಮೊದಲನೆಯದಾಗಿ, ವಿಜಯನಗರದ ಸ್ಥಾಪನೆಗೆ ಶಕ್ತಿ ನೀಡೆಂದು ವಿದ್ಯಾರಣ್ಯರು ಭುವನೇಶ್ವರಿಯನ್ನು ಪ್ರಾರ್ಥಿಸಿದರಂತೆ. ಆಗ ಭುವನೇಶ್ವರಿಯು ವಿದ್ಯಾರಣ್ಯರ ಪ್ರಾರ್ಥನೆಗೆ ಒಲಿದು ಕೆಲವು ಗಳಿಗೆಯ ಕಾಲ ಮುತ್ತು, ರತ್ನ, ಚಿನ್ನದ ಮಳೆ ಸುರಿಸಿದಳಂತೆ. ಹೀಗೆ ಮುತ್ತು ಸುರಿದ ಭಾಗ 'ಮುತ್ತಿನಕೂಟ', ರತ್ನ ಸುರಿದ ಭಾಗ 'ರತ್ನಕೂಟ' ಹಾಗೂ ಚಿನ್ನ ಸುರಿದ ಭಾಗ 'ಹೇಮಕೂಟ'ವಾಯಿತೆಂದು ಜನ ಹೇಳುತ್ತಾರೆ.[೨]

ಎರಡನೆಯ ಐತಿಹ್ಯದ ಪ್ರಕಾರ,

ವಿಜಯನಗರ ಸಾಮ್ರಾಜ್ಯವು ಅಂದಿನ ಕಾಲದಲ್ಲಿ ಬಹಳ ವೈಭವದಿಂದ ಮೆರೆದಿತ್ತು. ಅಂದು ಮುತ್ತು, ರತ್ನಗಳನ್ನು ಸೇರು-ಬಳ್ಳಗಳಿಂದ ಅಳೆದು ಮಾರುತ್ತಿದ್ದರು. ಹೀಗೆ ಸಕಲ ಸಂಪತ್ತಿನ ವ್ಯಾಪಾರ ಸ್ಥಾನವಾಗಿದ್ದ ಇಲ್ಲಿಗೆ ದೇಶದ ಹಲವು ಭಾಗಗಳಿಂದ ವ್ಯಾಪಾರಿಗಳು ಬರುತ್ತಿದ್ದರು. ಆಗ ರಾಜರುಗಳು ಈ ವ್ಯಾಪಾರಿಗಳ ವಾಸ್ತವ್ಯಕ್ಕಾಗಿ ವಿವಿಧ ಪ್ರದೇಶಗಳನ್ನು ಬಿಟ್ಟುಕೊಟ್ಟರು. ಹೀಗೆ ಹಂಪಿ ಬಜಾರಿಗೆ ಹೊಂದಿಕೊಂಡಂತಿರುವ ರತ್ನಕೂಟವನ್ನು ರತ್ನದ ವ್ಯಾಪಾರಿಗಳಿಗೆ ನೀಡಲಾಗಿತ್ತು. ಹೀಗಾಗಿ ಈ ಗುಡ್ಡಕ್ಕೆ 'ರತ್ನಕೂಟ' ಎಂದು ಹೆಸರು ಬಂದಿತೆಂದು ಹೇಳಲಾಗುತ್ತಿದೆ. ಈಗಲೂ ಸಹ ರತ್ನಕೂಟದಲ್ಲಿ ಮಾರ್ವಾಡಿಗಳ ದೇವಸ್ಥಾನ ಹಾಗೂ ಮಠವೊಂದು ಉಳಿದುಬಂದಿದೆ. ಗಣೇಶ ಚತುರ್ಥಿ ಮತ್ತು ದೀಪಾವಳಿ ಹಬ್ಬಗಳಂದು ವಿವಿಧ ಪ್ರದೇಶಗಳಿಂದ ಮಾರ್ವಾಡಿಗಳು ಇಲ್ಲಿಗೆ ಭೇಟಿ ನೀಡುತ್ತಾರೆ.[೩]

### ೧೧. ತಳವಾರಘಟ್ಟ

ತಳವಾರಘಟ್ಟವು ಹಿಂದೆ ತಳವಾರಿಕೆ ಮಾಡುವವರ ಊರಾಗಿತ್ತೆಂದು ತಿಳಿದುಬರುತ್ತದೆ. ಆನೆಗೊಂದಿಯ ಭಾಗದಿಂದ ಹಂಪಿಗೆ ಪ್ರವೇಶ ಮಾಡುವ ಪ್ರತಿಯೊಬ್ಬರೂ ಈ ನದಿ ತೀರದಿಂದಲೇ ಬರಬೇಕಾಗಿತ್ತು. ಇಂತಹ ಪ್ರದೇಶದಲ್ಲಿ ರಾಜರಿಗೆ ವಿಷಯ ಮುಟ್ಟಿಸುವ, ಮಾಹಿತಿ ನೀಡುವ, ಗಡಿ ರಕ್ಷಣೆ ಮಾಡುವ, ಬೇರೆ ಪ್ರದೇಶದಿಂದ ಬಂದ ವಸ್ತುಗಳಿಗೆ ಸುಂಕವನ್ನು ಹಾಕುವ ತಳವಾರ ಗ್ರಾಮವೊಂದಿತ್ತು. ಆದ್ದರಿಂದ ಈ ಸ್ಥಳಕ್ಕೆ 'ತಳವಾರ ಘಟ್ಟ' ಎಂಬ ಹೆಸರು ಬಂತೆಂದು ಜನ ಹೇಳುತ್ತಾರೆ.[೪]

### ೧೨. ಜೋಳದರಾಶಿ ಗುಡ್ಡ

ಹೊಸಪೇಟೆಯ ಹರಿಹರ ರಸ್ತೆಯ ಎಡಭಾಗದಲ್ಲಿ 'ಜೋಳದರಾಶಿ ಗುಡ್ಡ' ಕಂಡುಬರುತ್ತವೆ. ಇದರ ಬಗೆಗಿನ ಐತಿಹ್ಯ ಈ ರೀತಿಯಾಗಿದೆ.

ವಿಜಯನಗರ ಕಾಲದಲ್ಲಿ ಇಬ್ಬರು ಅಣ್ಣ ತಮ್ಮಂದಿರು ಇದ್ದರು. ತಂದೆ ಕಾಲವಾದ ಅನಂತರ ಅಣ್ಣ-ತಮ್ಮಂದಿರು ಆಸ್ತಿ ಪಾಲು ಮಾಡಿ ಕೊಂಡರು. ಅಣ್ಣ ಒಳ್ಳೊಳ್ಳೆಯ ಭೂಮಿ, ಮನೆಯನ್ನು ಆಯ್ಕೆ ಮಾಡಿಕೊಂಡು ತಮ್ಮನಿಗೆ ಕಲ್ಲು, ಕುರುಚಲು ಗುಡ್ಡದ ಹೊಲ, ಸುರಿಯೋ ಮನೆ ಹಾಗೂ ಮುದಿ ಎತ್ತುಗಳನ್ನು ಕೊಟ್ಟನು. ಇದರಿಂದ ಧೃತಿಗೆಡದ ತಮ್ಮನು ಪಾಲಿಗೆ ಬಂದದ್ದು ಪಂಚಾಮೃತ ಎಂದು ಹೇಳಿಕೊಂಡು ವ್ಯವಸಾಯದ ಕೆಲಸ ಮಾಡುತ್ತಿದ್ದ. ಒಮ್ಮೆ ತಮ್ಮ ಚೆನ್ನಾಗಿ ಬೇಸಾಯ ಮಾಡಿ ಅಣ್ಣನಿಗಿಂತ ಹೆಚ್ಚಾಗಿ ಜೋಳ ಬೆಳೆಸಿದ. ಅಣ್ಣ ತಮ್ಮಂದಿಬ್ಬರೂ ಒಕ್ಕಣೆ ಮಾಡಲು ಅಕ್ಕಪಕ್ಕದಲ್ಲೆ ಜೋಳದರಾಶಿ ಮಾಡಿಕೊಂಡಿರುವಾಗ ತಮ್ಮನ ರಾಶಿ ದೊಡ್ಡದಿತ್ತು. ಅಣ್ಣನ ರಾಶಿ ಚಿಕ್ಕದಿತ್ತು. ತಮ್ಮ 'ಮನೆಗೆ ಊಟಕ್ಕೆ ಹೋಗುತ್ತೇನೆ, ನನ್ನ ರಾಶಿ ಕಡೆ ನೋಡಿಕೊಳ್ಳಿ' ಎಂದು ಅಣ್ಣನಿಗೆ ಹೇಳಿ ಮನೆಗೆ ಹೊರಟ. ಆಗ ಅಣ್ಣನು ತಮ್ಮನ ರಾಶಿಯಿಂದ ಜೋಳವನ್ನು ಕದ್ದು ತನ್ನ ರಾಶಿಗೆ ಸುರಿದುಕೊಂಡ. ತಮ್ಮ ವಾಪಸ್ಸು ಬಂದು ನೋಡಿದಾಗ ಅಣ್ಣನ ರಾಶಿ ಪೂರ್ಣವಾಗಿ ಮಣ್ಣಿನ ಗುಡ್ಡೆಯಾಗಿತ್ತು. ತಮ್ಮನ ರಾಶಿ ಹಾಗೆಯೇ ಇತ್ತು. ಹೀಗೆ ತಮ್ಮನ ಜೋಳದ ರಾಶಿಯಿಂದ ಜೋಳವನ್ನು ಕದ್ದ ಅಣ್ಣ ತನ್ನ ಜೋಳದ ರಾಶಿಯನ್ನು ದೊಡ್ಡದಾಗಿಸಿಕೊಂಡ. ಆದರೆ ಅದು ಮಣ್ಣಿನ ಗುಡ್ಡವಾಯಿತು. ಅಂದಿನಿಂದ ಮುಂದೆ 'ಜೋಳದರಾಶಿಯ ಗುಡ್ಡ' ಎಂದು ಹೆಸರಾಯಿತು.[೧೪]

ಈ ಐತಿಹ್ಯದಿಂದ ತಿಳಿದು ಬರುವುದೇನೆಂದರೆ ಮೋಸ, ವಂಚನೆ, ಕಪಟತೆಗೆ ಎಂದು ಬೆಲೆ ಇರುವುದಿಲ್ಲ. ನ್ಯಾಯ, ನಿಷ್ಠೆ, ಸತ್ಯ, ಪರೋಪಕಾರಕ್ಕೆ ಹೆಚ್ಚಿನ ಬೆಲೆ ಇರುತ್ತದೆ. ಇದನ್ನು ಅಣ್ಣ-ತಮ್ಮನ ಹೋಲಿಕೆಯಲ್ಲಿ ಈ ಐತಿಹ್ಯ ಹುಟ್ಟಿಕೊಂಡಿರುವುದು ತಿಳಿಯುತ್ತದೆ. ಈ ರೀತಿಯ ಐತಿಹ್ಯಗಳು ಅಂದಿನ ಸಮಾಜದ ನ್ಯಾಯ, ನಿಷ್ಠತೆಗೆ ಹಿಡಿದ ಕೈಗನ್ನಡಿಯಂತಿದೆ ಎಂದು ಹೇಳಬಹುದಾಗಿದೆ.

### ೧೩. ಹಂಪಿ ಪರಿಸರದ ಕಲ್ಲು-ಬಂಡೆಗಳು

ಹಂಪಿ ಪರಿಸರದಲ್ಲಿ ಹೇರಳವಾಗಿ ಕಲ್ಲು-ಬಂಡೆಗಳಿವೆ. ಇಲ್ಲಿ ಇಷ್ಟರಮಟ್ಟಿಗೆ ಕಲ್ಲುಗಳಿರಲು ಕಾರಣಗಳಿವೆ. ವನವಾಸದ ಸಮಯದಲ್ಲಿ ಶ್ರೀರಾಮನು ಕಪಿ ಸೇನೆಯನ್ನು ಕರೆದುಕೊಂಡು ಸೇತುವೆ ಕಟ್ಟುವಾಗ ಕಪಿಗಳಿಗೆ ಕಲ್ಲು-ಬಂಡೆಗಳನ್ನು ತರಲು ಹೇಳಿದ. ಅದರಂತೆ ಕಪಿಗಳು ಕಲ್ಲು-ಬಂಡೆಗಳನ್ನು ಹೊತ್ತು ತಂದವು. ಸೇತುವೆಯ ನಿರ್ಮಾಣ ಕೊನೆಗೊಂಡಾಗ ಶ್ರೀರಾಮನು ಕಪಿಗಳಿಗೆ ಸೇತುವೆ ಕಟ್ಟುವುದು ಮುಗಿಯಿತು. ಕಲ್ಲು ಸಾಕು ಎಂದನು. ಆಗ ಕಲ್ಲು-ಬಂಡೆಗಳನ್ನು ಹೊತ್ತು ತರುತ್ತಿದ್ದ ಕಪಿಗಳು ಅವುಗಳನ್ನು ಅಲ್ಲಲ್ಲೇ ಎಸೆದವಂತೆ. ಅಂದಿನಿಂದ ಹಂಪಿಯಲ್ಲಿ ಕಲ್ಲುಬಂಡೆಗಳು ರಾಶಿ ರಾಶಿಯಾಗಿ ಬಿದ್ದಿವೆ ಎಂದು ಹೇಳಲಾಗುತ್ತಿದೆ.[೧೫]

ನೈಸರ್ಗಿಕವಾಗಿ ಕಂಡುಬರುವ ಕಲ್ಲು-ಬಂಡೆಗಳನ್ನು ರಾಮಾಯಣ ಕಾಲಕ್ಕೆ ಹೋಲಿಸಿ, ಆ ಕಲ್ಲು-ಬಂಡೆಗಳಿಗೂ ಒಂದು ಮಾನ್ಯತೆಯನ್ನು ದೊರಕಿಸಿಕೊಡುವ ಪ್ರಯತ್ನ ಈ ಐತಿಹ್ಯದಲ್ಲಿ ಮೂಡಿಬಂದಿದೆ.

### ೧೪. ಗುಗ್ಗರಿ ಗುಂಡಯ್ಯ

ಹಿಂದೆ ಭಕ್ತನೊಬ್ಬ ಹಂಪಿಯ ವಿರೂಪಾಕ್ಷನ ವರದಿಂದ ಗಂಡು ಮಗುವನ್ನು ಪಡೆದನು. ಇದರಿಂದ ಸಂತೋಷಗೊಂಡ ಆತ ಹಂಪಿಯಲ್ಲಿರುವ ಎಲ್ಲಾ ದೇವಾಲಯಗಳಿಗೂ ಕಡಲೆಕಾಳು, ಗುಗ್ಗರಿ ನೈವೇದ್ಯ ಮಾಡಿಸಲು ನಿಶ್ಚಯಿಸಿದ. ಅದಕ್ಕಾಗಿ ಒಂದು ಪಲ್ಲದ ಚೀಲದಲ್ಲಿ ಕಡಲೆಕಾಳನ್ನು ಗುಗ್ಗರಿ ಮಾಡಿ ತಂದು, ಹಂಪಿಯಲ್ಲಿ ಕಂಡುಬರುವ ಎಲ್ಲಾ ಗುಡಿಗಳಿಗೂ ಒಂದೊಂದೇ ಕಾಳಿನಂತೆ ನೈವೇದ್ಯ ಅರ್ಪಿಸುತ್ತಾ ಬಂದ. ಕೊನೆಗೆ ವಿರೂಪಾಕ್ಷ ದೇವಾಲಯದ ಹಿಂಬದಿಗೆ ಬರುವಾಗ ಅದು ಮುಗಿದು ಹೋಯಿತು. ಆಗ ಅಲ್ಲಿದ್ದ ದೇವರು ಕೋಪಗೊಂಡು ಎತ್ತರವಾದ ಬಂಡೆಯ ಮೇಲೇರಿ 'ನನಗೆ ಇಲ್ಲಿ ಸೇವೆ ಇಲ್ಲದಿದ್ದರೆ ನಾನು ಈ ಬಂಡೆಯ ಮೇಲಿಂದ ಬಿದ್ದು ಸಾಯುತ್ತೇನೆ' ಎಂದು ಹೇಳಿತಂತೆ. ಆಗ ಭಕ್ತನು, ನನ್ನ ತಪ್ಪನ್ನು ಮನ್ನಿಸಬೇಕೆಂದು ದೇವರಲ್ಲಿ ಪ್ರಾರ್ಥಿಸಿ, ಆ ದೇವರಿಗೆ ಪ್ರತ್ಯೇಕ ಗುಗ್ಗರಿ ತರಿಸಿ ನೈವೇದ್ಯ ಮಾಡಿಸಿದನಂತೆ. ಹೀಗಾಗಿ ಈ ದೇವರಿಗೆ 'ಗುಗ್ಗರಿ ಗುಂಡಯ್ಯ' ಎಂದು ಹೆಸರು ಬಂದಿತು.[೧೭]

### ೧೫. ಲಂಬಾಣಿ ಕೊಡುಗೆ

ಹಂಪಿ ಜಾತ್ರೆ ಹಾಗೂ ನಾಗರಪಂಚಮಿ ಹಬ್ಬಗಳ ಸಂದರ್ಭದಲ್ಲಿ ಹೊಸಪೇಟೆ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮಗಳಲ್ಲಿ ತೆಂಗಿನಕಾಯಿ ಗುದ್ದುವುದು, ನಿಂಬೆಹಣ್ಣು ಒಗೆಯುವುದು, ಗುಂಡು ಒಗೆಯುವುದು, ಭಾರ ಎತ್ತುವುದು, ಸೈಕಲ್ ಸ್ಪರ್ಧೆ, ಎತ್ತಿನಬಂಡಿ ಸ್ಪರ್ಧೆ ಇತ್ಯಾದಿ ಸ್ಪರ್ಧೆಗಳು ಗ್ರಾಮೀಣ ಭಾಗದಲ್ಲಿ ಸಾಮಾನ್ಯವಾಗಿ ನಡೆಯುತ್ತಿರುತ್ತವೆ.

ಒಮ್ಮೆ ಹಂಪಿ ಜಾತ್ರೆಯಲ್ಲಿ ನೆರೆದ ಭಕ್ತರಲ್ಲಿ ಕೆಲವರು, ಒಂದು ಸ್ಪರ್ಧೆಯನ್ನು ಏರ್ಪಡಿಸಿದರು. ಅದೇನೆಂದರೆ, 'ಹಂಪಿಯ ವಿರೂಪಾಕ್ಷನ ದೊಡ್ಡ ಗೋಪುರದ ತುದಿಯ ಮೇಲೆ ಹಾದು ಹೋಗುವಂತೆ ಮೂರು ಅವಕಾಶಗಳಲ್ಲಿ ಕಬ್ಬಿನತುಂಡನ್ನು ಎಸೆಯುವುದು'. ಹಲವರು ಪ್ರಯತ್ನಪಟ್ಟು ಸೋತು ಹೋದರು. ಯಾರ ಕೈಯಿಂದಲೂ ಆ ಕೆಲಸ ಸಾಧ್ಯವಾಗಲಿಲ್ಲ. ಆಗ ಹಂಪಿ ಜಾತ್ರೆಗೆಂದು ಬಂದಿದ್ದ ಪಕ್ಕದ ಗ್ರಾಮವೊಂದರ ಲಂಬಾಣಿ ಮಹಿಳೆಯೊಬ್ಬಳು ತಾನು ಕಬ್ಬಿನ ತುಂಡನ್ನು ಗೋಪುರದ ತುದಿಯ ಮೇಲಿಂದ ಹಾದು ಹೋಗುವಂತೆ ಎಸೆಯುತ್ತೇನೆಂದು ಹೇಳಿ ಮುಂದೆ ಬಂದು ವಿರೂಪಾಕ್ಷನಿಗೆ ಕೈಮುಗಿದು ಕಬ್ಬಿನ ತುಂಡನ್ನು ಒಂದೇ ಬಾರಿಗೆ ಗೋಪುರದ ಮೇಲೆ ಹಾದು ಹೋಗುವಂತೆ ಎಸೆದುಬಿಟ್ಟಳು. ಆಗ ಆಕೆಯ ಸಾಹಸವನ್ನು ಮೆಚ್ಚಿ ಅಲ್ಲಿನ ಜನರೆಲ್ಲ ಆಕೆಯನ್ನು ಗೌರವಿಸಿ, ಆಕೆಗೆ ನಲ್ಲಾಪುರ ಗ್ರಾಮದ ಬಳಿ ೨೦ ಎಕರೆ ಭೂಮಿಯನ್ನು ಇನಾಮ್ ಆಗಿ ನೀಡಿದರು. ಇನಾಮ್ ಆಗಿ ಪಡೆದ ಭೂಮಿಗೆ 'ಲಂಬಾಣಿ ಕೊಡುಗೆ' ಎಂದು ಕರೆಯುತ್ತಾರೆ.[೧೮]

ಅಂದಿನ ಆಳರಸರು ಜನಸಾಮಾನ್ಯರಲ್ಲಿ ಸಾಹಸ ಪ್ರಜ್ಞೆ, ಜನೋಪಯೋಗಿ ಕೆಲಸಗಳಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುವಂತೆ ಮಾಡಲು ಈ ರೀತಿಯ ಕೊಡುಗೆಗಳನ್ನು ನೀಡುತ್ತಿದ್ದರು. ಕೊಡುಗೆಗಳನ್ನು ಪಡೆದುಕೊಂಡವರು ಅಂದಿನ ಸಮಾಜದಲ್ಲಿ ಗೌರವಾದಾರಗಳಿಗೆ ಪಾತ್ರರಾಗುತ್ತಿದ್ದರು. ಈ ಹಿನ್ನೆಲೆಯಲ್ಲಿ ಈ ಐತಿಹ್ಯ ಮೂಡಿಬಂದಿದೆ.

**೧೬. ಕೆಂಚನಕಟ್ಟೆ**

ಹಿಂದೆ ಕಾಕುಬಾಳು ಗ್ರಾಮದಲ್ಲಿ ಗ್ರಾಮದೇವತೆಗೆ ಕೋಣ ಬಲಿ ಕೊಡುತ್ತಿದ್ದರಂತೆ. ಬಲಿ ಕೊಡುವ ಸಂದರ್ಭದಲ್ಲಿ, ಆ ಗ್ರಾಮದಿಂದ ಬಲಿಯಾದ ಕೋಣದ ರಕ್ತವನ್ನು ಮತ್ತೊಂದು ಗ್ರಾಮದವರು ತೆಗೆದುಕೊಂಡು ಹೋದರೆ, ಆ ಗ್ರಾಮದ ಸಂಪತ್ತೆಲ್ಲಾ, ಮತ್ತೊಂದು ಗ್ರಾಮಕ್ಕೆ ಹೋಗುತ್ತದೆ ಎಂಬ ನಂಬಿಕೆಯಿದೆ. ಇದನ್ನು 'ಹುಲುಸು' ಒಯ್ಯುವುದು ಎಂದು ಕರೆಯುತ್ತಾರೆ. ಗುಂಡ್ಲುವದ್ದಿಗೇರಿಯ ಕೆಂಚಪ್ಪ ಎಂಬುವವನು, ಕಾಕುಬಾಳು ಗ್ರಾಮದ ಕೋಣದ ಬಲಿಯ ರಕ್ತವನ್ನು ತಮ್ಮೂರಿಗೆ ತೆಗೆದುಕೊಂಡು ಓಡಿ ಹೋಗುತ್ತಿದ್ದನಂತೆ. ಕಾಕುಬಾಳು ಗ್ರಾಮದ ಗಡಿ ದಾಟುವ ಸಂದರ್ಭದಲ್ಲಿ ಕಾಕುಬಾಳಿನವರು ಬಂದು ಆತನ ತಲೆಯನ್ನು ಕಡಿದರಂತೆ. ಹಾಗಾಗಿ, ಅಲ್ಲಿದ್ದ ಕೆರೆಗೆ 'ಕೆಂಚನಕೆರೆ' ಎಂದೂ ಉದ್ದನೆಯ ಕೋಟೆ ಮಾದರಿಯ ಕಟ್ಟೆಗೆ 'ಕೆಂಚನಕಟ್ಟೆ' ಎಂದು ಹೆಸರಾಯಿತೆಂಬ ಐತಿಹ್ಯವಿದೆ.[೧೯]

**೫.೧. ಗ್ರಾಮದೇವತೆಗಳು**

ಭೂಮಿ ಸೃಷ್ಟಿಯಾದ ಎಷ್ಟೋ ವರ್ಷಗಳ ಮೇಲೆ ಭೂಮಿಯಲ್ಲಿ ಮನುಷ್ಯನ ಸೃಷ್ಟಿಯಾಗಿದೆ. ಸೃಷ್ಟಿಯ ಪ್ರಾರಂಭದಲ್ಲಿ ಮನುಷ್ಯ ಅಲೆಮಾರಿಯಾಗಿದ್ದ. ಆಹಾರವನ್ನು ಹುಡುಕುತ್ತಾ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದ. ಆ ಘಟ್ಟದಲ್ಲಿ ಅವನ ಬದುಕಿಗೆ ನಿರ್ದಿಷ್ಟವಾದ ನೆಲೆಯಿರಲಿಲ್ಲ. ಪ್ರಕೃತಿಯ ಪ್ರತಿಯೊಂದು ಘಟನೆಗಳು. ವಸ್ತು ವಿಶೇಷಗಳು, ಪ್ರಾಣಿ ಸಮುದಾಯ, ಸಸ್ಯ ಕೋಟಿಗಳೆಲ್ಲ ಕುತೂಹಲದ ವಿಷಯಗಳಾಗಿದ್ದವು. ಪ್ರತಿಯೊಂದರ ಬಗೆಗೂ ವಿಸ್ಮಯ, ಭಯ ಉಂಟಾಗುತ್ತಿತ್ತು. ಬಿಸಿಲು, ಚಳಿ, ಬಿರುಗಾಳಿ, ಗುಡುಗು, ಮಿಂಚು, ಮಳೆ, ಪ್ರವಾಹ, ಭೂಕಂಪ, ಕಾಳ್ಗಿಚ್ಚು ಮೊದಲಾದವುಗಳಿಂದ ಮನುಷ್ಯನ ಬದುಕಿಗೆ ಗಂಡಾಂತರ ಇರುವುದರ ಅನುಭವವಾಯಿತು. ತನಗಿಂತ ಬಲಿಷ್ಠವಾದ ಯಾವುದೋ ಶಕ್ತಿ ಇದೆ ಎಂಬ ಸುಳಿವು ದೊರೆಯಿತು. ಇದರಿಂದ ಭಯ ಆವರಿಸಿತು. ದುಷ್ಟ ಪ್ರಾಣಿಗಳೊಡನೆ ಹೋರಾಡುವುದರ ಜೊತೆಗೆ, ಪ್ರಕೃತಿಯ ಘಟನೆಗಳೊಡನೆಯೂ ಹೋರಾಡುವ ಅನಿವಾರ್ಯ ಕಂಡುಬಂತು. ದೊಡ್ಡ ಪ್ರಾಣಿಗೆ ಚಿಕ್ಕಪ್ರಾಣಿ, ಬಲಿಷ್ಠ ವ್ಯಕ್ತಿಗೆ ದುರ್ಬಲ ವ್ಯಕ್ತಿ ಹೆದರುವ ಅಥವಾ ಅವುಗಳನ್ನು ವಿನಯದಿಂದ ಒಲಿಸಿಕೊಳ್ಳುವ ಪ್ರಯತ್ನ ನಡೆಯಿತು. ಸೂರ್ಯ, ಚಂದ್ರ, ಗಾಳಿ, ಮಳೆ, ಬೆಂಕಿ ಮೊದಲಾದವುಗಳನ್ನು ಭಯದಿಂದ ಮೊದಲು ಪೂಜಿಸಲು ಪ್ರಾರಂಭಿಸಿದ. ಅವು ತನಗೆ ರಕ್ಷಣೆ ನೀಡಬೇಕೆಂದು ಪ್ರಾರ್ಥಿಸಿಕೊಂಡ. ಪ್ರಕೃತಿಯ ವಾಸ್ತವ ಘಟನೆಗಳು ಮನುಷ್ಯನಿಂದ ಪೂಜೆಯ

ವಸ್ತುಗಳಾದವು.[೨೦] ಆದಿಮಾನವನಿಗೆ ಪ್ರಕೃತಿಯ ಬದಲಾವಣೆಗಳು ಆಶ್ಚರ್ಯವನ್ನುಂಟು ಮಾಡಿದಂತೆ, ಪ್ರಕೃತಿಯ ಚಮತ್ಕಾರಗಳು ಭಯವನ್ನುಂಟು ಮಾಡಿದವು. ಇಂತಹ ಪ್ರಕೃತಿಯ ಪ್ರಕೋಪಗಳಿಂದ ಪಾರಾಗಲು ಆತ ಪ್ರಕೃತಿಯಲ್ಲಿನ ಮರ-ಗಿಡಗಳನ್ನು, ನೆಲ-ಜಲವನ್ನು ದೈವವೆಂದು ಪೂಜಿಸ ತೊಡಗಿದನು.[೨೧] ಮನುಷ್ಯನಲ್ಲಿರುವ ಭಯವೇ ದೇವರ ಕಲ್ಪನೆಗೆ ಕಾರಣವಾಯಿತು. ಈ ಹಿನ್ನೆಲೆಯಲ್ಲಿ ಗಮನಿಸಿದರೆ ಮಾನವನ ಹುಟ್ಟಿನಿಂದಲೇ ದೈವಗಳ ಬಗೆಗಿನ ಪರಿಕಲ್ಪನೆ ಪ್ರಾರಂಭವಾಗಿದೆಯೆನ್ನಬಹುದು.

ಮನುಷ್ಯನಿಗೆ ಪ್ರಜ್ಞೆ ಬಂದಂತೆಲ್ಲ ತನ್ನ ಬದುಕಿನ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ರೂಪಿಸಿಕೊಂಡ ನಂಬುಗೆಯೇ ದೇವರ ಪರಿಕಲ್ಪನೆಯ ಉಗಮಕ್ಕೆ ಮೂಲವಾಯಿತು. ಪ್ರಕೃತಿ ತೋರಿಸಿದ ರೌದ್ರತೆಗೆ ಹೆದರಿ ಕಂಗಾಲದ ಮನುಷ್ಯ ಅದಕ್ಕೆ ಶರಣು ಹೋಗುವುದರ ಮೂಲಕ ಪ್ರಾರ್ಥಿಸಿದರೆ, ನಮ್ಮನ್ನು ರಕ್ಷಿಸುತ್ತದೆ ಎಂಬ ಕಲ್ಪಿತ ಮನೋಭಾವ ಅತಿಮಾನುಷ ಶಕ್ತಿಯ ಪರಿಕಲ್ಪನೆ ಬೆಳವಣಿಗೆಯಾಗಲು ಕಾರಣವಾಯಿತು. ಮಾನವನ ಮನಸ್ಸು ಪಕ್ವಗೊಂಡಂತೆಲ್ಲ ಧರ್ಮದ ಬಗೆಗಿನ ಭಾವನೆಗಳೂ ನಾನಾ ರೀತಿಯಾಗಿ ರೂಪುಗೊಂಡವು.

ಮಾನವ ತನ್ನ ರಕ್ಷಣೆಯ ಜೊತೆಗೆ ತನ್ನವರ ಸಂರಕ್ಷಣೆಗಾಗಿ ತಾನು ನೆಲೆಸಿದ ಪ್ರದೇಶದಲ್ಲಿ ಇರುವ ಪ್ರಕೃತಿ ದೇವತೆಗಳಿಗೆ ಮಾರುಹೋದನು. ತನ್ನ ಕಲ್ಪನೆಯ ಆಳದಲ್ಲಿ ತನಗೆ ಇಷ್ಟ ಬಂದಂತಹ ದೇವತೆಗಳ ನಾಮಕರಣ ಮಾಡಿದನು. ಅವುಗಳನ್ನು ಭಯ, ಭಕ್ತಿ, ಗೌರವ, ಶ್ರದ್ಧೆಯಿಂದ ಆರಾಧನೆಯನ್ನು ಮಾಡತೊಡಗಿದನು. ಈ ಪರಂಪರೆಯಿಂದ ಜನರಲ್ಲಿ ನಂಬಿಕೆ, ಭಕ್ತಿ, ಶ್ರದ್ಧೆಗಳು ವ್ಯಾಪಕವಾಗುತ್ತ ನಡೆದವು. ಆಗ ಮೂರ್ತಿಗಳಿಗೆ ಒಂದು ಸ್ವರೂಪ ಬಂದಿರಬೇಕು. ತಾನು ಆರಾಧಿಸುವಂಥ ದೇವತೆಗಳಿಂದ ಪ್ರತಿಫಲ ದೊರೆಯದಿದ್ದಾಗ ಮತ್ತೊಂದು ಹೆಸರಿನಲ್ಲಿ ಮೂರ್ತಿಯನ್ನು ತಯಾರಿಸಿ ಅದಕ್ಕೆ ಆರಾಧನೆ ಮಾಡಲು ಪ್ರಾರಂಭಿಸಿದನು.[೨೨]

ಒಂದು ದೇವರು ವಿಫಲವಾದಾಗ ಮತ್ತೊಂದನ್ನು ಸೃಷ್ಟಿಸಿ ಅದಕ್ಕೆ ಶರಣು ಹೋಗ ತೊಡಗಿದನು. ಇದರಿಂದ ದೇವರುಗಳ ಸಂಖ್ಯೆ ಬೆಳೆಯಿತು. ದೇವರ ನಂಬಿಕೆ, ಪೂಜಾ ಪದ್ಧತಿಗಳಲ್ಲಿ ಕ್ರಮಬದ್ಧತೆ ಉಂಟಾಯಿತು. ಭಯದ ದೇವರು ಭಕ್ತಿಯ ದೇವರಾಯಿತು. ದೆವ್ವವಾಗಿ ಕಾಣಿಸಿಕೊಂಡಿದ್ದು ದೇವರಾಗಿ ಪರಿವರ್ತನೆಯಾಯಿತು. ವಾಸಕ್ಕಾಗಿ ಗ್ರಾಮಗಳನ್ನು ಸೃಷ್ಟಿಸಿಕೊಂಡ ಮನುಷ್ಯ, ತನ್ನ ಗ್ರಾಮದಲ್ಲಿ ತನ್ನ ದೇವತೆಯನ್ನು ಸ್ಥಾಪಿಸಿದ. ಮನುಷ್ಯ ಗ್ರಾಮಗಳನ್ನು ಹುಟ್ಟು ಹಾಕಿದಾಗ ಗ್ರಾಮದೇವತೆಗಳು ಹುಟ್ಟಿಕೊಂಡವು.[೨೩]

ನಮ್ಮ ಸಂಸ್ಕೃತಿಯ ಆಳವನ್ನು ಅವಲೋಕಿಸಿದಾಗ ಅಲ್ಲಿ ಸ್ತ್ರೀಯು ತನ್ನ ಪವಾಡವನ್ನು ಬೀರಿದ್ದು ಅರಿವಾಗದಿರದು. ಅನೇಕ ಸ್ತ್ರೀಯರು ತಮ್ಮ ಪತಿಯ ಮರಣದ ನಂತರ ಸತಿ ಹೋದವರು, ತಮ್ಮನ್ನು ತಾವು ಬಲಿಕೊಟ್ಟು ಕೊಂಡವರು, ಬೇರೆ ಬೇರೆ ವಿಧಾನಗಳಲ್ಲಿ ಸಿಲುಕಿ ಶಿಕ್ಷೆಗೆ ಗುರಿಯಾದವರು ಇವರೆಲ್ಲರೂ ಚರಿತ್ರೆಯ ಹಾಗೂ ಧರ್ಮದ ನಂಬಿಕೆಯ ಹಿನ್ನೆಲೆಯಲ್ಲಿ

ಗ್ರಾಮದೇವತೆಗಳಾಗಿ ರೂಪುಗೊಂಡಿರುವ ಸಾಧ್ಯತೆಯಿದೆ.[೨೪] ಗ್ರಾಮದೇವತೆಗಳ ಸೃಷ್ಟಿಗೆ ನಾನಾ ಕಾರಣಗಳಿವೆ. ಪ್ರಾರಂಭದಲ್ಲಿ ಪ್ರಕೃತಿಯ ಅಘಟಿತ ಘಟನೆಗಳು ಅವುಗಳ ಮಹತ್ವದಿಂದ ಪೂಜಾರ್ಹವಾದವು. ಆದಿಶಕ್ತಿಯ ವಿವಿಧ ರೂಪಗಳೂ ದೇವತೆಗಳಾದವು. ಪೂಜೆಗೆ ಪಾತ್ರವಾದವು. ಇವೆಲ್ಲ ಹೆಣ್ಣುದೇವತೆಗಳು.[೨೫] ಸಮಾಜದಲ್ಲಿ ಹೆಣ್ಣು ದೇವರುಗಳು ತುಂಬ ಪ್ರಭಾವ ಬೀರಲು ಹಿಂದೆ ಹೆಣ್ಣಿಗೆ ಕೊಡುತ್ತಿದ್ದಂಥ ಶ್ರೇಷ್ಠ ಸ್ಥಾನವೇ ಮುಖ್ಯಕಾರಣ. ಪುರುಷನಿಗಿಂತ ಹೆಣ್ಣಿನ ಸ್ಥಾನ ಉನ್ನತವಾದದ್ದು. ಆಕೆ ಪವಿತ್ರಳು ಎಂಬ ಅಭಿಪ್ರಾಯವೂ ಇತ್ತು. ಈ ಹಿನ್ನೆಲೆಯಲ್ಲಿ ಹೆಣ್ಣು ದೇವರುಗಳು ಪ್ರಾಧಾನ್ಯತೆ ಪಡೆದುಕೊಂಡವು.[೨೬]

ಕಂಠಸ್ತ ಪರಂಪರೆಯ ವಿವರಗಳಿಗೆ ಮನ್ನಣೆ ನೀಡುವ ವಿದ್ವಾಂಸರು "ಒಂದು ಊರು ಪ್ರಾರಂಭವಾದಾಗಲೇ ಇದ್ದ ಅಥವಾ ಪ್ರಾರಂಭವಾದಾಗ ಸ್ಥಾಪಿಸಿದ ಆ ಊರಿನ ರಕ್ಷಣಾ ದೇವತೆ ಅಥವಾ ಅಧಿದೇವತೆ ಅಥವಾ ಮೂಲ ದೇವತೆಯೇ ಆ ಊರಿನ ಗ್ರಾಮದೇವತೆ"[೨೭] ಎಂದು ಅಭಿಪ್ರಾಯಪಡುತ್ತಾರೆ. ಏನೇ ಆದರೂ ಗ್ರಾಮದೇವತೆ ಗ್ರಾಮೀಣ ಜನಜೀವನದ ಮಾನಸಿಕ ಅಗತ್ಯ. ಅವರ ಸಾಮರಸ್ಯದ ಜೀವಾಳ. ಅವರ ಬದುಕಿನ ಮೂಲ ಸೆಲೆ ಹಾಗೂ ಗಾಢ ನಂಬಿಕೆಯ ಪ್ರತೀಕ.

ಗ್ರಾಮದೇವತೆಗಳು ಇಲ್ಲದ ಹಳ್ಳಿಗಳೇ ಇಲ್ಲ ಎಂದು ಹೇಳಬಹುದು. ಕೆಲವು ಕಡೆ ಎರಡು, ಮೂರು ಊರುಗಳಿಗೆ ಒಂದರಂತೆ ಗ್ರಾಮದೇವತೆಗಳಿರಬಹುದು. ಇವುಗಳ ಆರಾಧನೆ ಆರ್ಯ ಪೂರ್ವಕಾಲದಿಂದಲೂ ನಡೆಯುತ್ತ ಬಂದಿದೆ. ಇವುಗಳ ವಾಸಸ್ಥಾನ ಇಂಥದ್ದೇ ಎಂದು ನಿರ್ದಿಷ್ಟವಾಗಿ ಹೇಳುವಂತಿಲ್ಲ. ಊರ ಮುಂಭಾಗದಲ್ಲಿರಬಹುದು. ಊರ ಮಧ್ಯೆ ಭಾಗದಲ್ಲಿರಬಹುದು ಅಥವಾ ಊರಿನ ಹೊರಗಡೆ ಇರಬಹುದು. ಸಾಮಾನ್ಯವಾಗಿ ಗ್ರಾಮದೇವತೆಗಳ ವಾಸಸ್ಥಾನ ಊರ ಹೊರಗಡೆಯೇ ಇರುತ್ತದೆ. ಏಕೆಂದರೆ ಊರಿಗೆ ಯಾವುದೇ ದುಷ್ಟಶಕ್ತಿ ಪ್ರವೇಶ ಮಾಡದಂತೆ ಆ ದೇವತೆ ಕಾವಲಿರುತ್ತದೆ.[೨೮] ಗ್ರಾಮಸ್ಥರ ಅಭಿಪ್ರಾಯದಂತೆ ಗ್ರಾಮದೇವತೆಯು ಗ್ರಾಮದ ರಕ್ಷಕ ದೇವತೆಯೆನ್ನಿಸಿಕೊಳ್ಳುತ್ತಿದ್ದಳು. ಅವಳು ಗ್ರಾಮದ ಬೆಳೆಗಳನ್ನು ಕಾಪಾಡುತ್ತಾಳೆ. ಹೈನು ಹೆಚ್ಚಿಸುತ್ತಾಳೆ, ಸಕಾಲಕ್ಕೆ ಮಳೆಯನ್ನು ತರುತ್ತಾಳೆ, ಒಡ್ಡುಗಳನ್ನು ಸಂರಕ್ಷಿಸುತ್ತಾಳೆ, ಸಾಂಕ್ರಾಮಿಕ ರೋಗಗಳು ಊರೊಳಗೆ ಬಾರದಂತೆ ತಡೆಯುತ್ತಾಳೆ, ಭಕ್ತರ ರೋಗ-ರುಜಿನಗಳನ್ನು ನಿವಾರಿಸುತ್ತಾಳೆ, ಸಂಕಷ್ಟಗಳನ್ನು ಪರಿಹರಿಸುತ್ತಾಳೆ, ಶಿಶುಮರಣವನ್ನು ನಿಲ್ಲಿಸುತ್ತಾಳೆ, ಭೂತ-ಪ್ರೇತ-ಗಾಳಿಯನ್ನು ನಿವಾರಿಸುತ್ತಾಳೆ, ಹುಚ್ಚು ಬಿಡಿಸುತ್ತಾಳೆ, ಬಂಜೆತನವನ್ನು ಹೋಗಲಾಡಿಸಿ ಸಂತಾನ ಕೊಡುತ್ತಾಳೆ. ಗ್ರಾಮಸ್ಥರು ನಂಬುವಂತೆ ಈ ತಾಯಿ ಇಂಥ ಅನೇಕ ಕಾರ್ಯಗಳನ್ನು ನಿರ್ವಹಿಸಬಲ್ಲಳು ಅಥವಾ ನಿರ್ವಹಿಸುತ್ತಿದ್ದಳು.[೨೯]

ಗ್ರಾಮದೇವತೆಯ ಕಲ್ಪನೆ ಭಾರತದ ಸಂದರ್ಭದಲ್ಲಿ ದ್ರಾವಿಡ ಜನಾಂಗದ ಪ್ರಾರಂಭದ ಹಂತದಲ್ಲಿ ಹುಟ್ಟಿಕೊಂಡಿತು. ವ್ಯವಸಾಯಕ್ಕಾಗಿ ಒಂದೆಡೆ ಸೇರಿದ ಜನಾಂಗ ತಮ್ಮದೇ ಆದ

ರೀತಿ, ನೀತಿ, ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದರು. ಕ್ರಮೇಣ ಇವರ ಬುಡಕಟ್ಟುಗಳೇ ಮುಂದೆ ಗ್ರಾಮಗಳಾಗಿ ರೂಪುಗೊಂಡವು. ಹೀಗೆ ಉಂಟಾದ ಗ್ರಾಮಗಳಿಗೆ ಒಂದು ದೇವತೆಯ ಅವಶ್ಯಕತೆಯುಂಟಾಯಿತು. ತಮ್ಮದೇ ಆದ ಗ್ರಾಮಗಳಲ್ಲಿ ಅವರ ಆಚಾರ, ವಿಚಾರಗಳು ಮೊಳಕೆಯೊಡೆದು ಬೃಹದಾಕಾರವಾಗಿ ಬೆಳೆಯತೊಡಗಿತು. ಬಹುಶಃ ದಕ್ಷಿಣ ಭಾರತದಲ್ಲಿ ಶಿವನನ್ನು ಬಿಟ್ಟರೆ ಇಷ್ಟು ವ್ಯಾಪಕವಾದ ಆಚರಣೆ ಬೇರೊಂದಿಲ್ಲ. ಮಾತೃಪೂಜೆಯಷ್ಟು ಯಾವ ಪುರುಷ ದೇವತೆಯ ಪೂಜೆಯೂ ವ್ಯಾಪಕವಾಗಿ ಆದಿ ಐತಿಹಾಸಿಕ ಭಾರತದಲ್ಲಿರಲಿಲ್ಲ.[೩೦] ಒಟ್ಟಿನಲ್ಲಿ ಗ್ರಾಮದೇವತೆಗಳ ಕಲ್ಪನೆಗೆ ಮಾತೃಪ್ರಧಾನ ಕುಟುಂಬವೇ ಕಾರಣ. ಭಯ, ಭಕ್ತಿ, ಭೀತಿಯಿಂದ ಹುತ್ತ, ವೃಕ್ಷ ಶಿಲೆಗಳನ್ನು ಆರಾಧಿಸುತ್ತಿದ್ದ ಗ್ರಾಮೀಣರು ಒಂದು ಕಾಲಘಟ್ಟದಲ್ಲಿ ಅವುಗಳಲ್ಲಿ ಗ್ರಾಮದೇವತೆಗಳನ್ನು ಕಂಡುಕೊಂಡರು. ತಮ್ಮ ಜೀವನದ ಅನುಭವದಿಂದಲೇ ಹುಟ್ಟಿದ್ದ ಪುರಾಣ ಕಥೆಗಳನ್ನು ಅವುಗಳಿಗೆ ಜೋಡಿಸಿದರು. ಅನೇಕ ಗ್ರಾಮದೇವತೆಗಳು ಅತಿ ಪ್ರಾಚೀನವಾದ ಭೂಮಿಪೂಜೆ ಅಥವಾ ಮಾತೃಪೂಜೆಯ ಕುರುಹುಗಳಲ್ಲದೆ ಬೇರೆಯಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ.[೩೧]

ಕರ್ನಾಟಕದಾದ್ಯಂತ ಹಲವು ಗ್ರಾಮಗಳಲ್ಲಿ ಕಂಡುಬರುವ ಹುಲಿಗೆಮ್ಮ, ಯಲ್ಲಮ್ಮ ಹಾಗೂ ಇತರೆ ನಗ್ನ ದೇವತೆಗಳು ಫಲಶಕ್ತಿಯ ಹಾಗೂ ಲೈಂಗಿಕತೆಯ ಪ್ರತೀಕವೆಂದು ಹೇಳುತ್ತಾರೆ. ಗ್ರಾಮ ಸಮುದಾಯಗಳು ಬೆಳೆದ ಮೇಲೆ ಗ್ರಾಮದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಯಿದೆ ಅಥವಾ ಐತಿಹಾಸಿಕ ಕಾಲದಲ್ಲಿ ನಡೆದ ಕೆಲವು ಘಟನೆಗಳು ಹಾಗೂ ಆಕಸ್ಮಿಕಗಳು ಕೂಡಾ ಇಂಥ ದೇವತೆಗಳನ್ನು ಸೃಷ್ಟಿಸಿರಬಹುದು.[೩೨] ಇಲ್ಲಿ ಹೆಣ್ಣು ಒಂದು ಜನಾಂಗದ ಸಂಕೇತವಷ್ಟೇ ಅಲ್ಲ. ಜೀವೋತ್ಪತ್ತಿಯ ಮೂಲಶಕ್ತಿಯಾಗಿದ್ದಳು. ಆಕೆಯ ಅಂಗಾಂಗಗಳು ಮತ್ತು ಗುಣಶಕ್ತಿಗಳಿಗೆ ಸೃಷ್ಟಿ ಶಕ್ತಿಯ ಸಾಮರ್ಥ್ಯವಿದೆಯೆಂದು ಭಾವಿಸಲಾಯಿತು. ಅವುಗಳನ್ನು ಚೈತನ್ಯ ಶಕ್ತಿಯ ಸಂಕೇತಗಳೆಂದು ತಿಳಿಯಲಾಯಿತು. ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಾತೃವೇ ಧರ್ಮದ ಕೇಂದ್ರ ಸ್ಥಾನದಲ್ಲಿದ್ದಳು. ಆಹಾರ ಸಂಗ್ರಹಣೆ ಮತ್ತು ಆಹಾರದ ಉತ್ಪಾದನೆ ಸ್ತ್ರೀಯ ಕರ್ತವ್ಯವಾಗಿತ್ತು. ಇದರಿಂದ ಸ್ತ್ರೀಯ ಸ್ಥಾನಮಾನ ಹೆಚ್ಚಿತು. ಈ ಮಾನ್ಯತೆ ಅವಳನ್ನು ದೈವತ್ವಕ್ಕೇರಿಸುವವರೆಗೆ ಹೋಯಿತು. ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಗಿದ್ದ ಸಸ್ಯಧಾರಣೆ ಇವೆರೆಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರೆಡೂ ಪೂಜ್ಯ ವಸ್ತುಗಳೆಂದು ಭಾವಿಸಿದ. ಸಮೃದ್ಧಿಯ ಆಚರಣೆಯಾಗಿ ಮಾಟ ರೂಪುಗೊಂಡಿತು. ಇದರ ಮುಂದುವರೆದ ರೂಪವೇ ಶಾಕ್ತಪಂಥ.[೩೩]

ಕೃಷಿಯ ಆರಂಭ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೆ ಅನೇಕ ಸ್ತ್ರೀ ದೇವತೆಗಳ ಹುಟ್ಟಿಗೆ ಕಾರಣವಾಯಿತು. ಈಗಾಗಲೇ ಇದ್ದ ಸ್ತ್ರೀ ದೇವತೆಗಳು ಪ್ರವರ್ಧಮಾನಕ್ಕೆ ಬರಲು ಪೂರಕವಾಯಿತು. ಸ್ತ್ರೀಯರನ್ನು ಕುರಿತ ಪೂಜ್ಯಭಾವನೆಯು

ಜೊತೆಗೆ ಪ್ರಪಂಚದ ಎಲ್ಲಾ ದೇವರುಗಳು ಶಕ್ತಿಯಿಂದ ಸೃಷ್ಟಿಯಾದವು ಎಂಬ ನಂಬಿಕೆ ಬೆಳೆಯತೊಡಗಿತು. ಜಗದಂಬೆ, ಜಗನ್ಮಾತೆ ಈ ಪರಿಕಲ್ಪನೆಗಳು ಜನಮನದಲ್ಲಿ ಗಟ್ಟಿಯಾದವು. ಶಕ್ತಿ ಚಿರಕನ್ನೆಯೆಂದೂ ಗರ್ಭಧರಿಸದೆಯೇ ದೇವರುಗಳನ್ನು, ಜನಸಮುದಾಯವನ್ನು ಸೃಷ್ಟಿಸಿದಳೆಂದೂ ಪುರಾಣ ಕಥೆಗಳು ಹುಟ್ಟಿಕೊಂಡವು.[೨೪]

ಬೃಹತ್ ಶಿಲಾಯುಗದ ಜನಾಂಗದಲ್ಲಿ ಮಾತೃದೇವತೆಯ ಆರಾಧನೆ ಇದ್ದುದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಹಳೆಯ ಶಿಲಾಯುಗದಲ್ಲಿ ಹೆಣ್ಣನ್ನು ಕುರಿತಂತೆ ಭಯ ಮತ್ತು ಕುತೂಹಲಗಳು ಮಾತ್ರ ಪ್ರಧಾನವಾಗಿದ್ದು ಆಕೆಯ ಆರಾಧನೆಗೆ ಇವು ಪುಷ್ಟಿ ಕೊಟ್ಟವು. ಆದರೆ ಈ ಭಾವನೆಗಳಿಗೆ ಹೊಸ ಶಿಲಾಯುಗದಲ್ಲಿ ಒಂದು ಖಚಿತ ರೂಪ ಬಂದಿದ್ದನ್ನು ನೋಡಬಹುದು. ಈ ಕಾಲಘಟ್ಟದಲ್ಲಿ ಸಸ್ಯವು ಬೆಳೆಯಲು ಕಾರಣವಾಗುವ ಬೀಜದ ಪಾತ್ರವನ್ನು ಮಾನವನು ಅರಿತಿರಲಿಲ್ಲ. ಹಾಗೆಯೇ ಮಗುವಿನ ಸೃಷ್ಟಿಗೆ ಕಾರಣವಾಗುವ ಪುರುಷನ ಪಾತ್ರವೂ ತಿಳಿದಿರಲಿಲ್ಲ. ಆದ್ದರಿಂದ ಸೃಷ್ಟಿ ಕಾರ್ಯ ಹೆಣ್ಣು ಮತ್ತು ಭೂಮಿಯಿಂದ ಮಾತ್ರ ಸಾಧ್ಯ ಎಂದು ಭಾವಿಸಲಾಗಿತ್ತು. ಮನುಷ್ಯನ ಈ ಭಾವನೆ ಸ್ತ್ರೀ ಆರಾಧನೆಗೆ ದಾರಿ ಮಾಡಿಕೊಟ್ಟಿತು.[೨೫] ಇದಕ್ಕೆ ಸಂಬಂಧಿಸಿದಂತೆ ಹರಪ್ಪಾ ಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆಯು ಸಿಕ್ಕಿದ್ದು ಇದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ, ಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊಮ್ಮುತ್ತಿರುವ ಸ್ತ್ರೀ ಚಿತ್ರವನ್ನು ಮಾತೃದೇವತೆಯೆಂದು ಹೇಳಲಾಗಿದೆ. ಈಕೆಯನ್ನು ಶಾಕಾಂಬರಿ ಎಂದು ಗುರುತಿಸುತ್ತಾರೆ.[೨೬] ಸಿಂಧೂ ಸಂಸ್ಕೃತಿಯಲ್ಲಿ ಮಾತೃದೇವತೆಯನ್ನು ಭೂಮಿಯ ತಾಯಿಯೆಂದೂ, ಮಾನವರ ಮಾತೆಯೆಂದೂ, ದೇವತೆಗಳ ತಾಯಿಯೆಂದೂ, ಅರಣ್ಯ, ಪ್ರಾಣಿ, ಪಕ್ಷಿ, ಧಾನ್ಯ ಇವುಗಳ ಮಾತೃವೆಂದೂ ಪೂಜಿಸಲಾಗಿದೆ. ಸ್ತನ, ಗರ್ಭ, ಯೋನಿ ಇವುಗಳನ್ನು ಮಾತೃದೇವತೆಯ ಸಂಕೇತಗಳೆಂದು ಅವರು ಭಾವಿಸಿದ್ದರು.

ಗ್ರಾಮದೇವತೆಗಳು ಶಕ್ತಿದೇವತೆಗಳಾಗಿದ್ದರಿಂದ ಉಗ್ರತೆ ಹೆಚ್ಚು. ಅವುಗಳಲ್ಲಿ ಕೆಲವು ಕ್ರಮೇಣ ಶಿಷ್ಟ ದೇವತೆಗಳಾಗಿವೆ. ಗ್ರಾಮದೇವತೆಗಳ ಬಗೆಗೆ ಹಳ್ಳಿಗರಿಗೆ ಭಯ, ಭಕ್ತಿ, ಅಪಾರ. ಸೃಷ್ಟಿಯ ಆದಿಯಲ್ಲಿ ಮನುಷ್ಯ ಮಾಂಸಾಹಾರಿಯಾಗಿದ್ದ. ಬೇಸಾಯ ಗೊತ್ತಿರದ ಕಾಲದಲ್ಲಿ ಇದು ಅನಿವಾರ್ಯವಾಗಿತ್ತು. ಆಗ ತಾನು ಸೃಷ್ಟಿಸಿದ ದೇವತೆಗೂ ತಾನು ತಿನ್ನುವ ಆಹಾರವನ್ನೇ ನೈವೇದ್ಯವಾಗಿ ಅರ್ಪಿಸುತ್ತಿದ್ದ. ಬಲಿ ಕೊಡುವುದರಿಂದ ದೇವತೆಯನ್ನು ತೃಪ್ತಿಪಡಿಸಲು ಎಂತಹ ಬಲಿಕೊಡಲೂ ಹಿಂಜರಿಯುತ್ತಿರಲಿಲ್ಲ. ಮನುಷ್ಯ ಸುಲಭವಾಗಿ ಹಿಡಿದು ಪಳಗಿಸಬಹುದಾದ ಕೋಣ, ಕುರಿ, ಮೇಕೆ, ಕೋಳಿ ಮೊದಲಾದವು ಬಲಿಪಶುಗಳಾದವು.

ವರಗಳನ್ನು ಕೊಡುವುದರ ಮೂಲಕ ಜನರನ್ನು ಆಕರ್ಷಿಸುವ ದೇವತೆಗಳು ಗ್ರಾಮದೇವತೆಗಳೆನಿಸಿಕೊಂಡವು. ನಮಗೆ ತಿಳಿದಿರುವಂತೆ ವಿಷ್ಣು, ಇಂದ್ರ ಇತ್ಯಾದಿ ಶಿಷ್ಟ ದೇವತೆಗಳು ಸಾಮಾಜಿಕವಾಗಿ ಮೇಲಿನ ಹಂತದಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಪೂಜಿಸುವ ದೇವತೆಗಳಾಗಿವೆ. ಶೂದ್ರರು ಮತ್ತು ನಂತರದಲ್ಲಿ ಪ್ರಚಾರಕ್ಕೆ ಬಂದ ಪಂಚಮ ವರ್ಗದವರು ಅಂದು ತಮಗಿದ್ದ ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ ಮೇಲ್ವರ್ಗದ ದೇವತೆಗಳನ್ನು ಪೂಜಿಸಬಾರದೆನ್ನುವ ಕಟ್ಟಳೆ ಇದ್ದಿರಬಹುದು ಅಥವಾ ಅಂಥ ದೇವತೆಗಳನ್ನು ಪೂಜಿಸಲು ತಾವು ಅರ್ಹರಲ್ಲವೆನ್ನುವ ನೈತಿಕ ಭಯವೂ ಅವರನ್ನು ಕಾಡಿರಬಹುದು. ಈ ಕಾರಣದಿಂದಾಗಿ ಶೂದ್ರರು ಮತ್ತು ಪಂಚಮರು ತಮ್ಮ ನಂಬಿಕೆ, ನಡವಳಿಕೆ, ಆಚಾರ, ವಿಚಾರ ಪ್ರತಿರೂಪವಾಗಿ ಹಲವು ದೇವತೆಗಳ ಪೂಜೆಯನ್ನು ಬಳಕೆಯಲ್ಲಿ ತಂದುಕೊಂಡಿರಬಹುದು. ಹೀಗಾಗಿ ಮೇಲ್ವರ್ಗದವರ ದೇವತೆಗಳು ನೈವೇದ್ಯದಿಂದ ತೃಪ್ತಿಗೊಂಡರೆ, ಗ್ರಾಮದೇವತೆಗಳು ಬಲಿಯನ್ನಪೇಕ್ಷಿಸುತ್ತವೆ. ಹೀಗೆ ಆಯಾ ದೇವತೆಗಳ ಪೂಜಾ ವಿಧಾನಗಳು ಆಯಾ ವರ್ಗಗಳ ನಂಬಿಕೆ, ನಡವಳಿಕೆಗಳನ್ನು ಅತ್ಯಂತ ಸ್ಪಷ್ಟವಾಗಿ ವ್ಯಕ್ತಪಡಿಸುತ್ತವೆ. ಆದ್ದರಿಂದ ಶಿಷ್ಟ ದೇವತೆಗಳ ಆರಾಧನಾ ವಿಧಾನ ಮತ್ತು ಗ್ರಾಮದೇವತೆಗಳ ಆರಾಧನಾ ವಿಧಾನ ಬೇರೆ, ಬೇರೆಯೇ ಆಗಿರುತ್ತದೆ.[೩೨] ಹೀಗೆ ಗ್ರಾಮದೇವತೆಯ ಉಗಮ ದೇಶದ ಎಲ್ಲೆಡೆಯೂ ಆಗಿ ಬೇರೆ ಬೇರೆ ಹೆಸರುಗಳಿಂದ, ಬೇರೆ ಬೇರೆ ರೂಪಗಳಲ್ಲಿ ಇಂದಿಗೂ ಪೂಜಿಸಲ್ಪಡುತ್ತಿದೆ. ಆಧುನೀಕರಣದ ತೀವ್ರತೆ ಎಷ್ಟೇ ಇದ್ದರೂ, ಮಾನವನ ಮೌಲ್ಯಗಳನ್ನು ತಿದ್ದಿ, ಆತನ ಅಂತರಂಗದಲ್ಲಿ ಗ್ರಾಮದೇವತೆ ಇಂದಿಗೂ ಜೀವಂತವಾಗಿದೆ.

**ಬಲಿಯಾಚರಣೆ**

ಬಲಿಯಾಚರಣೆಯು ಗ್ರಾಮದೇವತೆಗಳ ಹಬ್ಬಗಳಲ್ಲಿ ಪ್ರಮುಖ ಅಂಶವಾಗಿದೆ. ಈ ಆಚರಣೆ ಒಂದು ಜನಾಂಗ ತಮ್ಮ ದೇವತೆಯ ಬಗ್ಗೆ ಹೊಂದಿರುವ ನಂಬಿಕೆಯನ್ನು ಎತ್ತಿತೋರಿಸುತ್ತದೆ. ಹಿಂದಿನ ಕಾಲದಲ್ಲಿ ರೋಗ-ರುಜಿನಗಳಿಂದ ಮಳೆ, ಬೆಳೆ ಇಲ್ಲದೆ ನೊಂದ ಜನ ತಮ್ಮ ಕಷ್ಟಗಳ ನಿವಾರಣೆಗಾಗಿ ದೇವತೆಯ ಮೊರೆ ಹೋದರು. ದೇವತೆಗೆ ಹರಕೆ ಹೊತ್ತರು ಹಾಗೂ ಬಲಿ ನೀಡುವುದರ ಮೂಲಕ ತಮ್ಮ ಭಕ್ತಿಯನ್ನು ತೋರಿಸಿದರು. ಹೀಗೆ ಬಲಿ ನೀಡುವುದರಿಂದ ದೇವಿ ತೃಪ್ತಳಾಗಿ ರೋಗ-ರುಜಿನಗಳನ್ನು ಇಲ್ಲವಾಗಿಸುತ್ತಾಳೆ ಹಾಗೂ ಮಳೆ, ಬೆಳೆ ಸಮೃದ್ಧಿಯಾಗಿ ಬರುತ್ತದೆ ಎಂಬ ನಂಬಿಕೆ ಅವರಲ್ಲಿತ್ತು. ಈ ನಂಬಿಕೆಯೇ ಆಚರಣೆಗೆ ಮೂಲವಾಯಿತು.

ಬಲಿಗಾಗಿ ಕೋಣ, ಕುರಿ, ಮೇಕೆ, ಕೋಳಿಗಳನ್ನು ನೀಡುವ ಸಂಪ್ರದಾಯ ಹಿಂದಿನಿಂದ ಬೆಳೆದುಬಂದಿದೆ. ಮೊದಲು ಬಲಿಗಾಗಿ ಸಿದ್ಧಗೊಳಿಸುವ ಪ್ರಾಣಿಯನ್ನು ದೇವರ ಹೆಸರಿನಲ್ಲಿ ಮೀಸಲು ಬಿಡುತ್ತಾರೆ. ಈ ಪ್ರಾಣಿಯು ಸುತ್ತಮುತ್ತ ಯಾರ ಪ್ರದೇಶದಲ್ಲಿ, ಯಾವ ಹೊಲ, ಗದ್ದೆಗಳಲ್ಲಿ ಬೆಳೆಗಳನ್ನು ತಿಂದರೂ ಸುಮ್ಮನಿರಬೇಕು. ಇದನ್ನು ಯಾರೂ ತಡೆಯುವ ಹಾಗಿಲ್ಲ.

ಹಾಗೇನಾದರೂ ಯಾರಾದರೂ ಅದನ್ನು ತಡೆದರೆ ಅಥವಾ ಶಿಕ್ಷೆಗೆ ಒಳಪಡಿಸಿದರೆ ಗ್ರಾಮದೇವತೆಯ ಕೋಪಕ್ಕೆ ಒಳಗಾಗುವವರೆಂಬ ಭಯ ಗ್ರಾಮೀಣರಲ್ಲಿದೆ.

ಬಲಿಗೆ ಸಿದ್ಧಗೊಳಿಸಲಾದ ಕೋಣ ಅಥವಾ ಕುರಿಯನ್ನು ೩ ದಿನಗಳ ಕಾಲ ಸುಣ್ಣದ ನೀರನ್ನು ಕುಡಿಸಿ ಯಾವ ಆಹಾರವನ್ನೂ ನೀಡದೆ ಉಪವಾಸ ಇಡಲಾಗುತ್ತದೆ. ಬಲಿಯ ಒಂದು ದಿನದ ಮುಂಚೆ ಅದನ್ನು ಚೆನ್ನಾಗಿ ತೊಳೆದು ಶುಭ್ರಗೊಳಿಸಿ ಹೂಗಳಿಂದ ಅಲಂಕರಿಸಿ ಹಣೆಗೆ ಅರಿಶಿಣ, ಕುಂಕುಮವಿಟ್ಟು ಪೂಜಿಸಲಾಗುತ್ತದೆ. ಪೂಜಿಸಿದ ನಂತರ ಅದನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿ, ದೇವಿ ಗುಡಿಯ ಸುತ್ತ ಪ್ರದಕ್ಷಿಣೆ ಹಾಕಿಸಿ, ಗುಡಿಯ ಮುಂಬಾಗಿಲಿಗೆ ಮುಖ ಮಾಡಿಸಿ, ಬಲಿಯ ಕಂಬಕ್ಕೆ ಕಟ್ಟಿ ನಿಲ್ಲಿಸುತ್ತಾರೆ. ಮರುದಿನ ಮುಂಜಾನೆ ನಾಲ್ಕು ಗಂಟೆಯ ಸಮಯಕ್ಕೆ ಈ ಬಲಿಯ ಆಚರಣೆಯು ಊರ ಪ್ರಮುಖರ ಸಮ್ಮುಖದಲ್ಲಿ ನಡೆಯುತ್ತದೆ. ಅದನ್ನು ಕಡಿದು ಬಲಗಾಲನ್ನು ಬಾಯಿಗಿಟ್ಟು ಅದರ ಸತುವಿನಿಂದ(ಕೊಬ್ಬು) ದೇವತೆಗೆ ದೀಪವನ್ನು ಉರಿಸಲಾಗುತ್ತದೆ. ಬಲಿಯಾದ ಪ್ರಾಣಿಯ ರಕ್ತದಿಂದ ಅನ್ನವನ್ನು ಕಲಿಸಿ ಊರಿನ ಸುತ್ತಾ ಬಲಿಯೋ ಬಲಿ ಎಂದು ಕೂಗುತ್ತಾ ಹಾಕುತ್ತಾ ಹೋಗುತ್ತಾರೆ. ಇದರಿಂದ ಊರಿಗೆ ದುಷ್ಟ ಶಕ್ತಿಗಳು ಪ್ರವೇಶಿಸುವುದಿಲ್ಲವೆಂಬ ನಂಬಿಕೆ ಇದೆ. ಮಳೆ-ಬೆಳೆ ಸಮೃದ್ಧಿಯಾಗಿ, ಯಾವ ರೋಗ-ರುಜಿನಗಳು ಬರುವುದಿಲ್ಲ ಎಂಬ ಭರವಸೆ ಜನರಿಗೆ ಮೂಡುತ್ತದೆ.

ದೇವತೆಯ ಬಲಿಗೆ ಒಳಗಾಗುವ ಪ್ರಾಣಿಯ ತಲೆಯ ಮೇಲೆ ನೀರನ್ನು ಹಾಕಿದಾಗ ಅದು ತಲೆ ಆಡಿಸಬೇಕೆಂಬ ನಿಯಮವಿದೆ. ತಲೆ ಆಡಿಸಿದರೆ ದೇವಿಗೆ ಬಲಿ ಇಷ್ಟವಾಗಿದೆ ಎಂದು ತಿಳಿಯಲಾಗುತ್ತದೆ. ಒಂದು ವೇಳೆ ತಲೆ ಆಡಿಸಿದೇ ಹೋದಲ್ಲಿ ಅದನ್ನು ಬಲಿಗೆ ಅನರ್ಹ ಎಂದು ಭಾವಿಸಿ, ಬೇರೆ ಪ್ರಾಣಿಯನ್ನು ಬಲಿಗೆ ಸಿದ್ಧಗೊಳಿಸಲಾಗುತ್ತದೆ. ಬಲಿಯ ಆಚರಣೆ ಉಳ್ಳಂತಹ ಊರಿನ ಎಲ್ಲಾ ಮನೆಯಲ್ಲೂ ಬಲಿಯನ್ನು ನೀಡುತ್ತಾರೆ. ಕೆಲವರ ಮನೆಯಲ್ಲಿ ಜನರ ಸಂಖ್ಯೆ ಹೆಚ್ಚಾಗಿದ್ದರೆ, ಒಂದರ ಬದಲು ಎರಡು ಕುರಿಗಳನ್ನು ಬಲಿ ನೀಡುತ್ತಾರೆ. ಹೀಗೆ ಬಲಿಯಾದ ಕುರಿಯ ತಲೆಯನ್ನು ದೇವಿಗೆ ಅರ್ಪಿಸಲಾಗುತ್ತದೆ. ಅರ್ಪಣೆಗೊಂಡ ಕುರಿಯ ತಲೆಗಳು ದೇವರ ಸೇವೆಯನ್ನು ಮಾಡುವವರಿಗೆ ಹಂಚಲಾಗುತ್ತದೆ.

ಗ್ರಾಮದೇವತೆಗೆ ಕೋಣನ ಬಲಿ ಶ್ರೇಷ್ಠವೆಂಬ ಪ್ರತೀತಿ ಇದೆ. ಕೋಣವೇ ಏಕೆ ಶ್ರೇಷ್ಠ ಎಂಬುದಕ್ಕೆ ಪ್ರಚಲಿತವಾದ ಕಥೆಯೊಂದಿದೆ.

ಹಿಂದೆ ಮಾದಿಗ ಜನಾಂಗದ ದಂಪತಿಗಳಿದ್ದರು. ಅವರಿಗೆ ಒಬ್ಬನೇ ಮಗನಿದ್ದನು. ಅವನನ್ನು ಪ್ರೀತಿಯಿಂದ ಸಾಕಿ, ಸಲಹಿ ಅವನಿಗೆ ಶಿಕ್ಷಣವನ್ನು ಕೊಡಿಸಿ ಸಮಾಜದಲ್ಲಿ ಒಬ್ಬ ಉನ್ನತ ವ್ಯಕ್ತಿಯನ್ನಾಗಿ ಮಾಡಬೇಕೆಂಬುದು ದಂಪತಿಗಳ ಇಚ್ಛೆಯಾಗಿತ್ತು. ಅದರಂತೆ ಮಗನನ್ನು ಓದಲು ಕಳುಹಿಸಿದಾಗ ಜಾತಿಯ ಕಾರಣಕ್ಕಾಗಿ ಇವನನ್ನು ಹೊರಗೆ ಕೂರಿಸುತ್ತಾರೆ. ಇದರಿಂದ ಬೇಸರಗೊಂಡ ಹುಡುಗನು ಶಾಲೆಗೆ ಹೋಗದೆ ನಾನಾ ಸ್ಥಳಗಳಲ್ಲಿ ಅಲೆದು ಮನೆಗೆ ಬರುತ್ತಾನೆ. ಇದನ್ನು ತಿಳಿದ ಅವನ ತಾಯಿ ಅವನನ್ನು ಹೊಡೆಯುತ್ತಾಳೆ. ಇದರಿಂದ ಬೇಸರಗೊಂಡ

ಹುಡುಗನು ಮನೆಯನ್ನು ತೊರೆದು ಹೋಗುತ್ತಾನೆ. ಹೀಗೆ ಹೋಗುತ್ತಿರುವಾಗ ಮಾರ್ಗ ಮಧ್ಯದಲ್ಲಿ ಒಂದು ಕಲ್ಯಾಣಿಯನ್ನು ಕಾಣುತ್ತಾನೆ. ಆ ಕಲ್ಯಾಣಿಯಲ್ಲಿ ಬ್ರಾಹ್ಮಣರು ಸ್ನಾನ ಮಾಡುವುದನ್ನು, ಪೂಜಾ ವಿಧಿ-ವಿಧಾನಗಳು ನೆರವೇರಿಸುವುದನ್ನು ಮರೆಯಲ್ಲಿ ನಿಂತು ಎಲ್ಲವನ್ನು ಗಮನಿಸುತ್ತಾನೆ. ಮರುದಿನ ಅದೇ ಕಲ್ಯಾಣಿಯಲ್ಲಿ ಈ ಹುಡುಗನು ಸ್ನಾನ ಮಾಡುವುದನ್ನು ಮತ್ತು ಇವನು ಮಡಿಯಾಗುವ ರೀತಿಯನ್ನು ಕಂಡು ಬ್ರಾಹ್ಮಣರು ಆಶ್ಚರ್ಯಗೊಳ್ಳುತ್ತಾರೆ. ಬ್ರಾಹ್ಮಣರು ಹುಡುಗನನ್ನು ಕುರಿತು ನೀನು ಯಾರು? ಎಲ್ಲಿಂದ ಬಂದಿದ್ದೀಯಾ? ಎಂದು ಪ್ರಶ್ನಿಸುತ್ತಾರೆ. ಆಗ ಹುಡುಗನು ನಾನು ಉತ್ತಮ ಜಾತಿಯ ಬ್ರಾಹ್ಮಣನು. ನಾನು ದೂರದಿಂದ ವಿದ್ಯೆಯನ್ನು ಅರಸುತ್ತಾ ಇಲ್ಲಿಗೆ ಬಂದಿರುವೆನೆಂದು ಹೇಳಿದನು. ಆಗ ಬ್ರಾಹ್ಮಣರೆಲ್ಲರೂ ಅವನು ತಮ್ಮ ಜಾತಿಯವನೆಂದು ನಂಬಿ ಅವನನ್ನು ತಮ್ಮ ಅಗ್ರಹಾರಕ್ಕೆ ಕರೆದುಕೊಂಡು ಹೋಗಿ ಶಿಕ್ಷಣ ಕೊಡಿಸುವ ಏರ್ಪಾಟು ಮಾಡಿದರು. ಬಹಳ ಶ್ರದ್ಧೆಯಿಂದ ವಿದ್ಯಾಭ್ಯಾಸವನ್ನು ಮಾಡಿದ ಹುಡುಗನು ಅಗ್ರಹಾರದಲ್ಲಿ ಎಲ್ಲರನ್ನೂ ಮೀರಿಸುವಂತೆ ವಿದ್ಯೆಯನ್ನು ಕಲಿತು, ನನ್ನ ವಿದ್ಯಾಭ್ಯಾಸವೆಲ್ಲ ಮುಗಿದಿದೆ, ನಾನಿನ್ನು ನಮ್ಮ ಊರಿಗೆ ಹೊರಡುತ್ತೇನೆ ಎಂದು ಬ್ರಾಹ್ಮಣರ ಮುಖಂಡನಲ್ಲಿ ಹೇಳಿದಾಗ, ಇವನ ವಿದ್ಯೆ, ಬುದ್ಧಿಗೆ ಮಾರುಹೋದ ಮುಖಂಡನು ಸಕಲ ಗುಣ-ಸಂಪನ್ನೆಯಾದ ತನ್ನ ಮಗಳನ್ನು ಆ ಹುಡುಗನಿಗೆ ಕೊಟ್ಟು ವಿವಾಹ ಮಾಡಿ ತಮ್ಮ ಅಗ್ರಹಾರದಲ್ಲೇ ಉಳಿಸಿಕೊಂಡನು.

ಇತ್ತ ಹುಡುಗನ ತಾಯಿಯು ಹುಡುಗನನ್ನು ಹುಡುಕುತ್ತಾ ಆ ಅಗ್ರಹಾರಕ್ಕೆ ಹೊಂದಿಕೊಂಡಂತಿರುವ ಕಲ್ಯಾಣಿ ಹತ್ತಿರ ಬಂದಳು. ಆ ಕಲ್ಯಾಣಿಯಲ್ಲಿ ಸ್ನಾನ ಮಾಡುತ್ತಿದ್ದ ಮಗನನ್ನು ಗುರುತಿಸಿದಳು. ಆಗ ಮಗನು ತಾಯಿಗೆ ಹೊಸಬಟ್ಟೆ ತೊಡಿಸಿ, ತಲೆ ಬೋಳಿಸಿ, ಮೂಗಿಯಂತೆ ಇರಬೇಕೆಂದು ಹೇಳಿ ತನ್ನ ಮನೆಗೆ ಕರೆದುಕೊಂಡು ಬರುತ್ತಾನೆ. ಆಗ ಅವನ ಹೆಂಡತಿಯು ಅತ್ತೆ ಬಂದಿದ್ದಾಳೆಂದು ಬಹಳ ಹಿಗ್ಗಿನಿಂದ ಸತ್ಕರಿಸುತ್ತಾಳೆ. ಊಟ ಮಾಡುವಾಗ ತಾಯಿಗೆ ಇರುಸು ಮುರುಸಾಗಿ ಮಗನನ್ನು ಕುರಿತು 'ಇದ್ಯಾಕಪ್ಪ, ಉಪ್ಪು, ಖಾರ, ಉಳಿ ಇಲ್ಲದ ಈ ಎಂಜಲಿಗಾಗಿ ಈ ಬ್ರಾಹ್ಮಣರ ಮನೆಯಲ್ಲಿ ಇದ್ದು, ಹೆತ್ತು, ಹೊತ್ತ ನಮ್ಮನ್ನು ಮರೆತು ಇಲ್ಲಿ ಇದ್ದದ್ದು ನ್ಯಾಯವೇ' ಎಂದು ಕೇಳಿದಳು. ಈ ಮಾತುಗಳನ್ನು ಮರೆಯಲ್ಲಿ ನಿಂತು ಕೇಳಿಸಿಕೊಂಡ ಅವನ ಹೆಂಡತಿಯು, ಬಹಳ ಕ್ರುದ್ಧಳಾಗಿ ನನ್ನನ್ನು ಮೋಸಗೊಳಿಸಿದ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ನಿನ್ನ ಮೋಸಕ್ಕೆ ಪ್ರತಿಯಾಗಿ ನಿನ್ನನ್ನು ಬಲಿ ಪಡೆಯುತ್ತೇನೆ. ತನ್ನ ಗಂಡನಿಗೆ ಕೋಣವಾಗಿ ಹುಟ್ಟುವಂತೆಯೂ ತಾನು ಗ್ರಾಮದೇವತೆಯಾಗಿ ಆ ಕೋಣವನ್ನು ಬಲಿ ತೆಗೆದುಕೊಳ್ಳುವುದಾಗಿಯೂ ಶಾಪ ಕೊಟ್ಟು, ಉರಿಯುತ್ತಿದ್ದ ಬೆಂಕಿಯಲ್ಲಿ ಬಿದ್ದು ಸಜೀವ ದಹನವಾದಳು. ಈ ಕಥೆಗೆ ಸಂಬಂಧಿಸಿದಂತೆ ಕೋಣವನ್ನು ಬಲಿ ಕೊಡುತ್ತಿರುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಕಥೆಯು ಮೇಲ್ವರ್ಗದವರ ಸೃಷ್ಟಿ ಎಂಬುದರಲ್ಲಿ ಯಾವ ಅನುಮಾನ ಇಲ್ಲ.

ಕೋಣವನ್ನು ಬಲಿಕೊಟ್ಟು ಅದರ ಬಾಯಿಗೆ ಬಲಗಾಲನ್ನು ಇಡುವ ಉದ್ದೇಶದ ಹಿನ್ನೆಲೆಯನ್ನು ಶಿವಲಿಂಗಯ್ಯನವರು ತಮ್ಮ 'ಗ್ರಾಮದೇವತೆ' ಕೃತಿಯಲ್ಲಿ ಈ ರೀತಿ ಉಲ್ಲೇಖಿಸಿದ್ದಾರೆ: ಹಿಂದೆ

ಕೆಳವರ್ಗದವರು ತಪ್ಪು ಮಾಡಿದಾಗ ಕ್ಷಮೆ ಕೇಳಲು ಊರಿನ ಯಜಮಾನನ ಮುಂದೆ ನಿಲ್ಲುವ ಸಂದರ್ಭದಲ್ಲಿ ಬಾಯಿಗೆ ಒಣ ಹುಲ್ಲನ್ನು ತುರುಕಿಕೊಳ್ಳುತ್ತಿದ್ದರು. ಬಾಯಿಗೆ ಒಣಹುಲ್ಲನ್ನು ಅಡ್ಡವಾಗಿ ತುರುಕಿದಾಗ ಸಂಬಂಧಿಸಿದ ವ್ಯಕ್ತಿ ತಪ್ಪು ಮಾಡಿದ್ದಾನೆ ಎಂಬುದು ಅದರ ಅರ್ಥ. ಒಣ ಹುಲ್ಲು ಸಿಗದಿದ್ದಾಗ ಆತ ತನ್ನ ಬಲಗೈ ಹೆಬ್ಬೆರಳನ್ನು ಬಾಯಿಗಿಟ್ಟುಕೊಳ್ಳುವ ಪರಿಪಾಠವಿತ್ತು. ಅದೇ ರೀತಿಯಾಗಿ ಪ್ರಾಣಿಯನ್ನು ಬಲಿ ಕೊಡುವಾಗ ಹೀಗೆ ಅದರ ಬಲಗಾಲನ್ನು ಬಾಯಿಗಿಡುವುದು ಆ ಪ್ರಾಣಿಗಳ ಪಾಪ-ಕೃತ್ಯಗಳನ್ನು ದೇವತೆ ಕ್ಷಮಿಸುತ್ತಾಳೆ ಎಂಬ ಆಶಯದಿಂದ[೩೮] ಎಂಬ ವಿವರಣೆಯನ್ನು ನೀಡಿದ್ದಾರೆ.

**೧. ಅಂಕಲಮ್ಮ**

ಅಂಕಲಮ್ಮ ಪಾಪಿನಾಯಕನಹಳ್ಳಿಯ ಗ್ರಾಮದೇವತೆ. ಈ ದೇವಿಯ ಬಗೆಗಿನ ಐತಿಹ್ಯ ಈ ರೀತಿಯಾಗಿದೆ.

ಅಂಕಲಿಗಿಡ ಎಂಬ ಮುಳ್ಳಿನ ಜಾತಿಗೆ ಸೇರಿದ ಗಿಡದಲ್ಲಿ ದೇವಿಯು, ಒಬ್ಬ ಹುಡುಗಿಯ ರೂಪ ಧರಿಸಿ ಗಿಡದಲ್ಲಿ ಆಟವಾಡುತ್ತಿದ್ದಳಂತೆ. ಆ ಹುಡುಗಿಯನ್ನು ನೋಡಿದ ಗ್ರಾಮಸ್ಥರು ಹುಡುಗಿಯ ಪೂರ್ವಾಪರಗಳನ್ನು ವಿಚಾರಿಸಲು ಬಂದಾಗ ಅದೃಶ್ಯಳಾದಳಂತೆ. ಭೀತಿಗೊಂಡ ಗ್ರಾಮಸ್ಥರು, ಅಂಕಲಿಗಿಡದಲ್ಲಿ ಅದೃಶ್ಯಳಾದ ಹುಡುಗಿಯನ್ನು ಹುಡುಕಲು ಗಿಡಗಳನ್ನೆಲ್ಲಾ ಕಡಿದಾಗ, ಆ ಗಿಡಗಳ ಮಧ್ಯದಲ್ಲಿದ್ದ ದೊಡ್ಡ ಹುತ್ತಿನಲ್ಲಿ ಈಗಿರುವ ದೇವಿ ಉದ್ಭವಳಾದಳಂತೆ. ಅವಳಿಗೆ ಗುಡಿ ಕಟ್ಟಿಸಿ ತಮ್ಮ ಗ್ರಾಮದ ಗ್ರಾಮದೇವತೆಯನ್ನಾಗಿ ಮಾಡಿಕೊಂಡರಂತೆ.

ಭಾರತ ಹುಣ್ಣಿಮೆಯ ದಿನ ದೇವಿಯ ಜಾತ್ರೆ ನಡೆಯುತ್ತದೆ. ೨ ದಿನಗಳ ಕಾಲ ನಡೆಯುವ ಜಾತ್ರೆಯಲ್ಲಿ ಸುತ್ತಮುತ್ತ ಗ್ರಾಮಸ್ಥರು ಪಾಲ್ಗೊಳ್ಳುತ್ತಾರೆ. ಪಾಯಸ ಪಡುಗ, ಬಾಳೆದಿಂಡೆ, ಅಗ್ನಿಗುಂಡ, ಹೇಳಿಕೆ ಕಾರ್ಯಕ್ರಮಗಳು ನಡೆಯುತ್ತವೆ.

ಅಂಕಲಮ್ಮ ದೇವಿಗೆ ಮೊದಲು ಕೋಣವನ್ನು ಬಲಿ ಕೊಡುತ್ತಿದ್ದರಂತೆ. ನಂತರದ ದಿನಗಳಲ್ಲಿ ಕುರಿಬಲಿಯನ್ನು ನೀಡುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಯಾವ ಬಲಿಯು ದೇವಿಗೆ ನೀಡುವುದಿಲ್ಲ. ಆದರೆ, ಭಕ್ತರು ದೇವಸ್ಥಾನದ ಅಕ್ಕಪಕ್ಕದಲ್ಲಿ ದೇವಿಯ ಹೆಸರು ಹೇಳಿ ಕುರಿಬಲಿಯನ್ನು ನೀಡುತ್ತಾರೆ. ದೇವಸ್ಥಾನದಲ್ಲಿ ಏಕೆ ಬಲಿ ನಡೆಯುವುದಿಲ್ಲ ಎಂಬ ಪ್ರಶ್ನೆಗೆ, ದೇವಿಗೆ ಲಿಂಗಧಾರಣೆ ಮಾಡಿರುವುದರಿಂದ ಬಲಿ ದೇವಿಗೆ ಆಗುವುದಿಲ್ಲ ಎಂಬ ಉತ್ತರ ನೀಡುತ್ತಾರೆ. ಇಲ್ಲಿ ದೇವಿಯು ಸಂಸ್ಕೃತೀಕರಣಗೊಂಡಿರುವುದು ತಿಳಿದುಬರುತ್ತದೆ.

**೨. ದ್ಯಾವಮ್ಮ:-** ದ್ಯಾವಮ್ಮ ದೇವತೆಯನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಹಲವಾರು ಗ್ರಾಮಗಳು ಕಂಡುಬರುತ್ತವೆ. ಅವುಗಳೆಂದರೆ,

೧. ಕಮಲಾಪುರ ಹೋಬಳಿಯ - ಗಾದಿಗನೂರು, ವೆಂಕಟಾಪುರ, ಬುಕ್ಕಸಾಗರ

೨. ಕಂಪ್ಲಿ ಹೋಬಳಿಯ - ಹೊನ್ನಾಹಳ್ಳಿ, ಸುಗ್ಗೇನಹಳ್ಳಿ, ನಂ.೨ ಮುದ್ದಾಪುರ. ರಾಮಸಾಗರ, ಕಣಿವೆ ತಿಮ್ಮಲಾಪುರ, ನಂ. ೧೦ ಮುದ್ದಾಪುರ.

ದ್ಯಾವಮ್ಮನನ್ನು ದೇವಮ್ಮ, ದ್ಯಾಮವ್ವ ಎಂದು ಕರೆಯುವರು. ಈ ದೇವಿಯ ಹೆಸರಿನ ವ್ಯುತ್ಪತ್ತಿ ಹೀಗಿದೆ.

೧. ದೆವ್ವ ಅಮ್ಮ → ದೆವ್ವಮ್ಮ, ದ್ಯಾವಮ್ಮ, ದ್ಯಾಮವ್ವ

೨. ದೇವ ಅಮ್ಮ → ದೇವಮ್ಮ, ದ್ಯಾವಮ್ಮ, ದ್ಯಾಮವ್ವ - ಈ ತೆರನಾದ ಹೆಸರಿನ ವ್ಯುತ್ಪತ್ತಿ ಆಗಿರಬಹುದೆಂದು ಊಹಿಸಲಾಗಿದೆ.

ಆರ್ಯರು ಭಾರತಕ್ಕೆ ಆಗಮಿಸುವುದಕ್ಕಿಂತ ಮುಂಚೆಯೇ ದ್ರಾವಿಡರು ದ್ಯಾವಮ್ಮನನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡು ಪೂಜಿಸತೊಡಗಿದ್ದರು. ದ್ರಾವಿಡ ಜನರು ದೆವ್ವವನ್ನು ದೈವ ಎಂದು ತಿಳಿದು ಆರಾಧಿಸುತ್ತಿದ್ದರು. ಕಾರಣ ದೆವ್ವ ಅವರ ಪಾಲಿಗೆ ಫಲ ಸಂತಾನ ನೀಡುವ, ಬೆಳೆ ಕಾಯುವ, ಮನೆ ಕಾಯುವ ದೈವವಾಗಿತ್ತು. ಇಂದಿಗೂ ಭೂತವನ್ನು ದೈವವೆಂದು ತಿಳಿದು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪೂಜಿಸುವರು. ಹುಣ್ಣಿಮೆಯ ಬೆಳದಿಂಗಳಲ್ಲಿ, ಅಮವಾಸ್ಯೆಯ ಕತ್ತಲಿನಲ್ಲಿ ಏನೋ ಆಕೃತಿ ಸುಳಿದು ಹೋದಾಗ ಅವು ತಮ್ಮ ಸತ್ತ ಹಿರಿಯರ ಆತ್ಮವೆಂದು, ರಾತ್ರಿ ಮಲಗಿದ್ದಾಗ, ಅಡವಿಯಲ್ಲಿ ಏಕಾಂತದಲ್ಲಿದ್ದಾಗ, ದೂರದಿಂದ ವಿಚಿತ್ರವಾದ ಕೂಗು ಕೇಳಿ ಬಂದಾಗ ಅದು ತಮ್ಮ ಹಿರಿಯರ ಪ್ರೇತ ಕೂಗಿರಬೇಕೆಂದು ಅದರಿಂದ ಉಳಿಯಲು ಪೂಜೆ ಆರಂಭಿಸಿದರು. ಮೊದಮೊದಲು ತಮ್ಮ ಹಿರಿಯರ ಸತ್ತ ಕುಣಿಯ ಮೇಲೆ ಒಂದು ಕಲ್ಲು ನೆಟ್ಟು ಪೂಜಿಸುತ್ತಿದ್ದರು. ಆನಂತರ ಕುಣಿಯ ಮೇಲೆ ಸಮಾಧಿ ಕಟ್ಟಿ ಪೂಜಿಸತೊಡಗಿದರು. ಆ ಕುಣಿಯ ಪೂಜೆ ಆರಂಭಿಸಿದ ಮೇಲೆ ತಮ್ಮ ಭಯ ದೂರವಾದದ್ದು ಕಂಡು, ತಮ್ಮ ಭಯವನ್ನು ದೂರ ಮಾಡುವ ಶಕ್ತಿ ಈ ಭೂತಗಳಿಗೆ ಇದೆ ಎಂದ ಮೇಲೆ ತಮಗೆ ಕಲ್ಯಾಣ ಮಾಡುವ, ಮಕ್ಕಳನ್ನು ಕೊಡುವ, ಸಂಪತ್ತನ್ನು ಸಮೃದ್ಧಿಗೊಳಿಸುವ ಶಕ್ತಿ ಈ ಭೂತಗಳಿಗೆ ಇರಬಹುದೆಂದು ಭಾವಿಸಿಕೊಂಡು ಪೂಜಿಸತೊಡಗಿದರು. ಹೀಗೆ ಪೂಜೆಗೊಂಡ ದೇವತೆಗಳಲ್ಲಿ ದ್ಯಾವಮ್ಮ ಪ್ರಮುಖಳು. ಈ ದ್ಯಾವಮ್ಮ ದೆವ್ವ ಅಥವಾ ಪ್ರೇತಾತ್ಮದ ಸಂಕೇತವೇ ಆಗಿದ್ದಾಳೆ.

ದ್ಯಾವಮ್ಮ ದೇವಿಯ ಕುರಿತಂತೆ ಗ್ರಾಮೀಣರು ಈ ರೀತಿಯ ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ: ಗ್ರಾಮದ ಬೆಳೆಗಳನ್ನು ರಕ್ಷಿಸುವುದು, ಹೈನು ಹೆಚ್ಚಿಸುವುದು, ಸಕಾಲಕ್ಕೆ ಮಳೆ ತರುವುದು, ಒಡ್ಡುಗಳನ್ನು ರಕ್ಷಿಸುವುದು, ಸಾಂಕ್ರಮಿಕ ರೋಗಗಳು ಊರೊಳಗೆ ಬಾರದಂತೆ ತಡೆಯುವುದು, ಭಕ್ತರ ರೋಗ-ರುಜಿನಗಳನ್ನು ನಿವಾರಿಸುವುದು, ಶಿಶುಮರಣ ನಿಲ್ಲಿಸುವುದು, ಜಗಳಗಳನ್ನು ಪರಿಹರಿಸುವುದು, ಹೊಲದ ಗಡಿಗಳನ್ನು ನಿರ್ಧರಿಸುವುದು, ಭೂತ-ಪ್ರೇತಗಳನ್ನು ನಿವಾರಿಸಿ ಹುಚ್ಚು ಬಿಡಿಸುವುದು, ಬಂಜೆತನವನ್ನು ಹೋಗಲಾಡಿಸಿ ಫಲ ಸಂತಾನ ನೀಡುವುದು ದ್ಯಾವಮ್ಮನ ಮುಖ್ಯಕಾರ್ಯಗಳೆಂದು ಜನ ನಂಬಿದ್ದಾರೆ.

ದ್ಯಾವಮ್ಮ ದೇವಿಯ ಜಾತ್ರೆಯನ್ನು ೩ ವರ್ಷಕ್ಕೊಮ್ಮೆ ಇಲ್ಲವೇ ೫ ವರ್ಷಕ್ಕೊಮ್ಮೆ ಮಾಡುತ್ತಾರೆ. ಕೆಲವು ಗ್ರಾಮಗಳಲ್ಲಿ ಶಿವರಾತ್ರಿ ನಂತರ ಜಾತ್ರೆ ಆಚರಿಸಿದರೆ, ಇನ್ನೂ ಕೆಲವು

ಗ್ರಾಮಗಳಲ್ಲಿ ಯುಗಾದಿ ನಂತರದ ದಿನಗಳಲ್ಲಿ ಆಚರಿಸುತ್ತಾರೆ. ಎರಡು ದಿನಗಳ ಕಾಲ ಜಾತ್ರೆ ನಡೆಯುತ್ತದೆ.

ದ್ಯಾವಮ್ಮ ಉಗ್ರ ದೇವತೆಯಾದ್ದರಿಂದ ಅವಳಿಗೆ ಕೋಣದ ಬಲಿಯನ್ನು ನೀಡುತ್ತಾರೆ. ದೇವಿಯ ಬಲಿಗಾಗಿ ಬಿಟ್ಟ ಕೋಣವನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿ, ನಂತರ ದೇವಿ ಗುಡಿಯ ಸುತ್ತ ಪ್ರದಕ್ಷಿಣೆ ಹಾಕಿಸಿ ಕೋಣದ ತಲೆಯ ಮೇಲೆ ನೀರು ಚಿಮುಕಿಸುತ್ತಾರೆ. ಕೋಣ ತಲೆ ಅಲ್ಲಾಡಿಸಿದರೆ ಆಗ ದೈವದ ಅಪ್ಪಣೆ ಆಯಿತು ಎಂದು ತಲೆ ಕಡಿಯುತ್ತಾರೆ. ತಲೆ ಕಡಿದು, ಅದರ ಬಲಗಾಲನ್ನು ಬಾಯಿಗಿಡುವರು. ಕೋಣದ ರಕ್ತದಿಂದ ಅನ್ನವನ್ನು ಕಲಿಸಿ ಊರಿನ ಸುತ್ತಾ ಬಲಿಯೋ ಬಲಿ ಎಂದು ಕೂಗುತ್ತಾ ಹಾಕುತ್ತಾ ಹೋಗುತ್ತಾರೆ. ಇದರಿದ ಊರಿಗೆ, ಜನರಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಕೋಣದ ತಲೆಯ ಮೇಲೆ ಅದರ ಸತುವಿನಿಂದ ಹಣತೆಯನ್ನು ಮಾಡಿ ಬತ್ತಿ ಹಾಕಿ ದೀಪ ಉರಿಸುತ್ತಾರೆ. ಕೋಣದ ಬಲಿಯ ನಂತರ ಕುರಿ ಬಲಿಗಳನ್ನು ನೀಡಲಾಗುತ್ತದೆ.

**೩. ದುರುಗಮ್ಮ:-** ದುರುಗಮ್ಮ ದೇವತೆಯನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಹಲವಾರು ಗ್ರಾಮಗಳು ಕಂಡುಬರುತ್ತವೆ. ಅವುಗಳೆಂದರೇ,

೧. ಕಮಲಾಪುರ ಹೋಬಳಿಯ - ಮಲಪನಗುಡಿ.

೨. ಹೊಸಪೇಟೆ ಹೋಬಳಿಯ - ನಾಗೇನಹಳ್ಳಿ.

೩. ಮರಿಯಮ್ಮನಹಳ್ಳಿ ಹೋಬಳಿಯ - ಮರಿಯಮ್ಮನಹಳ್ಳಿ, ವ್ಯಾಸನಕೆರೆ, ಚಿಲಕನಹಟ್ಟಿ, ತಾಳೆ ಬಸಾಪುರ, ಅಯ್ಯನಹಳ್ಳಿ, ನಂ. ೧೧೨ ವೆಂಕಟಾಪುರ.

ಮೊದಲು ಕೋಟೆ ರಕ್ಷಕಳಾಗಿದ್ದ ದುರುಗಮ್ಮ ಬರಬರುತ್ತ ಯುದ್ಧ ದೇವತೆಯಾದಳು. ರಾಜರು ಯುದ್ಧಕ್ಕೆ ಹೋಗುವಾಗ ಈ ದೇವಿಗೆ ಯುದ್ಧದಲ್ಲಿ ಜಯ ಸಿಗಲಿ ಎಂದು ಬೇಡಿಕೊಂಡು ರಣವೀಳ್ಯವನ್ನು ಪಡೆದು ಯುದ್ಧಕ್ಕೆ ಹೋಗುತ್ತಿದ್ದರಂತೆ. ಇದರಿಂದ ಕೋಟೆಯ ದೇವತೆಯಾಗಿದ್ದ ದುರುಗಮ್ಮ ಯುದ್ಧ ದೇವತೆಯೂ ಆದಳು. ಈಕೆ ಜಯ ತಂದು ಕೊಟ್ಟು ಸಂಪತ್ತನ್ನುಂಟು ಮಾಡುವ ದೇವತೆಯಾದುದರಿಂದ ಈಕೆಯ ವಾರ ಶುಕ್ರವಾರ ಪೂಜಾ ದಿವಸವಾಯಿತು. ರೋಗ-ರುಜಿನ ಗುಣವಾಗಲು ದೇವಿಯನ್ನು ಮಂಗಳವಾರ ದಿವಸ ಪೂಜಿಸಿದರೆ, ಸಂಪತ್ತನ್ನು ಹೆಚ್ಚಿಸಲು ಶುಕ್ರವಾರ ದಿವಸ ದೇವಿಗೆ ಪೂಜಿಸುವರು.

ದೇವಿಯ ಜಾತ್ರೆಯನ್ನು ೩ ವರ್ಷಕ್ಕೊಮ್ಮೆ ಇಲ್ಲವೇ ೫ ವರ್ಷಕ್ಕೊಮ್ಮೆ ಎರಡು ದಿನಗಳ ಕಾಲ ಆಚರಿಸುತ್ತಾರೆ. ಮಲಪನಗುಡಿ ಗ್ರಾಮದಲ್ಲಿ ರಾಮನವಮಿಯ ನಂತರ ಜಾತ್ರೆ ಮಾಡಿದರೆ, ಉಳಿದ ಗ್ರಾಮಗಳಲ್ಲಿ ಭಾರತ ಹುಣ್ಣಿಮೆ ನಂತರ ೯ ದಿನಕ್ಕೆ ಜಾತ್ರೆ ಮಾಡುತ್ತಾರೆ. ದೇವಿಗೆ ಕುರಿಗಳನ್ನು ಬಲಿ ನೀಡಲಾಗುತ್ತದೆ.

**೪. ಮಾರೆಮ್ಮ:-** ಮಾರಮ್ಮ ದೇವತೆಯನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಹಲವಾರು ಗ್ರಾಮಗಳು ಕಂಡುಬರುತ್ತವೆ. ಅವುಗಳೆಂದರೆ,

೧. ಕಮಲಾಪುರ ಹೋಬಳಿಯ - ಹೊಸಮಲಪನಗುಡಿ.

೨. ಮರಿಯಮ್ಮನಹಳ್ಳಿ ಹೋಬಳಿಯ - ಗರಗ.

೩. ಕಂಪ್ಲಿ ಹೋಬಳಿಯ - ದೇವಲಾಪುರ, ಗೋನಾಳು, ಮಾವಿನಹಳ್ಳಿ, ಇಟಗಿ, ಚಿಕ್ಕಜಾಯಿಗನೂರು, ಜವುಕು.

ಮಾರೆಮ್ಮ ಗ್ರಾಮದೇವತೆಯು ಹೌದು, ಶಕ್ತಿ ದೇವತೆಯೂ ಹೌದು. ಮಾರಿಯಾದ ಅಮ್ಮ ಮಾರಿಯಮ್ಮ ಎಂದು ಉಚ್ಚಾರಣೆಗೊಂಡು ನಂತರದ ದಿನಗಳಲ್ಲಿ ಮಾರೆಮ್ಮ ಎಂದು ಕರೆದಿರಬಹುದು. ಮಾರೆಮ್ಮ ಮೇಲ್ವರ್ಗದ ಜಾತಿಯ ಮಗಳು. ಈಕೆಯ ಪತಿ ಹರಿಜನ ಸಮುದಾಯದವನು. ಬ್ರಾಹ್ಮಣ ವೇಷ ಧರಿಸಿ ಮೋಸದಿಂದ ಮಾರೆಮ್ಮನನ್ನು ಮದುವೆಯಾದನು. ಇವನ ಗುಟ್ಟೆಲ್ಲಾ ರಟ್ಟಾಗಿ, ಕೆಳಜಾತಿಯವನೆಂದು ತಿಳಿದ ಮೇಲೆ ಮಾರೆಮ್ಮ ರುದ್ರರೂಪ ತಾಳಿ ಗಂಡನನ್ನು ಕೊಂದಳೆಂಬ ಪ್ರತೀತಿ ಇದೆ.

ದೇವಿಯ ಜಾತ್ರೆಯನ್ನು ೫ ವರ್ಷಕ್ಕೊಮ್ಮೆ ಆಚರಿಸಲಾಗುತ್ತದೆ. ೨ ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಯುಗಾದಿ ಹಬ್ಬವಾದ ನಂತರ ೯ ದಿನಕ್ಕೆ ಜಾತ್ರೆ ಮಾಡುತ್ತಾರೆ.

ಬೆಳಿಗ್ಗೆ ೪ ಗಂಟೆಯ ಸಮಯದಲ್ಲಿ ಕೋಣವನ್ನು ಬಲಿ ನೀಡುತ್ತಾರೆ. ಕೋಣದ ಬಲಿಯ ನಂತರ ಕುರಿಗಳನ್ನು ಬಲಿ ನೀಡುತ್ತಾರೆ.

**೫. ತಾಯಮ್ಮ:-** ತಾಯಮ್ಮ ದೇವಿಯನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಗ್ರಾಮಗಳು ಈ ಕೆಳಗಿನಂತಿವೆ.

೧. ಕಮಲಾಪುರ ಹೋಬಳಿಯ - ಕೊಟಗಿನಹಾಳು

೨. ಕಂಪ್ಲಿ ಹೋಬಳಿಯ - ಮೆಟ್ರಿ, ಜೀರಿಗನೂರು, ಸೋಮಲಾಪುರ.

ಎಲ್ಲಾ ದೇವತೆಗಳಿಗೆ ತಾಯಿ ಆಗಿರುವುದರಿಂದ ಈಕೆ ತಾಯಮ್ಮ ಎನ್ನಿಸಿಕೊಂಡಿದ್ದಾಳೆ. ಈಕೆ ಎಲ್ಲಮ್ಮನ ಅಕ್ಕ ಆಗಬೇಕು. ಮಹಾನವಮಿಯ ಬನ್ನಿ ಮುಡಿಯುವ ಹಬ್ಬದಲ್ಲಿ ೯ ದಿನ ಪಲ್ಲಕ್ಕಿಯಲ್ಲಿ ಊರಾಡುತ್ತಾಳೆ. ಭಕ್ತರ ಮನೆಗಳಿಗೆ ಹೋಗಿ ಕಾಣಿಕೆ ಪಡೆಯುವಳು. ೯ ದಿನ ನಿರಂತರವಾಗಿ ಊರಾಡಿ, ಆ ದಿನದ ರಾತ್ರಿ ಗುಡಿಯಲ್ಲಿ ಗದ್ದಿಗೆ ಮೇಲೆ ಕೂತು ತೂಗುಯ್ಯಾಲೆ ಆಡುತ್ತಾಳೆ. ಈಕೆಯ ಗಂಡ ಯಾರೆಂದು ತಿಳಿದು ಬರುವುದಿಲ್ಲವಾದರೂ ಜಮದಗ್ನಿ ಎಂದು ಹೇಳುತ್ತಾರೆ. ಈ ದೇವಿಯು ಸಂತಾನ ನೀಡುವ, ಸಂಪತ್ತನ್ನು ಹೆಚ್ಚಿಸುವ ದೇವತೆಯಾಗಿದ್ದಾಳೆ.

ದೇವಿಯ ಜಾತ್ರೆಯನ್ನು ೫ ವರ್ಷಕ್ಕೊಮ್ಮೆ ಆಚರಿಸುತ್ತಾರೆ. ೨ ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಯುಗಾದಿ ಹಬ್ಬಕ್ಕಿಂತ ಮುಂಚಿನ ೯ ದಿನಕ್ಕೆ ಜಾತ್ರೆ ಮಾಡುತ್ತಾರೆ.

ಮೊದಲು ಕೋಣಗಳನ್ನು ಬಲಿ ನೀಡಲಾಗುತ್ತಿತ್ತು. ಆದರೆ ಈಗ ಕೋಣವನ್ನು ಬಲಿ ಕೊಡದೆ, ಅದರ ಬದಲಾಗಿ ಕುರಿಗಳನ್ನು ಬಲಿ ನೀಡಲಾಗುತ್ತದೆ.

**೬. ಊರಮ್ಮ:-** ಊರಮ್ಮನನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಗ್ರಾಮಗಳು ಈ ಕೆಳಗಿನಂತಿವೆ. ಅವುಗಳೆಂದರೆ,

೧. ಕಮಲಾಪುರ ಹೋಬಳಿಯ - ಕಮಲಾಪುರ, ಕಡ್ಡಿರಾಂಪುರ, ಇಂಗಳಗಿ.

೨. ಹೊಸಪೇಟೆ ಹೋಬಳಿಯ - ಹೊಸಪೇಟೆ.

೩. ಮರಿಯಮ್ಮನಹಳ್ಳಿ ಹೋಬಳಿಯ - ಹಾರುವನಹಳ್ಳಿ

ಊರಿಗೆ ಅಮ್ಮಳಾಗಿರುವುದರಿಂದ ಊರಮ್ಮಳಾದಳು. ಈ ದೇವಿಯು ಊರಿನ ರಕ್ಷಕ ದೈವವಾಗಿರುವುದರಿಂದ ಊರಿನ ಮಧ್ಯದಲ್ಲಿ ನೆಲೆಗೊಂಡಿರುತ್ತಾಳೆ. ಈ ದೇವಿಯು ಗ್ರಾಮಕ್ಕೆ ಯಾವುದೇ ರೋಗ-ರುಜಿನಗಳು ತಗಲದಂತೆ ನೋಡಿಕೊಳ್ಳುವ ಹಾಗೂ ಉತ್ತಮ ಮಳೆ, ಬೆಳೆಯನ್ನು ತರುವ ದೇವತೆಯಾಗಿದ್ದಾಳೆ.

ಮಳೆ, ಬೆಳೆಗಾಗಿ ಊರಮ್ಮನನ್ನು ಪೂಜಿಸುವ, ಹೂ, ಹಣ್ಣು ನೀಡುವ ಸಂಪ್ರದಾಯ ಅನಾದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಇದನ್ನು ಊರಮ್ಮನ ಉತ್ಸವ ಎಂದೇ ಕರೆಯಲಾಗುತ್ತದೆ. ಈ ಉತ್ಸವದಲ್ಲಿ ಗ್ರಾಮಸ್ಥರೆಲ್ಲರೂ ಪಾಲ್ಗೊಳ್ಳುತ್ತಾರೆ. ಬೆಳಿಗ್ಗೆ ೬ಕ್ಕೆ ಮಂಗಳವಾದ್ಯ ದೊಂದಿಗೆ ಅಮ್ಮನ ಪಾದಗಟ್ಟೆಯಿಂದ ಮೆರವಣಿಗೆ ಪ್ರಾರಂಭಗೊಳ್ಳುತ್ತದೆ. ಮಹಿಳೆಯರು, ಮಕ್ಕಳು ತಮ್ಮ ಮನೆಯಂಗಳದಲ್ಲಿ ತುಂಬಿದ ಬಿಂದಿಗೆ ಹಿಡಿದು ಅಮ್ಮನ ಬರುವಿಕೆಯನ್ನು ಕಾಯುತ್ತಿರುತ್ತಾರೆ. ಊರಮ್ಮನ ಪಲ್ಲಕ್ಕಿಯ ಉತ್ಸವದಲ್ಲಿ ಯಾವುದೇ ವಾಹನ ಹಾಗೂ ಸಾರ್ವಜನಿಕರು ಎದುರು ಬರುವಂತಿಲ್ಲ. ಮೆರವಣಿಗೆ ಸಾಗುವ ವೇಳೆ ಯಾರೂ ಪಾದರಕ್ಷೆಗಳನ್ನು ಧರಿಸುವಂತಿಲ್ಲ. ಈ ಎಲ್ಲಾ ಕಟ್ಟುಪಾಡುಗಳ ನಡುವೆ ಮೆರವಣಿಗೆ ನಡೆಯುವ ವಾಡಿಕೆ ರೂಢಿಯಲ್ಲಿದೆ.

ಊರಮ್ಮದೇವಿ ಜಾತ್ರೆಯನ್ನು ಕಮಲಾಪುರ, ಕಡ್ಡಿರಾಂಪುರ ಗ್ರಾಮದವರು ೫ ವರ್ಷಕ್ಕೊಮ್ಮೆ ಆಚರಿಸಿದರೆ, ಹೊಸಪೇಟೆ ಗ್ರಾಮದವರು ೧೧ ವರ್ಷಕ್ಕೊಮ್ಮೆ ಆಚರಿಸುತ್ತಾರೆ. ಹಾರುವನಹಳ್ಳಿ ಗ್ರಾಮದವರು ೨೦ ವರ್ಷಕ್ಕೊಮ್ಮೆ ಆಚರಿಸುತ್ತಾರೆ. ೨ ದಿನಗಳ ಕಾಲ ಜಾತ್ರೆ ನಡೆಯುತ್ತದೆ.

ಕಮಲಾಪುರ ಗ್ರಾಮದಲ್ಲಿ ಮೊದಲು ಕೋಣವನ್ನು ಬಲಿ ಕೊಡುತ್ತಿದ್ದರು. ಮೇಲ್ವರ್ಗದವರು ಈ ದೇವಿಯನ್ನು ಪೂಜಿಸತೊಡಗಿದ್ದರಿಂದ ಕೋಣದ ಬಲಿ ನಿಂತಿತು. ಇದರಿಂದ ಮಾಂಸಾಹಾರಿ ದೇವತೆಯನ್ನು ಸಸ್ಯಹಾರಿ ದೇವತೆಯನ್ನಾಗಿಸಿದರು. ಹೊಸಪೇಟೆಯಲ್ಲಿ ಕುರಿಬಲಿಯನ್ನು ನೀಡಿದರೆ, ಕಡ್ಡಿರಾಂಪುರ ಮತ್ತು ಹಾರುವನಹಳ್ಳಿ ಗ್ರಾಮಗಳಲ್ಲಿ ಕೋಣವನ್ನು ಬಲಿ ನೀಡುತ್ತಾರೆ.

**೭. ಕರಿಯಮ್ಮ:-** ಕರಿಯಮ್ಮ ದೇವಿಯನ್ನು ಮರಿಯಮ್ಮನಹಳ್ಳಿ ಹೋಬಳಿಯ ಡಣಾಪುರ, ತಿಮ್ಮಲಾಪುರ, ಪೋತಲಕಟ್ಟೆ ಗ್ರಾಮಗಳು ಗ್ರಾಮದೇವತೆಯನ್ನಾಗಿ ಮಾಡಿಕೊಂಡಿದ್ದಾರೆ.

ಕರಿಯಮ್ಮಳ ಸ್ಥಾನ ಮನೆಯ ಒಂದು ಕಂಬ ಅಥವಾ ಹೊಲದಲ್ಲಿಯ ಗಿಡದ ಬುಡ. ಕರಿಯಮ್ಮ ನೆಲೆಸಿರುವಂಥ ಮನೆ, ಭೂಮಿ ಬೇರೆಯವರಿಗೆ ಅದನ್ನು ಮಾರಬಾರದು ಎಂಬ ನಂಬಿಕೆ ಇದೆ. ಮಕ್ಕಳು ವಿಪರೀತ ಅತ್ತರೆ, ವಾಸಿಯಾಗದಂಥ ರೋಗಗಳು ಅವಕ್ಕೆ ಬಂದರೆ ಅದಕ್ಕೆ ಕರಿಯವ್ವನೇ ಕಾರಣಳೆಂದು ತಿಳಿದು ಜನ ಹರಕೆ ಹೊರುತ್ತಾಳೆ.

ದೇವಿಯ ಜಾತ್ರೆಯನ್ನು ೫ ವರ್ಷಕ್ಕೊಮ್ಮೆ ಆಚರಿಸುತ್ತಾರೆ. ೩ ದಿನಗಳ ಕಾಲ ಜಾತ್ರೆ ನಡೆಯುತ್ತದೆ.

ಕೋಣಗಳನ್ನು ಬಲಿ ನೀಡುತ್ತಾರೆ. ನಂತರ ಕುರಿಗಳನ್ನು ಬಲಿ ನೀಡಲಾಗುತ್ತಿದೆ. ಬಲಿಯ ಕುರಿತಂತೆ ಡಣಾಪುರ ಗ್ರಾಮದ ಗ್ರಾಮದೇವತೆ ಕರಿಯಮ್ಮನಗುಡಿಯ ಮುಂದೆ ಎರಡು ಕಲ್ಲಿನ ಶಿಲ್ಪಗಳನ್ನು ನೆಡಿಸಿದ್ದಾರೆ. ಇವುಗಳು ಗ್ರಾಮದೇವತೆಗೆ ಬಲಿ ನೀಡುತ್ತಿದ್ದ ಸಂದರ್ಭದಲ್ಲಿ ಬಲಿಯ ಹುಲುಸನ್ನು ಕೊಂಡೊಯ್ಯುತ್ತಿದ್ದವರ ಶಿಲ್ಪಗಳೆಂದು ಹೇಳಲಾಗುತ್ತದೆ. ಹಿಂದೆ ಡಣಾಪುರದ ಗ್ರಾಮದೇವತೆಗೆ ಕೋಣನ ಬಲಿ ನೀಡುವ ಸಂದರ್ಭದಲ್ಲಿ ಬೇರೆ ಗ್ರಾಮದ ಇಬ್ಬರು ವ್ಯಕ್ತಿಗಳು ಬಲಿಯ ಹುಲುಸನ್ನು ಕೊಂಡೊಯ್ಯುತ್ತಿದ್ದರಂತೆ. ಇದನ್ನು ಗಮನಿಸಿದ ಗ್ರಾಮಸ್ಥರು ತಮ್ಮ ಗ್ರಾಮದ ಗಡಿಯನ್ನು ದಾಟುವ ಮೊದಲೇ ಅವರಿಬ್ಬರ ಶಿರಗಳನ್ನು ಕಡಿದರಂತೆ. ಅದರ ಸಂಕೇತವಾಗಿ, ಮುಂದೆ ಯಾರೂ ಇಂತಹ ಕೆಲಸಕ್ಕೆ ಕೈ ಹಾಕಬಾರದೆಂದು ತಿಳಿಸುವ ಸಲುವಾಗಿ ಈ ರೀತಿ ಶಿಲ್ಪಗಳನ್ನು ನೆಡಿಸಿದ್ದಾರೆ. ಒಂದು ಊರಿನ ಹುಲುಸು ಮತ್ತೊಂದು ಊರಿಗೆ ಹೋದರೆ ಆ ಊರಿನ ಸಂಪತ್ತೆಲ್ಲಾ ಬೇರೆ ಊರಿಗೆ ಹೋಗುತ್ತದೆ ಎಂಬ ನಂಬಿಕೆಯಿದೆ.

**೮. ಕೆಂಚಮ್ಮ:-** ಕೆಂಚಮ್ಮ ದೇವಿಯನ್ನು ಕಮಲಾಪುರ ಹೋಬಳಿಯ ನಲ್ಲಾಪುರ, ಮರಿಯಮ್ಮನಹಳ್ಳಿ ಹೋಬಳಿಯ ಡಣಾಯಕನಕೆರೆ ಗ್ರಾಮಗಳು ಗ್ರಾಮದೇವತೆಯನ್ನಾಗಿ ಮಾಡಿಕೊಂಡಿದ್ದಾರೆ.

ಕೆಂಚಮ್ಮನನ್ನು ಕುರಿತ ಸ್ಥಳ ಪುರಾಣದಲ್ಲಿ ದೇವಿಯ ಕುರಿತ ವಿವರಣೆ ಈ ರೀತಿಯಿದೆ: ಹಿಂದೆ ಡಣಾಯಕನಕೆರೆ ಗ್ರಾಮವು ಬೆಲ್ಲದ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಹಿರೇಕೆರೂರು ತಾಲೂಕಿನ ಮದಗ ಮಾಸೂರು ಗ್ರಾಮದವರು ಅಲ್ಲಿ ಬೆಳೆಯುತ್ತಿದ್ದ ತರಕಾರಿಯನ್ನು ತಂದು ಅದರ ಬದಲಿಗೆ ಬೆಲ್ಲವನ್ನು ಕೊಂಡೊಯ್ಯುತ್ತಿದ್ದರು. ಒಂದು ಬಾರಿ ಹಾಗೆ ತರಕಾರಿ ಬಂಡಿಯಲ್ಲಿ ಸಮತೋಲನಕ್ಕಾಗಿ ಕಲ್ಲೊಂದನ್ನು ಇರಿಸಿದ್ದರಂತೆ. ಬೆಲ್ಲವನ್ನು ಖರೀದಿಸಿಕೊಂಡು ಅದಕ್ಕೆ ಪ್ರತಿಯಾಗಿ ತರಕಾರಿ ಹಿಂತಿರುಗಿಸಬೇಕಾದರೆ ಆ ಕಲ್ಲನ್ನು ಇಲ್ಲೇ ಬಿಟ್ಟು ಹೋದರಂತೆ. ದಾರಿಯಲ್ಲಿ ಬಿದ್ದಿದ್ದ ಕಲ್ಲನ್ನು ಕಂಡ ಊರ ಹರಿಜನ ವ್ಯಕ್ತಿಯೊಬ್ಬ ದಾರಿ ಬದಿಯಿಂದ ಎತ್ತಿ ಅದನ್ನು ಆಚೆಗೆ ಎಸೆದನಂತೆ. ಸ್ವಲ್ಪ ಹೊತ್ತಲ್ಲಿ ಅದು ಪೂರ್ವ ಸ್ಥಳದಲ್ಲಿ ತನ್ನಷ್ಟಕ್ಕೆ ತಾನೇ ಬಂದು ಬೀಳುತ್ತಿತ್ತಂತೆ. ಈ ರೀತಿ ರಾತ್ರಿ ಹೊತ್ತು ನಡೆಯುತ್ತಿತ್ತಂತೆ. ಒಂದು ರಾತ್ರಿ ಹೀಗೆ ಎಸೆದು ಆತ ಅದು ಹೇಗೆ ಬಂದು ಬೀಳುತ್ತದೆ? ಇಲ್ಲವೇ ಯಾರಾದರೂ ಅದನ್ನು ಎತ್ತಿ ತಂದು ಹಾಕುತ್ತಿರುವರೋ?

ಎಂಬುದನ್ನು ತಿಳಿಯಲು ಜಾಗರಣೆ ಕುಳಿತನಂತೆ. ಆತನಿಗೆ ಸ್ವಲ್ಪ ಮಂಪರು ಆವರಿಸಲು ಆ ಕಲ್ಲು ಬಂದು ಪೂರ್ವ ಸ್ಥಾನದಲ್ಲಿ ಇರುತ್ತಿದ್ದಂತೆ ಇದರಿಂದ ಆ ಕಲ್ಲಲ್ಲಿ ಏನೋ ಶಕ್ತಿ ಇದೆಯೆಂದೂ ಊಹಿಸಿದ ಆತನು ಏನು ಮಾಡುವುದೆಂದು ಚಿಂತಿಸಿದನಂತೆ. ಹೀಗಿರಲು ಒಂದು ರಾತ್ರಿ ದೇವಿಯೊಬ್ಬಳು ಆತನಿಗೆ ಕನಸಿನಲ್ಲಿ ಬಂದು ಆ ಕಲ್ಲು ತಾನೇ ಎಂದೂ ಅದಕ್ಕೆ ಗುಡಿಕಟ್ಟಿ ಕೆಂಚಮ್ಮನೆಂದು ಪೂಜಿಸಬೇಕೆಂದು, ನಿಮ್ಮ ಹರಿಜನ ಮಂದಿಯೇ ಅದಕ್ಕೆ ಪೂಜೆಯನ್ನು ನಡೆಸಬೇಕೆಂದು ಹೇಳಿದಳಂತೆ. ಹೀಗೆ ಕೆಂಚಮ್ಮನ ಗುಡಿ ಸ್ಥಾಪಿತವಾಯಿತು. ಈಗಲೂ ಹರಿಜನರೇ ಅಲ್ಲಿ ಪೂಜೆ ಮಾಡುತ್ತಾರೆ.

ನಲ್ಲಾಪುರ ಗ್ರಾಮದವರು ೫ ವರ್ಷಕ್ಕೊಮ್ಮೆ ಹೋಳಿ ಹುಣ್ಣಿಮೆ ನಂತರ ೯ ದಿನಕ್ಕೆ ಜಾತ್ರೆ ಮಾಡಿದರೆ, ಡಣಾಯಕನಕೆರೆ ಗ್ರಾಮದವರು ೯ ವರ್ಷಕ್ಕೊಮ್ಮೆ ಮಾಘ ಮಾಸದಲ್ಲಿ ಜಾತ್ರೆ ಮಾಡುತ್ತಾರೆ. ಮುಂಜಾನೆ ೫ಕ್ಕೆಲ್ಲಾ ಕೋಣವನ್ನು ಬಲಿ ನೀಡುತ್ತಾರೆ. ನಂತರ ಕುರಿ, ಕೋಳಿಗಳನ್ನು ಬಲಿ ನೀಡಲಾಗುತ್ತದೆ.

**೯. ಕಾಳಮ್ಮ:-** ಕಾಳಮ್ಮದೇವಿಯು ಮರಿಯಮ್ಮನಹಳ್ಳಿ ಹೋಬಳಿಯ ಗೊಲ್ಲರಹಳ್ಳಿ ಗ್ರಾಮದ ಗ್ರಾಮದೇವತೆಯಾಗಿದ್ದಾಳೆ. ಈ ಗ್ರಾಮದಲ್ಲಿ ವಿಶ್ವಕರ್ಮ ಸಮುದಾಯದವರೇ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಕಾಳಮ್ಮನನ್ನು ಈ ಸಮುದಾಯದವರು ತಮ್ಮ ಉದ್ಯೋಗದ ದೇವತೆಯನ್ನಾಗಿ ಮಾಡಿಕೊಂಡಿದ್ದಾರೆ.

ಕಾಳಮ್ಮ ಮೊದಲು ಬುಡಕಟ್ಟು ಜನಾಂಗದ ದೇವತೆಯಾಗಿದ್ದವಳು. ಆರ್ಯ ಪರಂಪರೆಗೆ ಸೇರಿದ ವಿಶ್ವಕರ್ಮದವರು, ಸಮಾಜದಲ್ಲಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು, ತಮ್ಮ ಉದ್ಯೋಗಕ್ಕೆ ಅಧಿದೇವತೆಯಾಗಿ ಇರಲು ಬುಡಕಟ್ಟು ಜನಾಂಗ ಪೂಜಿಸುತ್ತ ಬಂದಿದ್ದ ಕಾಳಿಯಮ್ಮನನ್ನು ಕಾಳಮ್ಮನಾಗಿ ಸ್ವೀಕರಿಸಿ ಆಕೆಯ ಸುತ್ತ ಚಮತ್ಕಾರಿ ಕಥೆಗಳನ್ನು ಕಟ್ಟಿ, ಇತರ ಜನರೂ ಆರಾಧಿಸುವಂತೆ ಮಾಡಿದರು. ಆಕೆಗೆ ಇತರ ದೇವತೆಗಳ ಆಚಾರ-ವಿಚಾರ, ವಿಧಿ-ವಿಧಾನಗಳನ್ನು ಆರೋಪಿಸಲಾಯಿತು.

**ಕಾಳಮ್ಮನನ್ನು ಕುರಿತ ಪೌರಾಣಿಕ ಕಥೆ:-** ಧ್ರೂಮ ರಾಕ್ಷಸ ಶಿವನ ರೂಪ ತಾಳಿ ಪಾರ್ವತಿ ಹತ್ತಿರ ಬಂದಾಗ ಪಾರ್ವತಿ ಕಾಳಿ ರೂಪತಾಳಿ ಅವನನ್ನು ಕೊಂದಳು. ಶಿವನು ಹೋಗಬೇಡ ವೆಂದರೂ ತಂದೆ ಯಜ್ಞ ಮಾಡುವಲ್ಲಿಗೆ ಹೋಗಿ ಅಪಮಾನಿತಳಾಗಿ ಯಜ್ಞದಲ್ಲಿ ಬಿದ್ದು ಮುಖ ಸುಟ್ಟುಕೊಂಡು ಕಪ್ಪಾದ ಸತಿಯೇ ಕಾಳಮ್ಮನೆಂಬ ಪ್ರತೀತಿ ಇದೆ. ದೇವಿ ಪುರಾಣದಲ್ಲಿ ಕಾಳಮ್ಮ ರಾಕ್ಷಸರ ಸಂಹಾರಕ್ಕಾಗಿ ಬಂದವಳೆಂಬ ಕಥೆಯಿದೆ. ಮೂಲ ಕುರುಬನಾಗಿದ್ದ ಕಾಳಿದಾಸ ಕಾಳಮ್ಮನ ಸೇವೆ ಮಾಡಿ ಕಾವ್ಯ ಬರೆಯುವ ಶಕ್ತಿ ಪಡೆದ. ಅದಕ್ಕಾಗಿ ಅವನು ತನ್ನ ಹೆಸರನ್ನು ಕಾಳಿದಾಸನೆಂದು ಇಟ್ಟುಕೊಂಡನೆಂಬ ಕಥೆ ಇದೆ. ಒಂದು ಕಡೆ ಕಾಳಮ್ಮನನ್ನು ವೀರಭದ್ರನ ಹೆಂಡತಿ ಎಂದರೆ ಇನ್ನೊಂದು ಕಡೆ ಶಿವನ ಹೆಂಡತಿ ಎನ್ನುವರು.

ಕಾಳಮ್ಮ ತುಂಬ ಉಗ್ರ ದೇವತೆಯೆಂದು ಈಕೆಯ ಗುಡಿಯಲ್ಲಿ ಯಾರೂ ವಾಸಿಸುವುದಿಲ್ಲ. ಗುಡಿಯಲ್ಲಿ ಕುಟ್ಟುವುದು, ಬೀಸುವುದು ಮಾಡುವುದಿಲ್ಲ. ಮುಟ್ಟಾದವರು ದೇವಿಯ ಗುಡಿಗೆ ಬರುವಂತಿಲ್ಲ. ಈಕೆಯ ಭಕ್ತರು ಪ್ರತಿ ಶುಕ್ರವಾರ ದಿನ ದೇವಿಯ ಪಾರಾಯಣ ಮಾಡುವರು.

ಬ್ರಾಹ್ಮಣರಲ್ಲಿ ಒಂದು ಪಂಗಡವೇ ವಿಶ್ವಕರ್ಮದವರು. ವೇದೋಪನಿಷತ್ತುಗಳ ಮೂಲಕ ಬ್ರಾಹ್ಮಣರು ಬೌದ್ಧಿಕ ಆಚಾರ್ಯರಾದರೆ, ವಿಶ್ವಕರ್ಮದವರು ಶ್ರಮಜೀವನದ ಮೂಲಕ ದೈಹಿಕ ಆಚಾರ್ಯರಾದರು. ಇವರಿಗೆ ವಿಶ್ವಬ್ರಾಹ್ಮಣ ಅಥವಾ ವಿಶ್ವಕರ್ಮ ಬ್ರಾಹ್ಮಣ ಎಂದು ಕರೆಯುವರು. ತಮ್ಮ ಉದ್ಯೋಗದ ಆರಾಧ್ಯ ದೇವತೆಯಾದ ಕಾಳಮ್ಮನನ್ನು ವಿಶ್ವಕರ್ಮದವರು ವಿಶೇಷವಾಗಿ ಪೂಜಿಸುವರು. ಆರಂಭದಲ್ಲಿ ದೇವಿಯ ಪೂಜೆ ಮಾಡುವ ಪೂರ್ವ ಕುಂಬಾರ ಮನೆಯಿಂದ ಹೊಸ ಗಡಿಗೆ ತರುವರು. ಗಡಿಗೆಯನ್ನು ದೇವಿಯ ಆಕಾರದಲ್ಲಿ ಕತ್ತರಿಸುವರು. ಗಡಿಗೆ ತೊಳೆದು ಅರಿಶಿಣ, ಕುಂಕುಮ, ಹೂಗಳಿಂದ ಅಲಂಕರಿಸಿ ತಮ್ಮ ತಮ್ಮ ಮನೆಯಲ್ಲಿ ಕೂಡಿಸುವರು. ತಮ್ಮ ಉದ್ಯೋಗದ ಸಾಮಾನುಗಳನ್ನು ತೊಳೆದು ಸಿಂಗರಿಸಿ ಗಡಿಗೆಯ ಸುತ್ತಮುತ್ತ ಇಟ್ಟು ಪೂಜಿಸುವರು.

ತಮ್ಮ ಉದ್ಯೋಗದ ಸಾಮಾನುಗಳ ಜೊತೆಗೆ ಗಡಿಗೆಯ ಪೂಜೆ ಆದ ನಂತರ ಕಾಳಿಕಾದೇವಿ ಮೂರ್ತಿಯನ್ನು ಪೂಜಿಸುವರು. ಮೂರ್ತಿಗೆ ಕೆಂಪು ಇಲ್ಲವೇ ಹಸಿರು ಸೀರೆ, ಕೆಂಪು ಕುಬುಸ, ಬಳೆ, ನತ್ತು, ಡಾಬು ಆಭರಣಗಳಿಂದ ಸಿಂಗರಿಸುವರು. ತ್ರಿಮೂರ್ತಿಗಳ ಶಕ್ತಿಯಾದ ಕಾಳಿಕಾದೇವಿಯ ಕೈಯಲ್ಲಿ ಅವಳ ಆಯುಧಗಳಾದ ಪುಸ್ತಕ, ಚಕ್ರ, ತ್ರಿಶೂಲ ಕೊಟ್ಟು ಆಕೆಯ ಪ್ರೀತಿಯ ವಸ್ತುವಾದ ಕಮಲವನ್ನು ಕೊಟ್ಟು ಪೂಜಿಸುವರು. ಕಾಳಮ್ಮನ ವಾಹನ ಸಿಂಹವಾದರೂ, ಆಕೆ ಯುದ್ಧದ ದೇವತೆಯಾದರೂ, ಉಗ್ರ ಸ್ವರೂಪದವಳಾದರೂ ತನ್ನನ್ನು ಆರಾಧಿಸುವ ಸಸ್ಯಹಾರಿ ಭಕ್ತರ ಸಲುವಾಗಿ ಮಾಂಸಾಹಾರ ಸ್ವೀಕರಿಸುವುದಿಲ್ಲ.

ಕಾಳಿಕಾದೇವಿಯ ಜಾತ್ರೆಯನ್ನು ಪ್ರತಿವರ್ಷ ಯುಗಾದಿ ನಂತರ ೫ ದಿನಕ್ಕೆ ಆಚರಿಸುತ್ತಾರೆ. ಈಕೆಯ ಜಾತ್ರೆಯನ್ನು ೩ ದಿನಗಳ ಕಾಲ ಆಚರಿಸಲಾಗುತ್ತದೆ. ಮೊದಲು ಗಂಗಾ ಸ್ನಾನಕ್ಕಾಗಿ ಸಮೀಪದಲ್ಲಿರುವ ಕೆರೆಗೆ ದೇವಿಯ ಮೂರ್ತಿ ಒಯ್ದು ಜಳಕ ಮಾಡಿಸಿ ಪಲ್ಲಕ್ಕಿಯಲ್ಲಿ ಮೆರೆಸುತ್ತ ಬರುವರು. ಪ್ರತಿನಿತ್ಯ ನೈವೇದ್ಯ, ಮಂಗಳಾರತಿ ನಡೆಸುವರು. ದಸರೆಯಲ್ಲಿ ೯ ದಿವಸ ಕಾಳಿಕಾದೇವಿಗೆ ವಿಶೇಷ ಪೂಜೆ ಸಲ್ಲಿಸುವರು. ಈ ದಸರಾ ದಿನಗಳಲ್ಲಿ ದೇವಿ ಪುರಾಣದ ೧೮ ಅಧ್ಯಾಯಗಳನ್ನು, ಪ್ರತಿನಿತ್ಯ ಎರಡು ಅಧ್ಯಾಯಗಳಂತೆ ಪಾರಾಯಣ ಮಾಡುವರು. ಈ ಹಿಂದೆ ದೇವಿಗೆ ನರಬಲಿ, ಪ್ರಾಣಿಬಲಿ ನೀಡುತ್ತಿದ್ದರಂತೆ. ಆದರೆ ಈಗ ಅವೆಲ್ಲಾ ನಿಂತು ಅದರ ಬದಲಿಗೆ ತೆಂಗಿನಕಾಯಿ, ಕುಂಬಳಕಾಯಿಯನ್ನು ಒಡೆಯುವರು. ಕಾಳಿಕಾದೇವಿ, ರಾಕ್ಷಸರನ್ನು ಸಂಹಾರ ಮಾಡಿದಳೆಂಬ ಅರ್ಥದಲ್ಲಿ ಪ್ರತಿ ಅಧ್ಯಾಯದ ಕೊನೆಯಲ್ಲಿ ತೆಂಗಿನಕಾಯಿ ಇಲ್ಲವೆ ಕುಂಬಳಕಾಯಿ ಒಡೆಯುವರು.

**೧೦. ಗಾಳೆಮ್ಮ:-** ಗಾಳೆಮ್ಮಳನ್ನು ಗ್ರಾಮದೇವತೆಯನ್ನಾಗಿ ಮಾಡಿಕೊಂಡ ಗ್ರಾಮಗಳು ಈ ಕೆಳಗಿನಂತಿವೆ.

೧. ಕಮಲಾಪುರ ಹೋಬಳಿಯ - ಗಾಳೆಮ್ಮಗುಡಿ ಗ್ರಾಮ.

೨. ಮರಿಯಮ್ಮನಹಳ್ಳಿ ಹೋಬಳಿಯ - ಹಂಪಿನಕಟ್ಟೆ.

೩. ಹೊಸಪೇಟೆ ಹೋಬಳಿಯ - ಕಾರಿಗನೂರು, ಕಲ್ಲಹಳ್ಳಿ.

'ಗಾಳೆಮ್ಮ' ದೇವತೆಗೆ ಸಂಬಂಧಪಟ್ಟಂತೆ ವಿದ್ವಾಂಸರ ಮಧ್ಯೆ ಹಲವು ಅಭಿಪ್ರಾಯಗಳು ಪ್ರಚಲಿತದಲ್ಲಿವೆ.

೧. ಗಾಳ+ಅಮ್ಮ =ಗಾಳಮ್ಮ - ಗಾಳೆಮ್ಮ. ಇದರಂತೆ ಮೀನು ಹಿಡಿಯುವ 'ಗಾಳ'ಕ್ಕೆ ಸಂಬಂಧಪಟ್ಟ ದೇವತೆ ಈಕೆ. ಮೀನು ಹಿಡಿಯುವುದೇ ಕಾಯಕವಾಗಿದ್ದ ಬೆಸ್ತರ ಕುಲದೇವತೆ.

೨. ಗಾಳಿ+ಅಮ್ಮ =ಗಾಳಿಯಮ್ಮ - ಗಾಳೆಮ್ಮ. ಇದರಂತೆ ಈಕೆ ಗಾಳಿ ದೇವತೆ. ಶಿಷ್ಟರ 'ವಾಯುದೇವತೆ'ಯ ಕಲ್ಪನೆಗೂ ಜನಪದರ 'ಗಾಳಿ ದೇವತೆ'ಯ ಕಲ್ಪನೆಗೂ ವ್ಯತ್ಯಾಸವಿದೆ. ಶಿಷ್ಟರ 'ವಾಯು' ಪುರುಷ ದೇವತೆ. ಆದರೆ ಇಲ್ಲಿ 'ಗಾಳಿ' ಹೆಣ್ಣು ದೇವತೆ. ಗಾಳಿಯು ಜನಪದರಿಗೆ 'ದೆವ್ವ'ವಾಗಿ ಕಾಡುತ್ತಾಳೆ. ಈ ಗಾಳಿ ದೆವ್ವವನ್ನೇ ಕಾಲಕ್ರಮದಲ್ಲಿ 'ಅಮ್ಮ'ನಾಗಿ 'ಗಾಳಿಯಮ್ಮ'ನಾಗಿ ಜನ ಪೂಜಿಸಿರಬಹುದಾದ ಸಾಧ್ಯತೆ ಇದೆ. ಗಾಳಿ, ಮಳೆಗೆ ಮೇಲಿಂದ ಇಳಿದು ಬಂದ ಹಾಗೆ, ಯಾರಿಗೂ ಕಾಣಿಸದ ಹಾಗೆ ಗಾಳಿಯ ರೂಪದಲ್ಲಿ ಬಂದು ನೆಲೆಯಾದ ದೇವತೆಯನ್ನು ಜನರು 'ಗಾಳೆಮ್ಮ'ನೆಂದು ಕರೆದು ಪೂಜಿಸತೊಡಗಿದರು.

ಗ್ರಾಮೀಣ ಭಾಗದ ಜನರು ಗಡಿ ಮಾರಿಯನ್ನು ಆಚರಿಸುವ(ಕಳುಹಿಸುವ) ಕಲ್ಪನೆಯಂತೆ 'ಅಮ್ಮ'ನನ್ನು ಮಾಡಿ ಒಂದೂರಿಂದ, ಇನ್ನೊಂದೂರಿಗೆ ದಾಟಿಸುತ್ತಿದ್ದ ಕಟ್ಟಿಗೆಯ ಮೂರ್ತಿಯನ್ನೇ ಕಾಲಕ್ರಮದಲ್ಲಿ ಜನ ಗಾಳೆಮ್ಮನೆಂದು ಪೂಜಿಸತೊಡಗಿದರೆಂಬುದು ಸ್ಪಷ್ಟವಾಗುತ್ತದೆ.

ಭಾರತ ಹುಣ್ಣಿಮೆಯೆಂದು ವರ್ಷಾವಧಿ ಜಾತ್ರೆ ನಡೆಯುತ್ತದೆ. ಜಾತ್ರೆಯ ಸಿದ್ಧತೆ ಭಾರತ ಹುಣ್ಣಿಮೆಗೆ ಮುಂಚಿನ ಪಾಡ್ಯದಂದೇ ಪ್ರಾರಂಭವಾಗುತ್ತದೆ. ಅಷ್ಟಮಿಯಂದು ಧ್ವಜಾರೋಹಣ ವಾಗುತ್ತದೆ. ಚತುರ್ದಶಿಯಂದು ನವಗ್ರಹ ಪೂಜೆಯ ನಂತರ ರಥದಲ್ಲಿ ಕಲಶ ಸ್ಥಾಪನೆಯಾಗುತ್ತದೆ. ಭಾರತ ಹುಣ್ಣಿಮೆಯಂದು ರಥ ಪೂಜೆ, ಹೋಮ, ದೇವತಾ ಸ್ಥಾಪನೆ, ರಥೋತ್ಸವಗಳು ನಡೆಯುತ್ತವೆ. ಮರುದಿನ ಪಾಡ್ಯದಂದು ವಸಂತೋತ್ಸವ, ಗಂಗೆ ಸ್ಥಳಕ್ಕೆ ಹೋಗುವುದು ನೆರವೇರುತ್ತವೆ. ಹೀಗೆ ಅಮಾವಾಸ್ಯೆಯ ಮರುದಿನದ ಪಾಡ್ಯದಂದು ಆರಂಭಗೊಂಡ ಉತ್ಸವದ ಚಟುವಟಿಕೆಗಳು ಹುಣ್ಣಿಮೆಯ ನಂತರದ ನವಮಿಯಂದು ಮುಕ್ತಾಯಗೊಳ್ಳುತ್ತವೆ.

ಗಾಳೆಮ್ಮನಿಗೆ ಭಕ್ತಾದಿಗಳು ಪ್ರತಿ ಮಂಗಳವಾರ, ಶುಕ್ರವಾರಗಳಂದೂ, ಜಾತ್ರೆಯ ಸಂದರ್ಭದಲ್ಲೂ ಬಗೆ ಬಗೆಯ ಹರಕೆ-ಸೇವೆಗಳನ್ನು ಸಲ್ಲಿಸುತ್ತಾರೆ. ಮಂಗಳವಾರ, ಶುಕ್ರವಾರ ವಿಶೇಷ ಹರಕೆಯೆಂದರೆ 'ಬ್ಯಾಟಿ'. ಕುರಿ, ಮೇಕೆ, ಕೋಳಿಗಳನ್ನು ಬಲಿ ಕೊಡುವುದಕ್ಕೆ ಬ್ಯಾಟಿ ಎನ್ನುತ್ತಾರೆ. ತಮ್ಮ ಇಷ್ಟಾರ್ಥಗಳು ನೆರವೇರಿದರೆ, ರೋಗ ನಿವಾರಣೆಯಾದರೆ ಬೇಡಿಕೊಂಡ ಭಕ್ತರು ಗಾಳೆಮ್ಮನಿಗೆ ತಂತಮ್ಮ ಶಕ್ತ್ಯಾನುಸಾರ ಕುರಿಯನ್ನೋ, ಮೇಕೆಯನ್ನೋ, ಕೋಳಿಯನ್ನೋ ಬ್ಯಾಟಿ ಒಪ್ಪಿಸುವುದಾಗಿ ಹರಕೆ ಹೊತ್ತುಕೊಳ್ಳುತ್ತಾರೆ. ಕಾಲ ಕೂಡಿ ಬಂದಾಗ ಕುಟುಂಬ ವರ್ಗದವರೊಡನೆ, ಬಂಧು ಮಿತ್ರರೊಡನೆ ಬಂದು ಬ್ಯಾಟಿಯೊಪ್ಪಿಸಿ ಗುಡಿಯ ಪರಿಸರದಲ್ಲೇ ಊಟ ಮಾಡಿ ತೆರಳುತ್ತಾರೆ. ಬಲಿ ಕೊಡುವ ಮುನ್ನ ಪ್ರಾಣಿಯನ್ನು ಗುಡಿಯ ಸುತ್ತ ಪ್ರದಕ್ಷಿಣೆ ಹಾಕಿಸಿ, ಪೂಜೆ ಸಲ್ಲಿಸಿ, ದೇವತೆಯ ಉಡಿ ತುಂಬಿ, ಕಾಣಿಕೆ ಹಣವನ್ನು ಗುಡಿಗೆ ಒಪ್ಪಿಸಿ

ಪಡೆದ ಪ್ರಸಾದವನ್ನು ಬಲಿ ಕೊಡಲಿರುವ ಪ್ರಾಣಿಗೆ ಹಾಕುತ್ತಾರೆ. ಬಲಿ ಕೊಟ್ಟ ಮೇಲೆ ಪ್ರಾಣಿಯ ತಲೆ, ಎರಡು ಕಾಲುಗಳನ್ನು ಗುಡಿಗೆ ಸಲ್ಲಿಸುತ್ತಾರೆ. ಇದು ಪೂಜಾರಿಗೆ ಸೇರುತ್ತದೆ. ಆದಾದ ಮೇಲೆ ಅಡುಗೆಯನ್ನು ಸಿದ್ಧಗೊಳಿಸಿ ಬಂಧು-ಮಿತ್ರರೆಲ್ಲಾ ಸೇರಿ ಊಟ ಮಾಡಿ, ತಂತಮ್ಮ ಊರುಗಳಿಗೆ ತೆರಳುತ್ತಾರೆ. ಸಸ್ಯಾಹಾರಿ ಭಕ್ತರುಗಳು ಕಾಯಿ ಒಡೆಸುವ, ಉಡಿ ತುಂಬಿಸುವ ಹಾಗೂ ಇನ್ನಿತರ ಸೇವೆ - ಹರಕೆಗಳನ್ನು ಸಲ್ಲಿಸುತ್ತಾರೆ.

ಗಾಳೆಮ್ಮನಿಗೆ ಸಂಬಂಧಪಟ್ಟಂತೆ ನಂಬಿಕೆ ಮತ್ತು ಹರಕೆಗಳೊಳಗೆ ಒಂದು ರೀತಿಯ ಸಂಬಂಧವಿದೆ. ಗಾಳೆಮ್ಮನಿಗೆ ಉಪ್ಪು ಕೊಡಿಸುವುದಾಗಿ ಹರಕೆ ಹೊತ್ತರೆ ಮೈಮೇಲಿನ ಕಜ್ಜಿ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ. ಬ್ಯಾಟೆ ಕೊಡುವುದಾಗಿ ಹರಕೆ ಹೊತ್ತುಕೊಂಡರೆ ಮಳೆ, ಬೆಳೆ ಸಮೃದ್ಧಿಯಾಗುವುದೆಂದೂ, ಕಾಯಿಲೆಗಳು ನಿವಾರಣೆಯಾಗುವುದೆಂದು ನಂಬಲಾಗುತ್ತದೆ. ದೀಡ್ ನಮಸ್ಕಾರ ಸಲ್ಲಿಸುವುದಾಗಿ ಹರಕೆ ಹೊತ್ತುಕೊಂಡರೆ ಇಷ್ಟಾರ್ಥಗಳು ನೆರವೇರುವವು ಎಂದು ನಂಬುತ್ತಾರೆ. ದೇವತೆಯನ್ನು ಹೂ ಕೇಳುವ ಸಂಪ್ರದಾಯವು ಕಂಡು ಬರುತ್ತದೆ. ಹಾಗೆ ಕೇಳಿದಾಗ ಬಲಭಾಗದ ಹೂ ಬಿದ್ದರೆ ತಮ್ಮ ಕೆಲಸ ಈಡೇರುವುದೆಂದೂ ಎಡಭಾಗದ ಹೂ ಬಿದ್ದರೆ ಈಡೇರುವುದಿಲ್ಲವೆಂದೂ ನಂಬಲಾಗುತ್ತದೆ.

೧೧. **ಹೊಸೂರಮ್ಮ:-** ಹೊಸೂರಮ್ಮ ದೇವಿಯು ಹೊಸಪೇಟೆ ಹೋಬಳಿಯ ಹೊಸೂರು ಗ್ರಾಮದ ಗ್ರಾಮದೇವತೆಯಾಗಿದ್ದಾಳೆ. ಹೊಸೂರಮ್ಮ ದೇವಾಲಯ ಐತಿಹಾಸಿಕ ಮಹತ್ವವನ್ನು ಪಡೆದ ದೇವಾಲಯವಾಗಿದೆ. ಈ ದೇವಸ್ಥಾನವು ಸುಮಾರು ೧೬ನೆಯ ಶತಮಾನದ್ದೆಂದು ಅಲ್ಲಿನ ಶಾಸನದಿಂದ ತಿಳಿದುಬರುತ್ತದೆ. ದೇವಸ್ಥಾನವು ಉತ್ತರಾಭಿಮುಖವಾಗಿದ್ದು, ಗರ್ಭಗುಡಿ ಯಲ್ಲಿರುವ ಹೊಸೂರಮ್ಮನ ಮೂಲ ವಿಗ್ರಹ ಎರಡು ಅಡಿ ಎತ್ತರದ ದುಂಡು ಕಲ್ಲಿನದ್ದಾಗಿದೆ. ಹೊಸೂರಮ್ಮನಿಗೆ ಸ್ಪಷ್ಟವಾದ ಆಕಾರವಿಲ್ಲ. ಕಲ್ಲು ಗುಂಡನ್ನೇ ಹೊಸೂರಮ್ಮದೇವಿ ಎಂದು ನಂಬಲಾಗಿದೆ. ಈಗಿನ ಹೊಸೂರಮ್ಮ ದೇವಾಲಯವು ಗರ್ಭಗುಡಿಯಿಂದ ನವರಂಗದವರೆಗೆ ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣಗೊಂಡಿದ್ದರೆ, ದೇವಾಲಯದ ಇನ್ನಿತರ ನಿರ್ಮಾಣ ಕಾರ್ಯವು ಹರಪನಹಳ್ಳಿಯ ಪಾಳೇಯಗಾರ ಸೋಮಶೇಖರ ನಾಯಕನ ಕಾಲದಲ್ಲಿ ನಿರ್ಮಾಣಗೊಂಡಿವೆ.

ಹೊಸೂರಮ್ಮ ದೇವಿಯನ್ನು ಕುರಿತಂತೆ ಈ ರೀತಿಯ ಐತಿಹ್ಯಗಳಿವೆ.

೧. ಪರಶುರಾಮನು ತನ್ನ ತಂದೆ ಜಮದಗ್ನಿಯ ಆಜ್ಞೆಯಂತೆ ತನ್ನ ಪರಶು (ಕೊಡಲಿ)ವಿನಿಂದ ತಾಯಿ ರೇಣುಕೆಯ ಶಿರವನ್ನು ಕಡಿದು ಹಾಕಿದನು. ರೇಣುಕೆಯ ರುಂಡದ ಚೂರುಗಳು ಬಿದ್ದ ಕಡೆಗಳಲ್ಲಿ ಒಂದಕ್ಕೆರಡಾಗಿ ಹೊಸ ತಲೆಗಳು ಹುಟ್ಟಿಕೊಂಡವು. ಹೀಗೆ ಅಸಂಖ್ಯಾತ ತಲೆಗಳಾದವು. ಕೊನೆಗೆ ಜಮದಗ್ನಿಯು ಆಕೆಯ ಪತಿವ್ರತೆಯನ್ನು ಮೆಚ್ಚಿ ರೇಣುಕೆಗೆ ಜೀವದಾನ ಮಾಡಿ ಅನುಗ್ರಹಿಸಿದನು. ಅಸಂಖ್ಯಾತ ತಲೆಗಳೆಲ್ಲ ಗ್ರಾಮದೇವತೆಗಳಾಗಲೆಂದು ಪರಶುರಾಮನು ತನ್ನ ದಿವ್ಯಶಕ್ತಿಯಿಂದ ಅವುಗಳಿಗೆ ವರವನ್ನು ನೀಡಿ ಅನುಗ್ರಹಿಸಿದನು. ಅದರಂತೆ ರೇಣುಕೆಯ

ತಲೆಯಿಂದ ಹುಟ್ಟಬಂದ ತಲೆಗಳೆಲ್ಲವೂ ಗ್ರಾಮದೇವತೆಗಳಾದವು. ಅವುಗಳೆಲ್ಲ ರೇಣುಕೆಯ ರುಂಡದ ಸಂಕೇತಗಳು.

೨. ರೇಣುಕಾದೇವಿಯು ತನ್ನ ಪತಿವ್ರತೆಯ ನಿಷ್ಠೆಯಿಂದಾಗಿ ಹಾವನ್ನು ಸಿಂಬೆಯನ್ನಾಗಿ ಮಾಡಿಕೊಂಡು, ಉಸುಕಿನಿಂದ ಕೊಡವನ್ನು ತಯಾರಿಸಿ ದಿನಾಲೂ ನದಿಯಿಂದ ನೀರು ತಂದು ಪತಿ ಜಮದಗ್ನಿಯ ಪೂಜೆಗೆ ನೆರವಾಗುತ್ತಿದ್ದಳು. ಒಮ್ಮೆ ಜಮದಗ್ನಿಯು ಬಹಳ ನಿಷ್ಠೆಯಿಂದ ಪೂಜೆಯಲ್ಲಿ ನಿರತನಾಗಿದ್ದಾಗ ರೇಣುಕಾದೇವಿಯು ನೀರು ತರಲು ತುಂಗಭದ್ರಾ ನದಿಗೆ ಹೋದಳು. ನದಿಯಲ್ಲಿ ಚಿತ್ರರಥನೆಂಬ ಗಂಧರ್ವನು ತನ್ನ ಸಖಿಯರೊಂದಿಗೆ ನೀರಿನಲ್ಲಿ ಆಟವಾಡುತ್ತಿರುವುದನ್ನು ರೇಣುಕೆಯು ನೋಡುತ್ತಾ ಮೈಮರೆತು ನಿಂತಳು. ಆಗ ಆಕೆಯ ಮನಸ್ಸು ಚಂಚಲವಾಯಿತು. ತಕ್ಷಣ ಎಚ್ಚೆತ್ತ ರೇಣುಕೆಯು ನದಿಯ ದಡದ ಉಸುಗನ್ನು ತೆಗೆದುಕೊಂಡು ಕೊಡ ಮಾಡತೊಡಗಿದಳು. ಎಷ್ಟೇ ಪ್ರಯತ್ನಿಸಿದರೂ ರೇಣುಕೆಯಿಂದ ಕೊಡ ತಯಾರಿಸಲಾಗಲಿಲ್ಲ. ಬರಿಗೈಯ್ಯಲ್ಲಿ ಆಶ್ರಮಕ್ಕೆ ವಾಪಸ್ಸು ಬಂದಳು.

ನೀರನ್ನು ತರದೆ ಬರಿಗೈಯಿಂದ ಬಂದ ರೇಣುಕೆಯನ್ನು ನೋಡಿ ಜಮದಗ್ನಿಯು ತನ್ನ ದಿವ್ಯಜ್ಞಾನದಿಂದ ಆಕೆಯ ತಪ್ಪನ್ನು ಗ್ರಹಿಸಿದನು. ಕೋಪಗೊಂಡ ಜಮದಗ್ನಿ ರೇಣುಕೆಗೆ ಶಾಪವನ್ನು ನೀಡಿ, ತನ್ನ ನಾಲ್ಕು ಮಕ್ಕಳನ್ನು ಕರೆದು ರೇಣುಕೆಯ ತಲೆಯನ್ನು ಕತ್ತರಿಸಿ ಹಾಕುವಂತೆ ಆಜ್ಞಾಪಿಸಿದನು. ಅವರು ತಾಯಿಯನ್ನು ಕೊಂದ ಪಾಪಕ್ಕೆ ತಾವು ಗುರಿಯಾಗಬಹುದೆಂದು ಹೆದರಿ ತಂದೆಯ ಆಜ್ಞೆಯನ್ನು ನಿರಾಕರಿಸಿದರು. ಆಗ ಕೊನೆಯ ಪುತ್ರ ಪರಶುರಾಮನನ್ನು ಕರೆದು ತನ್ನ ತಾಯಿಯ ರುಂಡವನ್ನು ಕತ್ತರಿಸಲು ಆಜ್ಞೆ ಮಾಡಿದನು. ತಕ್ಷಣ ಪರಶುರಾಮನು ಪಿತೃವಾಕ್ಯ ಪರಿಪಾಲಕನಂತೆ ಹುಲಿಗಿ ಪ್ರದೇಶದ ನದಿಯ ದಡದಲ್ಲಿ ನಿಂತು ತನ್ನ ತಾಯಿ ರೇಣುಕೆಯ ರುಂಡವನ್ನು ತನ್ನ ಕೊಡಲಿಯಿಂದ ಕಡಿದು ಹಾಕಿದನು. ರೇಣುಕಾದೇವಿಯ ರುಂಡ ನದಿಯ ದಡದಲ್ಲಿನ ಹೊಸೂರಿನಲ್ಲಿ ಬಿದ್ದಿತೆಂದು, ಉಳಿದ ದೇಹದ ಭಾಗ ಹುಲಿಗಿ ಪ್ರದೇಶದಲ್ಲಿ ಬಿತ್ತೆಂಬುದಾಗಿ ಜನರು ತಿಳಿಸುತ್ತಾರೆ. ಹೊಸೂರು, ಹುಲಿಗಿ ಈ ಎರಡು ಕ್ಷೇತ್ರಗಳಲ್ಲಿ ಹುಲಿಗೆಮ್ಮ, ಹೊಸೂರಮ್ಮ ಅಕ್ಕ-ತಂಗಿಯರಾಗಿ ನೆಲೆಸಿದ್ದಾರೆ. ಶಾಂತಿಯ ಸಂಕೇತವಾಗಿ ಹೊಸೂರಮ್ಮ ಹೊರಹೊಮ್ಮಿದರೆ, ಉಗ್ರ ಸ್ವರೂಪಳಾಗಿ ತಂಗಿ ಹುಲಿಗೆಮ್ಮ ಹುಲಿಗಿಯಲ್ಲಿ ನೆಲೆಸಿದ್ದಾಳೆ ಎಂದು ಇಲ್ಲಿಯ ಜನರು ತಿಳಿಸುತ್ತಾರೆ.

**ಹೊಸೂರಮ್ಮದೇವಿಯ ಪೌರಾಣಿಕ ಹಿನ್ನೆಲೆ**

ತುಂಗಭದ್ರಾ ನದಿಯ ದಡದಲ್ಲಿ ಜಮದಗ್ನಿಯು ತನ್ನ ಪತ್ನಿ ರೇಣುಕೆ ಹಾಗೂ ಐವರು ಪುತ್ರರನ್ನೊಳಗೊಂಡು ಹೊಸೂರು ಹುಲಿಗಿ ಪ್ರಾಂತವನ್ನು ಆಶ್ರಯ ಸ್ಥಾನವನ್ನಾಗಿ ಮಾಡಿಕೊಂಡು ತಪಸ್ಸನ್ನಾಚರಿಸುತ್ತಿದ್ದನು. ಒಂದು ದಿನ ಎಲ್ಲಾ ಕುಮಾರರೂ ಫಲಾಹಾರ, ಯಜ್ಞಕ್ಕೆ ಬೇಕಾದ ಕಟ್ಟಿಗೆಗಳನ್ನು ತರಲು ಅರಣ್ಯಕ್ಕೆ ಹೋಗಿರಲು, ಜಮದಗ್ನಿ ದೇವರ ಪೂಜೆಯಲ್ಲಿ ನಿರತನಾಗಿದ್ದಾಗ ರೇಣುಕೆಯು ಸ್ನಾನಕ್ಕೆಂದು ನದಿಗೆ ತೆರಳಿದಳು. ಸ್ನಾನದ ನಂತರ ಹಿಂತಿರುಗಿ ಆಶ್ರಮಕ್ಕೆ ಬರುತ್ತಿದ್ದಾಗ ಚಿತ್ರರಥನೆಂಬ ಗಂಧರ್ವನು ತನ್ನ ವನಿತೆಯರೊಂದಿಗೆ ಜಲಕ್ರೀಡೆಯಲ್ಲಿ ನಿರತನಾಗಿದ್ದನು. ಅವರ ಜಲಕ್ರೀಡೆಯಿಂದ ರೇಣುಕೆಯ ಮನಸ್ಸು ಚಂಚಲಗೊಂಡು

ಮನೋವಿಕಾರವಾಯಿತು. ತಡವಾಗಿ ಆಶ್ರಮಕ್ಕೆ ಬಂದ ರೇಣುಕೆಯನ್ನು ಸಿಟ್ಟಿನಿಂದ ನೋಡಲು ಆಕೆಯ ಮನಸ್ಸು ಮಲಿನಗೊಂಡಿರುವುದು ಜಮದಗ್ನಿಯ ಜ್ಞಾನ ದೃಷ್ಟಿಗೆ ತೋರಿತು. ಋಷಿಯು ಮತ್ತಷ್ಟು ಕುಪಿತನಾಗಿ ತನ್ನ ಮಕ್ಕಳನ್ನು ಕರೆದು ತಾಯಿಯ ಶಿರಚ್ಛೇದನ ಮಾಡುವಂತೆ ಆಜ್ಞಾಪಿಸಿದನು. ಧರ್ಮಸಂಕಟದಲ್ಲಿ ಬಿದ್ದ ಮೊದಲ ನಾಲ್ಕು ಮಂದಿ ಮಕ್ಕಳಾದ ಋಮಣ್ವಾನ್, ಸುಕ್ಷೇಣ, ವಸು ಮತ್ತು ವಿಶ್ವವಸು ತಾಯಿಯ ಶಿರಚ್ಛೇದನವನ್ನು ಮಾಡುವ ಪಾಪಕೃತ್ಯಕ್ಕೆ ಅಂಜಿ ಮಾತನಾಡದೇ ಸುಮ್ಮನೇ ನಿಂತರು. ಜಮದಗ್ನಿಯು ಅವರ ಉದ್ಧಟತನಕ್ಕೆ ಶಪಿಸಿ, ಕೊನೆಯ ಪುತ್ರ ಪರಶುರಾಮನಿಗೆ ಶಿರಚ್ಛೇದನ ಮಾಡುವಂತೆ ಆಜ್ಞೆ ಮಾಡಿದನು. ತಂದೆಯ ಆಜ್ಞೆಯನ್ನು ಪರಿಪಾಲಿಸುವುದು ತನ್ನ ಧರ್ಮವೆಂದು ಮನಗಂಡು ಪರಶುರಾಮ ತಕ್ಷಣ ತನ್ನ ಪರಶುವಿನಿಂದ ತಾಯಿಯ ರುಂಡವನ್ನು ಕತ್ತರಿಸಿ ಹಾಕಿದನು. ಇದರಿಂದ ಪ್ರಸನ್ನಗೊಂಡ ಜಮದಗ್ನಿಯು ಮಗನ ವಿಧೇಯತೆಗೆ ಮನಸೋತು ಬೇಕಾದ ವರವನ್ನು ಬೇಡಬಹುದೆಂದನು. ಈ ಮಾತಿಗೆ ಹರ್ಷಗೊಂಡ ಪರಶುರಾಮನು ತನ್ನ ತಾಯಿಯನ್ನು ಪುನಃ ಬದುಕಿಸಬೇಕೆಂದು ತಂದೆಯಲ್ಲಿ ಪ್ರಾರ್ಥಿಸಿಕೊಂಡನು. ಮಾತ್ರವಲ್ಲದೇ ಮಾತೃ ಹತ್ಯೆ ದೋಷ ತನಗೆ ಒದಗಬಾರದು. ತನ್ನ ಅಣ್ಣಂದಿರೆಲ್ಲಾ ಮೊದಲಿನಂತೆ ಸಚೇತನರಾಗಲು ಅನುಗ್ರಹಿಸಬೇಕೆಂದು ಬೇಡಿಕೊಂಡನು. ಮಹಾತಪಸ್ವಿಯಾದ ಜಮದಗ್ನಿಯು ಎಲ್ಲಾ ವರಗಳನ್ನು ಪರಶುರಾಮನಿಗೆ ದಯಪಾಲಿಸಿದನು. ತಾಯಿ ರೇಣುಕೆ ಹಾಗೂ ನಾಲ್ಕು ಜನ ಅಣ್ಣಂದಿರು ನಿದ್ರೆಯಿಂದ ಎದ್ದವರಂತೆ ಜೀವ ತಳೆದು ನಿಂತರು. ಆಗ ಪರಶುರಾಮನು ತನ್ನ ತಾಯಿಯನ್ನು ಕುರಿತು 'ತಾಯೇ, ನೀನು ಕಲಿಯುಗ ಇರುವ ತನಕ ಇಲ್ಲೇ ಇದ್ದು ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪಾಲಿಸುತ್ತಾ ಈ ಭಾರ್ಗವ ಕ್ಷೇತ್ರಕ್ಕೆ ಸ್ಮಾರಕಳಾಗಿರು' ಎಂದು ಹೇಳಿ ಮಹೇಂದ್ರ ಪರ್ವತದ ಕಡೆ ಹೊರಟು ಹೋದನು.

ಹೊಸೂರಮ್ಮದೇವಿಯ ಜಾತ್ರೆಯನ್ನು ಪ್ರತಿ ವರ್ಷ ಮೇ ಕೊನೆಯ ವಾರ ಅಥವಾ ಜೂನ್ ಮೊದಲ ವಾರದಲ್ಲಿ ಆಚರಿಸಲಾಗುತ್ತದೆ. ಜಾತ್ರೆ ಪ್ರಯುಕ್ತ ಗ್ರಾಮದ ಎಲ್ಲಾ ಜನಾಂಗದ ಹಿರಿಯರು ಸಭೆ ಸೇರಿ, ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಗ್ರಾಮದಲ್ಲಿ ಪ್ರತಿ ಮನೆಗಳು ಸುಣ್ಣ, ಬಣ್ಣಗಳಿಂದ, ತಳಿರು-ತೋರಣಗಳಿಂದ ಕಂಗೊಳಿಸುತ್ತಿರುತ್ತವೆ. ಹೊಸೂರಮ್ಮನ ಜಾತ್ರೆ ಮೊದಲಿಗೆ ಕಂಕಣಧಾರೆಯೊಂದಿಗೆ ಪ್ರಾರಂಭವಾಗುತ್ತದೆ.

**ಕಂಕಣಧಾರಣೆ**

ಜಾತ್ರೆಯ ದಿನದಂದು ಹೊಸೂರಮ್ಮದೇವಿಗೆ ವಿಶೇಷ ಪೂಜೆ ಮಾಡಲಾಗುತ್ತದೆ. ದೇವಿಗೆ ಕುಂಕುಮಾರ್ಚನೆ, ಪುಷ್ಪಾರ್ಚನೆ, ಮಂತ್ರ ಪಠಣಗಳ ಮೂಲಕ ಮಹಾಮಂಗಳಾರತಿ ಮಾಡ ಲಾಗುತ್ತದೆ. ರೇಣುಕೆ ಮತ್ತು ಪರಶುರಾಮನ ಕಂಚಿನ ಮೂರ್ತಿಗಳನ್ನು ಪಲ್ಲಕ್ಕಿಯಲ್ಲಿಟ್ಟು ಗಂಗಾ ಸ್ನಾನಕ್ಕಾಗಿ ತುಂಗಭದ್ರಾ ನದಿಗೆ ತೆಗೆದುಕೊಂಡು ಹೋಗಲಾಗುತ್ತದೆ. ನದಿಯಲ್ಲಿ ಸ್ನಾನ ಮಾಡಿಸಿ, ಗಂಗಮ್ಮನ ಪೂಜೆಯನ್ನು ನೆರವೇರಿಸಿ, ವಾಪಸ್ಸು ದೇವಸ್ಥಾನಕ್ಕೆ ತರಲಾಗುತ್ತದೆ. ದೇವಸ್ಥಾನಕ್ಕೆ ತಂದ ನಂತರ ರೇಣುಕೆ ಮತ್ತು ಪರಶುರಾಮನ ಮೂರ್ತಿಗಳಿಗೆ ಕಂಕಣವನ್ನು ಕಟ್ಟಲಾಗುತ್ತದೆ. ಹೊಸೂರಮ್ಮದೇವಿಗೂ ಕಂಕಣವನ್ನು ಕಟ್ಟಲಾಗುತ್ತದೆ. ಪೂಜಾರಿಗಳೂ ಸಹ ಕಂಕಣವನ್ನು ಕಟ್ಟಿಕೊಳ್ಳುತ್ತಾರೆ. ಕಂಕಣವನ್ನು ಕಟ್ಟಿಕೊಂಡಾಗಿನಿಂದ ಪೂಜಾರಿ ಉಪವಾಸ ವ್ರತವನ್ನು

ಕೈಗೊಳ್ಳುತ್ತಾನೆ. ಪಾಡ್ಯದ ದಿನದಂದು ದೇವಿಯ ದೇವಸ್ಥಾನದಲ್ಲಿ ಮಯೂರ ವಾಹನೋತ್ಸವ, ಅಶ್ವ ವಾಹನೋತ್ಸವ, ಸಿಂಹ ವಾಹನೋತ್ಸವ, ಶೇಷ ವಾಹನೋತ್ಸವ, ಶ್ವೇತ ವಾಹನೋತ್ಸವ, ಗೋಪುರೋತ್ಸವ, ಗಜ ವಾಹನೋತ್ಸವ ಇತ್ಯಾದಿ ಕಾರ್ಯಕ್ರಮಗಳು ನಡೆಯುತ್ತವೆ.

**ಬಾಳೆದಂಡಿಗೆ ಪವಾಡ**

ಬಾಳೆದಂಡಿಗೆ ಪವಾಡವೆಂದರೆ, ಬಾಳೆದಿಂಡಿನ ಜೊತೆಗೆ ನಾಲ್ಕು ಗಟ್ಟಿಯಾದ ಕಬ್ಬುಗಳನ್ನು ಸೇರಿಸಿ ಕಟ್ಟಲಾಗುತ್ತದೆ. ಅದರ ಮೇಲೆ ಬಾಳೆ ಎಲೆಗಳನ್ನು ಮತ್ತು ಹೂಗಳನ್ನು ಸುತ್ತಿ ಜೋಡಿಸಲಾಗುತ್ತದೆ. ಇದನ್ನು ಪವಾಡದ ಹಿಂದಿನ ದಿನವೇ ಸಿದ್ಧಗೊಳಿಸಲಾಗುತ್ತದೆ. ಪವಾಡ ನಡೆಯುವ ದಿನದಂದು ಬೆಳಿಗ್ಗೆ ೩ ಗಂಟೆಗೆ ಪೂಜಾರಿಯೊಂದಿಗೆ, ಭಕ್ತರು ವಾದ್ಯಗಳ ಜೊತೆಗೆ ಗಂಗೆ ಸ್ಥಳಕ್ಕೆ ಹೋಗುತ್ತಾರೆ. ಪೂಜಾರಿಯ ಸ್ನಾನವಾದ ನಂತರ ಆತನ ಮುಖಕ್ಕೆ ಕುಂಕುಮವನ್ನು ಹಚ್ಚಲಾಗುತ್ತದೆ. ಇದನ್ನು ದೇವಿಯ ಉಗ್ರ ಸ್ವರೂಪವೆಂದು ಭಕ್ತರು ತಿಳಿಯುತ್ತಾರೆ. ಗಂಗೆ ಪೂಜೆಯ ನಂತರ ದೇವಸ್ಥಾನಕ್ಕೆ ಬಂದು, ಬಾಳೆದಂಡಿಗೆ ಪೂಜೆಯನ್ನು ನೆರವೇರಿಸಲಾಗುತ್ತದೆ. ನಂತರ ಪೂಜಾರಿಯು ಬಾಳೆದಂಡಿಗೆಯನ್ನು ಏರಿ ಕುಳಿತುಕೊಳ್ಳುತ್ತಾನೆ. ಅದನ್ನು ನಾಲ್ಕೂ ಜನ ಹಿಂದೆ, ಮುಂದೆ ಹೊತ್ತುಕೊಳ್ಳುವರು. ಆಗ ದೇವಾಲಯದಲ್ಲಿ ಸೇರಿದ್ದ ಭಕ್ತ ಸಮೂಹ 'ಉಧೋ ಉಧೋ' ಎಂದು ಜಯಕಾರ ಹಾಕುತ್ತಾರೆ. ನಂತರ ಇಡೀ ದೇವಸ್ಥಾನವನ್ನು ಮೂರು ಬಾರಿ ಪ್ರದಕ್ಷಿಣೆ ಹಾಕುತ್ತಾರೆ. ಇದನ್ನು ಭಕ್ತರು ದೇವಿಯ ಮಹಿಮೆ ಎಂದೇ ನಂಬುತ್ತಾರೆ. ಗರ್ಭಗುಡಿಯಲ್ಲಿ ಪೂಜಾರಿಯನ್ನು ಬಾಳೆದಂಡಿಗೆಯಿಂದ ಕೆಳಗಿಳಿಸುವುದರ ಮೂಲಕ ಬಾಳೆದಂಡಿಗೆ ಪವಾಡ ಕಾರ್ಯಕ್ರಮ ಮುಗಿಯುತ್ತದೆ.

**ಅಗ್ನಿಕುಂಡ ಮತ್ತು ಪಾಯಸ ಪವಾಡ**

ಅಗ್ನಿಕುಂಡ ಕಾರ್ಯಕ್ರಮವು ರಾತ್ರಿ ೧೦ ಗಂಟೆಯಿಂದ ಪ್ರಾರಂಭವಾಗುತ್ತದೆ. ಒಂದು ಬಂಡಿ ಕಟ್ಟಿಗೆಯನ್ನು ಕುಂಡದಲ್ಲಿ ಕ್ರಮವಾಗಿ ಜೋಡಿಸಲಾಗುತ್ತದೆ. ಗಂಧದ ಗಟ್ಟಿಗೆಯ ಚಿಕ್ಕ ತುಂಡಿಗೆ ಬಟ್ಟೆಯನ್ನು ಸುತ್ತಿ ಅದನ್ನು ತೆಗೆದುಕೊಂಡು ಹೋಗಿ ದೇವಿಯ ಗರ್ಭಗುಡಿಯಲ್ಲಿ ಉರಿಯುತ್ತಿರುವ ದೀಪದಿಂದ ಹಚ್ಚಿಕೊಂಡು ಬಂದು ಅಗ್ನಿಕುಂಡಕ್ಕೆ ಸ್ಪರ್ಶಿಸಿ, ಚಾಲನೆ ನೀಡಲಾಗುತ್ತದೆ. ದೇವಾಲಯದ ಎಡಭಾಗದಲ್ಲಿರುವ ಸಿಡಿಕಟ್ಟೆಯ ಮೇಲೆ ರಾತ್ರಿ ಒಂದು ಕರಿ ಕಂಬಳಿಯನ್ನು ಹಾಸಿ ಅದರ ಮೇಲೆ ಒಂದು ಸೇರು ಪಾವು ಅಕ್ಕಿಯನ್ನು ಹಾಕಿ ಅದರ ಮೇಲೆ ಹೊಸ ಗಡಿಗೆಯನ್ನಿಟ್ಟು ಪೂಜಿಸಲಾಗುತ್ತದೆ. ಬೆಳಿಗ್ಗೆ ೩ ಗಂಟೆ ಸಮಯದಲ್ಲಿ ಪೂಜಾರಿ ಭಕ್ತರನ್ನೊಳಗೊಂಡಂತೆ ನದಿಗೆ ಹೋಗಿ ಅಲ್ಲಿ ಸ್ನಾನ ಮಾಡಿ, ಗಂಗೆ ಪೂಜೆಯನ್ನು ನೆರವೇರಿಸಿ, ಪಾಯಸ ಪವಾಡದ ಅಕ್ಕಿಯನ್ನು ನದಿಯ ನೀರಿನಲ್ಲಿ ತೊಳೆದು ಹೊಸ ಗಡಿಗೆಯಲ್ಲಿ ಹಾಕಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಬರುತ್ತಾರೆ. ಬೆಳಿಗ್ಗೆ ೫ ಗಂಟೆಯ ಸಮಯದಲ್ಲಿ ದೇವಾಲಯದ ಮುಂದೆ ಮೂರು ಗುಂಡುಕಲ್ಲುಗಳ ಮೇಲೆ ಗಡಿಗೆಯನ್ನು ಇಟ್ಟು ಅಕ್ಕಿಯಿಂದ ಪಾಯಸವನ್ನು ಸಿದ್ಧಪಡಿಸಲಾಗುತ್ತದೆ. ಕುದಿಯುತ್ತಿರುವ ಪಾಯಸದ ಗಡಿಗೆಯೊಳಗೆ ಪೂಜಾರಿಯು ಎರಡು

ಕೈಗಳನ್ನು ಹಾಕಿ ತಿರುವುತ್ತಾನೆ. ಕುದಿಯುತ್ತಿರುವ ಪಾಯಸವನ್ನು ಬೊಗಸೆಯಿಂದ ಮೂರು ಬಾರಿ ಹೊರತೆಗೆದು ದೊಡ್ಡ ಪಾತ್ರೆಯಲ್ಲಿ ಹಾಕುತ್ತಾನೆ. ಅದನ್ನೇ ದೇವತೆಗೆ ನೈವೇದ್ಯವಾಗಿ ಅರ್ಪಿಸಲಾಗುತ್ತದೆ. ದೇವಿಗೆ ನೈವೇದ್ಯ ಅರ್ಪಿಸಿದ ಪಾಯಸವನ್ನು ಪ್ರಸಾದವೆಂದು ಎಲ್ಲ ಭಕ್ತರಿಗೆ ಹಂಚಲಾಗುತ್ತದೆ. ಈ ಪ್ರಸಾದದ ಒಂದೆರೆಡು ಅಗಳನ್ನು ಹೊಲ, ಗದ್ದೆಗಳಲ್ಲಿ ಹಾಕುವುದರಿಂದ ಫಸಲು ಹುಲುಸಾಗಿ ಬರುತ್ತದೆ ಎಂಬುದು ಭಕ್ತರ ನಂಬಿಕೆಯಾಗಿದೆ. ಪಾಯಸ ಪ್ರಸಾದದ ನಂತರ ಅಗ್ನಿಕುಂಡ ಪ್ರವೇಶ ಜರುಗುತ್ತದೆ. ಬೆಳಗ್ಗೆ ೬ ಗಂಟೆಯಿಂದ ಈ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ಮೊದಲು ಪೂಜಾರಿಯು ಅಗ್ನಿಕುಂಡದಲ್ಲಿ ಪ್ರವೇಶ ಮಾಡುತ್ತಾನೆ. ನಂತರ ದೇವಿಯಿಂದ ಒಳಿತನ್ನು ಕಂಡವರು, ಇಷ್ಟಾರ್ಥಗಳನ್ನು ಬೇಡಿಕೊಂಡ ಭಕ್ತರು ಸಹ ಅಗ್ನಿಯನ್ನು ತುಳಿಯುತ್ತಾರೆ.

**೧೨. ಪಟ್ಟಣದ ಎಲ್ಲಮ್ಮ:-** ಪಟ್ಟಣದ ಎಲ್ಲಮ್ಮ ಐತಿಹಾಸಿಕ ಹಂಪಿಯ ಗ್ರಾಮದೇವತೆ ಯಾಗಿದ್ದಾಳೆ. ಹಂಪಿಯ ಹಜಾರ ರಾಮಚಂದ್ರ ದೇವಸ್ಥಾನದ ಮುಂಭಾಗದಲ್ಲಿರುವ ಪಾನ್‌ಸುಪಾರಿ ಬಜಾರ್‌ಗೆ ಹೊಂದಿಕೊಂಡಂತಿರುವ ಹಳೆಯ ಪಟ್ಟಣದ ದೇವತೆಯೇ ಪಟ್ಟಣದ ಎಲ್ಲಮ್ಮ. ಎಲ್ಲಮ್ಮನ ಗುಡಿಯ ದ್ವಾರ ದಕ್ಷಿಣಾಭಿಮುಖವಾಗಿದ್ದು, ಗರ್ಭಗುಡಿಯಿಂದ ಉದ್ದನೆಯ ಮಂಟಪವನ್ನು ಹೊಂದಿದೆ. ಗರ್ಭಗುಡಿಯಲ್ಲಿ ದೇವಿಯು ಸಿಂಹದ ಮೇಲೆ ಕುಳಿತಿದ್ದು, ದೇವಿಯ ಮೂರ್ತಿಯು ಆರು ಅಡಿ ಎತ್ತರವನ್ನು ಹೊಂದಿದೆ. ದೇವಿಗೆ ನಾಲ್ಕು ಕೈಗಳಿದ್ದು, ಬಲಗೈಯಲ್ಲಿ ಡಮರುಗ ಮತ್ತು ಖಡ್ಗವನ್ನು ಹಿಡಿದಿದ್ದರೆ, ಎಡಗೈಯಲ್ಲಿ ತ್ರಿಶೂಲ ಮತ್ತು ಕಪಾಲಗಳನ್ನು ಹಿಡಿದಿದ್ದಾಳೆ. ದೇವಿಯ ಕೊರಳನ್ನು ರುಂಡಮಾಲೆಯಿಂದ ಅಲಂಕರಿಸಲಾಗಿದೆ. ಗುಡಿಯು ನೆಲಮಟ್ಟದಿಂದ ಕೆಳಗಿದ್ದು, ಕಲ್ಲಿನ ಮೇಲ್ಛಾವಣಿ ಮಾತ್ರ ಕಾಣುತ್ತದೆ. ವಿಜಯನಗರದ ಆರಂಭ ಕಾಲದಲ್ಲಿ ಗುಡಿಯ ನಿರ್ಮಾಣವಾಗಿರಬೇಕೆಂದು ಗುಡಿಯ ರಚನೆಯಿಂದ ತಿಳಿದುಬರುತ್ತದೆ.

ಪಟ್ಟಣದ ಎಲ್ಲಮ್ಮನನ್ನು ಕುರಿತಂತೆ ಬೇರೆ ಬೇರೆ ರೀತಿಯ ಕಥೆಗಳಿವೆ.

ಮುಖ್ಯವಾಗಿ ವಿಜಯನಗರದ ಅರಸರು ಬೇರೆ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಯುದ್ಧಕ್ಕೆ ಹೊರಡುವ ಮುನ್ನ ಈಕೆಯ ಅಪ್ಪಣೆ ಪಡೆದು, ವಿಜಯ ತಾಂಬೂಲ ಪಡೆದು ಹೋಗುತ್ತಿದ್ದರಂತೆ. ಯುದ್ಧ ಯೋಧರ ಹೆಂಡತಿಯರು ಅವರವರ ಗಂಡಂದಿರಿಗೆ ದೇವಿಯ ಎದುರು ಹಣೆಗೆ ವೀರ ತಿಲಕವನ್ನಿಟ್ಟು ಯುದ್ಧದಲ್ಲಿ ಜಯಶಾಲಿಗಳಾಗಿ ಬನ್ನಿ ಎಂದು ಹರಸುತ್ತಿದ್ದರಂತೆ. ಈಕೆಯೇ ವಿಜಯನಗರ ಪಟ್ಟಣದ ಮುಖ್ಯ ದೈವವಾಗಿ ಪಟ್ಟಣವನ್ನು ರಕ್ಷಿಸುತ್ತಿದ್ದಳಂತೆ.

ಇನ್ನೂ ಕೆಲವರ ಪ್ರಕಾರ ವಿಜಯನಗರ ಉದಯವಾಗುವ ಕಾಲದಲ್ಲಿ ಈ ರಾಜ್ಯವನ್ನು ಕಟ್ಟಿದ ರಾಜರು ಹಾಗೂ ಸೈನಿಕರಿಗೆ ಈಕೆ ಕೊಟ್ಟಣದಿಂದ ನೆಲ್ಲನ್ನು ಕುಟ್ಟಿ ಗಂಜಿ ಮಾಡಿಕೊಟ್ಟು ಸಹಾಯ ಮಾಡಿದಳಂತೆ. ಹೀಗಾಗಿ ಈಕೆಗೆ ಕೊಟ್ಟಣದ ಎಲ್ಲಮ್ಮ ಎಂಬ ಹೆಸರು ಬಂತಂತೆ. ಏನಿದ್ದರೂ ಈ ಎಲ್ಲಮ್ಮ ಪಟ್ಟಣ ರಕ್ಷಣೆಯ ಪ್ರಮುಖ ದೈವವಾಗಿದ್ದಂತೆ ತಿಳಿದುಬರುತ್ತದೆ.

ಅಂದಿನ ಅರಸರು ಮೊದಲು ಎಲ್ಲಮ್ಮನ ದರ್ಶನ ಮಾಡಿ ನಂತರ ವಿರೂಪಾಕ್ಷನ ದರ್ಶನ ಮಾಡುತ್ತಿದ್ದರಂತೆ.

ವಿಜಯನಗರದ ಸೈನಿಕರು ಕೆಳವರ್ಗದ ಸ್ಥಳೀಯರಾಗಿದ್ದು, ಅವರ ಮನೆದೇವತೆ ಎಲ್ಲಮ್ಮ ಆಗಿದ್ದಳು. ಸಾಮ್ರಾಜ್ಯದ ವಿಸ್ತರಣೆ ಮತ್ತು ಅದರ ಬಲಕ್ಕೆ ಸೈನ್ಯದ ಬಲವೇ ಮುಖ್ಯಕಾರಣವಾದುದರಿಂದ ಸೈನಿಕರ ಆರಾಧ್ಯ ದೇವತೆಯನ್ನು ಅರಸರು ಆರಾಧಿಸಲು ಕಾರಣವಾಗಿರಬೇಕೆಂದು ಊಹಿಸಬಹುದು. ಆ ಕಾಲದಲ್ಲಿ ಪ್ರಸಿದ್ಧ ದೇವತೆಗಳಾದ ವಿರೂಪಾಕ್ಷ, ಪಂಪಾಂಬಿಕೆ ಇದ್ದರೂ, ಅರಸರ ಯುದ್ಧದ ಹಾಗೂ ವಿಜಯೋತ್ಸವದ ದೇವತೆ ಎಲ್ಲಮ್ಮನೇ ಆಗಿದ್ದಳು. ಈಗಲೂ ಇಲ್ಲಿ ನಡೆಯುವ ನವರಾತ್ರಿ, ದೀಪಾವಳಿ ಮತ್ತು ಯುಗಾದಿ ಹಬ್ಬಗಳ ಆಚರಣೆಗಳಿಂದ ಈ ವಿಷಯ ಸ್ಪಷ್ಟವಾಗುತ್ತದೆ. ನವರಾತ್ರಿಯ ಒಂಬತ್ತು ದಿನಗಳು ನಡೆಯುವ ದೇವಿಯ ವಿಶೇಷ ಮಜ್ಜನದಲ್ಲಿ, ಕೊನೆಯ ದಿನ ದೇವಿ ಬನ್ನಿ ಮುಡಿಯುವ ಸಲುವಾಗಿ ಪಲ್ಲಕ್ಕಿಯಲ್ಲಿ ಉತ್ಸವ ಹೋಗುವುದು, ಯುಗಾದಿಯಲ್ಲಿ ಬೇಡ ಜನಾಂಗ ದೇವಿಯನ್ನು ಬೇಡಿ ಸಮೂಹ ಬೇಟೆಗೆ ಹೊರಡುವುದು, ನಂತರ ಬೇಟೆ ಸಿಕ್ಕಾಗ ಬೇಟೆಯನ್ನು ಮೆರವಣಿಗೆ ಮೂಲಕ ಹೊತ್ತು ತರುವುದು, ದೀಪಾವಳಿಯಲ್ಲಿ ವಿವಿಧ ಬಗೆಯ ಎಣ್ಣೆಯಿಂದ ದೀಪಗಳನ್ನು ಬೆಳಗಿಸುವುದು ಅಂದಿನ ವಿಜಯದಶಮಿಯ ವಿಜಯೋತ್ಸವವನ್ನು ನೆನಪಿಗೆ ತರುತ್ತವೆ.

ವಿಜಯನಗರದಲ್ಲಿ ವಿಜಯದಶಮಿಯ ವಿಜಯೋತ್ಸವವನ್ನು ವರ್ಷಕ್ಕೊಮ್ಮೆ ಆಚರಿಸುತ್ತಿದ್ದರು. ಅತ್ಯಂತ ಸುಂದರವಾದ, ದೊಡ್ಡ ವಿಜಯೋತ್ಸವ ರಥದ ಮೇಲೆ ಪಟ್ಟಣದ ಅಧಿದೇವತೆಯ ಉತ್ಸವಮೂರ್ತಿಯನ್ನು ಕೂರಿಸಿ ಪಟ್ಟಣದ ದೊಡ್ಡ ಬೀದಿಯಲ್ಲಿ ಎಳೆಯುತ್ತಿದ್ದರು. ಈ ಉತ್ಸವದಲ್ಲಿ ರಾಜರು, ಸಾಮಂತರು, ದಳವಾಯಿಗಳು ಮತ್ತು ಅಧಿಕಾರಿ ವರ್ಗದವರು ಪಾಲ್ಗೊಳ್ಳುತ್ತಿದ್ದರು. ರಾಜನು ಇಲ್ಲಿ ನಡೆಯುವ ಬಲಿಯನ್ನು ಮತ್ತು ಅವುಗಳ ರಕ್ತದ ನೈವೇದ್ಯವನ್ನು ವೀಕ್ಷಿಸುತ್ತಿದ್ದನು. ಡೊಮಿಂಗೋ ಪ್ಯಾಸ್‌ನು- 'ದೇವಿಗೆ ೨೪ ಕೋಣಗಳು ಮತ್ತು ೧೫೦ ಕುರಿಗಳನ್ನು ಬಲಿ ನೀಡಿ ದೇವತೆಯ ವಿಗ್ರಹಕ್ಕೆ ನೈವೇದ್ಯ ಮಾಡಲಾಗುತ್ತಿತ್ತೆಂದು' ತಿಳಿಸುತ್ತಾನೆ. ವಿಜಯೋತ್ಸವ ಒಟ್ಟು ಒಂಬತ್ತು ದಿನಗಳವರೆಗೆ ನಡೆಯುತ್ತಿತ್ತು. ವಿಜಯೋತ್ಸವದ ಮೊದಲ ಹಾಗೂ ಕೊನೆಯ ದಿನಗಳಲ್ಲಿ ಮಾತ್ರ ಇಲ್ಲಿ ಬಲಿ ನಡೆಯುತ್ತಿತ್ತು ಎಂಬುದಾಗಿ ತಿಳಿಯುತ್ತದೆ.

ಗುಡಿಯ ಸುತ್ತಲಿನ ಪಟ್ಟಣ, ಅಂದು ನಡೆಯುತ್ತಿದ್ದ ವೈಭವದ ಉತ್ಸವ, ದೇವಿಗಾಗಿ ನಡೆಯುತ್ತಿದ್ದ ಪ್ರಾಣಿಬಲಿ ಇಂದು ಕಾಣುತ್ತಿಲ್ಲವಾದರೂ, ಅದರ ಕೆಲವು ಆಚರಣೆಗಳ ಅವಶೇಷ ಇಂದಿಗೂ ನಡೆಯುವ ಆಚರಣೆಗಳಲ್ಲಿ ಕಂಡುಬರುತ್ತವೆ. ಈಗಲೂ ಹರಕೆ ಹೊತ್ತವರು ಕುರಿ, ಕೋಳಿ ಬಲಿ ಕೊಡುತ್ತಾರೆ. ಎಲ್ಲಮ್ಮದೇವಿಗೆ ನಿತ್ಯಪೂಜೆ ಇಲ್ಲದಿದ್ದರೂ ಕೆಲವು ವಿಶೇಷ ದಿನಗಳಲ್ಲಿ ನಿತ್ಯಪೂಜೆ ನಡೆಯುತ್ತದೆ. ಮಂಗಳವಾರ ಮತ್ತು ಶುಕ್ರವಾರ ವಿಶೇಷವಾಗಿ ಪೂಜಿಸುತ್ತಾರೆ. ವಿಜಯನಗರ ಸಾಮ್ರಾಜ್ಯವಾಗಿ ಬೆಳೆದು ವಿಶ್ವವಿಖ್ಯಾತವಾಗಲು ದೇವತೆಯ ಅನುಗ್ರಹವೇ

ಕಾರಣವೆಂದೂ, ಸಾಮ್ರಾಜ್ಯದ ನಾಶಕ್ಕೆ ಅವಳ ಕೋಪವೇ ಕಾರಣವೆಂದು ಭಕ್ತರು, ಸ್ಥಳೀಯರು ತಿಳಿಸುತ್ತಾರೆ.

**೧೩. ಬನ್ನಿಮಾಂಕಾಳಮ್ಮ:-** ಬನ್ನಿಮಾಂಕಾಳಮ್ಮ ದೇವಿಯು ಹೊಸಪೇಟೆ ಹೋಬಳಿಯ ಅಮರಾವತಿಯ ಗ್ರಾಮದೇವತೆಯಾಗಿದ್ದಾಳೆ. ಪೌರಾಣಿಕ ಹಿನ್ನೆಲೆ ಕುರಿತಂತೆ, ಪಾಂಡವರು ಅಜ್ಞಾತವಾಸಕ್ಕೆ ಹೋಗುವ ಸಂದರ್ಭದಲ್ಲಿ ತಮ್ಮೆಲ್ಲ ಆಯುಧಗಳನ್ನು ಬನ್ನಿಗಿಡದಲ್ಲಿಟ್ಟು ವಿರಾಟನ ಮನೆಯಲ್ಲಿ ಸೇವಕರಾಗಿ ನಿಂತರು. ಮುಂದೆ ವಿರಾಟನ ರಾಜ್ಯದ ಮೇಲೆ ಕೌರವರು ಯುದ್ಧ ಸಾರಿದಾಗ, ಮಹಾಭಾರತದ ಯುದ್ಧ ಪ್ರಾರಂಭವಾಯಿತು. ಆಗ ಪಾಂಡವರು ಬನ್ನಿಗಿಡಕ್ಕೆ ಬಂದು ಪೂಜಿಸಿ, ತಾವು ಕಟ್ಟಿಟ್ಟ ಆಯುಧಗಳನ್ನು ಪಡೆದು ಯುದ್ಧ ಮಾಡಿ ಜಯ ಪಡೆದದ್ದೆ ಬನ್ನಿಗಿಡ ಮಹಾಕಾಳಿಯಾಗಲು ಕಾರಣವಾಯಿತು.

ಮಹಾಭಾರತದ ಕಾಲದಂತೆ, ಯುದ್ಧಕ್ಕೆ ಹೋಗುವಾಗ ವಿಜಯನಗರದ ಅರಸರು ಬನ್ನಿಗಿಡವನ್ನು ಪೂಜಿಸುತ್ತಿದ್ದ ಸಂಪ್ರದಾಯವನ್ನು ವಿಜಯದಶಮಿಯ ದಿನದಂದು ಮೈಸೂರು ಅರಸರು ಪೂಜಿಸುವುದನ್ನು ಆರಂಭಿಸಿದರು.

ಮಹಾನವಮಿ ಹಬ್ಬಕ್ಕೆ ಒಂಬತ್ತು ದಿನಕ್ಕೆ ಮುಂಚೆ ಬನ್ನಿಮಾಂಕಾಳಮ್ಮನ ಜಾತ್ರೆ ಆಗುತ್ತದೆ. ದೇವಿಗೆ ಪಂಚಾಮೃತದಿಂದ ಅಭಿಷೇಕವನ್ನು ಮಾಡಿ, ದೇವಿಗೆ ಉಡಿ ತುಂಬುತ್ತಾರೆ. ಒಂಬತ್ತು ದಿನಗಳಲ್ಲೂ ಪ್ರತಿದಿನ ಪೂಜೆ, ಸಿಹಿ ಅಡುಗೆಯ ನೈವೇದ್ಯ ಅರ್ಪಿಸಲಾಗುತ್ತದೆ. ಒಂಬತ್ತನೇ ದಿನ ಗುಡಿಯ ಮುಂದೆ ತೆಂಗಿನಗರಿಯ ಚಪ್ಪರವನ್ನು ಹಾಕಿ, ಚಪ್ಪರವನ್ನು ಬಾಳೆಗಿಡ, ಕಬ್ಬು, ಮಾವಿನ ಎಲೆಗಳ ತೋರಣಗಳಿಂದ ಸಿಂಗರಿಸಲಾಗುತ್ತದೆ. ಈ ಎಲ್ಲಾ ಕಾರ್ಯಕ್ರಮಗಳು ಬ್ರಾಹ್ಮಣ ಪೂಜಾರಿಯ ಸಮ್ಮುಖದಲ್ಲಿ ನೆರವೇರುತ್ತವೆ. ಬನ್ನಿಮರವೇ ಬನ್ನಿದೇವತೆ ಆಗಿರುತ್ತದೆ. ಮರಕ್ಕೆ ಪೂಜಿಸಿದರೆ ದೇವತೆಗೆ ಪೂಜಿಸಿದಂತೆ ಎಂಬುದು ಭಕ್ತರ ನಂಬಿಕೆಯಾಗಿದೆ. ಬನ್ನಿಮಾಂಕಾಳಮ್ಮನನ್ನು ೪೧ ದಿನ ಬೆಳಗಿನ ಜಾವ ೩ ಗಂಟೆ ಸಮಯದಲ್ಲಿ ಬೆತ್ತಲೆಯಾಗಿ ಪೂಜಿಸಿದರೆ ಪ್ರತ್ಯಕ್ಷವಾಗುತ್ತಾಳೆ ಎಂಬುದು ಸ್ಥಳೀಯರ ನಂಬಿಕೆಯಾಗಿದೆ. ಆದರೆ, ಆ ಸಾಹಸವನ್ನು ಯಾರೂ ಮಾಡಿಲ್ಲವೆಂದು ಸ್ಥಳೀಯರು ತಿಳಿಸುತ್ತಾರೆ.

**೧೪. ಉರಿ ಮಾರಮ್ಮ:-** ಉರಿ ಮಾರಮ್ಮ ಗ್ರಾಮೀಣ ಶಕ್ತಿದೇವತೆಗಳಲ್ಲಿ ಪ್ರಭಾವಶಾಲಿ ಯಾದವಳು. ಈಕೆಗೆ ಊರು ಮಾರಮ್ಮ, ಗಾಳಿ ಮಾರಮ್ಮ, ದುರುಗ-ಮುರಗಿ ಎಂಬಿತ್ಯಾದಿ ಹೆಸರುಗಳಿವೆ. ಉರಿ ಮಾರಮ್ಮ ಊರಿಗೆ ಬಂದರೆ ಆ ಊರಿನ ಕಷ್ಟಗಳು ಪರಿಹಾರವಾಗುತ್ತವೆ ಎಂಬ ನಂಬಿಕೆಯಿದೆ. ಅರೆ ಅಲೆಮಾರಿ ಪೂಜಾರಿ ವರ್ಗದವರು ಉರಿಮಾರಮ್ಮನನ್ನು ಹೊತ್ತು ಊರಾಡುವ ಮೂಲಕ ತಮ್ಮ ಹೊಟ್ಟೆ ಹೊರೆದುಕೊಳ್ಳುವರು. ಉರುಮೆ ಸದ್ದು ಊರಿಗೆ ಉರಿಮಾರಮ್ಮನ ಆಗಮನವಾಯಿತೆಂದೇ ಅರ್ಥ. ಸಾಮಾನ್ಯವಾಗಿ ಊರಿನ ಆಯಕಟ್ಟಿನ ಸ್ಥಳದ ಆವರಣದಲ್ಲಿ ಈ ಮಾರಿ ಕುಣಿತದ ವೇದಿಕೆಯನ್ನು ಸಿದ್ಧಪಡಿಸುವರು.

ಮಾರಿ ಕುಣಿತದಲ್ಲಿ ಉರಿಮಾರಮ್ಮನ ಪೂಜಾರಿಯೇ ಪ್ರಧಾನ ಕಲಾವಿದನಾಗಿರುತ್ತಾನೆ. ಅವನಿಗೆ ಒಬ್ಬರು ಪೋಷಕರಾಗಿರುತ್ತಾರೆ. ಆತನ ಹೆಂಡತಿ ಪೋಷಕ ಪಾತ್ರ ವಹಿಸುವಳು.

ಇವರು ಉರಿಮಾರಮ್ಮನ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಊರೂರು ತಿರುಗುತ್ತಾ ಭಿಕ್ಷೆ ಬೇಡಿ ಬದುಕುವರಾದರೂ ಉರಿಮಾರಮ್ಮನಿಗೆ ಚೆನ್ನಾಗಿ ಅಲಂಕರಿಸಿರುತ್ತಾರೆ. ಬಿದಿರು ಅಥವಾ ಮರದಿಂದ ಮಾಡಿದ ೩-೪ ಅಡಿ ಎತ್ತರದ ಪೆಟ್ಟಿಗೆಯಲ್ಲಿ ಅಲಂಕಾರಗೊಂಡ ಮಾರಮ್ಮನ ಮೂರ್ತಿಯನ್ನು ಇರಿಸಿರುತ್ತಾರೆ. ಬಳೆ, ಕುಂಕುಮ, ಸೀರೆ, ಕುಪ್ಪಸ, ಓಲೆ, ಮೂಗುತಿ, ಕೊರಳಿಗೆ ಮಣಿ ಮತ್ತು ಲೋಹದ ಸರ - ಇತ್ಯಾದಿಗಳಿಂದ ಮಾರಮ್ಮನನ್ನು ಚೆನ್ನಾಗಿ ಅಲಂಕರಿಸಿರುತ್ತಾರೆ. ದೇವಿಯ ಅಕ್ಕ-ಪಕ್ಕದಲ್ಲಿ ವಿವಿಧ ಬಣ್ಣದ ಬಟ್ಟೆಗಳನ್ನು ಇಳಿ ಬಿಟ್ಟಿರುತ್ತಾರೆ. ಈ ಸಂಚಾರಿ ದೇವಾಲಯವನ್ನು ಊರಿಂದ ಊರಿಗೆ ಪೂಜಾರಿ ಅಥವಾ ಪೂಜಾರಿ ಹೆಂಡತಿ ಹೊರುವರು.

ಕಾಸೆ ಪಂಜೆ ಅದರ ಮೇಲೆ ಅರೆಲಂಗದಂಥ ಬಟ್ಟೆ, ಇಳಿಬಿದ್ದು ಹರಡಿದ ಕೂದಲು, ಕಾಲಿಗೆ ಗೆಜ್ಜೆ, ಮೈ ಮತ್ತು ಮುಖದ ಮೇಲೆ ಕುಂಕುಮಲೇಪನ, ಎಡಗೈಯಲ್ಲಿ ಗಂಟೆ, ಬಲಗೈಯಲ್ಲಿ ಐದಾರು ಅಡಿ ಉದ್ದದ ಚಾವಟಿ ಇವು ಪೂಜಾರಿಯ ಸಾಮಾನ್ಯ ವೇಷ-ಭೂಷಣಗಳಾಗಿರುತ್ತವೆ.

ಪೂಜಾರಿಯ ಹೆಂಡತಿ ಉರಿಮಾರಮ್ಮನ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತು ಡೋಲು ಬಾರಿಸಿದರೆ, ಪೂಜಾರಿ ಅದರ ಬಡಿತಕ್ಕೆ ತಕ್ಕಂತೆ ಆಕೆಯ ಸುತ್ತ ಕುಣಿಯುತ್ತಾ, ಕೇಕೆ ಹಾಕುತ್ತಾ 'ಉರಿಮಾರಮ್ಮ ಊರಿಗೆ ಬಂದವಳೆ, ಕೇರಿಗೆ ಬಂದವಳೆ' ಎಂದು ಹಾಡಿಕೊಂಡು ತನ್ನ ಕೈಯಲ್ಲಿದ್ದ ಐದಾರು ಅಡಿ ಉದ್ದದ ಚಾವಟಿಯನ್ನು ಮೈಮೇಲೆ ಬೀಸಿ ಹೊಡೆದುಕೊಳ್ಳುವುದರಿಂದ ಭಯಂಕರವಾದ ಬಾಸುಂಡೆಗಳು ಏಳುವುವು. ಚಾಕಚಕ್ಯತೆಯಿಂದ ಚಾವಟಿಯನ್ನು ಬೀಸುವಾಗ ಉಂಟಾಗುವ 'ಚಟಾರ್' ಎಂಬ ಸದ್ದು ಪ್ರೇಕ್ಷಕರಲ್ಲಿ ಭಯದ ಭಾವವನ್ನು ಮೂಡಿಸುತ್ತದೆ. ಆತನ ಮೈ ಚಾವಟಿ ಏಟಿನಿಂದ ಉರಿದರೆ ಉರಿಮಾರಮ್ಮನಿಗೆ ಶಾಂತಿ, ಊರಿಗೆ ಶಾಂತಿ ಆಗುವುದು ಎಂದು ಊರವರು ನಂಬುತ್ತಾರೆ.

ಪೂಜಾರಿ ಚಾವಟಿ ಆಟದ ಮಧ್ಯೆ ಮಾರಮ್ಮನ ಪೆಟ್ಟಿಗೆಯನ್ನು ಕೆಳಗಿಳಿಸಿ, ಪೆಟ್ಟಿಗೆಯ ತೆರೆಸರಿಸಿ, ಗಂಟೆ ಬಾರಿಸುತ್ತಾ ಮಾರಮ್ಮನ ಹಾಡುಗಳನ್ನು ಹಾಡುತ್ತಾ ಪೂಜೆ ಮಾಡುವನು. ಬೇರೆ ಊರಿನ ಭಕ್ತರು ದೇವತೆಗೆ ಕೊಟ್ಟ ಸೀರೆ, ಕುಪ್ಪಸದ ಕಾಣಿಕೆಗಳನ್ನು ಒಂದೊಂದೇ ತೆಗೆದು ತೋರಿಸುತ್ತಾ ರಾಗವಾಗಿ ಹಾಡುವನು. ಪೂಜಾರಿ ಡೋಲು ಬಾರಿಸಿಕೊಂಡು ಸುತ್ತುವಾಗ ಅಮ್ಮನ ಮುಂದೆ ಹಾಸಿದ ಬಟ್ಟೆಯ ಮೇಲೆ ಭಕ್ತರು ಹಣ, ದವಸ ಧಾನ್ಯ ಇತ್ಯಾದಿ ಕಾಣಿಕೆಯನ್ನು ನೀಡುವರು. ಕೆಲವರು ದೇವತೆಗೆ ಹರಕೆ ಹೊತ್ತವರು ಕುರಿ, ಮೇಕೆ, ಕೋಳಿಗಳನ್ನು ಬಲಿ ರೂಪದಲ್ಲಿ ಕಾಣಿಕೆಯನ್ನು ನೀಡುವರು.

**೫.೨. ಹಬ್ಬಗಳು**

ಸಂಸ್ಕೃತಿಯ ತವರೂರಾದ ಭಾರತ ದೇಶದಲ್ಲಿ ವಾಸಿಸುತ್ತಿರುವ ನಾವು ನಮ್ಮ ಒಳಿತಿಗಾಗಿ. ಸುಖ-ಸಂತೋಷಕ್ಕಾಗಿ. ಬಾಳಿನಲ್ಲಿ ಬದಲಾವಣೆಗಾಗಿ. ಸಾಧನೆಯಿಂದ ಸಿದ್ಧಿಯತ್ತ ಸಾಗುವುದಕ್ಕಾಗಿ.

ಸಮಾಜ ಸಂಘಟನೆಗಾಗಿ, ಆತ್ಮೀಯರೊಂದಿಗೆ ಬೆರೆಯಲಿಕ್ಕಾಗಿ ಹಲವು ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದೇವೆ. ಇದು ಸಾಮಾನ್ಯವಾಗಿ ಎಲ್ಲ ದೇಶ, ಜನಾಂಗ, ಸಂಸ್ಕೃತಿಗಳಿಗೆ ಸೇರಿದ ಜನರೂ ಹಬ್ಬಗಳನ್ನು ಆಚರಿಸುವ ವಿಧಾನವಾಗಿದೆ. ಆದರೆ ಇದು ಹಬ್ಬಗಳಿಗೆ ಇರುವ ಸಾಮಾನ್ಯ ಅರ್ಥವಷ್ಟೆ. ಹಬ್ಬಗಳ ಆಚರಣೆ ವಿವೇಕ ಮೂಲದ್ದಾಗಿರದೆ ಹೋದರೆ ನಮಗೆ ಅವುಗಳಿಂದ ಪೂರ್ಣವಾದ ತೃಪ್ತಿಯೂ ದೊರೆಯುವುದಿಲ್ಲ. ನಾವು ಆಚರಿಸುವ ಪ್ರತಿಯೊಂದು ಹಬ್ಬಕ್ಕೂ ವಿಶಿಷ್ಟ ಅರ್ಥವಿರುತ್ತದೆ. ಆಚರಿಸುವ ವಿಧಾನ, ಕ್ರಮಗಳಿರುತ್ತವೆ. ಹಬ್ಬಗಳ ಹಿರಿಮೆ ಏನೆಂದು ತಿಳಿದು ಅವುಗಳನ್ನು ಆಚರಿಸಬೇಕಾದ ಕ್ರಮದಲ್ಲಿ ಆಚರಿಸಿದಾಗಲೇ ಅವುಗಳಿಂದ ಉತ್ತಮ ಫಲಗಳನ್ನು ನಿರೀಕ್ಷಿಸಬಹುದು.

ಹಬ್ಬಗಳು ಸಂತೋಷದ ಸಮಾರಂಭಗಳು ಎಂಬುದನ್ನು ಭಾರತೀಯ ಸಂಸ್ಕೃತಿಯಲ್ಲದೆ ಇತರ ಎಲ್ಲ ಸಂಸ್ಕೃತಿಗಳು ಒಪ್ಪುತ್ತವೆ. ಭಾರತೀಯ ಸಂಸ್ಕೃತಿಯಲ್ಲಿ ಹಬ್ಬಗಳಿಗಿರುವ ಮಹತ್ವ ಅವುಗಳ ಪ್ರಯೋಜನ ಪಾಪ ಪರಿಹಾರ, ಪುಣ್ಯ ಸಾಧನೆ ಮತ್ತು ಪುರುಷಾರ್ಥ ಪ್ರಾಪ್ತಿ ಎಂದು ಸೂಚಿಸುತ್ತವೆ. ಮುಖ್ಯವಾಗಿ ಹಬ್ಬಗಳನ್ನು ಆಯಾಯ ದಿನಗಳಲ್ಲಿ, ಸಮಯಗಳಲ್ಲಿ ಆಚರಿಸಬೇಕು. ಹಬ್ಬಗಳು ವಿವೇಕ ಮೂಲವಾಗಿದ್ದು, ಅವುಗಳ ಆಚರಣೆ, ವಿಧಿ-ವಿಧಾನಗಳು, ಯೋಜನೆ, ಅಲಂಕಾರ, ಶುಚಿ, ಸೌಂದರ್ಯ ಪ್ರಜ್ಞೆ, ಆನಂದ ಎಲ್ಲವೂ ಉತ್ತುಂಗವಾಗಿರಬೇಕಾಗುತ್ತದೆ. ಹಿಂದೂಗಳ ಹಬ್ಬಗಳಿಗಷ್ಟೆ ಅಲ್ಲದೆ ಮಹಮ್ಮದೀಯರು, ಕ್ರೈಸ್ತರು ಮುಂತಾದವರು ಆಚರಿಸುವ ಹಬ್ಬಗಳಿಗೂ ಈ ನಿಯಮ ಅನ್ವಯಿಸುತ್ತದೆ.

ಹಬ್ಬಗಳ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಿದರೆ ಪ್ರಾರಂಭಿಕ ಸ್ಥಿತಿಯಲ್ಲಿ ಇವು ಭಯ ನಿವಾರಣೆ ಹಾಗೂ ಕೃತಜ್ಞತಾ ಸ್ಮರಣೆಯ ದ್ಯೋತಕವಾಗಿ ಹೊರಹೊಮ್ಮಿದಂತೆ ಕಂಡುಬರುತ್ತವೆ. ಉದಾಹರಣೆಗಾಗಿ - ವರ್ಷವೆಲ್ಲಾ ಹರ್ಷದಾಯಕವಾಗಲಿ, ಸಿಹಿಯೊಂದಿಗೆ ಕಹಿಯನ್ನೂ ಸಹಿಸುವ ಶಕ್ತಿ ಬರಲಿ ಎಂಬ ಭಾವನೆಯಿಂದ 'ಯುಗಾದಿ', ನಮಗೆ ಭಯ ಹುಟ್ಟಿಸುವ ಪ್ರಾಣಿಗಳಿಂದ ರಕ್ಷಣೆಯ ಸಂಕೇತವಾಗಿ 'ನಾಗಪೂಜೆ', ನಮ್ಮಲ್ಲಿರುವ ಕಾಮವಾಂಛೆ ನಾಶವಾಗಿ ಸ್ತ್ರೀ-ಪುರುಷರಲ್ಲಿ ಸೋದರಭಾವ ಬೇರೂರಿ ಪರಸ್ಪರರ ಕಷ್ಟಗಳಿಗೆ ಧಾವಿಸಬೇಕೆಂಬ ಸ್ನೇಹ-ವಾತ್ಸಲ್ಯದ ಕುರುಹಾಗಿ 'ರಕ್ಷಾಬಂಧನ', ನಮ್ಮ ಕೆಲಸಕ್ಕೆ ಏನೂ ತೊಂದರೆ ಬರದೆ ಎಲ್ಲವೂ ನಿರ್ವಿಘ್ನವಾಗಿ ನೆರವೇರಲೆಂಬ ಉದ್ದೇಶದಿಂದ ಆಚರಣೆಗೆ ಬಂದ 'ಗಣೇಶ ಚತುರ್ಥಿ', ದುಷ್ಟ ರಾಕ್ಷಸ ಶಕ್ತಿಗಳು ನಮಗೆ ತೊಂದರೆ ಕೊಡದಿರಲಿ, ನಮ್ಮಲ್ಲಿ ದೈವೀಶಕ್ತಿ ಸದಾ ತುಂಬಿರಲಿ ಎಂಬ ಭಾವನೆಯಿಂದ ಆಚರಿಸುವ 'ದಸರೆಯ ಶಕ್ತಿಯ ಪೂಜೆ', ಬಾಳು ಬೆಳಗಲು ಕಾರಣವಾದ ದವಸ ಧಾನ್ಯಗಳ ಸ್ಮರಣೆಗಾಗಿ 'ದೀಪಾವಳಿಯ ಲಕ್ಷ್ಮೀಪೂಜೆ', ನಮಗೆ ಹಾಲನ್ನಿತ್ತು ಪೋಷಿಸುವ ಹಸು ಮತ್ತು ನಮ್ಮ ಹೊಲ-ಗದ್ದೆಗಳನ್ನು ಉತ್ತು ಹಸನಗೊಳಿಸುವ ಎತ್ತುಗಳಿಗೆ ಕೃತಜ್ಞತೆ ಸೂಚಕವಾಗಿ 'ಕಾರ ಹುಣ್ಣಿಮೆ', ವಿಶ್ವಕ್ಕೆಲ್ಲಾ ಬೆಳಕು ನೀಡಿ ಉಪಕರಿಸುವ ಸೂರ್ಯನಿಗೆ ಕೃತಜ್ಞತಾ ಸೂಚಕವಾಗಿ 'ಸಂಕ್ರಾಂತಿ', 'ಶಿವ' ಅಂದರೆ ಮಂಗಳಮಯವಾಗಲಿ ಎಂಬ ಭಾವನೆಯಿಂದ ಆಚರಿಸುವ 'ಶಿವರಾತ್ರಿ', ನಮ್ಮಲ್ಲಿಯ ಕಾಮ ಸ್ವಚ್ಛಂದ ಲಹರಿಯಲ್ಲಿ ಹುಚ್ಚು ಹೊಳೆಯಾಗಿ ಹರಿಯದಿರಲಿ

ಎಂಬ ಉದ್ದೇಶದಿಂದ ಅದನ್ನು ನಿರ್ಬಂಧಿಸಿ ಕಾಮವನ್ನು ಸುಟ್ಟು ಹತೋಟಿಯಲ್ಲಿಡಬೇಕೆಂಬ ಸಂಕೇತವಾಗಿ ಆಚರಿಸುವ 'ಕಾಮನಹಬ್ಬ' ಇತ್ಯಾದಿ ಹಬ್ಬಗಳು ಮೂಲ ಉದ್ದೇಶವನ್ನು ಹೊಂದಿ, ಒಂದೊಂದು ಹಬ್ಬಗಳು ಆಚರಣೆಗಳಿಗೆ ಬಂದಂತೆ ಕಂಡುಬರುತ್ತವೆ.

ಒಟ್ಟಾರೆ ಎಲ್ಲಾ ಹಬ್ಬಗಳು ನಮ್ಮಲ್ಲಿ ಪ್ರೀತಿ-ವಿಶ್ವಾಸ, ಉತ್ಸಾಹ ತುಂಬಿ, ಹಳೆಯ ನೋವು ಮರೆಸಿ, ಬಾಂಧವ್ಯದ ಕೊಂಡಿ ಕಳಚದಂತೆ ಮಾಡಿ, ಸಾಮುದಾಯಿಕ ಮನರಂಜನೆ, ದೈವಭಕ್ತಿ, ಭಾವೈಕ್ಯತೆ, ಮನಶ್ಯಾಂತಿ ಉಂಟು ಮಾಡಿ ಜೀವನಕ್ಕೆ ಹೊಸ ಉತ್ಸಾಹವನ್ನು ತಂದು ಕೊಡುತ್ತವೆ ಎನ್ನಬಹುದು.

## ೧. ಯುಗಾದಿ

ಯುಗ ಎಂದರೆ 'ನೂತನ ವರ್ಷ' ಆದಿ ಎಂದರೆ 'ಆರಂಭ' ಎಂಬ ಅರ್ಥವನ್ನು ಹೊಂದಿರುವ ಯುಗಾದಿ ಹಬ್ಬವು ನೂತನ ಸಂವತ್ಸರಾರಂಭ ದಿನವಾದ ಚೈತ್ರ, ಶುಕ್ಲ ಪಾಡ್ಯದಂದು ಯುಗಾದಿ ಹಬ್ಬವನ್ನು ಆಚರಿಸಲಾಗುತ್ತದೆ. ಈ ದಿನ ಒಳ್ಳೆಯ ಅಥವಾ ಕೆಟ್ಟ ಘಟನೆಗಳು ಜರುಗಿದರೆ ಇಡೀ ವರ್ಷ ಅದರ ಪರಂಪರೆಯು ಮುಂದುವರೆಯುತ್ತದೆ ಎಂಬ ನಂಬಿಕೆಯಿದೆ. ಯುಗಾದಿಯ ದಿನ ಒಳ್ಳೆಯ ಯೋಚನೆ, ಒಳ್ಳೆಯ ಕೆಲಸ ಮಾಡಿದರೆ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮ ಉಂಟಾಗಿ, ಇಡೀ ವರ್ಷದಲ್ಲಿ ಅಂತಹ ಉತ್ತಮ ಫಲಗಳನ್ನು ಹೊಂದುವ ಸ್ಫೂರ್ತಿ ಉಂಟಾಗುತ್ತದೆ.

ಯುಗಾದಿಯ ದಿನ ಶ್ರೀರಾಮನು ರಾವಣನನ್ನು ಕೊಂದು ವಿಜಯೋತ್ಸವವನ್ನು ಆಚರಿಸಿದನೆಂದು ತಿಳಿಯಲಾಗಿದೆ. ಉಜ್ಜಯನಿಯ ವಿಕ್ರಮಾದಿತ್ಯನನ್ನು ಶಾಲಿವಾಹನ ಪರಾಭವಗೊಳಿಸಿ ತನ್ನ 'ಶಕ'ವನ್ನು (ಶಾಲಿವಾಹನ ಶಕೆ) ಪ್ರಾರಂಭಿಸಿದ್ದು ಈ ದಿನವೇ.

ಯುಗಾದಿಯ ದಿನ ಮಂಗಳ ಸ್ನಾನ ಮಾಡಿ, ಹೊಸ ಬಟ್ಟೆಗಳನ್ನು ಧರಿಸಿ, ಹಿರಿಯರ ಆಶೀರ್ವಾದ ಪಡೆದು, ಮನೆಯನ್ನೆಲ್ಲಾ ಮಾವು-ಬೇವಿನ ತಳಿರು ತೋರಣಗಳಿಂದ ಅಲಂಕರಿಸಿ, ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಪಡೆದು, ಮನೆಯಲ್ಲಿ ಇಷ್ಟದೇವತಾ ಪೂಜೆಯ ಜೊತೆಗೆ ಸತ್ತ ಹಿರಿಯರಿಗೆ ಅವರ ಹೆಸರಿನಲ್ಲಿ ಬಟ್ಟೆಗಳನ್ನಿಟ್ಟು ಪೂಜಿಸಿ, ಧೂಪ ಹಾಕುವುದು ನಂತರ ಅವರಿಗೆ ಅಂದು ಮನೆಯಲ್ಲಿ ಮಾಡಿದ ಅಡುಗೆಯನ್ನು ನೈವೇದ್ಯ ಅರ್ಪಿಸಿ ಬೇವು ತಿನ್ನುವುದು. ಊಟ ಮಾಡುವುದು ಯುಗಾದಿ ಹಬ್ಬದ ವೈಶಿಷ್ಟ್ಯ.

ಹೊಸಪೇಟೆ ತಾಲ್ಲೂಕಿನದಾದ್ಯಂತ ಯುಗಾದಿ ಹಬ್ಬವನ್ನು ಸಂಭ್ರಮಾಚರಣೆಗಳಿಂದ ಬರಮಾಡಿಕೊಂಡು ತಮ್ಮ ಗ್ರಾಮಗಳ ಕೆಲವು ಗ್ರಾಮದೇವತೆಗಳ ಜಾತ್ರೆಯನ್ನು ತೇರು ಎಳೆಯುವುದರ ಮೂಲಕ ತಮ್ಮ ಭಕ್ತಿಯನ್ನು ಅರ್ಪಿಸುತ್ತಾರೆ. ಈ ಹಬ್ಬದಲ್ಲಿ ಬೇವಿನ ಚಿಗುರು ಹೂಗಳನ್ನು ಬೆಲ್ಲ ಜೀರಿಗೆಗಳೊಂದಿಗೆ ಮಿಶ್ರಣ ಮಾಡಿ ಸೇವಿಸುತ್ತಾರೆ. ಬೇವು ಆಯುಷ್ಯವನ್ನೂ, ಸಂಪತ್ತನ್ನೂ ನೀಡುವುದಲ್ಲದೆ ಅನಿಷ್ಟಗಳನ್ನೆಲ್ಲಾ ನಿವಾರಿಸುತ್ತವೆ. ದೇಹಕ್ಕೆ ತಂಪು ನೀಡುವ ಬೇವೂ ಬೇಕು.

ಉಷ್ಣ ಪ್ರಧಾನ ಬೆಲ್ಲವೂ ಬೇಕು. ಆಯುರ್ವೇದದ ಪ್ರಕಾರ ವಸಂತ ಋತುವಿನಲ್ಲಿ ಉಂಟಾಗುವ ಕಾಯಿಲೆಗಳಿಗೆ ಬೇವು-ಬೆಲ್ಲ ಸಿದ್ಧ ಔಷಧವಾಗಿದೆ. ಬೇವು ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಬೇವಿನ ಕಹಿಯ ಅನುಭವವಿಲ್ಲದವರಿಗೆ ಸಿಹಿಯ ಮಹತ್ವ ತಿಳಿಯದು. ಬೇವು ಬೆಲ್ಲ ನಮ್ಮ ಜೀವನದುದ್ದಕ್ಕೂ ಕಾಣುವ ಸುಖ-ದುಃಖ, ಸಿಹಿ-ಕಹಿ, ಹಗಲು-ರಾತ್ರಿ, ನೋವು-ನಲಿವು, ಪ್ರೀತಿ-ದ್ವೇಷ ಅವುಗಳನ್ನು ಸಮಚಿತ್ತದಿಂದ ಸ್ವೀಕರಿಸಬೇಕೆಂಬ ಭಾವ ಇಲ್ಲಿ ವ್ಯಕ್ತವಾಗುತ್ತದೆ. ಯುಗಾದಿ ಹಬ್ಬ ಬರಿಯ ಯಾಂತ್ರಿಕ ಆಚರಣೆಯಾಗದೆ ಬದುಕಿನ ಹಲವು ಬದಲಾವಣೆಗಳಿಗೂ ನಾಂದಿಯಾಗುತ್ತದೆ.

### ೨. ಶ್ರೀರಾಮನವಮಿ

ಚೈತ್ರ ಶುದ್ಧ ನವಮಿಯಂದು ರಾಮನವಮಿಯನ್ನು ಆಚರಿಸಲಾಗುತ್ತದೆ. ಜನರೆಲ್ಲಾ ಒಟ್ಟಾಗಿ ಸೇರಿ ಆತ್ಮೀಯತೆಯಿಂದ ಆಚರಿಸುವ ಹಬ್ಬ ಶ್ರೀರಾಮನವಮಿ. ರಾಮ ಮಂದಿರಗಳಲ್ಲಿ ನಾನಾ ಪೂಜೆ, ಉಪಚಾರಗಳಿಂದ ರಾಮನನ್ನು ಆರಾಧಿಸುವುದು, ರಾಮಕಥೆ, ಭಜನೆ ಮಾಡುವುದು, ನಗರ ಮತ್ತು ಹಳ್ಳಿಗಳಲ್ಲಿ ಶ್ರೀರಾಮ ಉತ್ಸವ ಏರ್ಪಡಿಸುವುದು ಮೊದಲಾದವುಗಳಿಂದ ಶ್ರೀರಾಮನನ್ನು ಕೊಂಡಾಡುತ್ತಾರೆ. ಶ್ರೀರಾಮನ ಪೂಜೆಯ ನಂತರ ನೈವೇದ್ಯವನ್ನು ಪ್ರಸಾದವಾಗಿ ಸ್ವೀಕರಿಸುತ್ತಾರೆ. ಶ್ರೀರಾಮನವಮಿಯಂದು ಹಂಪಿಯ ಮಾಲ್ಯವಂತ ರಘುನಾಥ, ಮಲಪನಗುಡಿಯ ಶ್ರೀರಾಮನ ರಥೋತ್ಸವ ಹಾಗೂ ಮರಿಯಮ್ಮನಹಳ್ಳಿಯ ರಾಮ-ಲಕ್ಷ್ಮಣ ಮತ್ತು ಆಂಜನೇಯರ ಜೋಡಿ ರಥೋತ್ಸವಗಳು ನಡೆಯುತ್ತವೆ. ಆ ದಿನ ಮುಖ್ಯವಾಗಿ ಬಿಸಿಲಿನ ಧಗೆಯ ಉಪಶಮನಕ್ಕಾಗಿ ಪಾನಕ, ಮಜ್ಜಿಗೆ, ಕೋಸಂಬರಿ, ಹಣ್ಣಿನ ರಸ ಇವುಗಳನ್ನು ವಿತರಿಸಲಾಗುತ್ತದೆ. ಇವು ಬೇಸಿಗೆ ಕಾಲಕ್ಕೆ ತಂಪು, ರುಚಿಕರವೂ ಆಗಿರುವುದರ ಜೊತೆಗೆ ಆರೋಗ್ಯಕ್ಕೂ ಪೋಷಕವಾಗಿರುತ್ತದೆ.

ರಾಮ, ಬ್ರಹ್ಮಾದಿ ದೇವತೆಗಳಿಂದ ಪೂಜಿತನಾದವನು. ಇವನು ಮಹಾವಿಷ್ಣುವಿನ ಏಳನೆಯ ಅವತಾರವಾಗಿದ್ದಾನೆ. ಅಯೋಧ್ಯೆಯ ರಾಜ ದಶರಥನ ಮಗನಾಗಿ ಅವತರಿಸಿ ಲೋಕಕಂಟಕನಾಗಿದ್ದ ರಾವಣನನ್ನು ಸಂಹರಿಸಿದನು. ತನ್ನ ಅವತಾರದಿಂದ ರಾಮ ಭೂಮಿಯನ್ನು ಬೆಳಗಿದನಲ್ಲದೆ, ಸಕಲರಿಗೂ ಧರ್ಮ, ಜ್ಞಾನ, ವೈರಾಗ್ಯ-ಐಶ್ವರ್ಯಗಳನ್ನು ನೀಡುವ ಪರಮಾತ್ಮನೂ ಆದನು. ಚೈತ್ರ ಮಾಸದ ಶುಕ್ಲ ಪಕ್ಷದ ನವಮಿಯು ಶ್ರೀರಾಮನ ಜನ್ಮ ದಿನವಾಗಿದೆ. ಕೆಲವು ವೇಳೆ ಎರಡು ದಿನಗಳಲ್ಲಿ ನವಮಿ ಬರುವುದೂ ಇದೆ. ನವಮಿಯ ಜೊತೆಗೆ ಪುನರ್ವಸು ನಕ್ಷತ್ರ ಸೇರಿದರೆ ಅದು ರಾಮನವಮಿ ಆಚರಣೆಗೆ ಸೂಕ್ತ.

### ೩. ನಾಗರ ಪಂಚಮಿ

ಶ್ರಾವಣ ಮಾಸದ ಶುಕ್ಲ ಪಕ್ಷದ ಪಂಚಮಿಯಂದು ಭಯ, ಭಕ್ತಿ, ಶ್ರದ್ಧೆಗಳಿಂದ ನಾಗರ ಪಂಚಮಿಯನ್ನು ಆಚರಿಸುವರು.

ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅನೇಕ ವೃಕ್ಷ, ಪ್ರಾಣಿ-ಪಕ್ಷಿ, ಸರ್ಪ ವಿಶೇಷಗಳು ದಿವ್ಯಶಕ್ತಿಗಳ ಸಂಕೇತವಾಗಿ ಪೂಜಾರ್ಹವೆನಿಸಿವೆ. ಗಣಪತಿಯ ಹೊಟ್ಟೆಯ ಪಟ್ಟಿಯಾಗಿ, ಶಿವನ ಆಭರಣವಾಗಿ, ವಿಷ್ಣುವಿನ ಹಾಸಿಗೆಯಾಗಿ, ಕುಂಡಲಿನೀಶಕ್ತಿಯ ಪ್ರತೀಕವಾಗಿ, ಸಮುದ್ರಮಂಥನ ಸಮಯದಲ್ಲಿ

ಮಂದರ ಪರ್ವತವೆಂಬ ಕಡಗೋಲಿಗೆ ಹಗ್ಗವಾಗಿ, ದುರ್ಯೋಧನನ ಧ್ವಜ ಚಿಹ್ನೆಯಾಗಿ, ಭೂಮಿಯನ್ನು ಹೊತ್ತ ಆದಿಶೇಷನಾಗಿ, ಪಾರ್ಶ್ವನಾಥ ತೀರ್ಥಂಕರನ ಶಿರೋ ಲಾಂಛನವಾಗಿ, ಲಕ್ಷ್ಮಣ, ಬಲರಾಮ, ಸುಬ್ರಹ್ಮಣ್ಯಸ್ವಾಮಿಯ ಅನನ್ಯ ರೂಪವಾಗಿರುವ 'ನಾಗ' ಭಾರತೀಯರಿಗೆಲ್ಲಾ ಪೂಜಾರ್ಹವಾಗಿದೆ.

ನಾಗರ ಪಂಚಮಿ ಕುರಿತು ಈ ರೀತಿಯ ಕಥೆಗಳಿವೆ.

೧. ಒಬ್ಬ ರೈತ ತನ್ನ ಗದ್ದೆಯಲ್ಲಿ ಉಳುತ್ತಿರುವಾಗ ನಾಗರಹಾವಿನ ಮರಿಗಳು ನೇಗಿಲಿಗೆ ಸಿಕ್ಕು ಸತ್ತವು. ಮರಿಗಳ ಸಾವಿನಿಂದ ತಾಯಿ ನಾಗಿಣಿಗೆ ಕೋಪ ಹೆಚ್ಚಾಗಿ, ತನ್ನ ಮರಿಗಳ ಸಾವಿಗೆ ಕಾರಣನಾದ ರೈತನ ಮನೆಗೆ ತೆರಳಿ ಮನೆಯವರನ್ನೆಲ್ಲಾ ಕಚ್ಚಿ ಸಾಯಿಸಿತು. ಅಷ್ಟಕ್ಕೆ ಅದರ ಕೋಪ ಕಡಿಮೆಯಾಗಲಿಲ್ಲ. ರೈತನ ವಂಶವನ್ನೇ ನಿರ್ವಂಶ ಮಾಡಲು ರೈತನ ಮದುವೆಯಾದ ಮಗಳನ್ನೂ ಕಚ್ಚಿ ಸಾಯಿಸಲು ಅವಳ ಮನೆಯತ್ತ ಧಾವಿಸಿತು. ನಾಗಿಣಿ ಅಲ್ಲಿಗೆ ಹೋದಾಗ ರೈತನ ಮಗಳು ಮಣ್ಣಿನ ನಾಗರ ಮಾಡಿ, ಹಾಲೆರೆದು ಪೂಜಿಸಿ, ನಮಿಸುತ್ತಿದ್ದಳು. ಕಚ್ಚಲು ಬಂದ ನಾಗಿಣಿ ಅದನ್ನು ಕಂಡು, ಅದರ ಕೋಪ ಕರಗಿತು. ತನ್ನ ಮರಿಗಳನ್ನು ಕೊಂದುದಕ್ಕಾಗಿ ನಿನ್ನ ತವರಿನವರನ್ನೆಲ್ಲಾ ಕಚ್ಚಿ ಸಾಯಿಸಿ, ನಿನ್ನನ್ನೂ ಸಾಯಿಸಲು ಇಲ್ಲಿಗೆ ಬಂದಿದ್ದೆ. ಆದರೆ ನೀನು ಮಾಡುತ್ತಿರುವ ಪೂಜೆ ನೋಡಿ ಸಂತೋಷಗೊಂಡಿದ್ದೇನೆ. 'ನಿನ್ನ ಇಷ್ಟಾರ್ಥವನ್ನು ಈಡೇರಿಸುವೆ. ನಿನಗೇನು ಬೇಕು ಕೇಳು' ಎಂದಾಗ ಆಕೆ ತನ್ನ ತಂದೆ-ತಾಯಿಗಳನ್ನು, ತವರಿನವರನ್ನು ಬದುಕಿಸುವಂತೆ ಬೇಡಿಕೊಂಡು ನಾಗಿಣಿ ಜೊತೆಗೆ ತವರಿಗೆ ಬಂದಳು. ನಾಗಿಣಿ ವಿಷ ಹೀರಿ ಎಲ್ಲರನ್ನೂ ಬದುಕಿಸಿತು. ಅಂದು ಶ್ರಾವಣ ಶುದ್ಧ ಪಂಚಮಿಯಾಗಿತ್ತು. ಅಂದು ಬದುಕಿದ ಆ ಮನೆಯವರೆಲ್ಲಾ ಸೇರಿ, ನಾಗಾರಾಧನೆ ಮಾಡಿದರು. ಈ ಹಬ್ಬದಂದು ಹೆಚ್ಚಾಗಿ ಮದುವೆಯಾದ ಹೆಣ್ಣುಮಕ್ಕಳು ತವರಿಗೆ ಹೋಗುವುದು ಬಳಕೆಯಲ್ಲಿ ಬರಲು ಈ ಕಥೆ ಮೂಲವೆಂದು ತೋರುತ್ತದೆ.

೨. ಬಡತನದ ಕುಟುಂಬದಲ್ಲಿ ಹುಟ್ಟಿದ ಸುಂದರಿಯೊಬ್ಬಳು ತನ್ನ ಸುದೈವದಿಂದ ಸಿರಿವಂತ ಕುಟುಂಬ ಸೇರಿದಳು. ಅವಳ ಅಣ್ಣ ನಾಗರಪಂಚಮಿ ಹಬ್ಬಕ್ಕೆ ತಂಗಿಯನ್ನು ಕರೆತರಲು ಚಕ್ಕಡಿಯಲ್ಲಿ ಬಂದನು. ಹಬ್ಬಕ್ಕೆ ಕರೆಯಲು ಅಣ್ಣ ಬಂದಿರುವುದನ್ನು ನೋಡಿ ಅವಳು ಹಿಗ್ಗಿನಿಂದ ಹೊಸ ಬಟ್ಟೆಯುಟ್ಟು, ಮೈತುಂಬ ಬಂಗಾರ ತೊಟ್ಟು ಅಣ್ಣನ ಜೊತೆ ತವರಿಗೆ ಹೊರಟಳು. ದಟ್ಟ ದರಿದ್ರ ಅಣ್ಣನಿಗೆ, ತಂಗಿಯ ಮೈಮೇಲೆ ಇರುವ ಆಭರಣಗಳ ಆಸೆಗೆ ದಾರಿ ಮಧ್ಯೆ ಅವಳನ್ನು ಸಾಯಿಸಿ, ಆಭರಣಗಳನ್ನು ಪಡೆಯುವ ಮನಸ್ಸಿನಿಂದ ಅವಳ ಮೇಲೆ ಕಲ್ಲೊಂದು ಎತ್ತಿಹಾಕಲು ಹವಣಿಸಿದಾಗ, ಅದರ ಅಡಿಯಲ್ಲಿದ್ದ ಹಾವು ಅವನನ್ನು ಕಚ್ಚಿ ಸಾಯಿಸಿತು. ಅಣ್ಣನ ಸಾವಿನಿಂದ ನೊಂದ ತಂಗಿ, ಆ ಕ್ಷಣ ಅಲ್ಲೇ ನಾಗನನ್ನು ಪ್ರಾರ್ಥಿಸಿ, ಪೂಜಿಸಿ ಅಣ್ಣನ ಜೀವ ಮರಳಿ ಪಡೆದಳು. ಅಂದು ಶ್ರಾವಣ ಶುದ್ಧ ಚೌತಿಯಾಗಿತ್ತು. ಅದಕ್ಕೆ ಈ ತಿಥಿಗೆ ನಾಗಚೌತಿ ಎಂದು ಹೆಸರು.

ಮಾನವ ಜನಾಂಗದ ಆದಿಕಾಲದಿಂದಲೂ ಈ ನಾಗಾರಾಧನೆ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಹಾವಿನ ಭಯಂಕರ ವಿಷವನ್ನು ಸ್ಮರಿಸಿ, ಅವುಗಳಿಂದ ಯಾವ ತೊಂದರೆಯೂ ಬರದಿರಲಿ ಎಂಬ ಉದ್ದೇಶದಿಂದ ಈ ಹಬ್ಬ ಆಚರಣೆಗೆ ಬಂದಿರಬಹುದು. ಹಾವುಗಳಿರುವ ಹೊಲ-ಗದ್ದೆಗಳಲ್ಲಿ ಕ್ರಿಮಿಕೀಟಗಳ ತೊಂದರೆ ಇರುವುದಿಲ್ಲವಾದ್ದರಿಂದ 'ಕ್ಷೇತ್ರಪಾಲಕ' ರೂಪದಲ್ಲಿ, ಧನ-ಧಾನ್ಯಗಳ ರಕ್ಷಕನಾಗಿ 'ನಿಧಿಪಾಲಕ' ರೂಪದಲ್ಲಿ ನಾಗರ ಪ್ರತಿಮೆ ಇಟ್ಟು ಅದನ್ನು ಪೂಜಿಸುವ ಸಂಪ್ರದಾಯ ಬಳಕೆಗೆ ಬಂದಿರಬಹುದು.

ನಾಗರ ಪಂಚಮಿಯು ಹೆಣ್ಣುಮಕ್ಕಳಿಗೆ ಸಡಗರ, ಸಂಭ್ರಮ ತರುವ ಹಬ್ಬವಾಗಿದೆ. ಮನೆಯನ್ನೆಲ್ಲಾ ಸಾರಿಸಿ, ಶುಚಿಗೊಳಿಸಿ, ಸ್ನಾನ ಮಾಡಿ, ಮಡಿಯಿಂದ ತಂಬಿಟ್ಟು, ಉಂಡೆ, ಹೋಳಿಗೆ, ಕಡಬುಗಳನ್ನು ಮಾಡಿ ದೇವಸ್ಥಾನದಲ್ಲಿರುವ ನಾಗರಕಲ್ಲುಗಳಿಗೆ ಅಥವಾ ಹುತ್ತಕ್ಕೆ ಹಾಲೆರೆದು, ತಾವು ಮಾಡಿದ ಸಿಹಿ ಅಡುಗೆಯ ನೈವೇದ್ಯ ಮಾಡುವರು. ಚಿನ್ನ, ಬೆಳ್ಳಿ ಇಲ್ಲವೆ ಜೇಡಿಮಣ್ಣಿನಿಂದ ನಾಗ ವಿಗ್ರಹಗಳನ್ನು ಮಾಡಿ ಅವುಗಳಿಗೆ ಹಾಲಿನ ಅಭಿಷೇಕ ಮಾಡಿ, ಅರಿಶಿಣ, ಕುಂಕುಮ, ಹೂಗಳಿಂದ ಅಲಂಕರಿಸಿ, ಪೂಜೆ ಮಾಡಿ, ಧೂಪ, ದೀಪಗಳ ಪೂಜೆ ನಂತರ ಮನೆಗೆ ಬಂದ ಅತಿಥಿಗಳು, ಕುಟುಂಬದವರು ಒಟ್ಟಿಗೆ ಕುಳಿತು ಊಟ ಮಾಡುವರು. ಗ್ರಾಮೀಣ ಭಾಗದಲ್ಲಿ ಈ ಹಬ್ಬದಂದು ಸಾಹಸ ಕ್ರೀಡೆಗಳನ್ನು ಏರ್ಪಡಿಸುತ್ತಾರೆ. ಕಾಯಿ ಗುದ್ದುವುದು, ಸೈಕಲ್ ಸ್ಪರ್ಧೆ, ಬಂಡಿ ಸ್ಪರ್ಧೆ, ನಿಂಬೆಹಣ್ಣು ಎಸೆತ, ಗುಂಡು ಎಸೆತ- ಮುಂತಾದ ಕ್ರೀಡೆಗಳು ನಡೆಯುತ್ತವೆ. ಈ ಕ್ರೀಡೆಗಳಲ್ಲಿ ಎಲ್ಲರೂ ಭಾಗವಹಿಸುವುದು ವಿಶೇಷವಾಗಿರುತ್ತದೆ.

**೪. ಗೌರಿಹಬ್ಬ**

ಗೌರಿಹಬ್ಬ ಗಣೇಶ ಚತುರ್ಥಿಯ ಮುನ್ನ ಹಾಗೂ ಶ್ರಾವಣ ಮಾಸದ ಶುಕ್ಲ ಪಕ್ಷದ ತದಿಗೆಯ ದಿನ ಮಂಗಳವಾರಗಳಲ್ಲಿ ಆಚರಿಸುತ್ತಾರೆ. ಇದು ಸುಮಂಗಲಿಯರಿಗೆ ದೀರ್ಘ ಸೌಮಂಗಲ್ಯದಾಯಕ ವ್ರತವಾಗಿದೆ. ಮದುವೆಗೆ ಮೊದಲು ಕನ್ಯೆಯರು ಗೌರಿಪೂಜೆ ಮಾಡುವರು. ವಿವಾಹ ಸಮಾರಂಭದಲ್ಲಿ ತಾಳಿಯ ಭಾಗ್ಯಕ್ಕಾಗಿ ಗೌರಿಪೂಜೆಯನ್ನು ಮಾಡುವ ಸಂಪ್ರದಾಯ ಇದೆ. ಗೌರಿ ಎಲ್ಲ ಲೋಕಗಳ ತಾಯಿ ಎಂಬ ನಂಬಿಕೆಯಿದೆ.

ಪುರಾಣ ಮೂಲದ ಪ್ರಕಾರ, ಗೌರಿ ಶಿವನ ಹೆಂಡತಿ. ಗೌರಿ ಎಂದರೆ ಗೌರವರ್ಣದವಳು. ಸರಸ್ವತಿ ಮತ್ತು ಲಕ್ಷ್ಮಿಯರು ಗೌರಿಯನ್ನು ಪೂಜಿಸಿದರೆಂಬ ಐತಿಹ್ಯವಿದೆ. ಗೌರಿಯು ಶಿವನ ಹೆಂಡತಿಯಾಗಿ ಶಿವೆ ಎಂದೂ ಹೆಸರಾಗಿರುವಳು. ದಕ್ಷನ ಮಗಳು ದಾಕ್ಷಾಯಿಣಿ ಶಿವನ ಪತ್ನಿ. ದಕ್ಷ ಯಜ್ಞ ಕಾಲದಲ್ಲಿ ತಂದೆ ಅವಮಾನ ಮಾಡಿದುದನ್ನು ತಾಳಲಾಗದೆ ಹಾಗೂ ಶಿವನನ್ನು ಹೀನಾಯವಾಗಿ ಕಂಡನೆಂದೂ ದಾಕ್ಷಾಯಿಣಿ ಯಜ್ಞ ಕುಂಡಕ್ಕೆ ಹಾರಿ ಪ್ರಾಣ ಬಿಡುತ್ತಾಳೆ. ದಕ್ಷ ಯಜ್ಞಕ್ಕೆ ದಕ್ಷ ತನ್ನ ಮಗಳನ್ನು ಆಹ್ವಾನಿಸುವುದಿಲ್ಲ. ಶಿವನ ಮೇಲಿನ ಕೋಪದಿಂದ ನಿರೀಶ್ವರ ಯಾಗ ಮಾಡಿದ ದಕ್ಷನು ದಾಕ್ಷಾಯಿಣಿಯನ್ನು ನಿರ್ಲಕ್ಷಿಸಿರುತ್ತಾನೆ. ಕರೆಯದ ಮೇಲೆ ಅಲ್ಲಿಗೆ

ಹೋಗಬೇಡವೆಂದು ಶಿವನು ಹೇಳಿದರೂ ದಾಕ್ಷಾಯಿಣಿ ತಂದೆಯ ಮನೆಗೆ ಹೋಗಿ ಅವಮಾನಿತಳಾಗುತ್ತಾಳೆ. ಯಜ್ಞ ಕುಂಡಕ್ಕೆ ಹಾರಿ ಪ್ರಾಣ ಬಿಡುತ್ತಾಳೆ. ಪ್ರಾಣ ಬಿಟ್ಟ ದಾಕ್ಷಾಯಿಣಿಯೇ ಮುಂದೆ ಹಿಮವಂತನಿಗೆ ಮಗಳಾಗಿ ಜನಿಸಿ, ಎಳೆಯ ವಯಸ್ಸಿನಿಂದಲೇ ಶಿವನಲ್ಲಿ ಮನಸಿಟ್ಟು ಯೌವನಕ್ಕೆ ಬಂದಾಗ ಶಿವನನ್ನು ಕುರಿತು ತಪಸ್ಸು ಮಾಡುತ್ತಾಳೆ. ಶಿವನು ದಾಕ್ಷಾಯಿಣಿಯನ್ನು ಕಳೆದುಕೊಂಡು ತಪೋನಿರತನಾಗಿರುತ್ತಾನೆ. ಮನ್ಮಥನಿಂದ ಬಾಧಿತನಾದಾಗ ಶಿವ ಕಣ್ತೆರೆದು ಪಾರ್ವತಿಯ ಕೋರಿಕೆ ಈಡೇರಿಸಲು ಅವಳನ್ನು ವಿವಾಹವಾಗುತ್ತಾನೆ. ಆಗ ಗಿರಿಜಾ ಕಲ್ಯಾಣ ನೆರವೇರುತ್ತದೆ. ಗಿರಿಜೆಯೇ ಗೌರಿ.

ಗೌರಿ ಹಬ್ಬದಂದು ಗೌರಿಯು ಮಣ್ಣಿನಿಂದ ತಯಾರಿಸಿದ ಮೂರ್ತಿರೂಪದಲ್ಲಿ ಪೂಜಿಸಲ್ಪಡುತ್ತಾಳೆ. ಗೌರಿಯ ಜೊತೆ ಗಣಪ ಇಂತಿಷ್ಟು ದಿನವೆಂದು ಪೂಜಿಸಲ್ಪಡುತ್ತಾನೆ. ಅಂತಿಮವಾಗಿ ಗೌರಿಗೆ ಬುತ್ತಿಕಟ್ಟಿ, ಉಡಿ ತುಂಬಿ ಗಣಪನೊಂದಿಗೆ ನೀರಿನಲ್ಲಿ ವಿಸರ್ಜಿಸುತ್ತಾರೆ. ಅಂದು ತವರಿನಿಂದ ಹೆಣ್ಣುಮಕ್ಕಳು, ಮುತ್ತೈದೆಯರು ಧಾನ್ಯರೂಪದ ಬಾಗಿನ ಪಡೆಯುತ್ತಾರೆ. ಬಾಗಿನದ ಮೂಲಕ ಧಾನ್ಯಗಳ ವಿನಿಮಯವಾಗುವುದಲ್ಲದೆ ಕುಟುಂಬಗಳ ನಡುವಿನ ಸಾಮರಸ್ಯ ಬೆಳೆಯಲು ಸಹಾಯಕವಾಗುವುದು. ಧಾನ್ಯರೂಪದ ಬಾಗಿನ ನೀಡುವುದು ಗೌರಿ ಕೃಷಿಕರ ಮಗಳೆಂಬುದರ ಸಂಕೇತವಾಗಿದೆ. ಬಾಗಿನದ ಪ್ರತಿಯೊಂದು ವಸ್ತುವು ಗೌರಿಯ ಪ್ರತೀಕವೆಂಬ ನಂಬಿಕೆಯಿದೆ.

ಗೌರಿಯನ್ನು ಬೀಳ್ಕೊಡುವಾಗ ಶುಭ ದಿನ ನೋಡಿ, ಉಡಿ ತುಂಬಿ, ಮೊಸರನ್ನದ ಬುತ್ತಿ ಕಟ್ಟಿ ಕಳುಹಿಸುವರು. ದೈವೀರೂಪದ ಗೌರಿಯನ್ನು ಜನಪದರು ತಮ್ಮ ಮನೆ ಮಗಳೆಂದು ಭಾವಿಸುತ್ತಾರೆ. ಮಗಳ ಹೊಟ್ಟೆ ತಣ್ಣಗಿರಲೆಂಬ ಆಶಯದಿಂದ ಮೊಸರನ್ನದ ಬುತ್ತಿ ಕಟ್ಟುತ್ತಾರೆ. ಮಣ್ಣಿನ ಮೂರ್ತಿಯನ್ನು ಪೂಜಿಸುವುದರ ಹಿನ್ನೆಲೆ ಗೌರಿ ಮಣ್ಣಿನ ಮಗಳು. ಕೃಷಿಕರಿಗೆ ಹತ್ತಿರದವಳೆಂಬ ಭಾವನೆಯಿಂದ ಗೌರಿಯನ್ನು ಮಣ್ಣಿನಿಂದ ಮಾಡಿ ನೀರಿಗೆ ಬಿಡುತ್ತಾರೆ. ಗಂಗೆ-ಗೌರಿಯರಿಬ್ಬರು ಶಿವನ ಪತ್ನಿಯರು. ಅವರಲ್ಲಿ ಸವತಿ ಮತ್ಸರವಿರುವುದು ಸಹಜ. ಆದರೆ ಆಚರಣೆಯಲ್ಲಿ ಅವರನ್ನು ಒಂದುಗೂಡಿಸುವ ಮೂಲಕ ಇಬ್ಬರಿಗೂ ಪ್ರಾಧಾನ್ಯತೆ ನೀಡಿದ್ದಾರೆ. ಹಬ್ಬದ ದಿನ ಮುತ್ತೈದೆಯರು ಬಾವಿಗೆ ಹೋಗಿ ಪೂಜಿಸಿ, ಎಡೆ ಇಟ್ಟು ನಂತರ, ಆ ಎಡೆಯನ್ನು ನೀರಿಗೆ ತೇಲಿ ಬಿಡುವುದು, ನೀರು ಮತ್ತು ಜೀವಿಗಳ ಸಂಬಂಧವನ್ನು ಸಂಕೇತಿಸುತ್ತದೆ. ಈ ರೀತಿಯ ಆಚರಣೆ ಗೌರಿಯು ಜಲದೇವತೆಯೆಂಬುದನ್ನು ಸಮರ್ಥಿಸುತ್ತದೆ.

ಗಣಪ ಭೂಮಿ ಮತ್ತು ಪ್ರಕೃತಿಯನ್ನು ಪ್ರತಿನಿಧಿಸಿದರೆ, ಗೌರಿಯು ಜಲದ ಪ್ರತೀಕ. ಕೆರೆ, ಬಾವಿಗಳಲ್ಲಿ ಗಂಗೆ ಪೂಜೆ ಮಾಡುವಾಗ ನೀರೊಳಗಿನ ಹಿಡಿಮರಳನ್ನು ತಂದು ಮರಳು ಗೌರಮ್ಮನೆಂದು ಪೂಜಿಸುತ್ತಾರೆ. ಮನೆಗಳಲ್ಲಿ ಒನಕೆ, ಒರಳು, ಬೀಸುವ ಕಲ್ಲು, ಒಲೆಯನ್ನು ಗೌರಿಯೆಂದು ಪೂಜಿಸುತ್ತಾರೆ. ಇತ್ತೀಚೆಗೆ ನಗರ ಪ್ರದೇಶಗಳಲ್ಲಿ ಗೌರಿಹಬ್ಬ ವೈದಿಕರ ಆಚರಣೆಯಾಗಿ ರೂಪಾಂತರಗೊಂಡಿದೆ. ಗೌರಿಯು ಸ್ವರ್ಣಗೌರಿಯಾಗಿ ಆಚರಿಸಲ್ಪಡುತ್ತಿದ್ದಾಳೆ. ಗ್ರಾಮೀಣ ಪ್ರದೇಶಗಳಲ್ಲಿ

ಮಾತ್ರ ಗೌರಿ ಹಬ್ಬ ಸಮೃದ್ಧಿ ಮತ್ತು ನೆಲ, ಜಲ ತತ್ವಗಳ ಸಮನ್ವಯತೆಯ ಸಂಕೇತವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.

ಕಮಲಾಪುರ ಹೋಬಳಿಯ ಗಾದಿಗನೂರು ಗ್ರಾಮದಲ್ಲಿಯ ಹೊಲದಲ್ಲಿ ಮಾಸ್ತಿ ಕಲ್ಲಿಗೆ ಗೌರಿಯ ಪ್ರತೀಕವೆಂದು ಆರತಿ ಬೆಳಗುತ್ತಾರೆ. ಗಂಡನ ಸಾವಿನೊಂದಿಗೆ ಬದುಕನ್ನು ಕೊನೆಗಾಣಿಸಿದ ಹೆಣ್ಣುಗಳು ದೈವತ್ವಕ್ಕೇರಿ ಪೂಜೆಗೊಳ್ಳುವ ಕಾರಣದಿಂದ ಮಾಸ್ತಿಯು ಇಲ್ಲಿ ಮಾತೃದೈವವಾಗಿ ಗೌರಿಹಬ್ಬದಂದು ಪೂಜಿಸಲ್ಪಡುತ್ತಾಳೆ. ಕಂಪ್ಲಿ ಹೋಬಳಿಯ ರಾಮಸಾಗರ ಗ್ರಾಮದಲ್ಲಿ ತೇರು ಎಳೆಯುವುದರ ಮೂಲಕ ವಿಶೇಷವಾಗಿ ಗೌರಿಹಬ್ಬವನ್ನು ಆಚರಿಸುತ್ತಾರೆ.

**೫. ಗಣೇಶ ಚತುರ್ಥಿ**

ಗಣೇಶ ಚತುರ್ಥಿ ಭಾದ್ರಪದ ಮಾಸದ ನಾಲ್ಕನೇ ದಿನದಂದು ಗಣೇಶನ ಹಬ್ಬವನ್ನು ಆಚರಿಸಲಾಗುತ್ತದೆ. ಗಣೇಶ ವಿಘ್ನ ನಿವಾರಕ. ಶ್ರೀಕೃಷ್ಣ ಮೊದಲುಗೊಂಡು ಎಲ್ಲ ಮಹಾಮಹಿಮರು, ಯಾವುದೇ ಶುಭ ಕಾರ್ಯ ಆರಂಭಕ್ಕೆ ಮೊದಲು ಗಣೇಶನ ಪೂಜೆ ಮಾಡುವರು. ವಿಘ್ನಕಾರಿಗಳಾದ ಶಕ್ತಿಗಳ ಮೇಲೆ ಸಂಪೂರ್ಣ ಪ್ರಭುತ್ವವನ್ನು ಹೊಂದಿರುವನು ಗಣಪತಿ.

ಗಣಪತಿ ಪ್ರತಿಮೆಯನ್ನು ಮನೆಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ, ಬಡಾವಣೆಗಳಲ್ಲಿ ಪ್ರತಿಷ್ಠಾಪಿಸುತ್ತಾರೆ. ಪ್ರತಿಮೆಗಳ ಗಾತ್ರ ಬೇರೆ ಬೇರೆ ಆದರೂ ಅವುಗಳ ರೂಪ ಒಂದೇ ಆಗಿರುತ್ತದೆ. ಗಣಪತಿಯನ್ನು ವಿಶೇಷವಾಗಿ ಅಲಂಕರಿಸಿದ ಒಂದು ಮಂಟಪದಲ್ಲಿ ಕೂಡಿಸುವರು. ಬಣ್ಣ ಬಣ್ಣದ ತಳಿರು ತೋರಣಗಳಿಂದ ಹಾಗೂ ವಿದ್ಯುದ್ದೀಪಗಳಿಂದ ಆ ಮಂಟಪವನ್ನು ಅಲಂಕರಿಸಲಾಗಿರುತ್ತದೆ. ಗಣಪತಿಯನ್ನು ಮನೆಯಲ್ಲಿ ಕೂಡಿಸುವವರು, ಸಾರ್ವಜನಿಕ ಸ್ಥಳ, ಬಡಾವಣೆಗಳಲ್ಲಿ ಕೂಡಿಸುವವರು ಒಂದು ದಿನದಿಂದ ಒಂಬತ್ತು ದಿನಗಳವರೆಗೆ ಇಟ್ಟಿರುತ್ತಾರೆ. ಕೆಲವರು ಅನಂತ ಚತುರ್ಥಿಯವರೆಗೂ ಇಡುವುದು ವಾಡಿಕೆಯಲ್ಲಿದೆ. ಇದು ಅವರವರ ಅನುಕೂಲವನ್ನು ಅವಲಂಬಿಸಿರುತ್ತದೆ.

ಗಣಪತಿ ಇರುವಷ್ಟು ದಿನವೂ ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಪೂಜೆ, ಪ್ರಾರ್ಥನೆ ಮತ್ತು ಆರತಿ ನಡೆಯುತ್ತದೆ. ಕೆಲವರು ಪುರೋಹಿತರನ್ನು ಕರೆಸಿ ಪೂಜೆ ಮಾಡಿಸಿದರೆ, ಕೆಲವರು ತಾವೇ ಪೂಜೆ ಮಾಡುವರು. ಗಣಪತಿಗೆ ಇಪ್ಪತ್ತೊಂದು ಗರಿಕೆಗಳನ್ನು ಹಾಕುವುದು ಮತ್ತು ತಾವರೆ ಹೂವನ್ನು ಅರ್ಪಿಸುವುದು ಹಾಗೂ ಇಪ್ಪತ್ತೊಂದು ಮೋದಕಗಳನ್ನು, ಇಪ್ಪತ್ತೊಂದು ಕಡಬುಗಳನ್ನು ನೈವೇದ್ಯ ಮಾಡಲಾಗುತ್ತದೆ. ಗಣಪತಿ ವಿದ್ಯಾ ದೇವರು. ಅವನನ್ನು ಭಜಿಸಿದರೆ ನಮ್ಮ ಕಷ್ಟ ಪರಿಹಾರವಾಗುತ್ತದೆ. ನಮ್ಮ ಪ್ರಯತ್ನಗಳು ಕೈಗೂಡುತ್ತವೆ. ಯಾವ ಶುಭ ಕೆಲಸವನ್ನು ಪ್ರಾರಂಭಿಸಬೇಕಾದರೂ ಮೊದಲು ಗಣಪತಿಯನ್ನು ಪ್ರಾರ್ಥಿಸಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಗಳಿವೆ.

ಗಣಪತಿ ಆಕಾರದಲ್ಲೇ ಅದ್ಭುತ ಕಲ್ಪನೆ ಅಡಗಿದೆ. ದೊಡ್ಡ ತಲೆಯುಳ್ಳ ಅವನನ್ನು ಆರಾಧಿಸುವವರೂ 'ದೊಡ್ಡ ತಲೆಯುಳ್ಳವರು' ಅಂದರೆ 'ಬುದ್ಧಿವಂತರು' ಆಗುತ್ತಾರೆ. ಆನೆಯ

ಸೊಂಡಿಲು 'ಕರ್ಮಶೀಲತೆ'ಯ ಸಂಕೇತ. ಅವನ ವಕ್ರತುಂಡ 'ಓಂಕಾರ'ದ ಪ್ರತೀಕ. ಅವನು 'ಶೂರ್ಪಕರ್ಣ' ಅಂದರೆ 'ಮೊರದಂತೆ ಕಿವಿಯುಳ್ಳವ' ವ್ಯಕ್ತಿಗೆ ಹೊಗಳಿಕೆ, ತೆಗಳಿಕೆಗಳು ಬಂದಾಗ ಅವುಗಳಲ್ಲಿ ಸತ್ಯಾಂಶವನ್ನು ಮಾತ್ರ ಗ್ರಹಿಸಬೇಕು ಎಂಬುದು ಅದರ ಸಂಕೇತ. 'ಮಹಾಕಾಯ' ಅಂದರೆ ದೊಡ್ಡ ಹೊಟ್ಟೆಯವ, ಅವನ ಆ ದೊಡ್ಡ ಹೊಟ್ಟೆ 'ಬ್ರಹ್ಮಾಂಡ'ದ ಸಂಕೇತ. 'ಲಂಬೋದರ' ಎಂಬುದು ದವಸ ತುಂಬಿದ 'ಕಣಜ'ದ ಸಂಕೇತ. ಅವನ ಹೊಟ್ಟೆಗೆ ಸುತ್ತಿಕೊಂಡಿರುವ ಸರ್ಪ, ಬ್ರಹ್ಮಾಂಡವನ್ನು ಹೊತ್ತಿರುವ 'ಆದಿಶೇಷ'ನ ಸಂಕೇತ. ಅವನ ಕೈಯಲ್ಲಿರುವ 'ಪಾಶ-ಅಂಕುಶ'ಗಳು ನಮ್ಮಲ್ಲಿರುವ 'ರಾಗ-ದ್ವೇಷ'ಗಳನ್ನು ನಿಯಂತ್ರಿಸುವ ಸಾಧನಗಳ ಸಂಕೇತ. 'ಏಕದಂತ', 'ಏಕಾಗ್ರತೆ'ಯ ಸೂಚಕ. ಅವನ ವಾಹನವಾದ ಇಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ ಸಂಕೇತ. ಅವನ ಚಿಕ್ಕ ಕಣ್ಣುಗಳು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿ ಮುಂದುವರೆಯಬೇಕು ಎಂಬುದರ ಸಂಕೇತವಾಗಿವೆ.

ಗಣಪನಿಗೆ ಈ ವಿಚಿತ್ರ ರೂಪ ಬಂದಿರುವ ಬಗೆಗೆ ಶಿವ ಪುರಾಣದಲ್ಲಿ ಕಥೆಯೊಂದಿದೆ. ಶಿವನ ಮಡದಿ ಪಾರ್ವತಿ ಒಮ್ಮೆ ಸ್ನಾನಕ್ಕೆ ಹೋದಳು. ಬಾಗಿಲ ಬಳಿ ಕಾವಲಿಗೆ ಯಾರೂ ಇರಲಿಲ್ಲ. ಆಗ ಆಕೆ ತನ್ನ ಮೈ ಕೊಳೆಯಿಂದ ಒಬ್ಬ ಬಾಲಕನನ್ನು ಸೃಷ್ಟಿಸಿದಳು. ಆ ಬಾಲಕ ನೋಡಲು ಸುಂದರ, ಬಲಶಾಲಿಯಾಗಿ ದಷ್ಟ ಪುಷ್ಟನಾಗಿದ್ದನು. ಯಾರನ್ನೂ ಒಳಗೆ ಬಿಡದಂತೆ ಅವಳು ಆ ಬಾಲಕನನ್ನು ಸ್ನಾನಗೃಹದ ಬಾಗಿಲ ಬಳಿ ನಿಲ್ಲಿಸಿದಳು. ಸ್ವಲ್ಪ ಹೊತ್ತಿನ ಬಳಿಕ ಶಿವ ಅಲ್ಲಿಗೆ ಬಂದನು. ಬಾಲಕ ಅವನನ್ನು ಒಳಗೆ ಬಿಡದೆ ತಡೆದನು. ಆಗ ಶಿವನು, ಕೈಲಾಸಾಧಿಪತಿಯಾದ ನನ್ನನ್ನು ತಡೆಯುವೆಯಾ? ಎಂದು ಸಿಟ್ಟಿನಿಂದ ಗದರಿಸಿದನು. ಅದಕ್ಕೆ ಬಾಲಕನು ನೀನು ಯಾರಾದರೆ ನನಗೇನು? ನನ್ನ ತಾಯಿ ಸ್ನಾನಕ್ಕೆ ಹೋಗಿದ್ದಾಳೆ. ಆಕೆಯ ಅಪ್ಪಣೆಯಿಲ್ಲದೆ ನಾನು ಯಾರನ್ನೂ ಒಳಗೆ ಬಿಡುವಂತಿಲ್ಲ. ಇಲ್ಲಿ ನಿಲ್ಲಬೇಡ ಹೊರಟು ಹೋಗು ಎಂದು ಹೇಳಿದನು. ಶಿವನು ಬಾಲಕನ ಉದ್ಧಟತನದ ಮಾತುಗಳನ್ನು ಕೇಳಿ ಕೆರಳಿ ಕೆಂಡವಾದನು. ತನ್ನನ್ನು ತಡೆದ ಬಾಲಕನ ತಲೆಯನ್ನು ತನ್ನ ತ್ರಿಶೂಲದಿಂದ ತೆಗೆದುಬಿಟ್ಟನು. ಆ ವೇಳೆಗೆ ಸ್ನಾನ ಮುಗಿಸಿ ಬಂದ ಪಾರ್ವತಿ ಮಗನ ಮರಣದ ಸುದ್ದಿ ತಿಳಿದು ರೋದಿಸತೊಡಗಿದಳು. ಇದನ್ನು ಕಂಡ ಶಿವನಿಗೂ ದುಃಖವಾಯಿತು. ತನ್ನ ಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು, ಕೂಡಲೇ ಗಣಗಳನ್ನು ಕರೆದು ಉತ್ತರ ದಿಕ್ಕಿಗೆ ತಲೆ ಇಟ್ಟು ಯಾರಾದರೂ ಮಲಗಿದ್ದರೆ ಅವರ ತಲೆ ಕತ್ತರಿಸಿ ತನ್ನಿ ಎಂದು ಆಜ್ಞೆ ಮಾಡಿದನು. ಶಿವನ ಅಪ್ಪಣೆಯಂತೆ ಗಣಗಳು ಹೋಗಿ ಉತ್ತರ ದಿಕ್ಕಿಗೆ ತಲೆ ಹಾಕಿ ಮಲಗಿದ್ದ ಒಂದು ಆನೆಯ ತಲೆಯನ್ನು ಕತ್ತರಿಸಿ ತಂದರು. ಶಿವನು ಆ ಆನೆಯ ತಲೆಯನ್ನೇ ಬಾಲಕನ ಮುಂಡಕ್ಕೆ ಜೋಡಿಸಿ ಜೀವದಾನ ಮಾಡಿದನು. ಈ ರೀತಿ ಗಣಪ ತನ್ನ ವಿಚಿತ್ರ ರೂಪ ಪಡೆದು ಗಜಮುಖ, ಗಣೇಶ ಎಂದು ಹೆಸರಾದನು.

ಗಣಪತಿ ಬುದ್ಧಿ ಕೊಡುವ ದೇವರು. ಎಲ್ಲ ವಿಘ್ನಗಳನ್ನು ಪರಿಹರಿಸುವವನು. ಯಾವುದೇ ಒಂದು ಕೆಲಸವಾಗಲೀ ಗಣಪತಿಯ ಪ್ರಾರ್ಥನೆಯಿಂದಲೇ ಪ್ರಾರಂಭಗೊಳ್ಳಬೇಕು. ಇದಕ್ಕೆ ಸಂಬಂಧಿಸಿದಂತೆ ಪುರಾಣದಲ್ಲಿ ಒಂದು ಕಥೆಯಿದೆ.

ಒಮ್ಮೆ ಎಲ್ಲ ದೇವತೆಗಳು ಶಿವ-ಪಾರ್ವತಿಯರನ್ನು ಕಾಣಲು ಕೈಲಾಸ ಪರ್ವತಕ್ಕೆ ಹೋದರು. ಅವರು ಅಮೃತದಿಂದ ಮಾಡಿದ ಒಂದು ಮೋದಕವನ್ನು ಶಿವ ಮತ್ತು ಪಾರ್ವತಿಗೆ ಕೊಟ್ಟರು. ಅಲ್ಲೇ ಅವರ ಮಕ್ಕಳಾದ ಗಣೇಶ ಮತ್ತು ಷಣ್ಮುಖ ಆಟವಾಡುತ್ತಿದ್ದರು. ಮೋದಕವನ್ನು ಕಂಡು ಇಬ್ಬರೂ ಶಿವ-ಪಾರ್ವತಿಯ ಬಳಿ ಬಂದರು. ಇಬ್ಬರೂ ಮೋದಕವನ್ನು ಕೇಳಿದರು. ಆದರೆ ಇದ್ದದ್ದು ಒಂದೇ ಒಂದು. ಆಗ ಪಾರ್ವತಿ ಒಂದು ಉಪಾಯ ಹೂಡಿದಳು. ಇಬ್ಬರಲ್ಲಿ ಯಾರು ಬೇಗನೆ ಒಂದು ಭೂ ಪ್ರದಕ್ಷಿಣೆ ಹಾಕುವರೋ ಅವರಿಗೆ ಮೋದಕ ದೊರೆಯುವುದೆಂದು ಹೇಳಿದಳು. ಷಣ್ಮುಖ ತಾನೇ ಹೇಗಾದರೂ ಈ ಪಂದ್ಯದಲ್ಲಿ ಜಯಶಾಲಿಯಾಗಬೇಕೆಂದು ತನ್ನ ವಾಹನವಾದ ನವಿಲನ್ನೇರಿ ಹಾರಿ ಹೋಗಿಯೇ ಬಿಟ್ಟನು. ಆದರೆ, ಗಣೇಶ ಕದಲಲೇ ಇಲ್ಲ. ಶಿವ ಕೇಳಿದ ಮಗು, ಷಣ್ಮುಖ ಆಗಲೇ ಹೋಗಿಯಾಯಿತು. ನೀನು ಭೂ ಪ್ರದಕ್ಷಿಣೆ ಹಾಕಲು ಹೋಗುವುದಿಲ್ಲವೇ? ಆಗ ಗಣೇಶನು ತಂದೆ-ತಾಯಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ, ಅಪ್ಪ, ಎಲ್ಲ ಲೋಕಗಳೂ ತಂದೆ-ತಾಯಿಯರಾದ ನಿಮ್ಮಿಬ್ಬರಲ್ಲಿಯೇ ಇವೆಯಲ್ಲ ಎಂದ ಮೇಲೆ ನಾನೀಗ ನಿಮ್ಮನ್ನು ಸುತ್ತಿ ಬಂದರೆ ಇಡೀ ಭೂ ಮಂಡಲವನ್ನೇ ಪ್ರದಕ್ಷಿಣೆ ಮಾಡಿದಂತಾಯಿತಲ್ಲವೇ ಎಂದು ಹೇಳಿ, ಶಿವ-ಪಾರ್ವತಿಯರನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ ಬಂದು ಕುಳಿತನು. ಗಣೇಶನ ಮಾತಿಗೆ, ಬುದ್ಧಿವಂತಿಕೆಗೆ ಶಿವ-ಪಾರ್ವತಿಯರು ತಲೆದೂಗಿದರು. ಗಣೇಶನಿಗೆ ತಂದೆ ತಾಯಿಯಲ್ಲಿದ್ದ ಭಕ್ತಿಯನ್ನು ಕಂಡು ಶಿವನಿಗೂ ತುಂಬ ಸಂತೋಷವಾಯಿತು. ಯಾವುದೇ ಹೊಸ ಕಾರ್ಯವನ್ನು ಆರಂಭಿಸುವ ಮೊದಲು ಜನರು ನಿನ್ನನ್ನು ಪ್ರಾರ್ಥಿಸಲಿ ಎಂದು ಹೇಳಿ ಶಿವ ಗಣಪತಿಯನ್ನು ಹರಿಸಿದ.

ಗಣೇಶ ಚತುರ್ಥಿ ದಿನ ಯಾರೂ ಚಂದ್ರನನ್ನು ನೋಡುವುದಿಲ್ಲ. ಹಾಗೆ ನೋಡಿದರೆ ಕಳ್ಳತನದ ಅಪವಾದ ಬರುವುದೆಂಬ ನಂಬಿಕೆ ಇದೆ. ಪುರಾಣ ಕಥೆಗಳ ಆಧಾರದ ಮೇಲೆ ಇಂತಹ ನಂಬಿಕೆ ಬೆಳೆದಿದೆ. ಒಮ್ಮೆ ಗಣಪತಿ ತನ್ನ ವಾಹನವಾದ ಇಲಿಯ ಮೇಲೆ ಕುಳಿತುಕೊಂಡು ಹೋಗುತ್ತಿದ್ದ. ಗಣಪತಿ ಆಯತಪ್ಪಿ ಕೆಳಗೆ ಬಿದ್ದಾಗ, ಇದನ್ನು ನೋಡಿ ಚಂದ್ರ ಜೋರಾಗಿ ನಕ್ಕನು. ತನ್ನನ್ನು ಹಾಸ್ಯ ಮಾಡಿ ನಕ್ಕನೆಂದು ಗಣೇಶನಿಗೆ ಸಿಟ್ಟು ಬಂದಿತು. ಕೂಡಲೇ ಚಂದ್ರನಿಗೆ ಇಂದಿನಿಂದ ನನ್ನನ್ನು ಹುಟ್ಟಿದ ದಿನವಾದ ಭಾದ್ರಪದ ಶುಕ್ಲ ಚತುರ್ಥಿಯಂದು ಯಾರು ನಿನ್ನನ್ನು ನೋಡುವರೋ ಅವರು ಸುಳ್ಳು ಅಪವಾದಕ್ಕೆ ಗುರಿಯಾಗಲಿ ಎಂದು ಶಾಪ ಕೊಟ್ಟನು. ಚೌತಿಯ ಚಂದ್ರನನ್ನು ನೋಡಿದ ಶ್ರೀಕೃಷ್ಣನಿಗೆ ಶಮಂತಕಮಣಿಯನ್ನು ಅಪಹರಿಸಿದ ಅಪವಾದ ಬಂದಿತ್ತು. ಚೌತಿಯಂದು ಚಂದ್ರನನ್ನು ನೋಡಿದವರು ಶಮಂತಕಮಣಿಯ ಕಥೆ ಕೇಳಿದರೆ ಅವರಿಗೆ ಅಪವಾದ ತಗಲುವುದಿಲ್ಲ ಎಂದು ಭಕ್ತರು ನಂಬುತ್ತಾರೆ.

**ವಿಸರ್ಜನೆ**

ಗಣಪತಿ ಮೂರ್ತಿಯನ್ನು ವಿಸರ್ಜನೆ ಮಾಡುವಾಗ ಉತ್ತರ ಪೂಜೆಯನ್ನು ಮಾಡುವರು. ಪ್ರತಿನಿತ್ಯ ಆಚಾರ ಶುದ್ಧಿಯಿಂದ ನಿಯಮಪೂರ್ವಕವಾಗಿ ಗಣೇಶನನ್ನು ಪೂಜಿಸುವುದು

ಕಷ್ಟವಾದ್ದರಿಂದ, ಒಂದು ನಿಯತ ಕಾಲದವರೆಗೆ ಪೂಜೆ ಮಾಡಿದ ನಂತರ ವಿಸರ್ಜನೆ ಮಾಡುವುದು ದೇವತಾ ಪೂಜೆಯ ಒಂದು ಸಂಪ್ರದಾಯವೇ ಆಗಿದೆ. ಗಣೇಶನನ್ನು ಕಳುಹಿಸಿ ಕೊಡುವಾಗ ಮಂಗಳೋತ್ಸವದ ಅಂಗವಾಗಿ, ಗಣೇಶನ ಮೂರ್ತಿಯನ್ನು ಮೆರವಣಿಗೆಯ ಮೂಲಕ ತೆಗೆದುಕೊಂಡು ಹೋಗಿ ಹತ್ತಿರದ ಕೆರೆ, ಕಾಲುವೆಗಳಲ್ಲಿ ವಿಸರ್ಜಿಸಲಾಗುತ್ತದೆ. ವಿಸರ್ಜಿಸುವಾಗಲೂ ಪೂಜೆ ಮಾಡುವುದು ನಿಯಮವಾಗಿದೆ.

ಶಾಲಾ, ಕಾಲೇಜುಗಳು, ಕಛೇರಿಗಳು, ಸಂಘ-ಸಂಸ್ಥೆಗಳು ೫ ದಿನಗಳ ಕಾಲ ಗಣೇಶನನ್ನು ಪ್ರತಿಷ್ಠಾಪಿಸಿ ಗಣೇಶೋತ್ಸವ ಆಚರಿಸುತ್ತವೆ. ಕಡೆಯ ದಿನ ಉತ್ಸವವನ್ನು ಆಚರಿಸಿ ಸಮೀಪದ ಕೆರೆ, ಕಾಲುವೆಗಳಲ್ಲಿ ವಿಗ್ರಹವನ್ನು ವಿಸರ್ಜಿಸಲಾಗುತ್ತದೆ. ಈ ಹಬ್ಬವು ಜನರನ್ನು ಪರಸ್ಪರ ಹತ್ತಿರ ತರುವ ಹಬ್ಬವೂ ಆಗಿದೆ. ಹಲವೆಡೆ ಜಾತಿಮತಗಳ ಭೇದವಿಲ್ಲದೆ ಎಲ್ಲರೂ ಗಣೇಶೋತ್ಸವದಲ್ಲಿ ಭಾಗಿಯಾಗುತ್ತಾರೆ.

### ೬. ದಸರಾಹಬ್ಬ

ಅಶ್ವಯುಜ ಮಾಸದ ಶುಕ್ಲ ಪಕ್ಷದ ಪಾಡ್ಯದಿಂದ ನವಮಿಯವರೆಗೂ ಶಕ್ತಿದೇವತೆಯಾದ ದುರ್ಗೆಯ ವಿವಿಧ ರೂಪಗಳನ್ನು ಪೂಜಿಸುವ ಸಂಪ್ರದಾಯವಿದೆ. ಹತ್ತನೆಯ ದಿನವಾದ ವಿಜಯದಶಮಿಯನ್ನು ಸೇರಿಸಿಕೊಂಡು ಈ ಹಬ್ಬವನ್ನು 'ದಸರಾ' ಎಂದು ಕರೆಯುತ್ತಾರೆ. ಈ ಹಬ್ಬವನ್ನು ನವರಾತ್ರಿ, ನವಮಿಹಬ್ಬ, ದಸರಾ, ವಿಜಯದಶಮಿ, ಬನ್ನಿಹಬ್ಬ ಮೊದಲಾದ ಹೆಸರುಗಳಿಂದಲೂ ಕರೆಯುತ್ತಾರೆ.

ಹೊಸಪೇಟೆ ತಾಲ್ಲೂಕಿನಾದ್ಯಾಂತ ದಸರಾಹಬ್ಬವನ್ನು ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಹಂಪಿಯಲ್ಲಿರುವ ಮಹಾನವಮಿದಿಬ್ಬ ಮತ್ತು ಅದರ ಎಡಭಾಗದಲ್ಲಿರುವ ಹನ್ನೊಂದು ಕಲ್ಲು ಮಂಟಪಗಳಲ್ಲಿ ಬನ್ನಿಹಬ್ಬವನ್ನು ವೈಭವದಿಂದ ಆಚರಿಸಲಾಗುತ್ತಿತ್ತು. ಆ ಕಾಲಕ್ಕೆ ಈ ಹಬ್ಬ ನೋಡಲು ನೆರೆ ರಾಜ್ಯದ ದೊರೆಗಳೂ, ಸಾಮಂತರು, ಪ್ರವಾಸಿಗರು ಬರುತ್ತಿದ್ದರು. ಹಾಗೆ ಬಂದವರಿಗೆ 'ಬನ್ನಿ ಮುಟ್ಟಿಸುವ' ಕೆಲಸ ನಡೆಯುತ್ತಿತ್ತು ಎಂಬುದಾಗಿ ಜನರು ಹೇಳುತ್ತಾರೆ. ತಾಲ್ಲೂಕಿನದಾದ್ಯಂತ ಬನ್ನಿಯಮ್ಮ, ಬನ್ನಿಕಾಳಮ್ಮ, ಬನ್ನಿಮಾಂಕಾಳಿ ಇತ್ಯಾದಿ ಹೆಸರುಗಳಿರುವ ಬನ್ನಿಮರದ ಕಟ್ಟೆಗಳಿವೆ. ಕೆಲವೆಡೆಗಳಲ್ಲಿ ಬನ್ನಿಮರಕ್ಕೆ ಹಸಿರು ಬಳೆ ತೊಡಿಸಿ, ಹೊಸ ಸೀರೆ ಉಡಿಸುವ ಸಂಪ್ರದಾಯವಿದೆ.

ಬನ್ನಿಹಬ್ಬವನ್ನು ಇಂದಿಗೂ ಆಚರಿಸಿಕೊಂಡು ಬಂದಿರುವುದಕ್ಕೆ ಪಾಂಡವರ ಕಾರಣವನ್ನು ಹೇಳುತ್ತಾರೆ. ಪಾಂಡವರು ವನವಾಸ ಸಂದರ್ಭದಲ್ಲಿ ನಾಗೇನಹಳ್ಳಿ ಬಳಿಯಿರುವ 'ಧರ್ಮರ ಗುಡ್ಡ'ದಲ್ಲಿ ಕೆಲವು ದಿನ ಉಳಿದುಕೊಂಡಿದ್ದರಂತೆ. ಮುಂದೆ ಅಜ್ಞಾತವಾಸದ ಸಂದರ್ಭದಲ್ಲಿಯೂ ಪಾಂಡವರು ಈ ಧರ್ಮರ ಗುಡ್ಡದಲ್ಲಿರುವ ಬನ್ನಿ ಮರದಲ್ಲಿಯೇ ತಮ್ಮ ಆಯುಧಗಳನ್ನು ಇರಿಸಿ 'ಬನ್ನಿಯ ಗಿಡದಾಗ ನಮ್ಮ ಆಯುಧಗಳನ್ನು ಇಟ್ಟಿರುವೆವು ತಾಯಿ, ಯಾರೂ ಬಂದರೂ ಕೊಡಬೇಡ ಬನ್ನಿತಾಯಿ, ಅರ್ಜುನ ಬಂದರೆ ಕೊಡಬೇಕು' ಎಂದು ಪ್ರಾರ್ಥಿಸಿದರಂತೆ.

ಅಜ್ಞಾತವಾಸದ ಕೊನೆಯಲ್ಲಿ ಪಾಂಡವರು ಮತ್ತೆ ಬನ್ನಿಗಿಡಕ್ಕೆ ಪೂಜೆ ಮಾಡಿ, ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು, ಕೌರವರನ್ನು ಸೋಲಿಸಿದರಂತೆ.

ಈ ನಂಬಿಕೆಯ ಹಿನ್ನೆಲೆಯಲ್ಲಿ ತಾಲ್ಲೂಕಿನ ಜನರು ಇಂದಿಗೂ ದಸರಾ ದಿನಗಳಲ್ಲಿ ತಮ್ಮ ಗ್ರಾಮಗಳ ಗ್ರಾಮದೇವತೆಗಳನ್ನು ವೈಭವದಿಂದ ಸಿಂಗರಿಸಿ, ಪಲ್ಲಕ್ಕಿಯಲ್ಲಿರಿಸಿ, ಹೊತ್ತುಕೊಂಡು ಧರ್ಮರ ಗುಡ್ಡಕ್ಕೆ ಹೋಗುತ್ತಾರೆ. ಅಲ್ಲಿ ದೇವರಿಗೆ ಪೂಜೆ ಮಾಡಿ, ಪರಸ್ಪರ ಎಲ್ಲ ಗ್ರಾಮಗಳ ದೇವರುಗಳು ಬನ್ನಿ ಮುಡಿದು ಸಂಭ್ರಮದಿಂದ ತಮ್ಮ ಗ್ರಾಮಗಳಿಗೆ ತೆರಳುತ್ತಾರೆ. ಈ ರೀತಿಯ ಆಚರಣೆ ಪಾಂಡವರು ಕೌರವರನ್ನು ಸೋಲಿಸಿ, ವಿಜಯ ಗಳಿಸಿದ ಸಂಕೇತವಾಗಿ ಇದನ್ನು ಆಚರಿಸಲಾಗುತ್ತದೆ ಎಂದು ಜನರು ಹೇಳುತ್ತಾರೆ.

ನವರಾತ್ರಿಯಲ್ಲಿ ಆಯುಧ ಪೂಜೆಗೆ ವಿಶೇಷ ಸ್ಥಾನವಿದೆ. ಹಿಂದೆ ರಾಜ, ಮಹಾರಾಜರು ಅರಮನೆಯ ಶಸ್ತ್ರಾಗಾರದಲ್ಲಿರುವ ಯುದ್ಧ ಸಾಮಗ್ರಿಗಳನ್ನು ಶುಚಿಗೊಳಿಸಿ, ಸಾಣೆ ಹಿಡಿದು ದುರಸ್ತಿಗೊಳಿಸಿ ಹೂ, ಪತ್ರೆಗಳನ್ನು ಮುಡಿಸಿ, ಪೂಜೆ ಮಾಡಿ ಜಯ ಕೋರುತ್ತಿದ್ದರು. ಅಂದರೆ ಆಯುಧಗಳಿಗೆ ಪೂಜೆ ಸಂದು ಆಯುಧ ಪೂಜೆ ಎಂಬ ಹೆಸರು ಚಾಲ್ತಿಯಲ್ಲಿದೆ. ಪ್ರಸ್ತುತ ಸಂದರ್ಭದಲ್ಲಿ ಆಯುಧ ಪೂಜೆಯಂದು ವಾಹನಗಳು, ಕಾರ್ಖಾನೆಯ ಯಂತ್ರಗಳು, ಮನೆಯಲ್ಲಿ ಬಳಸುವ ಚಾಕು, ಕತ್ತರಿ, ಗ್ರೈಂಡರ್, ಎಲೆಕ್ಟ್ರಾನಿಕ್ ವಸ್ತುಗಳು, ರೈತರು ಉಪಯೋಗಿಸುವ ಹಾರೆ, ಗುದ್ದಲಿ, ಸಲಿಕೆ, ಕೊಡಲಿ, ಕುಡುಗೋಲು ಮೊದಲಾದ ಕೃಷಿ ಉಪಕರಣಗಳು ಪೂಜಾರ್ಹವಾಗಿವೆ. ಇದರಿಂದ ವರ್ಷಕ್ಕೊಮ್ಮೆಯಾದರೂ ಅವುಗಳನ್ನು ಶುಚಿಯಾಗಿಡುವ, ಪೂಜಿಸುವ ಅವಕಾಶ ಲಭ್ಯವಾಗುತ್ತದೆ. ವಾಹನಗಳಿಗೆ ಪೂಜೆ ಸಲ್ಲಿಸುವಾಗ ನಿಂಬೆಹಣ್ಣು ಅಥವಾ ಬೂದು ಕುಂಬಳ ಕಾಯಿಗಳ ಮೇಲೆ ಕರ್ಪೂರ ಉರಿಸಿ, ಆರತಿ ಬೆಳಗಿ ಅವನ್ನು ವಾಹನದ ಮುಂದೆ ಒಡೆಯುತ್ತಾರೆ. ಇದರಿಂದ ಮುಂದಿನ ದಿನಗಳಲ್ಲಿ ಯಾವುದೇ ಅಪಘಾತಗಳು ಆಗದಿರಲಿ ಎಂಬ ಉದ್ದೇಶವಿರುತ್ತದೆ. ಕೆಲವರು ವಾಹನಗಳಿಗೆ ಕುರಿ, ಕೋಳಿ ಬಲಿ ಕೊಡುವುದೂ ಇದೆ.

ನವರಾತ್ರಿಗಳು ಕಳೆದು ಹತ್ತನೆಯ ದಿನದಂದು ವಿಜಯದಶಮಿಯನ್ನು ಆಚರಿಸಲಾಗುತ್ತದೆ. ವಿಜಯದಶಮಿಯಂದು ರಾಮ ರಾವಣನನ್ನು ಕೊಂದನೆಂಬ ಪ್ರತೀತಿ ಇದೆ. ಅಂದು ಬೆಳಿಗ್ಗೆ ಮನೆಯಲ್ಲಿ ಪೂಜೆ ಮುಗಿಸಿ, ದೇವಸ್ಥಾನಗಳಿಗೆ ಹೋಗಿ ಬನ್ನಿಗಿಡವನ್ನು ಪೂಜಿಸಿ ಅದರ ಎಲೆಗಳನ್ನು ತಂದು, ಮನೆಯ ದೇವರ ಜಗುಲಿಯ ಮೇಲಿರಿಸಿ ಸುಖ, ಶಾಂತಿ ಬೇಡುತ್ತಾರೆ. ಸಂಜೆ ಹಿರಿಯರಿಗೆ, ಕುಟುಂಬದವರಿಗೆ, ಬಂಧು ಮಿತ್ರರಿಗೆ ಬನ್ನಿಯನ್ನು ವಿತರಿಸಿ 'ಬನ್ನಿ ತಗೊಂಡು ಬಂಗಾರದ ಹಾಗೆ ಇರೋಣ' ಎನ್ನುತ್ತಾ ತಾವೂ ಅವರಿಂದ ಪಡೆದು, ಹಿರಿಯರ ಕಾಲಿಗೆರಗಿ ಆಶೀರ್ವಾದ ಪಡೆಯುತ್ತಾರೆ.

**೭. ದೀಪಾವಳಿ**

ದೀಪಾವಳಿ ಎಂದರೆ ದೀಪಗಳ ಸಾಲು. ದೀಪಗಳ ಹಬ್ಬವೇ ದೀಪಾವಳಿ. ಇದು ಕಾರ್ತಿಕ ಮಾಸದ ಹಬ್ಬವೇ ಆದರೂ ಅಶ್ವಯುಜ ಕೃಷ್ಣ ತ್ರಯೋದಶಿಯ ಸಂಜೆಯಿಂದಲೇ ದೀಪಾವಳಿ

ಸಂಭ್ರಮ. ಈ ಹಬ್ಬದ ವೇಳೆಗೆ ಮುಂಗಾರು ಬೆಳೆ ಲಕ್ಷ್ಮಿಯ ರೂಪದಲ್ಲಿ ರೈತನ ಕೈ ಸೇರಿರುತ್ತದೆ. ಮನೆಯ, ಮನದ ಕತ್ತಲೆಯನ್ನು ಹೋಗಲಾಡಿಸುವ, ಕತ್ತಲೆಯಿಂದ ಬೆಳಕಿನೆಡೆ ನಮ್ಮನ್ನು ಒಯ್ಯುವ ಬೆಳಕಿನ ಹಬ್ಬವೇ ದೀಪಾವಳಿ.

ಪುರಾಣಗಳ ಪ್ರಕಾರ ನರಕಾಸುರನೆಂಬ ರಾಕ್ಷಸನು, ಲೋಕಕಂಟಕನಾಗಿ ಭೂದೇವಿಗೆ ಉಪದ್ರವ ನೀಡುತ್ತಿದ್ದನು. ಇವನ ಉಪದ್ರವ ತಾಳಲಾರದೆ ಭೂದೇವಿಯು ಅವನ ಸಂಹಾರಕ್ಕೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದಳು. ಕೃಷ್ಣನು ಅಶ್ವಯುಜ ಚತುರ್ದಶಿಯಂದು ಎಳ್ಳೆಣ್ಣೆಯಿಂದ ಅಭ್ಯಂಗ ಸ್ನಾನ ಮಾಡಿ ನರಕಾಸುರನನ್ನು ವಧಿಸುತ್ತಾನೆ. ಆ ವಧಿಸಿದ ದಿನವನ್ನು ನರಕ ಚತುರ್ದಶಿ ಎಂದು ಕರೆಯಲಾಯಿತು. ನರಕ ಚತುರ್ದಶಿಯಂದು ಎಲ್ಲರು ಎಳ್ಳೆಣ್ಣೆ ಸ್ನಾನ ಮಾಡಿ, ಹೊಸಬಟ್ಟೆ ತೊಟ್ಟು ಪಟಾಕಿ ಸಿಡಿಸುತ್ತಾರೆ. ಪಟಾಕಿ ಸಿಡಿಸುವುದು ನರಕಾಸುರನ ಸಂಹಾರದ ವಿಜಯೋತ್ಸವದ ಸಂಕೇತವಾಗಿದೆ.

ಅಮಾವಾಸ್ಯೆಯ ಸಂಜೆ ಧನ ದೇವತೆಯಾದ ಲಕ್ಷ್ಮಿ ಪೂಜೆ ಮಾಡುವರು. ಹಣ, ಚಿನ್ನವನ್ನು ಕಲಶದ ಜೊತೆ ಇಟ್ಟು ಲಕ್ಷ್ಮಿಯನ್ನು ಪೂಜಿಸಿ, ಅಭಿವೃದ್ಧಿ ಮಾಡುವಂತೆ ಪ್ರಾರ್ಥಿಸುತ್ತಾರೆ. ಅಂಗಡಿಗಳಲ್ಲೂ ಲಕ್ಷ್ಮಿಪೂಜೆ ವಿಜೃಂಭಣೆಯಿಂದ ಆಚರಿಸುತ್ತಾರೆ. ೨೪ನೇ ತೀರ್ಥಂಕರನಾದ ಮಹಾವೀರನು ನಿರ್ವಾಣ ಹೊಂದಿದ ದಿನವಾದ ದೀಪಾವಳಿ ಅಮಾವಾಸ್ಯೆಯನ್ನು ಜೈನ ಸಮುದಾಯದವರು ಹೊಸ ವರ್ಷವೆಂದು ಆಚರಿಸಿ, ಹೊಸ ಲೆಕ್ಕ ಪತ್ರ ಆರಂಭಿಸುತ್ತಾರೆ.

ಕಾರ್ತಿಕ ಮಾಸದ ಮೊದಲ ದಿನವೇ ಬಲಿಪಾಡ್ಯಮಿ. ಬಲಿಪಾಡ್ಯಮಿ ಕುರಿತಂತೆ ಕತೆಯೊಂದಿದೆ. ಬಲಿ ಪ್ರಹ್ಲಾದನ ಮೊಮ್ಮಗ. ತನ್ನ ತಪೋಬಲ ಹಾಗೂ ಭುಜಬಲದಿಂದ ಬಲಿಚಕ್ರವರ್ತಿ ದೇವೇಂದ್ರನನ್ನು ಸೋಲಿಸಿ, ಸುರಲೋಕವನ್ನು ವಶಪಡಿಸಿಕೊಂಡು ಆಳ್ವಿಕೆ ಮಾಡುತ್ತಿದ್ದ. ಶ್ರೀ ಮನ್ನಾರಾಯಣನು ದೇವತೆಗಳ ಕೋರಿಕೆಯ ಮೇರೆಗೆ ವಾಮನನಾಗಿ ಅವತರಿಸಿದನು. ಬಲಿಯು ಸರ್ವಜಿತ್‌ಯಾಗ ಮಾಡಿದ ಸಂದರ್ಭದಲ್ಲಿ, ಕೇಳಿದವರಿಗೆ ಕೇಳಿದ್ದನ್ನು ಕೊಡುವ ಸಂಕಲ್ಪ ಮಾಡಿದ್ದ. ಆಗ ವಾಮನ ಯಾಗ ಮಂಟಪಕ್ಕೆ ಬಂದು ಬಲಿಯಿಂದ ಮೂರಡಿ ಜಾಗವನ್ನು ಬೇಡಿದ. ಬಲಿ ಆಗಲಿ ಮೂರಡಿ ಜಾಗವನ್ನು ಅಳೆದುಕೊ ಎಂದು ಹೇಳಿದಾಗ, ವಾಮನನು ತ್ರಿವಿಕ್ರಮನಾಗಿ ಬೆಳೆದು, ಆಕಾಶಕ್ಕೆ ಒಂದು ಹೆಜ್ಜೆ ಇಟ್ಟನು. ಭೂಮಿಗೆ ಇನ್ನೊಂದು ಹೆಜ್ಜೆಯಿಟ್ಟನು. ಮೂರನೇ ಹೆಜ್ಜೆ.ಯನ್ನು ಬಲಿಯ ತಲೆಯ ಮೇಲೆ ಇಟ್ಟು ಅವನನ್ನು ಪಾತಾಳಕ್ಕೆ ತಳ್ಳಿದನು. ಬಲಿಯ ದಾನ ಶೂರತ್ವವನ್ನು ಮೆಚ್ಚಿದ ವಿಷ್ಣು, 'ಬೇಕಾದ ವರವನ್ನು ಬೇಡು' ಎಂದನು. ಆಗ ಬಲಿಯು, ವರ್ಷದಲ್ಲಿ ಮೂರು ದಿನ ನನ್ನ ರಾಜ್ಯವನ್ನು ನೋಡುವ ಅವಕಾಶ ಕೊಡು. ಈ ಮೂರು ದಿನ ಯಾರು ದೀಪ ಬೆಳಗುತ್ತಾರೋ ಅವರ ಮನೆಯಲ್ಲಿ ನಿನ್ನ ಸಹಧರ್ಮಿಣಿ ಮಹಾಲಕ್ಷ್ಮಿ ಸ್ಥಿರವಾಗಿ ನೆಲೆಸಲಿ. ಹಾಗೆಯೇ ನನ್ನ ಮನೆಯ ಬಾಗಿಲಲ್ಲಿ ಸದಾ ನಿನ್ನ ಸಾನ್ನಿಧ್ಯವಿರಲಿ ಎಂದು ಬೇಡಿಕೊಂಡನು. ಅವನ ಬೇಡಿಕೆಗಳಿಗೆ ಮಹಾವಿಷ್ಣು ತಥಾಸ್ತು ಎಂದನು. ಆದುದರಿಂದ ಬಲಿಪಾಡ್ಯಮಿಯಂದು ಸಂಧ್ಯಾ ಕಾಲದಲ್ಲಿ ಬಲೀಂದ್ರನ ಪೂಜೆ ಮಾಡುವರು.

ಈ ಬಲಿಪಾಡ್ಯ ಇನ್ನೂ ಅನೇಕ ರೀತಿಯಿಂದ ಮಹತ್ವಪೂರ್ಣವಾಗಿದೆ. ಈ ದಿನ ಲಂಕೆಯಿಂದ ಮರಳಿ ಬಂದ ಶ್ರೀರಾಮನು ಪಟ್ಟಾಭಿಷೇಕಗೊಂಡ ದಿನ. ಪಾಂಡವರು ತಮ್ಮ ಅಜ್ಞಾತವಾಸವನ್ನು ಮುಗಿಸಿದ ದಿನ. ಶ್ರೀಕೃಷ್ಣನು ಗೋವರ್ಧನ ಗಿರಿಯನ್ನು ಎತ್ತಿ ಹಿಡಿದ ದಿನ ಎಂದು ಹೇಳಲಾಗುತ್ತದೆ.

ಕಾರ್ತಿಕ ಪಾಡ್ಯದಿಂದ ಮನೆ ಬಾಗಿಲಲ್ಲಿ, ತುಳಸಿ ವೃಂದಾವನದ ಮುಂದೆ ಒಂದು ತಿಂಗಳು ಕಾಲ ದೀಪ ಬೆಳಗಿಸುತ್ತಾರೆ. ಈ ರೀತಿ ದೀಪ ಹಚ್ಚುವುದರಿಂದ ಮರಣದ ನಂತರ ಆತ್ಮ ಸ್ವರ್ಗಕ್ಕೆ ಹೋಗುವಾಗ, ಕಾರ್ತಿಕದಲ್ಲಿ ಹಚ್ಚಿಟ್ಟ ಜ್ಯೋತಿ ಬೆಳಕು ತೋರುತ್ತದೆ ಎಂಬ ನಂಬಿಕೆಯಿದೆ. ಒಟ್ಟಾರೆ ದೀಪಾವಳಿ ಹಬ್ಬವು ಪ್ರಾಚೀನ ಕಾಲದ ಭಾಗ್ಯದ ಸ್ಮಾರಕವಾಗಿ, ಭವಿಷತ್ ಕಾಲದ ಸುಖದ ಸಂಕೇತವಾಗಿ, ವರ್ತಮಾನ ಕಾಲದ ಸಂಪತ್ತಿನ ಸ್ಮರಣೆಯಾಗಿ, ಅಜ್ಞಾನವನ್ನು ಹೊಡೆದೋಡಿಸಿ ಸುಜ್ಞಾನವನ್ನು ಪಡೆಯುವ ಕುರುಹಾಗಿ, ಬಲಿಯಂತಹ ತ್ಯಾಗಜೀವಿಯ ಸವಿನೆನಪಿಗಾಗಿ ಆಚರಿಸುವ ಬೆಳಕಿನ ಹಬ್ಬವೇ ದೀಪಾವಳಿ.

### ೮. ಮಕರ ಸಂಕ್ರಾಂತಿ

ಜಗತ್ತಿಗೆ ಬೆಳಕನ್ನು ಕೊಡುವ ಸೂರ್ಯ ತನ್ನ ಪಥ ಬದಲಾವಣೆ ಮಾಡುವ ಈ ದಿನವನ್ನು 'ಸಂಕ್ರಮಣ'ವೆಂದೂ, ಮಕರ ರಾಶಿಯನ್ನು ಪ್ರವೇಶಿಸುವುದರಿಂದ 'ಮಕರ ಸಂಕ್ರಾಂತಿ' ಎಂದೂ ಈ ಹಬ್ಬಕ್ಕೆ ಹೇಳುವರು. ಸೂರ್ಯನು ದಕ್ಷಿಣದಿಂದ ಉತ್ತರ ದಿಕ್ಕಿಗೆ ತನ್ನ ಚಲನೆಯನ್ನು ಪ್ರಾರಂಭಿಸುವ ಪವಿತ್ರ ಸಮಯವಾಗಿರುವುದರಿಂದ 'ಉತ್ತರಾಯಣ ಪುಣ್ಯಕಾಲ' ಎಂದು ಈ ಹಬ್ಬಕ್ಕೆ ಹೇಳುತ್ತಾರೆ. ಕೇವಲ ಬದುಕುವುದಕ್ಕೆ ಮಾತ್ರವೇ ಅಲ್ಲ, ಸಾಯುವುದಕ್ಕೂ ಈ ಕಾಲ ಪುಣ್ಯಕಾಲ ಎಂಬ ನಂಬಿಕೆಯಿದೆ. ಶರಶಯ್ಯೆಯಲ್ಲಿ ಮಲಗಿದ ಭೀಷ್ಮ, ಪ್ರಾಣ ಬಿಡಲು ಉತ್ತರಾಯಣ ಪುಣ್ಯ ಕಾಲಕ್ಕಾಗಿ ಹರಿಸ್ಮರಣೆ ಮಾಡುತ್ತಾ ಕಾಯುತ್ತಿದ್ದನೆಂದು ಮಹಾಭಾರತದಲ್ಲಿ ಹೇಳಿದೆ. ಈ ಮೂಹೂರ್ತದಲ್ಲಿ ಪುಣ್ಯತೀರ್ಥಗಳಲ್ಲಿ ಜನರು ತೀರ್ಥಸ್ನಾನ ಮಾಡುತ್ತಾರೆ.

ಮಕರ ಸಂಕ್ರಾಂತಿ ಹಬ್ಬ ಜನರ ಜೀವನ ಸಂಸ್ಕೃತಿಯನ್ನು ಶ್ರೀಮಂತಗೊಳಿಸುತ್ತದೆ. ಈ ಹಬ್ಬದ ದಿನದಂದು ಎಳ್ಳು-ಬೆಲ್ಲ ಕೊಟ್ಟು ಒಳ್ಳೆ ಮಾತನಾಡು ಎಂಬುದಾಗಿ ಜನ ಪರಸ್ಪರ ಹಾರೈಸಿಕೊಳ್ಳುವರು. ಎಳ್ಳು-ಬೆಲ್ಲದ ಜೊತೆಗೆ ಕೊಬ್ಬರಿ, ಶೇಂಗಾಬೀಜ, ಹುರಿಗಡಲೆ, ಜೀರಿಗೆ ಪೆಪ್ಪರ್‌ಮೆಂಟ್‌ಗಳು, ಸಕ್ಕರೆ ಅಚ್ಚಿನ ಚೂರುಗಳು ಸೇರಿಸಿಕೊಡುವರು. ಇನ್ನೂ ಗ್ರಾಮೀಣ ಭಾಗಗಳಲ್ಲಿ ರಾಗಿ, ಭತ್ತ, ಜೋಳ ಮೊದಲಾದ ದವಸ-ಧಾನ್ಯಗಳ ಕಟಾವು ಮಾಡಿ ರಾಶಿ ಮಾಡುತ್ತಾರೆ. ಆ ದಿನ ಹೊಸ ಅಕ್ಕಿ ಜೊತೆ ಬೆಲ್ಲವನ್ನು ಹಾಕಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಆದುದರಿಂದ ಸಂಕ್ರಾಂತಿ ರೈತರಿಗೆ ಸುಗ್ಗಿ ಹಬ್ಬವಾಗಿದೆ.

ರೈತರು ಹೊಲಗದ್ದೆಗಳಲ್ಲಿ ಇಡೀ ವರ್ಷ ದುಡಿದು ದಣಿದ ಎತ್ತು, ಹಸು, ಎಮ್ಮೆ ಮೊದಲಾದ ಜಾನುವಾರುಗಳನ್ನು ಮೈತೊಳೆದು ಶುಭ್ರಗೊಳಿಸಿ ಅವುಗಳ ಕೋಡುಗಳಿಗೆ ಗೊರಸುಗಳಿಗೆ ಬಗೆ ಬಗೆಯ ಬಣ್ಣ ಹಚ್ಚುತ್ತಾರೆ. ಅವುಗಳನ್ನು ಸಿಂಗರಿಸಿ ಸಂಜೆ ಊರ ಬಾಗಿಲಲ್ಲಿ ಬೆಂಕಿ

ಹಾಕಿ ತಮ್ಮ ತಮ್ಮ ದನಕರುಗಳನ್ನು ಓಡಿಸಿಕೊಂಡು ಬಂದು ಆ ಬೆಂಕಿಯಲ್ಲಿ ದಾಟಿಸಿ ಸಂಭ್ರಮ ಪಡುತ್ತಾರೆ. ಹೀಗಾಗಿ ಸಂಕ್ರಾಂತಿ ಜಾನಪದ ಹಿನ್ನೆಲೆಯ ಹಬ್ಬ. ಇಡೀ ಹಬ್ಬದ ಪ್ರಮುಖ ಕೇಂದ್ರ ಪಾತ್ರಗಳೇ ರಾಸುಗಳು. ರೈತರ ಬದುಕು ಅವಲಂಬಿತವಾಗಿರುವುದೇ ದನಕರುಗಳ ಮೇಲೆ. ವರ್ಷಪೂರ ಶ್ರಮಿಸಿದ ರಾಸುಗಳಿಗೆ ಪ್ರೀತಿ, ಗೌರವವನ್ನು ಸಲ್ಲಿಸುವ ಸೂಚ್ಯಾರ್ಥಕವಾಗಿ ಸಂಕ್ರಾಂತಿ ಹಬ್ಬವನ್ನು ಗ್ರಾಮೀಣ ಭಾಗದ ಜನರು ಆಚರಣೆಗೆ ತಂದಿರಬಹುದಾಗಿದೆ.

### ೯. ಹೋಳಿ ಹುಣ್ಣಿಮೆ

ತಾರಕಾಸುರನ ಸಂಹಾರಕ್ಕಾಗಿ ಶಿವನ ತಪೋಭಂಗ ಆಗಬೇಕಾಯಿತು. ಈ ಕೆಲಸವನ್ನು ಮಾಡಿದಾತ ಮನ್ಮಥ. ತನ್ನ ಕೆಲಸವನ್ನು ಆತ ಮಾಡಿದರೂ, ಶಿವನ ಮೂರನೇ ಕಣ್ಣಿನಿಂದ ಆತ ಭಸ್ಮನಾದ. ಈ ಘಟನೆಯು ಹಂಪಿಯ ಹೇಮಕೂಟದಲ್ಲಿ ನಡೆಯಿತು ಎಂದು ಭಾವಿಸುವ ಜನರು ಕಾಮನಹಬ್ಬವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಪ್ರದೇಶದ ಜನರಲ್ಲಿ ಕಾಮನಹಬ್ಬಕ್ಕೆ ಸಂಬಂಧಿಸಿದಂತೆ ಬೇರೆ ಕತೆಗಳೂ ಇವೆ. ಈ ಕತೆಗಳು ಕಾಮನಹಬ್ಬದ ಇನ್ನೊಂದು ಹೆಸರಾದ 'ಹೋಳಿ ಹುಣ್ಣಿಮೆ' ಎಂಬ ಪದಕ್ಕೆ ಸಂಬಂಧಿಸಿದೆ.

ನಿರೂಪಕರ ಪ್ರಕಾರ, ಹೋಲಿಕಾ ಎಂಬ ರಾಕ್ಷಸಿ ಇದ್ದಳು. ಜನರಿಗೆ ಉಪದ್ರವ ನೀಡುತ್ತಾ, ಅವರ ಮಕ್ಕಳನ್ನು ಮಾತ್ರ ತಿಂದು ಬದುಕುತ್ತಿದ್ದಳು. ಜನರೆಲ್ಲ ರಾಕ್ಷಸಿಯ ವಿರುದ್ಧ ಅರಸನಿಗೆ ದೂರುಕೊಟ್ಟರು. ಆದರೆ ಅರಸನೂ ಕ್ರೂರಿಯಾದ್ದರಿಂದ ದೂರು ಫಲಕಾರಿಯಾಗಲಿಲ್ಲ. ಆಗ ಜನರೆಲ್ಲ ಒಟ್ಟು ಸೇರಿ, ಆ ರಾಕ್ಷಸಿಗೆ ದಿನಕ್ಕೆ ಒಬ್ಬರಂತೆ ಆಹಾರವಾಗಿ ನೀಡಲು ಕರಾರು ಮಾಡಿಕೊಂಡರು. ಜನರೆಲ್ಲ ಸರದಿ ಪ್ರಕಾರ ಒಬ್ಬರೊಬ್ಬರೇ ತಮ್ಮ ಮಕ್ಕಳನ್ನು ಬಲಿ ಕೊಡಲು ನಿರ್ಧರಿಸಿದರು. ಒಮ್ಮೆ ಒಂದು ಮುದುಕಿಯ ಸರದಿ ಬಂತು. ಆಕೆಗೆ ಒಬ್ಬನೇ ಮೊಮ್ಮಗನಿದ್ದ. ಅವನನ್ನು ರಾಕ್ಷಸಿಗೆ ಬಲಿ ಕೊಡಲು ಅವಳ ಮನಸ್ಸು ಒಪ್ಪಲಿಲ್ಲ. ಆಕೆ ಗೋಳಾಡಿದಳು. ಆಗ ಆ ಊರಿಗೆ ಒಬ್ಬ ಸಿದ್ಧ ಪುರುಷ ಬಂದ. ಅವನು ಹೋಲಿಕಾಳನ್ನು ಕೊಲ್ಲಲು ಒಂದು ಉಪಾಯ ಹೇಳಿದ. 'ನಾಳೆ ಮಕ್ಕಳೆಲ್ಲ ಸೇರಬೇಕು. ರಾಕ್ಷಸಿಯನ್ನು ಅಸಭ್ಯ ಮಾತುಗಳಿಂದ ಬೈಯ್ಯಬೇಕು. ಇದರಿಂದ ಆಕೆ ಸಾಯುತ್ತಾಳೆ' ಎಂದ. ಆಗ ಜನರೆಲ್ಲಾ ಹಾಗೆ ಮಾಡಿದರು. ಮಕ್ಕಳೆಲ್ಲ ಒಟ್ಟು ಸೇರಿ ಅಶ್ಲೀಲವಾಗಿ ರಾಕ್ಷಿಸಿಗೆ ಬಯ್ಯತೊಡಗಿದರು. ಅದನ್ನು ಕೇಳಲಾಗದೆ ರಾಕ್ಷಸಿ ಸತ್ತೇ ಹೋದಳು. ಹುಡುಗರೆಲ್ಲ ಕಟ್ಟಿಗೆ ರಾಶಿ ಹಾಕಿ ಆಕೆಯನ್ನು ಸುಟ್ಟರು. ಹೀಗೆ ಆಕೆಯನ್ನು ಸುಟ್ಟ ದಿನವನ್ನು ಹೋಳಿಹಬ್ಬವೆಂದು ಜನ ಆಚರಿಸುತ್ತಾರೆ.

ಹೋಳಿಹಬ್ಬಕ್ಕೆ ಸಂಬಂಧಿಸಿದಂತೆ ಮತ್ತೊಂದು ಕಥೆಯ ಪ್ರಕಾರ:- ಹಿರಣ್ಯಕಶಪು ದೊಡ್ಡ ರಾಕ್ಷಸ ದೊರೆ. ದೇವತೆಗಳು ಮತ್ತು ಅಸುರರ ನಡುವೆ ಆದ ಹೋರಾಟದಲ್ಲಿ ಹಿರಣ್ಯಕಶಪು ಜಯಶಾಲಿಯಾದ. ಅಂದಿನಿಂದ ಅವನ ಗರ್ವ ಹೆಚ್ಚಿತು. ದೇವರನ್ನು ಯಾರೂ ಪೂಜಿಸಕೂಡದೆಂದು ಮತ್ತು ದೇವರ ಹೆಸರೆತ್ತಿದರೆ ಭಯಂಕರ ಶಿಕ್ಷೆ ದೊರೆಯುವುದೆಂದು ಆಜ್ಞೆ ಹೊರಡಿಸಿದ. ಹಿರಣ್ಯ ಕಶಪುವಿನ ಮಗ ಪ್ರಹ್ಲಾದ ಮಹಾನ್ ದೈವಭಕ್ತನಾಗಿದ್ದ. ಅವನು ತಂದೆಯ ಆಜ್ಞೆಯನ್ನು

ಪಾಲಿಸಲು ನಿರಾಕರಿಸಿದ. ಮುಂಚಿನಂತೆಯೇ ಅವನು ದೇವರ ಧ್ಯಾನ ಮಾಡುತ್ತಿದ್ದ. ಇದನ್ನು ಕಂಡು ಹಿರಣ್ಯಕಶಿಪು ಕುಪಿತಗೊಂಡ. ಮಗನಿಗೆ ಘೋರ ಶಿಕ್ಷೆಗಳನ್ನು ಕೊಟ್ಟರೂ ಅವನಿಗೆ ಏನೂ ಆಗಲಿಲ್ಲ.

ಹಿರಣ್ಯಕಶಿಪುವಿಗೆ ಹೋಲಿಕಾ ಎಂಬ ತಂಗಿಯಿದ್ದಳು. ಅವಳು ಅಗ್ನಿಯಲ್ಲಿ ಕುಳಿತರೂ ದೇಹಕ್ಕೆ ಯಾವ ಅಪಾಯವೂ ಒದಗದಿರುವ ವಿಶೇಷ ಶಕ್ತಿಯನ್ನು ಹೊಂದಿದ್ದಳು. ಪ್ರಹ್ಲಾದನನ್ನು ತನ್ನ ಮಡಿಲಲ್ಲಿ ಹಾಕಿಕೊಂಡು ಅವನನ್ನು ಸುಟ್ಟು ಹಾಕಬೇಕೆಂದು ಹಿರಣ್ಯ ಕಶಿಪು ತಂಗಿಗೆ ಆಜ್ಞೆ ಮಾಡಿದ. ಹೋಲಿಕಾ ಹಾಗೆಯೇ ಮಾಡಿದಳು. ಆದರೆ ಪ್ರಹ್ಲಾದನಿಗೆ ಏನೂ ಆಗಲಿಲ್ಲ. ರಾಕ್ಷಸರು ಮೇಲಿಂದ ಮೇಲೆ ಕಟ್ಟಿಗೆಯನ್ನಿಟ್ಟು ಬೆಂಕಿ ಹಾಕಿದುದರ ಪರಿಣಾಮವಾಗಿ ಹೋಲಿಕಾ ಸುಟ್ಟು ಭಸ್ಮವಾದಳು. ಈ ಒಂದು ಅದ್ಭುತ ಘಟನೆಯು ಹಂಪಿಯಲ್ಲಿರುವ ಹೇಮಕೂಟದಲ್ಲಿ ನಡೆಯಿತು ಎಂಬ ನಂಬಿಕೆ ಬಲವಾಗಿ ಇರುವುದರಿಂದ ಈ ಭಾಗದಲ್ಲಿ ಹೋಳಿ ಹುಣ್ಣಿಮೆಯನ್ನು ವೈಭವದಿಂದ ಆಚರಿಸುತ್ತಾರೆ.

ಹುಣ್ಣಿಮೆಯ ದಿನದಂದು ಮಕ್ಕಳೆಲ್ಲ ಒಟ್ಟು ಸೇರಿ, ಹಲಗೆ ಬಾರಿಸುತ್ತ ಓಣಿ, ಓಣಿ ಸುತ್ತುತ್ತಾರೆ. ಬಾಯಿ ಬಡಿದುಕೊಳ್ಳುತ್ತಾ, ಅಶ್ಲೀಲವಾಗಿ ಬೈದಾಡುತ್ತ ಇಡೀ ಊರು ಸುತ್ತುತ್ತಾರೆ. ಊರಲ್ಲಿರುವ ಶ್ರೀಮಂತರ ಮನೆಗಳ ಮುಂದೆ ನಿಂತು ಇನ್ನಷ್ಟು ಅಶ್ಲೀಲವಾಗಿ ಬೈಯ್ಯುತ್ತಾರೆ. ಬೇರೆ ಬೇರೆ ಜನಗಳ ಅನೈತಿಕ ಸಂಬಂಧದ ಬಗ್ಗೆ ಗಟ್ಟಿಯಾಗಿ ಕೂಗಿ ಹೇಳುತ್ತಾರೆ. ಇಂಥ ಬೈಗುಳಗಳಿಗೆ ಯಾರೂ ಪ್ರತಿ ನುಡಿಯುವುದಿಲ್ಲ. ರಾತ್ರಿ ವೇಳೆ ಒಣಗಿದ ಕುರುಳು, ಕಟ್ಟಿಗೆ ಸೇರಿಸಿ, ಬೆಂಕಿ ಹಚ್ಚಿ, ಕುಣಿದು ಬಣ್ಣಗಳನ್ನು ಹಾಕುತ್ತಾ ಸಂಭ್ರಮಿಸುತ್ತಾರೆ.

ಮಕ್ಕಳು ಸುಟ್ಟ ಕಟ್ಟಿಗೆಯ ಬೂದಿಯನ್ನು ಕಬ್ಬಿನ ಗದ್ದೆಗೆ ಸಿಂಪಡಿಸಿದರೆ, ಕಬ್ಬು ಫಲವತ್ತಾಗಿ ಬೆಳೆಯುತ್ತದೆ ಎಂಬ ನಂಬಿಕೆ ಈ ಭಾಗದಲ್ಲಿ ಸಾರ್ವತ್ರಿಕವಾಗಿದೆ.

### ೧೦. ಮೊಹರಂ ಹಬ್ಬ ಅಥವಾ ಪೀರ್ಲಹಬ್ಬ

ವಿಜಯನಗರ ಸಾಮ್ರಾಜ್ಯವು ಮುಸ್ಲಿಂ ಅರಸರುಗಳ ದಾಳಿಯಿಂದ ನಾಶವಾಯಿತೆಂದು ಇತಿಹಾಸ ಹೇಳುತ್ತದೆ. ಲಿಖಿತ ಇತಿಹಾಸದ ಈ ನಿಲುವಿಗೆ ಜನರಲ್ಲಿನ ಮೌಖಿಕ ಇತಿಹಾಸ ಹೇಗೆ ಪ್ರತಿಕ್ರಿಯಿಸಿದೆ ಎಂದು ನೋಡಿದರೆ ಅಲ್ಲಿ ಭಿನ್ನ ಚರಿತ್ರೆಯೇ ಸಿಗುತ್ತದೆ. ಹೊಸಪೇಟೆ ತಾಲ್ಲೂಕಿನಲ್ಲಿ ಹಿಂದೂ-ಮುಸ್ಲಿಂ ಸಾಮರಸ್ಯ ತಾನೇ ತಾನಾಗಿ ಕ್ರಿಯಾಶೀಲವಾಗಿದೆ. ಅಂಥ ಸಾಮರಸ್ಯದ ಬಗೆಗೆ ನಂಬಿಕೆ ಮತ್ತು ಆಚರಣೆಗಳಿವೆ. ಮೊಹರಂ ಅಥವಾ ಪೀರ್ಲಹಬ್ಬವು ಹೊಸಪೇಟೆ ತಾಲ್ಲೂಕಿನಲ್ಲಿ ಪ್ರಚಲಿತದಲ್ಲಿರುವ ಹಿಂದೂ-ಮುಸ್ಲಿಂ ಸಾಮರಸ್ಯಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ಮುಸಲ್ಮಾನರ ಕಾಲದ ಕಲ್ಪನೆಯಲ್ಲಿ ಮೊಹರಂ ಮೊದಲ ತಿಂಗಳ ಹೆಸರು. ಈ ತಿಂಗಳಲ್ಲಿ ನಡೆಯುವ ಹಬ್ಬವಾದುದರಿಂದ ಇದಕ್ಕೆ 'ಮೊಹರಂ ಹಬ್ಬ' ಎಂಬ ಹೆಸರು ಬಂತೆಂದು

ಹೇಳಲಾಗಿದೆ. ಇದರ ಜೊತೆಗೆ ಈ ಹಬ್ಬಕ್ಕೆ ಅಲಾಪಿ ಹಬ್ಬ, ಪೀರ್ಲ ಹಬ್ಬ, ಹಾಲೇ ಹಬ್ಬ ಎಂಬಿತ್ಯಾದಿ ಹೆಸರುಗಳೂ ಹೊಸಪೇಟೆ ತಾಲ್ಲೂಕಿನಲ್ಲಿ ಪ್ರಚಲಿತದಲ್ಲಿವೆ.

ಹತ್ತು ದಿನಗಳ ಕಾಲ ನಡೆಯುವ ಈ ಹಬ್ಬಕ್ಕೆ ಹಿನ್ನೆಲೆಯಾಗಿ ಒಂದು ಕಥೆಯಿದೆ. ಇಸ್ಲಾಂ ಧರ್ಮ ಸಂಸ್ಥಾಪಕನಾದ ಮಹಮ್ಮದ್ ಪೈಗಂಬರ್ ತೀರಿಕೊಂಡ ಕೆಲವು ವರ್ಷಗಳ ಅನಂತರ ನಡೆದ ಘಟನೆಯೇ ಈ ಹಬ್ಬಕ್ಕೆ ಪ್ರೇರಣೆ ನೀಡಿದೆ. ಮಹಮ್ಮದ್ ಪೈಗಂಬರ್‌ನ ಅಳಿಯನಾದ ಹಜರತ್ ಅಲಿಯು ನ್ಯಾಯ ಪಕ್ಷಪಾತಿಯಾಗಿದ್ದು, ಜನರನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದ. ಇವನ ನಂತರ ಇವನ ಹಿರಿಯ ಮಗನಾದ ಹಜರತ್ ಇಮಾಂ ಹಸನ್ ಅಧಿಕಾರಕ್ಕೆ ಬಂದ. ಆದರೆ ಇವನ ಕಾಲದಲ್ಲಿ ಸಿರಿಯಾದ ಅಧಿಕಾರಿಯಾಗಿದ್ದ ಅಮಿರ ಮುವಾಯಿಯೂ, ಹಜರತ್ ಇಮಾಂ ಹಸನ್‌ನನ್ನು ಸೋಲಿಸಿ ಪೀಠಕ್ಕೇರಿದ. ಈತ ಜನಾಭಿಪ್ರಾಯವನ್ನು ಗಳಿಸಲಿಲ್ಲ. ಮಾತ್ರವಲ್ಲ ಅವನ ನಂತರ ತನ್ನ ಮಗನಾದ ಯುಜೀದನೇ ಪಟ್ಟಕ್ಕೆ ಬರುವಂತೆ ಕುಯುಕ್ತಿ ನಡೆಸಿದ. ಯುಜೀದನೂ ತಂದೆಯಂತೆ ಕ್ರೂರಿಯಾಗಿದ್ದ. ಈ ಬೆಳವಣಿಗೆ ಅರಿತ ಜನರೆಲ್ಲ ಮಹಮ್ಮದ್ ಪೈಗಂಬರ್‌ನ ಮೊಮ್ಮಗನಾದ ಇಮಾಂ ಹಸೇನನ ಮೊರೆ ಹೊಕ್ಕರು. ಇಮಾಂ ಹಸನನು ಜನಾಭಿಪ್ರಾಯಕ್ಕೆ ಮಣಿದು ಯುಜೀದನೊಡನೆ ಹೋರಾಟಕ್ಕೆ ಸಿದ್ಧನಾದ. ಆದರೆ ಯುದ್ಧ ಆರಂಭವಾಗುವ ಮುನ್ನವೇ ಯುಜೀದನ ಮೋಸಕ್ಕೆ ಇಮಾಂ ಹಸನ್ ಬಲಿಯಾಗುತ್ತಾನೆ. ಹಸೇನನ ಕುಟುಂಬವಿಡೀ ಯುಜೀದನ ಸೈನ್ಯಕ್ಕೆ ಸೆರೆಸಿಕ್ಕು, ಅಮಾನುಷವಾದ ಹಿಂಸೆಗೆ ಒಳಗಾಗುತ್ತದೆ. ಹಸೇನನ ಮಗನಾದ ಅಲಿ ಅಸಗರನನ್ನು ನೀರಿಗಾಗಿ ಬೇಡಿಕೊಳ್ಳುವಾಗ ಅಮಾನುಷವಾಗಿ ಹತ್ಯೆ ಮಾಡಲಾಗುತ್ತದೆ. ಹೀಗೆ ಹತ್ತು ದಿನಗಳ ಕಾಲ ಹೋರಾಟ ನಡೆಯುತ್ತದೆ. ಹತ್ತನೆಯ ದಿನದಂದು ಯುಜೀದನ ಸೈನ್ಯದಲ್ಲಿದ್ದ ಸಿವಾರ ಅಥವಾ ಶಮರ ಎಂಬುವನು ಹಸೇನನ್ನು ಕೊಂದು ಬಿಡುತ್ತಾನೆ.

ಹೀಗೆ ಈ ಕತೆಯು ನ್ಯಾಯ-ಅನ್ಯಾಯಗಳ ನಡುವೆ ನಡೆದ ಹೋರಾಟದಲ್ಲಿ ಅನ್ಯಾಯವೇ ಗೆಲುವು ಸಾಧಿಸಿದ ಪರಿಯನ್ನು ವಿವರಿಸುತ್ತದೆ. ನ್ಯಾಯಕ್ಕಾಗಿ ಸತ್ತವರ ಈ ಕಣ್ಣೀರಿನ ಕತೆಯನ್ನು ಈ ಭಾಗದ ಜನರು ತಮ್ಮದೇ ಕತೆಯೆಂಬಂತೆ ಬಣ್ಣಿಸುತ್ತಾರೆ. ಹಸೇನನ ಮಗನಾದ ಅಸಗರನು ನೀರಿಗಾಗಿ ಬೇಡಿಕೊಂಡಾಗ 'ನಮ್ಮ ಮೇಲೆ ಮುನಿದಾನೊ ಪರಮೇಶ್ವರ' ಎಂಬ ಸಾಲು ಬಂದು, ಹಿಂದೂ-ಮುಸ್ಲಿಂ ವ್ಯತ್ಯಾಸವನ್ನು ಸಂಪೂರ್ಣ ಅಳಿಸಿ ಹಾಕಿದೆ. ಈ ಕತೆಯನ್ನು ಕೇಳಲು ಹಿಂದೂ-ಮುಸ್ಲಿಂ ಧರ್ಮದ ಸಮುದಾಯದವರೆಲ್ಲ ಕಲೆಯುತ್ತಾರೆ. ಅವರು ಒಟ್ಟಾಗಿಯೇ ದಾರುಣವಾದ ಕರುಣ ಕತೆಗಾಗಿ ಕಣ್ಣೀರಿಡುತ್ತಾರೆ.

ನೂರಾರು ವರ್ಷಗಳ ಹಿಂದೆ, ಎಲ್ಲೋ ಬಹಳ ದೂರದಲ್ಲಿ ನಡೆದ ಘಟನೆಯೊಂದು, ಮೊಹರಂ ಹಬ್ಬದಲ್ಲಿ ಪುನರ್‌ಸೃಷ್ಟಿ ಹೊಂದುತ್ತದೆ. ಮೊಹರಂ ತಿಂಗಳು ಆರಂಭವಾದೊಡನೆ, ಹಿಂದೂ-ಮುಸ್ಲಿಂರು ಸುಣ್ಣ, ಬಣ್ಣ ಬಳಿದು ತಮ್ಮ ಮನೆಯನ್ನು ಶುದ್ಧಗೊಳಿಸುತ್ತಾರೆ. ಹೊಸ ಬಟ್ಟೆ ಧರಿಸಿ, ಕೈ ದೇವರುಗಳನ್ನು ಮಸೀದಿಗಳಲ್ಲಿ, ಮಸೀದಿಯ ಕಟ್ಟೆಗಳಲ್ಲಿ ಪ್ರತಿಷ್ಠಾಪಿಸಿ,

ಪೂಜಿಸುತ್ತಾರೆ. ಈ ದೇವರುಗಳಿಗೆ 'ಪೀರ್ಲ' ಎಂದು ಕರೆಯುತ್ತಾರೆ. ಈ ದೇವರುಗಳ ಮುಂದೆ ಅಲಾಯಿ ಕುಣಿಯನ್ನು ತೋಡುತ್ತಾರೆ. ಈ ಕುಣಿಯಲ್ಲಿ ದೇವರಿಗೆ ಹರಕೆ ಹೊತ್ತವರು ಬಂಡಿಗಳಲ್ಲಿ ಕಟ್ಟಿಗೆಯನ್ನು ತಂದು ಹಾಕುತ್ತಾರೆ. ಮೊಹರಂನ ೯ನೇ ದಿನದಂದು ಈ ಕಟ್ಟಿಗೆಗಳಿಗೆ ಬೆಂಕಿ ಹಚ್ಚಿ ಕೆಂಡ ಮಾಡುತ್ತಾರೆ. ಆವೇಶ ಬಂದವರು ಕೆಂಡವನ್ನು ತುಳಿಯುತ್ತಾರೆ. ಈ ದೃಶ್ಯವನ್ನು ನೋಡಲು ಊರವರೆಲ್ಲಾ ಜಾಗರಣೆ ಇದ್ದು, ಆವೇಶ ಬಂದವರು, ಹರಕೆ ಹೊತ್ತವರು ಕೆಂಡವನ್ನು ತುಳಿಯುವುದನ್ನು ಮೂಕವಿಸ್ಮಿತರಾಗಿ ವೀಕ್ಷಿಸುತ್ತಾರೆ. ಆವೇಶ ಬಂದವರು ಭವಿಷ್ಯ ಹೇಳುತ್ತಾರಾದ್ದರಿಂದ ಅವರಲ್ಲಿ ಭವಿಷ್ಯ ಕೇಳಲು ಊರಿನ ಜನರೆಲ್ಲ ಕಲೆಯುತ್ತಾರೆ. ೧೦ನೆಯ ದಿನ ಅಂದರೆ ಮೊಹರಂ ಹಬ್ಬದ ಕೊನೆಯ ದಿನ ಮಸೀದಿಗಳಲ್ಲಿ ಇರಿಸಲಾದ ಕೈದೇವರುಗಳನ್ನು ಎತ್ತಿಕೊಂಡು ಮೆರವಣಿಗೆ ಹೋಗುತ್ತಾರೆ. ಊರಿನಲ್ಲಿ ಪ್ರತಿಷ್ಠಾಪಿಸಲಾದ ಎಲ್ಲಾ ದೇವರುಗಳು ಒಂದೆಡೆ ಸೇರುತ್ತವೆ. ಇದಕ್ಕೆ ಅಲಾಯಿ-ಬಿಲಾಯಿ ಎಂದು ಕರೆಯುತ್ತಾರೆ. ಇದನ್ನು ವೀಕ್ಷಿಸಲು ಇಡೀ ಊರೇ ಅಲ್ಲಿ ನೆರೆದಿರುತ್ತದೆ. ಬೇಡಿಕೊಂಡವರು ತಮ್ಮ ಹರಕೆಗಳನ್ನು ಒಪ್ಪಿಸುತ್ತಾರೆ. ನಂತರ, ಊರ ಸಮೀಪದ ಕೆರೆ, ಹಳ್ಳಗಳಲ್ಲಿ ದೇವರುಗಳನ್ನು ತೊಳೆದು ಹಿಂದಿರುಗುತ್ತಾರೆ. ಮಸೀದಿಗಳಲ್ಲಿ ದೇವರುಗಳನ್ನು, ಕಾಣಿಕೆಯಾಗಿ ಬಂದ ಒಡವೆ, ವಸ್ತ್ರಗಳನ್ನು ಒಂದು ಪೆಟ್ಟಿಗೆಯಲ್ಲಿರಿಸಿ, ಭದ್ರಗೊಳಿಸುತ್ತಾರೆ. ಇಲ್ಲಿಗೆ ಮೊಹರಂ ಹಬ್ಬದಾಚರಣೆ ಮುಗಿಯುತ್ತದೆ.

ಮೊಹರಂ ಹಬ್ಬದಾಚರಣೆಯಲ್ಲಿ ಯಾವ ಜಾತಿಗಳ ಭೇದ-ಭಾವವಿಲ್ಲದೆ ಎಲ್ಲರೂ ಸಕ್ರಿಯವಾಗಿ ಭಾಗವಹಿಸುತ್ತಾರೆ. ಹರಕೆ ಹೊತ್ತವರು ಹುಲಿ, ಅಚ್ಚಳ್ಳಿ, ಬಾವಾಜಿ ವೇಷ ಧರಿಸಿ, ಮನೆ-ಮನೆ ತಿರುಗಿ, ಹಣ, ದವಸ-ಧಾನ್ಯಗಳನ್ನು ಸಂಗ್ರಹಿಸಿ, ಪೀರ್ಲ ದೇವರಿಗೆ ಹರಕೆ ಒಪ್ಪಿಸುತ್ತಾರೆ. ಹಲಿಗೆ ಬಡಿಯುತ್ತ ಹಸೇನ್-ಹುಸೇನ್‌ರ ಸ್ಮರಣೆ ಮಾಡುತ್ತಾರೆ. ಹೀಗೆ ಹೊಸಪೇಟೆ ತಾಲ್ಲೂಕಿನಾದ್ಯಾಂತ ಬಹಳ ವಿಜೃಂಭಣೆಯಿಂದ ಆಚರಣೆಗೊಳ್ಳುವ ಮೊಹರಂ ಹಬ್ಬವು ಹಿಂದೂ-ಮುಸ್ಲಿಂರ ಭಾವೈಕ್ಯತೆಯ ಸಾಮರಸ್ಯವನ್ನು ಸೊಗಸಾಗಿ ಪ್ರತಿನಿಧಿಸುತ್ತದೆ.

**೧೧. ರಂಜಾನ್**

ಮುಸ್ಲಿಂರ ಧಾರ್ಮಿಕ ಪಂಚಾಂಗ ಚಾಂದ್ರಮಾನ ತಿಂಗಳುಗಳ ಮೇಲೆ ಆಧಾರಗೊಂಡಿದೆ. 'ರಂಜಾನ್' ಎಂಬುದು ಮುಸ್ಲಿಮರ ಧಾರ್ಮಿಕ ತಿಂಗಳಾಗಿದ್ದು, ಈ ಒಂದು ತಿಂಗಳಲ್ಲಿ ಮುಸ್ಲಿಮರು ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ ಉಪವಾಸ ಮಾಡುವರು. ಆಗ, ಅವರು ಏನನ್ನೂ ತಿನ್ನುವುದಿಲ್ಲ, ಕುಡಿಯುವುದಿಲ್ಲ ಮತ್ತು ಯಾವ ಸುಖವನ್ನೂ ಅನುಭವಿಸುವುದಿಲ್ಲ. ಈ ಅವಧಿಯಲ್ಲಿ ಔಷಧ ಮತ್ತು ನೀರನ್ನು ಸಹ ಕುಡಿಯುವಂತಿಲ್ಲ. ದುಶ್ಚಟಗಳು ಸಹ ನಿಷಿದ್ಧ. ಅವರಿವರೊಡನೆ ಜಗಳವಾಡುವುದು, ಅನ್ಯರನ್ನು ಬೈಯ್ಯುವುದು, ಸುಳ್ಳು ಹೇಳುವುದು, ವಂಚಿಸುವುದು ಇಂತಹ ದುರ್ನಡತೆಯಲ್ಲಿ ಕೈಹಾಕುವ ಹಾಗಿಲ್ಲ. ಈ ನಿಯಮಗಳನ್ನು ಉಲ್ಲಂಘಿಸಿದವರು ರಂಜಾನ್ ತತ್ವಗಳಿಗೆ ವಿರುದ್ಧವಾಗಿ ನಡೆದುಕೊಂಡಂತಾಗುವುದು ಎಂಬ ನಂಬಿಕೆಯಿದೆ. ಯಾರಾದರೂ ಉದ್ದೇಶಪೂರ್ವಕವಾಗಿ ಏನನ್ನಾದರೂ ತಿಂದಿದ್ದರೆ ಅಥವಾ ಕುಡಿದಿದ್ದರೆ

ಪ್ರಾಯಶ್ಚಿತಕ್ಕಾಗಿ ರಂಜಾನ್ ತಿಂಗಳು ಮುಗಿದ ನಂತರವೂ ಉಪವಾಸ ಮಾಡಬೇಕಾಗುವುದು. ಮುಸ್ಲಿಮರು ಈ ಹಬ್ಬವನ್ನು ಈದ್-ಉಲ್-ಫಿತರ್ ಎಂದು ಕರೆಯುತ್ತಾರೆ.

ರಂಜಾನ್ ತಿಂಗಳಲ್ಲಿ ಚಿಕ್ಕವರು ಮತ್ತು ದೊಡ್ಡವರು 'ತರಾವ್ಹಿ' ಎಂಬ ವಿಶೇಷ ಪ್ರಾರ್ಥನೆಯನ್ನು ಮಾಡುವರು. ರಾತ್ರಿ ಹೊತ್ತು 'ಇಶ' ಎಂಬ ಪ್ರಾರ್ಥನೆ ಮಾಡುವರು. ಕುರಾನ್‌ನ ಕಂಠಪಾಠ ಮಾಡಿರುವವರು ಇಡೀ ತಿಂಗಳು ಮಸೀದಿಯಲ್ಲಿ ಕುರಾನ್ ಪಠಿಸುವರು.

ಮುಂಜಾನೆಯ ಊಟಕ್ಕೆ 'ಸೆಹ್ರಿ' ಎಂದು ಕರೆಯುತ್ತಾರೆ. ಈ ಊಟಕ್ಕೆ ಹಾಲಿನಲ್ಲಿ ಮಾಡಲಾದ ತಿಂಡಿಗಳನ್ನು ಸೇವಿಸುವರು. ಚಹಾ, ನೀರನ್ನು ಕುಡಿಯುವರು. ಸೆಹ್ರಿ ಮುಗಿಯುತ್ತಿದ್ದಂತೆ ಮಸೀದಿಯಿಂದ ಪ್ರಾರ್ಥನೆಗಾಗಿ ಕರೆ ಕೇಳಿಬರುತ್ತದೆ. ಉಪವಾಸ ಆಗ ಆರಂಭವಾಗುತ್ತದೆ. ಪ್ರಾರ್ಥನೆಯ ಕರೆ ಕೇಳಿಸಿದ ಕೂಡಲೇ ಗಂಡಸರು ಹತ್ತಿರದ ಮಸೀದಿಗಳಿಗೆ ಹೊರಡುವರು. ಕೈ, ಕಾಲು, ಮುಖವನ್ನು ತೊಳೆದು, ಪ್ರಾರ್ಥನೆಗಾಗಿ ನಿಲ್ಲುವರು. ಸ್ವಲ್ಪ ಹೊತ್ತಿನ ಬಳಿಕ ಪವಿತ್ರ ಕುರಾನ್ ಪಠಣವನ್ನು ಕೇಳುವರು. ನಂತರ ದಿನದ ಪ್ರಾರ್ಥನಾ ವಿಧಿಗಳನ್ನು ನೆರವೇರಿಸುವರು. ಪ್ರಾರ್ಥನಾ ವಿಧಿಗಳನ್ನು ಹೆಂಗಸರು ಮನೆಯಲ್ಲಿಯೇ ನೆರವೇರಿಸುವರು. ಇದಾದ ನಂತರ ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳಿಗೆ ಹೊರಡುತ್ತಾರೆ. ಹೆಂಗಸರು ಮನೆಗೆಲಸದಲ್ಲಿ ತೊಡಗುತ್ತಾರೆ. ಹೀಗೆ, ಅವರು ಉಪವಾಸ ಮಾಡುವುದರಿಂದ ಅವರ ನಿತ್ಯದ ಕೆಲಸಗಳಿಗೆ ಯಾವ ತೊಂದರೆಯೂ ಆಗುವುದಿಲ್ಲ. ಈ ಅವಧಿಯಲ್ಲಿ ಅವರು ಇನ್ನೂ ಹೆಚ್ಚಿನ ಉತ್ಸಾಹದಿಂದ ಕೆಲಸ ಮಾಡುವರು.

ಸೂರ್ಯಾಸ್ತಮವಾಗುತ್ತಿದ್ದಂತೆ ಮಸೀದಿಯಿಂದ ಪ್ರಾರ್ಥನೆಗಾಗಿ ಕರೆ ಕೊಡಲಾಗುತ್ತದೆ. ಇದು ಅವತ್ತಿನ ಉಪವಾಸವನ್ನು ಅಂತ್ಯಗೊಳಿಸಬಹುದು ಎನ್ನುವುದರ ಸೂಚನೆ. ಉಪವಾಸವನ್ನು ಅಂತ್ಯಗೊಳಿಸುವುದಕ್ಕೆ 'ಇಫ್ತಾರ್' ಎನ್ನುವರು. ಸ್ವಲ್ಪ ನೀರು ಕುಡಿದು ಮತ್ತು ಒಂದಿಷ್ಟು ಖರ್ಜೂರ ಅಥವಾ ಇನ್ನಾವುದಾದರೂ ಹಣ್ಣು ತಿಂದು ಉಪವಾಸ ಕೊನೆಗೊಳಿಸುವರು. ಇಸ್ಲಾಂ ಧರ್ಮದಲ್ಲಿ ನಿಷಿದ್ಧವಲ್ಲದಂತಹ ಯಾವುದೇ ಪದಾರ್ಥವನ್ನಾಗಲೀ ತಿನ್ನಬಹುದು ಅಥವಾ ಕುಡಿಯಬಹುದು.

ಈದ್ ಹಬ್ಬದಲ್ಲಿ ಬಗೆ ಬಗೆಯ ತಿನಿಸುಗಳನ್ನು ತಯಾರಿಸಲಾಗುವುದು. ಮಾಂಸದ ಕಬಾಬ್‌ಗಳು ಮತ್ತು ಸಿಹಿ ತಿಂಡಿಗಳು ಇವು ವಿಶೇಷವಾಗಿ ತಯಾರಿಸಲ್ಪಡುವ ಪದಾರ್ಥಗಳು. ಈ ತಿಂಗಳಲ್ಲಿ ಬಿಸಿಲು ಹೆಚ್ಚಾಗಿದ್ದರೆ ನಾನಾ ವಿಧದ ತಂಪು ಪಾನೀಯಗಳನ್ನು ತಯಾರಿಸ ಲಾಗುವುದು. ಹೀಗೆ, ರಂಜಾನ್ ಇಪ್ಪತ್ತೊಂಬತ್ತು ಅಥವಾ ಮೂವತ್ತು ದಿನಗಳು ಕಳೆಯುತ್ತವೆ. ಇಪ್ಪತ್ತೊಂಬತ್ತು ದಿನಗಳ ನಂತರ ಚಂದ್ರ ಕಾಣಿಸಿಕೊಂಡರೆ, ಇನ್ನೊಂದು ಹೆಚ್ಚಿಗೆ ದಿನ ಉಪವಾಸ ಮಾಡುವರು. ಚಂದ್ರ ಕಾಣಿಸಿಕೊಳ್ಳುತ್ತಿದ್ದಂತೆ ಈದ್-ಉಲ್-ಫಿತರ್ ಹಬ್ಬದ ಸಡಗರ ಆರಂಭವಾಗುತ್ತದೆ. ಇಲ್ಲಿಗೆ ರಂಜಾನ್ ಮಾಸ ಮುಗಿದಂತಾಗುತ್ತದೆ. ಈದ್-ಉಲ್-ಫಿತರ್ ಎಂದರೆ ಉಪವಾಸ ದಿನಗಳು ಮುಗಿದಿದ್ದಕ್ಕಾಗಿ ಆನಂದೋತ್ಸವ ಆಚರಿಸುವುದು ಎಂದರ್ಥ.

ಚಂದ್ರ ಕಾಣಿಸಿದ ಮಾರನೇ ದಿನ ಹಬ್ಬವನ್ನು ಅತ್ಯಂತ ಸಂಭ್ರಮದಿಂದ ಆಚರಿಸಲಾಗುತ್ತದೆ. ಎಲ್ಲ ಮುಸ್ಲಿಂ ಬಾಂಧವರು ಹೊಸ ಬಟ್ಟೆಗಳನ್ನು ಧರಿಸಿ, ಪ್ರಾರ್ಥನೆಗಾಗಿ ಮಸೀದಿಗಳಲ್ಲಿ, ಈದ್‌ಗಾ ಮೈದಾನಗಳಲ್ಲಿ ಒಟ್ಟಾಗಿ ಸೇರಿ ಈದ್ ನಮಾಜ್ ಮಾಡುವರು. ಈ ನಮಾಜ್ ಮುಂಜಾನೆ ಮತ್ತು ಮಧ್ಯಾಹ್ನದ ಪ್ರಾರ್ಥನೆಗಳ ನಡುವಣ ಅವಧಿಯಲ್ಲಿ ನಡೆಯುವುದು. ಪ್ರಾರ್ಥನೆಯ ನಂತರ, ಒಬ್ಬರೊನ್ನೊಬ್ಬರು ಆಲಂಗಿಸಿ, 'ಈದ್ ಮುಬಾರಕ್' ಎಂದು ಹೇಳಿ ಪರಸ್ಪರ ಶುಭಾಶಯಗಳನ್ನು ಕೋರುವರು.

ರಂಜಾನ್ ತಿಂಗಳಿನಲ್ಲಿ ದಾನ ಹಾಗೂ ಪುಣ್ಯ ಕಾರ್ಯಗಳು ನಡೆಯುತ್ತವೆ. ಕುಟುಂಬದ ಪ್ರತಿಯೊಬ್ಬ ಸದಸ್ಯರ ಪರವಾಗಿ ಕನಿಷ್ಠ ಮುಕ್ಕಾಲು ಕೆ.ಜಿ. ಗೋಧಿಯು ಬಡ ಬಗ್ಗರಿಗೆ ದಾನ ನೀಡಲಾಗುತ್ತದೆ. ಈ ರೀತಿಯ ದಾನ ನೀಡುವ ಕಾರಣವೆಂದರೆ ಯಾರೂ ಈದ್-ಉಲ್-ಫಿತರ್ ಹಬ್ಬದಂದು ದುಃಖಿಯಾಗಿ ಕಾಣಬಾರದು. ತಮಗೆ ಸಿಕ್ಕ ಕನಿಷ್ಠ ಪ್ರಮಾಣದ ಗೋಧಿಯಿಂದಲಾದರೂ ಅಡುಗೆ ಮಾಡಿ ಊಟ ಮಾಡಬೇಕು ಎಂಬ ಉದ್ದೇಶವನ್ನಿಟ್ಟುಕೊಂಡು ಈ ರೀತಿಯ ದಾನಗಳನ್ನು ನೀಡಲಾಗುತ್ತದೆ.

### ೧೨. ಫಲಪೂಜೆ

ಡಿಸೆಂಬರ್ ತಿಂಗಳ ಮೊದಲ ಅಥವಾ ಎರಡನೆ ವಾರದಲ್ಲಿ ಹಂಪಿಯಲ್ಲಿ ಫಲ ಪೂಜೆ ನಡೆಯುತ್ತದೆ. ಹಂಪಿಯ ಆರಾಧ್ಯ ದೈವ ಪಂಪಾಪತಿ ಮತ್ತು ಹಂಪಮ್ಮ ಅಥವಾ ಪಂಪಾಂಬಿಕೆಗೆ ಸಂಬಂಧಪಟ್ಟ ಆಚರಣೆಯಿದು. ಈ ಆಚರಣೆಗೆ ಮೂಲವಾಗಿರುವುದು ದಕ್ಷ ಬ್ರಹ್ಮನ ಕತೆಯೆಂದು ಜನರು ಹೇಳುತ್ತಾರೆ. ದಕ್ಷನ ಯಜ್ಞಕುಂಡದಲ್ಲಿ ಬಿದ್ದು ಸತ್ತ ದಾಕ್ಷಾಯಣಿಯು ಮುಂದೆ ಪರ್ವತ ರಾಜನ ಮಗಳಾಗಿ ಗಿರಿಜೆಯಾಗಿ ಹುಟ್ಟುತ್ತಾಳೆ. ಆಕೆ ಪ್ರಾಪ್ತ ವಯಸ್ಕಳಾದಾಗ ಶಿವ ಆಕೆಯನ್ನು ಕೇಳಲು ಹೋಗುತ್ತಾನೆ. ಪುರಾಣದ ಈ ಭಾಗವೇ ಫಲಪೂಜೆಯಲ್ಲಿ ಪುನರ್ ಸೃಷ್ಟಿಯಾಗುತ್ತದೆ.

ಗಂಡಿನ ಕಡೆಯವರು ಹೆಣ್ಣು ಕೇಳಲು ಹೋಗುವಾಗ ಏನೇನು ಆಚರಣೆಗಳನ್ನು ಮಾಡುತ್ತಾರೋ, ಅವೆಲ್ಲವನ್ನು ಫಲಪೂಜೆಯಲ್ಲಿ ಮಾಡುವರು. ಮೊದಲು ಶುಭ ದಿನವನ್ನು ನೋಡಲಾಗುತ್ತದೆ. ಆ ದಿನದಂದು ಪಂಪಾಪತಿಯನ್ನು ಸ್ನಾನ ಮಾಡಿಸಿ, ಹೊಸಬಟ್ಟೆ ಉಡಿಸಿ, ಅವನನ್ನು ಮೆರವಣಿಗೆಯಲ್ಲಿ, ಹಂಪಿ ನದಿ ತೀರದಲ್ಲಿರುವ ಕೋದಂಡರಾಮ ದೇವಸ್ಥಾನದ ಅಂಗಳಕ್ಕೆ ಕರೆದೊಯ್ಯುತ್ತಾರೆ. ಈ ಸಂದರ್ಭದಲ್ಲಿ ಪಂಪಾಪತಿ ಪರವಾಗಿ ಐದು ಜನ ಬ್ರಾಹ್ಮಣ ಪೂಜಾರಿಗಳು ಮುಂದಾಳತ್ವ ವಹಿಸಿರುತ್ತಾರೆ. ಹಂಪಮ್ಮಳ ಪರವಾಗಿ ಐದು ಜನ ಬ್ರಾಹ್ಮಣ ಪೂಜಾರಿಗಳು ಇರುತ್ತಾರೆ. ದೇವಸ್ಥಾನದ ಅಂಗಳದಲ್ಲಿ ಎರಡೂ ಕಡೆಯವರು ಪರಸ್ಪರ ಭೇಟಿ ಮಾಡಿ ವೀಳ್ಯ ಕೊಟ್ಟು ಪಂಪಾಪತಿ-ಪಂಪಾಂಬಿಕೆಯರ ನಡುವೆ ಮದುವೆ ನಿಶ್ಚಿತಾರ್ಥ ನಡೆಸುತ್ತಾರೆ. ಆಗ ಎರಡೂ ಕಡೆಯವರ ನಡುವೆ ನಡೆಯುವ ಮಾತುಕತೆಯ ಒಂದು ಭಾಗ ಇಂತಿದೆ.

**ಗಂಡಿನ ಕಡೆಯವರು:-** ನೋಡ್ರಪ್ಪ ಹಂಪಮ್ಮನ ಕಡೆಯೋರೆ. ನಮ್ಮ ಪಂಪಾಪತಿ ಮುಕ್ಕಣ್ಣ ಶ್ರೇಷ್ಠ ಭೂಪಾಲನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿ ಅಂತ ಕೇಳ್ತಿದ್ದೀವಿ. ಆತ ನಿಮ್ಮ ಮಗಳನ್ನು ಒಪ್ಪಿಕೊಂಡಿದ್ದಾನೆ. ನಿಮ್ಮ ಅಭಿಪ್ರಾಯವೇನು?

**ಹೆಣ್ಣಿನ ಕಡೆಯವರು**:- ಹೋಗ್ರಿ ಸ್ವಾಮಿ, ಮಲಗೋಕೆ ಮನೆಯಿಲ್ಲ. ಒದಿಯೋಕೆ ಕಂಬಳಿ ಇಲ್ಲ. ಹೋರೋಕೆ ಕುದುರೆ ಇಲ್ಲ. ನಮ್ಮ ಹಂಪಮ್ಮನ್ನ ಅಂತೋರಿಗೆಲ್ಲ ಕೊಟ್ಟು ಮದುವೆ ಮಾಡಲು ಸಾಧ್ಯವಿಲ್ಲ.

**ಗಂಡಿನ ಕಡೆಯವರು**:- ನಮ್ಮ ಪಂಪಾಪತಿಗೆ ಏನೂ ಇಲ್ಲಾಂತ ಹೇಳ್ತೀರೇನು? ನೋಡ್ರಿ. ಬಂಗಾರಗಟ್ಟಿ ಹೇಮಕೂಟ ಕೊಡ್ತೀವಿ. ಬೆಳ್ಳಿಬಸವನ್ನ ಕೊಡ್ತೀವಿ. ನೀವು ಏನೂ ಕೇಳಿದ್ರೂ ಕೊಡ್ತೀವಿ. ನಿಮ್ಮ ಮಗಳ ಒಪ್ಪಿಗೆ ಕೇಳಿ.

**ಹೆಣ್ಣಿನ ಕಡೆಯವರು**:- ನೋಡಮ್ಮ ಹಂಪಮ್ಮ, ಪಂಪಾಪತಿ ಬಹಳ ಶ್ರೀಮಂತನಂತೆ. ಬೆಳ್ಳಿ ಬಸವ, ಬಂಗಾರಗಟ್ಟಿ ಹೇಮಕೂಟ ಕೊಡ್ತಾರಂತೆ. ನಿನ್ನ ಅಭಿಪ್ರಾಯ ಏನಮ್ಮ?

ಹೀಗೆ ಸುಮಾರು ಮೂರು, ನಾಲ್ಕು ಗಂಟೆಗಳವರೆಗೆ ಚರ್ಚೆ ನಡೆಯುತ್ತದೆ. ಮುಂಜಾವು ಆಗುತ್ತಲೇ ಎರಡೂ ಕಡೆಯವರು ಪರಸ್ಪರ ಒಪ್ಪಂದಕ್ಕೆ ಬಂದು, ಪರಸ್ಪರ ವೀಳ್ಯ ಕೊಟ್ಟು, ಮದುವೆ ದಿನ ನಿರ್ಧಾರ ಮಾಡುತ್ತಾರೆ. ಅದನ್ನು ಸೇರಿದ ಜನರಿಗೆ ಸಾರಿ ಹೇಳುತ್ತಾರೆ. ಆಗ ಜನರು ದೇವರ ಮದುವೆಗೆ ಮುಯ್ಯಿ ಹಣ ನೀಡುತ್ತಾರೆ. ಕೊನೆಗೆ ಎಲ್ಲರೂ ವಿರೂಪಾಕ್ಷನ ಗುಡಿಗೆ ಹಿಂದಿರುಗಿ ಬರುತ್ತಾರೆ. ಅದೇ ದಿನ ತೆಪ್ಪೋತ್ಸವವೂ ನಡೆಯುತ್ತದೆ.

ಫಲಪೂಜೆಯು ಇತಿಹಾಸ ಪ್ರಸಿದ್ಧವಾಗಿದೆ. ಸ್ಥಳೀಯರಷ್ಟೇ ಅಲ್ಲದೇ ಬೇರೆ ಬೇರೆ ಪ್ರದೇಶಗಳ ಜನರು ಹಾಗೂ ವಿದೇಶಿಯರೂ ಬಹುಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಾರೆ.

### ೧೩. ಮಹಾಶಿವರಾತ್ರಿ

ಮನುಷ್ಯ ಶಿವಧ್ಯಾನ ನಿರತನಾಗಿದ್ದರೆ ಯಾವ ವಿಪತ್ತೂ ಬರಲಾರದು ಎಂಬುದು ನಮ್ಮ ಪ್ರಾಚೀನರ ನಂಬಿಕೆಯಾಗಿದೆ. ಶಿವನ ಧ್ಯಾನ-ಆರಾಧನೆಗಳಿಗೆ ಅತ್ಯಂತ ಪ್ರಶಸ್ತವಾದ ದಿನ ಶಿವರಾತ್ರಿ. ಅಮಾವಾಸ್ಯೆಯ ಹಿಂದಿನ ದಿನ ಮಾಸ ಶಿವರಾತ್ರಿಯಾದರೆ, ಮಾಘ ಬಹುಳ ಕೃಷ್ಣ ಪಕ್ಷದ ಚತುರ್ದಶಿಯಂದು ಮಹಾಶಿವರಾತ್ರಿ ಆಚರಿಸಲಾಗುತ್ತದೆ. ಮಹಾಶಿವರಾತ್ರಿಯಂದು ಮಧ್ಯರಾತ್ರಿ ಜಗತ್ತಿನ ತಂದೆಯೆನಿಸಿದ ಪರಶಿವನು ಸ್ವಯಂಭುವಾಗಿ ಲಿಂಗರೂಪದಿಂದ ಉದ್ಭವಿಸುತ್ತಾನೆಂಬುದಾಗಿ ಹೇಳುತ್ತಾರೆ. ಇದಲ್ಲದೆ ಶಿವನು ಶಿವರಾತ್ರಿಯಂದು ಹಾಲಾಹಲ ವಿಷ ಕುಡಿದ ದಿನವೆಂದೂ, ತಾಂಡವ ನೃತ್ಯ ಮಾಡಿದ ದಿನವೆಂಬುದಾಗಿಯೂ ಪ್ರತೀತಿ ಇದೆ. ಮಹಾಶಿವರಾತ್ರಿ ಶಿವನಿಗೆ ಅತ್ಯಂತ ಪ್ರಿಯವಾದ ದಿನವಾಗಿದೆ. ಅಂದು ಶಿವಾಲಯಗಳಲ್ಲಿ, ಜ್ಯೋತಿರ್ಲಿಂಗ ಕ್ಷೇತ್ರಗಳಲ್ಲಿ, ತೀರ್ಥಕ್ಷೇತ್ರಗಳಲ್ಲಿ ಲಕ್ಷಾದಿ ಭಕ್ತರು ಪೂಜೆ, ಹೋಮ, ಹವನಗಳಲ್ಲಿ ಮಗ್ನರಾಗಿ, ಶಿವಧ್ಯಾನ ಮಾಡುತ್ತಾ ಬಹಳ ವಿಶಿಷ್ಟವಾಗಿ ಮಹಾಶಿವರಾತ್ರಿಯನ್ನು ಆಚರಿಸುತ್ತಾರೆ.

ಶಿವರಾತ್ರಿಯ ದಿನ ಬೆಳಿಗ್ಗೆ ಬೇಗ ಎದ್ದು, ಸ್ನಾನಾದಿಗಳನ್ನು ಮುಗಿಸಿ ಶುಭ್ರ ವಸ್ತ್ರಗಳನ್ನು ಉಟ್ಟುಕೊಳ್ಳುವರು. ಅಸಂಖ್ಯಾತ ಭಕ್ತರು ಪವಿತ್ರ ಕ್ಷೇತ್ರವೆನಿಸಿದ ಹಂಪಿಯ ನದಿಯಲ್ಲಿ ಪವಿತ್ರ ಸ್ನಾನ ಮಾಡಿ, ವಿರೂಪಾಕ್ಷನನ್ನು ದರ್ಶಿಸಿ, ಪವಿತ್ರ ಪೂಜೆ ಸಲ್ಲಿಸುವರು. ಸಮಸ್ತ ಪಾಪ

ನಿವಾರಣೆಗಾಗಿಯೂ, ಜ್ಞಾನ, ಮೋಕ್ಷ ಪ್ರಾಪ್ತಿಗಾಗಿಯೂ ಶಿವರಾತ್ರಿ ವ್ರತ ಆಚರಿಸುವರು. ತ್ರಯೋದಶಿಯಂದು ಒಪ್ಪತ್ತು ಊಟ ಮಾಡುವರು. ಚತುರ್ದಶಿಯಂದು ಪೂರ್ಣ ನಿರಾಹಾರವಾಗಿದ್ದು, ಅಮವಾಸ್ಯೆಯಂದು ಪಾರಣೆ ಮಾಡುವರು. ದೈಹಿಕವಾಗಿ ಆಚರಿಸಲು ಅಶಕ್ತರಾಗಿರುವವರು, ಫಲಾಹಾರ ಸ್ವೀಕರಿಸಬಹುದು. ರಾತ್ರಿ ಶಿವದೇವಾಲಯಗಳಿಗೆ ತೆರಳಿ, ಮುಂಜಾವಿನವರೆಗೂ ರುದ್ರಾಭಿಷೇಕ, ಪೂಜೆ, ಹರಿಕಥೆಗಳಲ್ಲಿ ಮಗ್ನರಾಗುವರು. ಶಿವನಿಗೆ ತುಪ್ಪ, ಹಾಲು, ಜೇನು, ಬಾಳೆಹಣ್ಣು, ಸಕ್ಕರೆಯ ಪಂಚಾಮೃತ ತಯಾರಿಸಿ ಅಭಿಷೇಕ ಮಾಡಿಸುವರು. ಉಪವಾಸ ಮಾಡುವುದು ಎಂದರೆ ಕೇವಲ ಊಟೋಪಚಾರ ಬಿಟ್ಟು, ಫಲಾಹಾರ ಸ್ವೀಕರಿಸುವುದಲ್ಲ. 'ಉಪ' ಅಂದರೆ 'ಹತ್ತಿರ', 'ವಾಸ' ಅಂದರೆ 'ಇರುವಿಕೆ' ಉಪವಾಸವೆಂದರೆ ಶಿವನ ಹತ್ತಿರ ಮಾನಸಿಕವಾಗಿ ಇರುವುದು ಎಂದು ಅರ್ಥ ಎಂಬುದಾಗಿ ಭಕ್ತರು ಹೇಳುತ್ತಾರೆ.

ಶಿವಲೀಲಾಮೃತದಲ್ಲಿ ಬರುವ ಶಿವರಾತ್ರಿಯ ಕಥೆಯನ್ನು ಸ್ವತಃ ಶಿವನೇ ಪಾರ್ವತಿಗೆ ಹೇಳಿದನೆಂಬ ಪ್ರತೀತಿಯಿದೆ. ಪ್ರತ್ಯಂತವೆಂಬ ದೇಶದಲ್ಲಿ ಸದಾ ಬೇಟೆಯಾಡಿ ಜೀವಿಸುವ ಒಬ್ಬ ಬೇಡನಿದ್ದ. ಒಂದು ದಿನ ಹಗಲೆಲ್ಲಾ ಅಡವಿಯೆಲ್ಲಾ ಅಲೆದರೂ ಅವನಿಗೆ ಒಂದು ಬೇಟೆಯೂ ಸಿಗಲಿಲ್ಲ. ರಾತ್ರಿ ಸರೋವರವೊಂದರ ಬಳಿ ಇದ್ದ ಬಿಲ್ವ ವೃಕ್ಷವನ್ನೇರಿ, ಅಲ್ಲಿ ನೀರು ಕುಡಿಯಲು ಬರುವ ಪ್ರಾಣಿಯನ್ನು ಕೊಲ್ಲಲು ಹೊಂಚು ಹಾಕುತ್ತಿದ್ದ. ಅಂದು ಶಿವರಾತ್ರಿಯಾಗಿತ್ತು. ಆದರೆ ಬೇಡನಿಗೆ ತಿಥಿ-ಮಿತಿಗಳ ಪರಿವೆ ಇರಲಿಲ್ಲ. ಬಿಲ್ವ ವೃಕ್ಷದಡಿಯಲ್ಲಿಯೇ ಒಂದು ಲಿಂಗವಿದ್ದುದರ ಅರಿವೂ ಅವನಿಗಿರಲಿಲ್ಲ. ಅವನಿಗೆ ಅರಿವಿಲ್ಲದಂತೆ ದೃಷ್ಟಿಗೆ ಅಡ್ಡ ಬಂತೆಂದು ಕಿತ್ತು ಬಿಸಾಡಿದ ಬಿಲ್ವಪತ್ರೆಗಳು ಮರದಡಿಯಲ್ಲಿದ್ದ ಲಿಂಗವನ್ನು ಮುಚ್ಚಿದವು.

ಆ ಸಮಯಕ್ಕೆ ಸರಿಯಾಗಿ ಒಂದು ತುಂಬು ಗರ್ಭಿಣಿಯಾದ ಜಿಂಕೆ ನೀರು ಕುಡಿಯಲು ಬಂದಿತು. ಬೇಡ ಬಾಣ ಬಿಡಲು ಸನ್ನದ್ಧನಾದಾಗ ಅದು 'ತುಂಬು ಗರ್ಭಿಣಿಯಾದ ನನ್ನನ್ನು ಕೊಂದು ಭ್ರೂಣ ಹತ್ಯಾ ಪಾಪಕ್ಕೆ ಗುರಿಯಾಗ ಬೇಡ. ಸ್ವಲ್ಪ ಸಮಯದಲ್ಲೇ ಪ್ರಸವಿಸಿದ ಬಳಿಕ ನಾನಾಗಿ ಇಲ್ಲಿಗೆ ಬಂದು ದೇಹ ಅರ್ಪಿಸುವೆ ಶಿವನಾಣೆ, ಶಿವನಾಣೆ' ಎಂದಿತು. ಬೇಡನು 'ಶಿವ' ಶಬ್ದ ಕೇಳಿದಾಗ ಜಿಂಕೆಯ ಮೇಲೆ ಕರುಣೆ ಹುಟ್ಟಿ ಅದನ್ನು ಬಿಟ್ಟುಬಿಟ್ಟನು. ತನ್ನ ನಿದ್ರೆ ತಡೆಯುವುದಕ್ಕಾಗಿ ಬಿಲ್ವಪತ್ರೆಗಳನ್ನು ಕಿತ್ತು ಎಸೆಯುತ್ತಲೇ ಇದ್ದನು. ಸ್ವಲ್ಪ ಸಮಯದಲ್ಲಿ ಇನ್ನೊಂದು ಜಿಂಕೆ ತನ್ನ ಮೂರು ಮರಿಯೊಂದಿಗೆ ನೀರು ಕುಡಿಯಲು ಓಡೋಡಿ ಬಂದಿತು. ಅದು ಸಹ ಬೇಡನನ್ನು ಕುರಿತು 'ಈ ಮರಿಗಳನ್ನು ನನ್ನ ಪತಿಯಿದ್ದಲ್ಲಿಗೆ ಬಿಟ್ಟು ಬರುವ ತನಕ ಸಮಾಧಾನಿಸು. ಇಲ್ಲವಾದರೆ ಅವು ಅನಾಥವಾಗುತ್ತವೆ' ಎಂದಾಗ ಬೇಡನಿಗೆ ಮರುಕ ಹುಟ್ಟಿ ಅದನ್ನು ಬಿಟ್ಟ. ಅನಂತರ ಒಂದು ಗಂಡು ಜಿಂಕೆ ಬಂದಿತು. ಅದಕ್ಕೆ ಬಾಣ ಹೂಡಿದಾಗ ಅದು 'ಶಿವ, ಶಿವಾ ನನ್ನನ್ನೇಕೆ ಕೊಲ್ಲುವೆ? ಮೊದಲು ನೀನು ದಯೆ ತೋರಿ ಬಿಟ್ಟ ಎರಡೂ ಜಿಂಕೆಗಳು ನನಗಾಗಿ ಕಾಯುತ್ತಿವೆ. ಅವುಗಳೊಂದಿಗೆ ಇಲ್ಲಿಗೆ ತಪ್ಪದೆ ಬರುತ್ತೇನೆ ಶಿವನಾಣೆ' ಎಂದಾಗ ಬೇಡ ಅದನ್ನು ಬಿಟ್ಟುಕೊಟ್ಟ.

ಕೊಟ್ಟ ಮಾತಿನಂತೆ ಬೆಳಗಿನ ಜಾವಕ್ಕೆ ಎಲ್ಲ ಜಿಂಕೆಗಳು, ಮರಿಗಳು ಬಂದು 'ಈಗ ನಮ್ಮನ್ನು ಕೊಲ್ಲು' ಎಂದವು. ಉಷಃಕಾಲ ಸಮೀಪಿಸಿತ್ತು. ಬೇಡನ ಮನಸ್ಸು ಪರಿವರ್ತನೆಯಾಗಿತ್ತು. ಆಗ ಅವನು 'ಶಿವ-ಶಿವ ನಿಮ್ಮನ್ನು ಕೊಂದು ನಾನಾವ ನರಕಕ್ಕೆ ಹೋಗಲಿ'? ಎಂದು ಹೇಳಿ ಬಿಲ್ಲು, ಬಾಣಗಳನ್ನು ಸರೋವರಕ್ಕೆ ಎಸೆದ. ಆ ದಿನ ಬೇಡನಿಗೆ ಅರಿವಿಲ್ಲದಂತೆ ನಿರಾಹಾರ, ಲಿಂಗಾರ್ಚನೆ, ಜಾಗರಣೆ, ಶಿವನಾಮ ಸ್ಮರಣೆ - ಎಲ್ಲ ಆಗಿ ಶಿವರಾತ್ರಿಯ ಕಟ್ಟಾ ಆಚರಣೆ ನಡೆದಿತ್ತು. ಶಿವನು ಅವನ ಬಗ್ಗೆ ಪ್ರಸನ್ನನಾಗಿದ್ದ. ಕೂಡಲೇ ಅಲ್ಲಿಗೆ ಬಂದ ಶಿವಗಣಗಳು ವಿಮಾನದಲ್ಲಿ ಜಿಂಕೆಗಳೊಂದಿಗೆ ಕುಟುಂಬ ಸಹಿತ ಬೇಡನನ್ನು ಕೂಡಿಸಿಕೊಂಡು ಕೈಲಾಸಕ್ಕೆ ಕರೆದೊಯ್ದರು. ಅವನನ್ನು ಬರಮಾಡಿಕೊಂಡ ಶಿವನು 'ನಿನಗಷ್ಟೇ ಅಲ್ಲ, ನಿನ್ನ ಕಥೆ ಕೇಳಿದವರಿಗೂ, ಶಿವರಾತ್ರಿಯಂದು ಮರಣ ಹೊಂದಿದವರಿಗೂ ಕೈಲಾಸ ಪದವಿ ಖಚಿತ' ಎಂದು ಭೂಲೋಕಕ್ಕೆ ಆಶ್ವಾಸನೆಯಿತ್ತನು.

ಶಿವರಾಧನೆಗೆ ಐಶ್ವರ್ಯ, ಸಂಪತ್ತು, ಆಡಂಬರ ಯಾವುದೂ ಬೇಕಿಲ್ಲ. ಬಿಲ್ವಪತ್ರೆ, ಬಾವಿಯ ನೀರು, ಒಳ್ಳೆಯ ಭಕ್ತಿ ಇದ್ದರೆ ಸಾಕು. ಸರ್ವಪಾಪವನ್ನೂ ದೂರ ಮಾಡುವ ಮಹಾಶಿವರಾತ್ರಿ ವ್ರತವನ್ನು ಯಾವ ಜಾತಿ-ಮತಗಳ ಭೇದವಿಲ್ಲದೆ ಯಾರೂ ಮಾಡಿದರೂ ಇಹದಲ್ಲಿ ಸುಖ, ಮೋಕ್ಷ ಪಡೆಯುತ್ತಾರೆ ಎಂಬ ನಂಬಿಕೆಯಿದೆ. ಮಹಾಶಿವರಾತ್ರಿಯಲ್ಲಿ ಆಚರಿಸುವ ಉಪವಾಸ ಹಾಗೂ ಜಾಗರಣೆ ಪ್ರಧಾನವಾಗಿದ್ದು, ಇಂದ್ರಿಯ ಖಂಡನೆ, ದೇಹ ದಂಡನೆಗೆ ವಿಶೇಷ ಪ್ರಾಧ್ಯಾನ್ಯತೆಯಿದೆ. ನಮ್ಮಲ್ಲಿರುವ ಪಶುತ್ವ ಕಳೆದುಕೊಂಡು ಪಶುಪತಿಯತ್ತ ಸಾಗಲು, ಶಿವರಾತ್ರಿ ವ್ರತ ಪೂರಕವಾಗಿದೆ.

### ೫.೩. ಆಚರಣೆಗಳು

ಆಚರಣೆ ಎಂಬ ಪದವು ಇಂಗ್ಲಿಷಿನ Ritual ಎಂಬ ಪದಕ್ಕೆ ಸಂವಾದಿಯಾದುದು. ಇದು Ritu ಎಂಬ ಲ್ಯಾಟಿನ್ ಪದದಿಂದ ಬಂದಿದೆ. ಇದಕ್ಕೆ 'ಸಂಪ್ರದಾಯ' ಎಂಬ ಅರ್ಥವಿದೆ.

ಮತ ಧರ್ಮಗಳಿಗೆ ಸಂಬಂಧಿಸಿದಂತೆ ನಡೆಸುವ ಕ್ರಿಯೆ ಹಾಗೂ ವಿಧಿಗಳಿಗೆ 'ಆಚರಣೆ' ಎಂದು ಕರೆಯುತ್ತಾರೆ. ಆಚರಣೆ ಒಂದು ಸಂಸ್ಕೃತಿಯ ಪ್ರತಿಬಿಂಬ. ಒಂದು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಸಂಸ್ಕೃತಿಯನ್ನು, ಅದಕ್ಕೆ ಸಂಬಂಧಿಸಿದ ಆಚರಣೆಯನ್ನು ಕೂಲಂಕಷವಾಗಿ ತಿಳಿದುಕೊಳ್ಳುವುದು ಮುಖ್ಯ. ಆಚರಣೆಗಳು ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಹರಿದು ಬಂದು ಆಚರಿಸಲ್ಪಡುತ್ತವೆ. ಧರ್ಮ, ನಂಬಿಕೆ, ಐತಿಹ್ಯ, ಪುರಾಣ ಕಲ್ಪನೆ ಇವುಗಳೆಲ್ಲವೂ ಆಚರಣೆಗಳ ಆಧಾರದಿಂದಲೇ ಪ್ರಸ್ತುತ ದಿನಗಳವರೆಗೆ ಉಳಿದು, ಬೆಳೆದುಕೊಂಡು ಬಂದಿವೆ. ಆಚರಣೆಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದು. ೧. ವೈಯಕ್ತಿಕ ಆಚರಣೆಗಳು ೨. ಕೌಟುಂಬಿಕ ಆಚರಣೆಗಳು, ೩. ಸಾಮೂಹಿಕ ಆಚರಣೆಗಳು, ೪. ಸಾಮಾಜಿಕ ಆಚರಣೆಗಳು, ೫. ವ್ಯವಸಾಯಾತ್ಮಕ ಆಚರಣೆಗಳು, ೬. ಧಾರ್ಮಿಕ ಆಚರಣೆಗಳು.

ವ್ಯಕ್ತಿಗತ ನಂಬಿಕೆಯಿಂದ, ವೈಯಕ್ತಿಕ ಕಾರಣಗಳಿಗಾಗಿ ನಡೆಸುವ ಆಚರಣೆಗಳೇ 'ವೈಯಕ್ತಿಕ ಆಚರಣೆ'ಗಳು. ಉದಾ:- ಕೊಂಡ ಹಾಯುವುದು. ಕುಟುಂಬದ ಯೋಗಕ್ಷೇಮದ ಕಾರಣಗಳಿಗಾಗಿ ನಡೆಸುವ ಆಚರಣೆಗಳಿಗೆ 'ಕೌಟುಂಬಿಕ ಆಚರಣೆ'ಗಳು ಎನ್ನುತ್ತಾರೆ. ಉದಾ:- ಮುಡಿ ಕೊಡುವುದು. ಎಲ್ಲಾ ಸಮುದಾಯದವರೂ ಸೇರಿ ಒಟ್ಟಾಗಿ ಆಚರಿಸುವ ಆಚರಣೆಗಳಿಗೆ 'ಸಾಮೂಹಿಕ ಆಚರಣೆ' ಎನ್ನುತ್ತಾರೆ. ಉದಾ:- ಅಭಿಷೇಕ, ದೀಪಾರತಿ. ಒಂದು ನಿರ್ದಿಷ್ಟ ಸಮಾಜದ ಹಾಗೂ ಒಂದು ನಿರ್ದಿಷ್ಟ ವರ್ಗದ ಜನರಿಗೆ ಸೀಮಿತವಾದ ಆಚರಣೆಗಳೇ 'ಸಾಮಾಜಿಕ ಆಚರಣೆ' ಉದಾ:- ಬಲಿ. ಕೃಷಿಗೆ ಹಾಗೂ ಭೂಮಿಗೆ ಸಂಬಂಧಿಸಿದ ಆಚರಣೆಗಳು 'ವ್ಯವಸಾಯಾತ್ಮಕ ಆಚರಣೆಗಳು'. ಉದಾ:- ಚರಗ, ರಾಶಿಪೂಜೆ. ಧರ್ಮಸಂಬಂಧಿ ಆಚರಣೆಗಳೇ ಧಾರ್ಮಿಕ ಆಚರಣೆಗಳು. ಇವು ನಿಗದಿತ ಧರ್ಮ ಹಾಗೂ ನಂಬಿಕೆಗೆ ಸಂಬಂಧಿಸಿರುವಂತಹ ಆಚರಣೆಗಳು. ಉದಾ:- ಗಂಗೆ ಸ್ಥಳಕ್ಕೆ ಹೋಗುವುದು, ಕುಂಬೋತ್ಸವ- ಮುಂತಾದವು. ಬಹುತೇಕ ಆಚರಣೆಗಳಿಗೆ ಹರಕೆಗಳು ಹಾಗೂ ನಂಬಿಕೆಗಳು ಮೂಲ ಕಾರಣವಾಗಿವೆ. ಹರಕೆ ಆಚರಣೆಯ ಪ್ರಮುಖ ಅಂಗವಾದರೆ ನಂಬಿಕೆ ಹರಕೆಯ ಅಡಿಪಾಯವಾಗಿದೆ. ಮಾನವ ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಹೋರುತ್ತಾನೆ. ಆ ಹರಕೆಯನ್ನು ಹಬ್ಬ, ಹರಿದಿನಗಳಲ್ಲಿ ಅಥವಾ ಜಾತ್ರೆಗಳಲ್ಲಿ ಆಚರಣೆಗೆ ತರುತ್ತಾನೆ. ಹೀಗೆ ಆಚರಣೆಗಳು ಅಸ್ತಿತ್ವಕ್ಕೆ ಬರುತ್ತವೆ.

ಹರಕೆಗಳು ಆಚರಣೆಯ ರೂಪ ಪಡೆದು, ವಿಶೇಷವಾದ ಸಂದರ್ಭಗಳಲ್ಲಿ ಆಚರಿಸಲ್ಪಟ್ಟಾಗ ಹಬ್ಬಗಳಾಗುತ್ತವೆ. ಈ ಹಬ್ಬಗಳಿಗೆ ವ್ಯಾಪಾರ, ವಾಣಿಜ್ಯದ ಸ್ಪರ್ಶವಾದಾಗ ಅದಕ್ಕೆ ಜಾತ್ರೆಯ ಸ್ವರೂಪ ಬರುತ್ತದೆ. ನಂಬಿಕೆಗಳನ್ನೇ ಉಸಿರಾಗಿಸಿಕೊಂಡ ಗ್ರಾಮೀಣರು, ಆಚರಣೆಗಳನ್ನು ನಂಬಿಯೇ ಜೀವನ ನಡೆಸುತ್ತಾರೆ. ಸಮಾಜ ಬದಲಾದಂತೆ ಒಂದು ಕಾಲಕ್ಕೆ ಅರ್ಥಪೂರ್ಣವಾಗಿದ್ದ ಆಚರಣೆ ಮತ್ತೊಂದು ಕಾಲಕ್ಕೆ ಅರ್ಥರಹಿತವಾಗಿ ಕಂಡರೂ ಅವು ಬದುಕಿದಷ್ಟು ಕಾಲ ಕ್ರಿಯಾಶೀಲ ವಾಗಿರುತ್ತವೆ. ಪ್ರಸ್ತುತ ದಿನಗಳಲ್ಲಿ ಸಮಾಜದಲ್ಲಿ ಆಗುತ್ತಿರುವ ಅನೇಕ ಬದಲಾವಣೆಗಳ ಕಾರಣದಿಂದ ಆಚರಣೆಗಳು ತಮ್ಮ ಮೂಲ ಸ್ವರೂಪ, ವೈಭವವನ್ನು ಕಳೆದುಕೊಂಡಿದ್ದರೂ ಅವು ಸಂಪೂರ್ಣವಾಗಿ ಕಣ್ಮರೆಯಾಗಿಲ್ಲ.

ನಂಬಿಕೆ ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡಿದರೆ, ಆಚರಣೆಗಳು ಕ್ರಿಯೆಯ ಮೂಲಕ ವ್ಯಕ್ತಿಯಿಂದ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತವೆ. ಪ್ರತಿಯೊಂದು ಆಚರಣೆಗಳ ಉದ್ದೇಶ ಭಿನ್ನವಾಗಿರುತ್ತವೆ. ವೈಯಕ್ತಿಕ ಕಾರಣಗಳು ಮೊದಲುಗೊಂಡು ಮಳೆ, ಬೆಳೆಗಳಿಗಾಗಿ ನಡೆಸುವ ಆಚರಣೆಗಳಲ್ಲಿ ಊರೂ-ಕೇರಿಯ ಒಳಿತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಪ್ರಾದೇಶಿಕವಾಗಿ ಆಚರಣೆಗಳು ಭಿನ್ನವಾಗಿದ್ದರೂ ಉದ್ದೇಶಗಳು ಒಂದೇ ಆಗಿರುತ್ತವೆ. ಪ್ರತಿಯೊಂದು ಆಚರಣೆಗಳು ಸಾಂಕೇತಿಕವಾದ ಅರ್ಥವನ್ನು ಹೊಂದಿರುತ್ತವೆ. ಸಂಸ್ಕೃತಿ. ಭಾಷೆ ಭಿನ್ನವಾದರೂ ಆಚರಣೆಗಳ ಮಹತ್ವ ಇಂದಿಗೂ ಪ್ರಸ್ತುತವಾಗಿದೆ ಇಂತಹ ಆಚರಣೆಗಳಿಂದ ಮಾನಸಿಕ ತೃಪ್ತಿ ದೊರಕುವುದಲ್ಲದೆ ಇಡೀ ವರ್ಷ ದಣಿದ ಮನಗಳಿಗೆ ಇವು ನೆಮ್ಮದಿಯನ್ನು ಒದಗಿಸುತ್ತವೆ.

ಯಾವ ಜಾತಿಮತಗಳ ಭೇದ-ಭಾವವಿಲ್ಲದೆ, ಸ್ತ್ರೀ, ಪುರುಷರು ಸಂತೃಪ್ತಿಯಿಂದ ಕೂಡಿ ಈ ಆಚರಣೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ಹೀಗೆ ಆಚರಣೆಗಳು ಮಾನವನ ಮಾನಸಿಕ, ಭೌತಿಕ ಅಗತ್ಯವಾಗಿ ಉಳಿದು, ಬೆಳೆದುಕೊಂಡು ಬಂದಿವೆ.

### ೧. ಗುಡ್ಡೇಕಲ್ಲು ಆಚರಣೆ

ಗುಡ್ಡೇಕಲ್ಲು ವಾಲ್ಮೀಕಿ ಸಮುದಾಯದವರ ಆರಾಧ್ಯ ದೈವವಾಗಿದೆ. ಗುಡ್ಡೇಕಲ್ಲುಗಳನ್ನು ಭರಮಪ್ಪ ಎಂತಲೂ ಕರೆಯುತ್ತಾರೆ. ತಾಲ್ಲೂಕಿನ ಬಹಳಷ್ಟು ಗ್ರಾಮಗಳಲ್ಲಿ ಗುಡ್ಡೇಕಲ್ಲುಗಳ ಆರಾಧನೆ ಕಂಡು ಬರುತ್ತದೆ. ಊರಲ್ಲಿ ಆಚರಿಸುವಂತಹ ಆಚರಣೆಗಳಲ್ಲಿ ಗುಡ್ಡೇಕಲ್ಲುಗಳು ಮೊದಲು ಪೂಜೆಗೊಳ್ಳುತ್ತವೆ.

ಗುಡ್ಡೇಕಲ್ಲುಗಳ ಪ್ರತಿಷ್ಠಾಪನೆ ಬಹಳ ವಿಶಿಷ್ಟವಾಗಿ ನೆರವೇರುತ್ತದೆ. ಸಮುದಾಯದ ಮುಖಂಡರೊಂದಿಗೆ ಎಲ್ಲರೂ ಸೇರಿ ಊರಿನ ಪ್ರವೇಶ ದ್ವಾರದ ಬಳಿ ನೆಲವನ್ನು ಅಗೆದು, ಐದು ಅಡಿಯ ಕಂದಕವನ್ನು ತೆಗೆಯುತ್ತಾರೆ. ಮುಂಜಾವಿನಲ್ಲಿ ಸಮುದಾಯದ ದೈವದವರೆಲ್ಲ ಸೇರಿ ಕಂದಕವನ್ನು ಪೂಜಿಸಿ, ಜೀವಂತ ಹಂದಿಯೊಂದನ್ನು ಕಂದಕದಲ್ಲಿ ಹಾಕಿ ಮಣ್ಣು ಮುಚ್ಚಲಾಗುತ್ತದೆ. ನಂತರ ಹಂದಿಯ ಜೀವಂತ ಸಮಾಧಿ ಮೇಲೆ ಒಂದು ಗುಂಡಾದ ಕಲ್ಲನ್ನು ನೆಟ್ಟು, ಹೂ-ಪತ್ರೆಗಳಿಂದ ಕಲ್ಲನ್ನು ಅಲಂಕರಿಸಿ, ನೈವೇದ್ಯ ಅರ್ಪಿಸಿ, ಪೂಜಿಸುತ್ತಾರೆ. ಅಂದಿನಿಂದ ಆ ಕಲ್ಲು ಊರನ್ನು ಕಾಯುವ ಶಾಶ್ವತ ಕಾವಲು ದೈವವಾಗಿ ನಿಲ್ಲುತ್ತದೆ.

ಊರಿಗೆ ತಗಲುವ ಪೀಡೆ, ಅನಿಷ್ಟ ಇತ್ಯಾದಿ ದುಷ್ಟಶಕ್ತಿಗಳನ್ನು ತಡೆಯುವ ಕಾರ್ಯವನ್ನು ಗುಡ್ಡೇಕಲ್ಲುಗಳು ಮಾಡುತ್ತವೆ ಎಂಬ ನಂಬಿಕೆ ಜನರಲ್ಲಿದೆ. ಊರಿಗೆ ಯಾರೇ ಪ್ರವೇಶಿಸಿದರೂ ಮೊದಲು ಗುಡ್ಡೇಕಲ್ಲಿಗೆ ನಮಸ್ಕರಿಸಿಯೇ ಪ್ರವೇಶ ಮಾಡಬೇಕು. ಇದು ನಿಯಮ.

### ೨. ಭರತ ಹುಣ್ಣಿಮೆ

ಭರತ ಹುಣ್ಣಿಮೆಯಲ್ಲಿ ಚಳಿ ಕಡಿಮೆಯಾಗಿ, ಬೇಸಿಗೆ ಪ್ರಾರಂಭವಾಗುವ ಸಮಯ. ಇದನ್ನು ಗುಡಿ ಹುಣ್ಣಿಮೆ, ಮಾಘಮಾಸದ ಹುಣ್ಣಿಮೆ ಎಂತಲೂ ಕರೆಯುತ್ತಾರೆ. ಹಂಪಿ ಪರಿಸರದಲ್ಲಿ ಮಾಘಮಾಸದಲ್ಲೆ ಕೃಷಿ ಸಂಬಂಧಿ ಆಚರಣೆಯೊಂದು ಪ್ರಚಲಿತದಲ್ಲಿದೆ. ಹುಣ್ಣಿಮೆಯ ದಿನದಂದು ಕೃಷಿ ಉತ್ಪನ್ನಗಳಿಂದ ಮನೆಗಳನ್ನು ಸಿಂಗರಿಸುತ್ತಾರೆ. ಹಿತ್ತಾಳೆಯ ಕೊಡಕ್ಕೆ ರೇಶಿಮೆಯ ಬಟ್ಟೆ ಹೊದಿಸಿ, ಅದಕ್ಕೆ ಮಾವು, ಬೇವು ಎಲೆಗಳನ್ನು ಕಟ್ಟಿ, ವಿವಿಧ ಹೂಗಳಿಂದ ಅಲಂಕರಿಸಿ, ಪೂಜಿಸಲಾಗುತ್ತದೆ. ನಂತರ ಮನೆಯ ಮುಂದೆ ಧ್ವಜ ನಿಲ್ಲಿಸಲಾಗುತ್ತದೆ. ಇದಕ್ಕೆ ದೇವರನ್ನು ಕರೆದುಕೊಳ್ಳುವ ಸಂಪ್ರದಾಯವೆಂದು ಹೇಳುತ್ತಾರೆ. ಮಳೆಗಾಲದ ದಿನಗಳಲ್ಲಿ ದೇವರು ಹೊಲಗಳಲ್ಲಿ ವಾಸಿಸುತ್ತಿರುವನೆಂದೂ, ಭರತ ಹುಣ್ಣಿಮೆಯ ದಿನದಂದು ಮರಳಿ ಮನೆಗೆ ಬರುವನೆಂಬ ನಂಬಿಕೆಯಿದೆ. ಮಾವಿನ ಎಲೆ, ಬೇವಿನ ಎಲೆ, ಜೋಳದ ತೆನೆ, ಎಕ್ಕೆ ಹೂಗಳ ತೋರಣ ಕಟ್ಟಿ, ದೇವರನ್ನು ಸ್ವಾಗತಿಸುತ್ತಾರೆ. ಹೊಸಧಾನ್ಯದ ತೆನೆಗಳನ್ನು ಮೊದಲು ದೇವರಿಗೆ ಅರ್ಪಿಸಿ,

ನಂತರ ಕಣ ಮಾಡಿ ಧಾನ್ಯ ಮನೆಗೆ ತರುವ ಸಂಪ್ರದಾಯವಿದೆ. ಕೃಷಿ ಹಿನ್ನೆಲೆಯ ಪ್ರತಿ ಮನೆಗಳಲ್ಲೂ ಈ ರೀತಿಯ ವಿಶಿಷ್ಟ ಆಚರಣೆ ನೆರವೇರುತ್ತದೆ.

ಹಿಂದೆ ಮಾಘಮಾಸದ ಹುಣ್ಣಿಮೆಯಂದು ಹೊಸ ವರ್ಷದ ಧ್ವಜ ಪೂಜೆ ಆಚರಣೆ ಇದ್ದಿರಬೇಕು. ಇಂದು ಮನೆಯ ಮುಂಬಾಗಿಲುಗಳಿಗೆ ಕಟ್ಟುವ ತೋರಣ, ಧ್ವಜ, ಧಾನ್ಯದ ತೆನೆಗಳು ಕೃಷಿ ಸಂಪತ್ತಿನ ಸಂಕೇತಗಳಾಗಿವೆ. ಈ ಆಚರಣೆಯಲ್ಲಿ ನವಧಾನ್ಯದ ತೆನೆಗಳು ಅಭಿವೃದ್ಧಿಯ ಸಂಕೇತವಾಗಿ, ಜೀವಂತಿಕೆಯ ಲಕ್ಷಣವಾಗಿ, ಶುಭಸೂಚಕವಾಗಿ ಬಳಸಲ್ಪಡುತ್ತವೆ.

**೩. ಕಪ್ಪೆ, ಕತ್ತೆಗಳ ಮದುವೆ**

ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿ, ಕಂಪ್ಲಿ ಹೋಬಳಿಯ ಗ್ರಾಮೀಣ ಭಾಗಗಳಲ್ಲಿ ಮಳೆ ಬಾರದಿದ್ದರೆ ಇಬ್ಬರು ಹುಡುಗರು ಬೆತ್ತಲೆಯಾಗಿ ಒಂದು ದೊಡ್ಡ ಜೆಂಬಿನಲ್ಲಿ ಕಪ್ಪೆಯೊಂದನ್ನು ಹಾಕಿ ಅದನ್ನು ಹೊತ್ತುಕೊಂಡು ಹೋಗಿ ಮನೆ, ಮನೆಗಳಿಂದ ನೀರನ್ನು ಹಾಕಿಸಿಕೊಂಡು, ಊರಲ್ಲೆಲ್ಲಾ ತಿರುಗಾಡುತ್ತಾರೆ. ಅದಾದ ನಂತರ ಹಳ್ಳದ ಬದಿಗೆ ಹೋಗಿ ಕಪ್ಪೆಯನ್ನು ಬಿಟ್ಟು ಬಿಡುತ್ತಾರೆ. ಈ ರೀತಿ ಮಾಡುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆಯಿದೆ.

ಮಳೆಗಾಗಿ ಕಪ್ಪೆಗಳ ಮದುವೆ ಮಾಡುವ ಆಚರಣೆ ಚಾಲ್ತಿಯಲ್ಲಿದೆ. ಎರಡು ದೊಡ್ಡ ಕಪ್ಪೆಗಳನ್ನು ಹಿಡಿದು ತಂದು ದೇವಸ್ಥಾನದಲ್ಲಿ ಹೂಮಾಲೆ ಹಾಕಿ ಎರಡು ಕಪ್ಪೆಗಳಿಗೆ ಮದುವೆ ಮಾಡುತ್ತಾರೆ. ಅಂದು ವಾದ್ಯಗಳೊಂದಿಗೆ ಊರಲ್ಲೆಲ್ಲಾ ಮೆರವಣಿಗೆ ಏರ್ಪಡುತ್ತದೆ. ಇದೇ ರೀತಿ ಕತ್ತೆಗಳಿಗೂ ಮದುವೆ ಮಾಡಿಸಲಾಗುತ್ತದೆ. ಈ ರೀತಿ ಮಾಡುವುದರಿಂದ ಮುನಿಸಿಕೊಂಡ ಮಳೆರಾಯ ತಪ್ಪದೇ ಮದುವೆಗೆ ಬರುವನೆಂಬ ನಂಬಿಕೆಯಿದೆ. ಇಂಥ ಆಚರಣೆಗಳು ಬಾಹ್ಯ ನೋಟಕ್ಕೆ ತಮಾಷೆಯಾಗಿ ಕಂಡರೂ, ಪರಾಮರ್ಶಿಸಿ ನೋಡಿದಾಗ ಆಚರಣೆಗಳ ಮೂಲ ಉದ್ದೇಶ ತಿಳಿಯುತ್ತದೆ. ಸತತವಾಗಿ ಕಪ್ಪೆ ವಟ ಗುಟ್ಟಿದರೆ ಮಳೆಯಾಗುತ್ತದೆ ಎಂಬ ನಂಬಿಕೆಯ ಹಿನ್ನೆಲೆಯನ್ನು ಅವಲೋಕಿಸಿದಾಗ, ಮಳೆಯ ಮುನ್ಸೂಚನೆ, ಭೌಗೋಳಿಕ ವೈಪರೀತ್ಯಗಳನ್ನು ಮಾನವನಿಗಿಂತ ಮೊದಲು ಪ್ರಾಣಿಗಳು ಅರಿಯುತ್ತವೆ ಎಂಬ ವೈಜ್ಞಾನಿಕ ಸತ್ಯ ಗೋಚರಿಸುತ್ತದೆ. ಮಳೆ ಆಚರಣೆಯಲ್ಲಿ ಕಪ್ಪೆ, ಕತ್ತೆಗಳ ಪೂಜಿಸುವಿಕೆ ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯವಾಗಿದೆ.

ಕೆಲವು ಗ್ರಾಮಗಳಲ್ಲಿ ಮಳೆಗಾಗಿ ಗ್ರಾಮದೇವತೆಗಳ ಪಾದಗಟ್ಟೆ, ಊರಿನ ಗುಡ್ಡೇ ಕಲ್ಲುಗಳಿಗೆ ಕೊಡಗಳಿಂದ ನೀರು ಸುರಿಯುವ ಸಂಪ್ರದಾಯವಿದೆ. ಕಮಲಾಪುರ ಹೋಬಳಿಯ ಕಾಕುಬಾಳು, ಗುಂಡ್ಲ ವದ್ದಿಗೇರಿ ಗ್ರಾಮಗಳಲ್ಲಿ ಸತತ ಹನ್ನೊಂದು ದಿನ ಹಗಲು, ರಾತ್ರಿ ಭಜನೆ ಮಾಡುತ್ತಾರೆ. ಮಳೆ ಮಲ್ಲೇಶನ ಲಿಂಗಕ್ಕೆ ೧೦೧ ಕೊಡ ನೀರು ಹಾಕಿ, ಪೂಜೆ ಮಾಡಿದರೆ ಮಳೆ ಬರುತ್ತದೆ ಎಂಬ ನಂಬಿಕೆಯಿದೆ. ಊರಿನ ಎಲ್ಲಾ ಜಾತಿಯ ಮುಖಂಡರ ಮುಂದಾಳತ್ವದಲ್ಲಿ ಊರಿನ

ಗ್ರಾಮದೇವತೆಗಳಿಗೆ ಹೂ, ಹಣ್ಣು ಕೊಡುವುದರಿಂದ ಮಳೆಯಾಗುತ್ತದೆ ಎಂಬ ನಂಬಿಕೆಯಿದೆ. ಕಾಳಿಂಗರಾಯನ ಪದ ಹೇಳಿದರೆ, ಮಳೆರಾಯನನ್ನು ಮಾಡಿದರೆ, ವಿರಾಟ ಪರ್ವವನ್ನು ಹಾಡಿದರೆ ಮಳೆ ಬರುತ್ತದೆ ಎಂಬ ನಂಬಿಕೆಗಳಿವೆ. ತೊಸ್ಸಿದ್ದವರ ಶವ ಮಣ್ಣಿನಲ್ಲಿ ಕೊಳೆಯುವುದಿಲ್ಲ ಎಂಬ ನಂಬಿಕೆಯಿಂದ ಶವವನ್ನು ಕಿತ್ತು ಸುಟ್ಟರೆ ಮಳೆಯಾಗುತ್ತದೆ ಎಂಬ ನಂಬಿಕೆಯಿದೆ.

ಮಳೆ ಬಾರದಿದ್ದಾಗ ದೇವರನ್ನು ಕಳುಹಿಸುವುದು, ಭಜಿಸುವುದು, ಬೆದರಿಕೆ ಹಾಕುವುದು, ಮರೆತುಹೋದ ದೇವರುಗಳನ್ನು ಪೂಜಿಸುವುದು, ವಿಚಿತ್ರವಾಗಿ ವರ್ತಿಸುವುದು, ಕೆಟ್ಟು ಹೋದ ಕ್ರಿಯೆಗಳನ್ನು ಸರಿಪಡಿಸುವುದು ಇವೆಲ್ಲ ಮಂತ್ರ ವಿದ್ಯೆಗಳು ಎನಿಸಿಕೊಳ್ಳುತ್ತವೆ. ಇವು ಮಳೆ ತರಿಸಲು ದೇವರನ್ನು ಒಲಿಸಿಕೊಳ್ಳುವ ಪ್ರಯತ್ನಗಳಾಗಿ ಕಂಡುಬರುತ್ತವೆ. ಪಾದಗಟ್ಟೆಗಳಿಗೆ, ಗುಡ್ಡೇಕಲ್ಲುಗಳಿಗೆ ನೀರು ಸುರಿಯುವುದು, ಲಿಂಗದ ಮೇಲೆ ನೀರು ಸುರಿಯುವುದು, ತಾತ್ಕಾಲಿಕವಾಗಿ ವಾತಾವರಣ ತಂಪಾಗಿಸುವುದು ಈ ಕ್ರಿಯೆಗಳೆಲ್ಲ ಮಳೆಯ ಅನುಕರಣೆಯ ಸಾದೃಶ್ಯ ರೂಪಗಳಾಗಿ ಕಂಡುಬರುತ್ತವೆ. ಕಪ್ಪೆ, ಕತ್ತೆಗಳ ಮದುವೆ ದೇವರಿಗೆ ತೋರಿಸುವ ಪ್ರತಿಭಟನೆಯಾಗಿ ಕಂಡು ಬಂದರೂ, ಅವು ವಾತಾವರಣದ ವೈಪರೀತ್ಯಗಳನ್ನು ತಿಳಿಸುವ ಪ್ರಾಣಿಗಳಾಗಿವೆ. ಗ್ರಾಮೀಣರು ದೈವಗಳ ಮೇಲೆ ಮಾಡುವ ಈ ರೀತಿಯ ಪ್ರತಿಭಟನೆಗಳು ಅವರ ಅಸಹಾಯಕತೆ ಎಂದು ತಿಳಿಯುವುದಕ್ಕಿಂತ, ತಾತ್ಕಾಲಿಕವಾಗಿ ಸಮಾಧಾನ ನೀಡುವ ಸಂಗತಿಗಳನ್ನಾಗಿ ಗ್ರಹಿಸುವುದು ಸೂಕ್ತ.

**೪. ಜೋಕುಮಾರನ ಆಚರಣೆ**

ಜೋಕುಮಾರನ ಆಚರಣೆ ವ್ಯಕ್ತಿ ದೈವಕ್ಕೆ ಸಂಬಂಧಿಸಿದ್ದಾಗಿದೆ. ಇಲ್ಲಿ ಫಲವಂತಿಕೆ, ಲಿಂಗಾರಾಧನೆ, ಕೃಷಿ ಆರಾಧನೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಹೊಸಪೇಟೆ ತಾಲ್ಲೂಕಿನ ಎಲ್ಲಾ ಭಾಗಗಳಲ್ಲೂ ಜೋಕುಮಾರನ ಆಚರಣೆ ಕಂಡುಬರುತ್ತದೆ. ಬೆನಕನ ಅಮಾವಾಸ್ಯೆಯಾದ ಏಳನೇ ದಿನಕ್ಕೆ ಈ ಆಚರಣೆ ಪ್ರಾರಂಭವಾಗುತ್ತದೆ. ಅನಂತನ ಹುಣ್ಣಿಮೆಯನ್ನು ಜೋಕುಮಾರನ ಹುಣ್ಣಿಮೆ ಎಂದು ಕರೆಯುತ್ತಾರೆ. ಈ ಹುಣ್ಣಿಮೆಯಲ್ಲಿ ಹುಟ್ಟಿದ ಮಕ್ಕಳು ಅತಿಕಾಮಿಗಳಾಗುತ್ತಾರೆ ಎಂಬ ನಂಬಿಕೆಯಿದೆ.

ಜೋ ಎಂದರೆ 'ಭೂಮಿ', ಕುಮಾರ ಎಂದರೆ 'ಮಗ'. ಜೋಕುಮಾರ ಭೂಮಿಯ ಮಗ ಎಂದು ಅರ್ಥೈಸಲಾಗುತ್ತದೆ. ಮಳೆ ದೇವರೆಂದು ಕರೆಯಲ್ಪಡುವ ಜೋಕುಮಾರನ ಹುಟ್ಟು, ಬಾರಿಕರ ಮನೆಯಲ್ಲಿ ಆಗುತ್ತದೆ. ಈ ಸಮುದಾಯದವರನ್ನು ಗಂಗಾಮತಸ್ಥರು, ಅಂಬಿಗರು, ಬೆಸ್ತರು, ಕಬ್ಬೇರರು ಎಂದು ಕರೆಯಲ್ಪಡುತ್ತಾರೆ. ಇವರು ಗಂಗೆಯ ಮಕ್ಕಳೆಂಬ ಪ್ರತೀತಿ ಇದೆ.

ಕೃಷಿಕರ ಮಣ್ಣಿನ ಪೂಜೆಗಳಲ್ಲಿ ಈ ಆಚರಣೆಯು ಒಂದಾಗಿದೆ. ಎಣ್ಣೆ ಮತ್ತು ಮೆದು ಮಣ್ಣಿನಿಂದ ಜೋಕುಮಾರನ ಮೂರ್ತಿ ತಯಾರಿಸುತ್ತಾರೆ. ಅಗಲವಾದ ಮುಖ, ದೊಡ್ಡದಾದ

ಕಣ್ಣು, ತಲೆಗೆ ಕಿರೀಟದಂತೆ ಕಾಣುವ ತಲೆಸುತ್ತು, ಚೂಪಾದ ಹುಲಿ ಮೀಸೆ, ತೆರೆದಬಾಯಿ, ಬಾಯಿಯೊಳಗೆ ಬೆಣ್ಣೆಯ ಮುದ್ದೆ, ಹಣೆಗೆ ವಿಭೂತಿ, ಕುಂಕುಮದ ಪಟ್ಟೆಗಳು, ಗಿಡ್ಡದಾದ ಕಾಲು, ಕೈಯಲ್ಲಿ ಸಣ್ಣಕತ್ತಿ, ದೇಹಕ್ಕಿಂತಲೂ ದೊಡ್ಡದಾದ ಶಿಶ್ನ ಮಾಡಿರುತ್ತಾರೆ. ಈ ಬೊಂಬೆಯನ್ನು ಪೂರ್ಣ ಬೇವಿನಸೊಪ್ಪು, ಹೂಗಳಿಂದ ಅಲಂಕಾರಗೊಂಡ ಪುಟ್ಟಿಯಲ್ಲಿಟ್ಟುಕೊಂಡು, ಬಾರಿಕರ ಮಹಿಳೆಯರು ತಲೆಯ ಮೇಲೆ ಹೊತ್ತು ಊರೂರು ಸುತ್ತುತ್ತಾರೆ. ಜೋಕುಮಾರನನ್ನು ಹೊತ್ತು ಊರಾಡುವ ಹಕ್ಕು ವಂಶಪಾರ್ಯಂಪರ್ಯವಾಗಿ ಈ ಮಹಿಳೆಯರು ಪಡೆದಿದ್ದಾರೆ. ಇವರನ್ನು ಜೋಕುಮಾರನ ಸೂಳೆಯರು ಎಂಬುದಾಗಿಯೂ ಕರೆಯುತ್ತಾರೆ. ಇಲ್ಲಿ ಪುರುಷ ದೈವ ಸ್ತ್ರೀಯರಿಂದ ಪೂಜಿಸಲ್ಪಡುವುದು ಗಮನಾರ್ಹವಾಗಿದೆ. ಇವರು ಒಂದು ಗುಂಪನ್ನು ರಚಿಸಿಕೊಂಡು, ಅವರದ್ದೇ ಧಾಟಿಯಲ್ಲಿ ಹಾಡುತ್ತಾ ಮನೆ ಮನೆಗಳಿಗೆ ಹೊತ್ತು ಸಂಚರಿಸುತ್ತಾರೆ. ಪ್ರತಿ ಮನೆಯವರಿಂದ ಉಪ್ಪು, ಎಣ್ಣೆ, ಒಣಮೆಣಸಿನಕಾಯಿ, ಬೆಣ್ಣೆ, ತುಪ್ಪ, ಧಾನ್ಯಗಳನ್ನು ಪಡೆಯುತ್ತಾರೆ. ಇದಕ್ಕೆ ಪ್ರತಿಯಾಗಿ ಜೋಕುಮಾರನನ್ನು ಹೊತ್ತವರು ಬೇವಿನ ಎಲೆ, ಕಪ್ಪು ಆಧಾರವನ್ನು ನೀಡುತ್ತಾರೆ. ಇದನ್ನು ಜೋಕುಮಾರನ ಆಶೀರ್ವಾದ ಎಂಬುದಾಗಿ ನಂಬುತ್ತಾರೆ. ಬಾರಿಕಾರರಿಗೆ ಇದು ಉಪವೃತ್ತಿ ಅಲ್ಲವಾದರೂ, ಪುಟ್ಟಿ ಹೊತ್ತು ಊರೂರು ತಿರುಗುವ ಸಂಪ್ರದಾಯ ವಂಶ ಪಾರ್ಯಂಪರ್ಯವಾಗಿ ಬಂದಿರುವಂತಹದ್ದು. ಈ ರೀತಿಯ ಸಂಪ್ರದಾಯ ಅಲೆಮಾರಿ ಸಂಸ್ಕೃತಿಯನ್ನು ನೆನಪಿಗೆ ತರುತ್ತದೆ. ಜೋಕುಮಾರ ಅತಿಕಾಮಿಯಾಗಿ ಅಲೆದಿರುವುನೆಂಬುದರ ಸಾಂಕೇತಿಕ ರೂಪವೂ ಹೌದು. ಜೋಕುಮಾರನನ್ನು ಹೊತ್ತವರು. ಏಳು ದಿನ, ಏಳು ಹಳ್ಳಿಗಳನ್ನು ತಿರುಗಬೇಕೆಂಬ ನಿಯಮವಿದೆ. ಹುಟ್ಟಿದ ಏಳು ದಿನದಲ್ಲಿ ಆತ ಪಡೆದುಕೊಂಡ ಶಕ್ತಿ, ಸಾಮರ್ಥ್ಯ ಗಳಿಂದ ಸತ್ಕಾರಕ್ಕೆ ಭಾಜನನಾಗುತ್ತಾನೆ.

ಆಚರಣೆಯ ಕೊನೆಯ ದಿನದ ರಾತ್ರಿ ಮಾದಿಗರ ಕೇರಿಯ ಆಯ್ದ ಸ್ಥಳದಲ್ಲಿಟ್ಟು, ಅದರ ಸುತ್ತಲೂ ಮುಳ್ಳಿನ ಕಂಟಿಗಳನ್ನಿಟ್ಟು, ಹೆಣ್ಣುಮಕ್ಕಳು ಅದರ ಸುತ್ತಲೂ ಹಾಡುತ್ತ ಸುತ್ತುತ್ತಾರೆ. ಹೀಗೆ ಸುತ್ತುವ ಸಂದರ್ಭದಲ್ಲಿ ಹೆಣ್ಣುಮಕ್ಕಳ ಸೀರೆಯ ಸೆರಗಿಗೆ ಮುಳ್ಳುತಾಗಿದಾಗ, ಗಂಡಸರು ತಮ್ಮ ಹೆಂಗಸರ ಸೆರಗನ್ನು ಜೋಕುಮಾರ ಎಳೆದನೆಂದು ಭಾವಿಸಿ ಒನಕೆಯಿಂದ ಬಡಿದು ಸಾಯಿಸುತ್ತಾರೆ. ಜೋಕುಮಾರ ಮೂರ್ತಿಯ ರುಂಡ ಅಂಗಾತ ಬಿದ್ದರೆ ಸುಖದ ಕಾಲವೆಂತಲೂ, ಬೋರಲಾಗಿ ಬಿದ್ದರೆ ದುಃಖದ ಕಾಲವೆಂತಲೂ ನಂಬುತ್ತಾರೆ. ಜೋಕುಮಾರನ ರುಂಡ, ಮುಂಡಗಳನ್ನು ಆಯ್ದು, ಅಗಸರು ಬಟ್ಟೆ ಒಗೆಯುವ ಹೊಳೆಯ ಕಲ್ಲಿನಡಿ ಹಾಕಿ, ಅದರ ಜೊತೆ ಕಪ್ಪೆಯನ್ನಿಟ್ಟು, ಬಂಡೆಗೆ ಪೂಜಿಸಿ, ಅಂತಿಮ ನಮನ ಸಲ್ಲಿಸಿ ತಿರುಗಿ ನೋಡದೆ ವಾಪಸ್ಸು ಬರುತ್ತಾರೆ. ಜೋಕುಮಾರ ಸತ್ತ ನಂತರ ಮೂರು ದಿನ ಸೂತಕವಿರುತ್ತದೆ. ಈ ಅವಧಿಯಲ್ಲಿ ಅಗಸರು ಬಟ್ಟೆ ಒಗೆಯಲು ಹೋಗುವಂತಿಲ್ಲ. ಕಪ್ಪೆಯ ವಟಗುಟ್ಟುವಿಕೆ ಜೋಕುಮಾರನ ನರಳುವಿಕೆ ಎಂದು ಭಾವಿಸುತ್ತಾರೆ. ನಾಲ್ಕನೇ ದಿನದಂದು ಜೋಕುಮಾರನ ವಿಧಿ ಕ್ರಿಯೆಗಳನ್ನು ಮಾಡಿ ಅಗಸರು ತಮ್ಮ ದೈನಂದಿನ ಕಾರ್ಯವನ್ನು ಆರಂಭಿಸುತ್ತಾರೆ.

ಜೋಕುಮಾರನ ಹುಟ್ಟಿನ ಬಗೆಗೆ ಈ ರೀತಿಯ ಐತಿಹ್ಯವಿದೆ: ಜೋಕ ಮತ್ತು ಎಲೆಗೌರಿ ಎಂಬ ದಂಪತಿಗಳು ಮಹಾನ್ ಶಿವಭಕ್ತರಾಗಿದ್ದರು. ಈ ದಂಪತಿಗಳಿಗೆ ಬಹಳ ದಿನಗಳವರೆಗೆ ಮಕ್ಕಳಾಗದ ಕಾರಣ ಶಿವನನ್ನು ಕುರಿತು ಪ್ರಾರ್ಥಿಸಿದರು. ಇವರ ಪ್ರಾರ್ಥನೆಗೆ ಒಲಿದ ಶಿವನು, ಶೀಘ್ರ ಬೆಳವಣಿಗೆ ಹಾಗೂ ಏಳು ದಿನಗಳ ಆಯಸ್ಸು ಇರುವ ಮಗುವನ್ನು ಕರುಣಿಸಿದನು. ಒಮ್ಮೆ ಮಳೆಯಿಲ್ಲದೆ ಭೀಕರ ಬರಗಾಲ ಬಂದು ಬೆಳೆಗಳೆಲ್ಲಾ ಒಣಗಿ ಜನರ ಸಂಕಟ ಮುಗಿಲು ಮುಟ್ಟಿತು. ಆಗ ಜೋಕುಮಾರ ತನ್ನ ಕುದುರೆಯನ್ನೇರಿ ಹೊಲ-ಗದ್ದೆಗಳಲ್ಲಿ ಸಂಚಾರ ಹೊರಡುತ್ತಾನೆ. ಅವನು ತನ್ನ ಮೇಲು ಹೊದಿಕೆಯನ್ನು ಒಮ್ಮೆ ಜೋರಾಗಿ ಬೀಸಿದಾಗ, ಅದರ ಬಿರುಸಿಗೆ ಚದುರಿದ ಮೋಡಗಳೆಲ್ಲ ಮಳೆ ಸುರಿಸುತ್ತವೆ. ಕೆರೆ, ಹಳ್ಳಗಳೆಲ್ಲಾ ತುಂಬಿ ಬೆಳೆಗಳು ಸಮೃದ್ಧವಾಗುತ್ತವೆ. ಇದರಿಂದ ಸಂತಸಗೊಂಡ ಜೋಕುಮಾರ ಸಂಚರಿಸುವಾಗ ದಾರಿ ಮಧ್ಯದಲ್ಲಿ ಸುಂದರವಾದ ಅಗಸರ ಯುವತಿಯನ್ನು ಮೋಹಿಸುತ್ತಾನೆ. ಇದನ್ನು ಸಹಿಸದ ಯುವತಿಯ ತಂದೆ ಜೋಕುಮಾರನ ತಲೆಯನ್ನು ಕತ್ತರಿಸಿ ನದಿಗೆ ಎಸೆಯುತ್ತಾನೆ. ಆ ತಲೆಯು ಒಬ್ಬ ಬೆಸ್ತನಿಗೆ ದೊರಕುತ್ತದೆ. ಆತನು ಜೋಕುಮಾರನನ್ನು ಗುರುತಿಸಿ, ತಮ್ಮ ಬೆಳೆಗಳನ್ನು ರಕ್ಷಿಸಿ ತಮ್ಮ ಬದುಕಿಗೆ ಆಧಾರವಾಗಿದ್ದವನ ತಲೆಯನ್ನು ಊರಿಗೆ ತರುತ್ತಾನೆ. ಊರವರೆಲ್ಲ ಸೇರಿ ಪೂಜೆ ಸಲ್ಲಿಸುತ್ತಾರೆ. ಅಂದಿನಿಂದ ಜೋಕುಮಾರನ ಪೂಜೆ ಆಚರಣೆಗೆ ಬಂದಿತೆಂಬ ಪ್ರತೀತಿ ಇದೆ.

ಜೋಕುಮಾರ ಸತ್ತ ಮರುದಿನ, ಜೋಕುಮಾರನಿಗೆ ಒಂದು ಕುರಿಯನ್ನು ಬಲಿ ನೀಡಿ, ಹೊಲಗಳಿಗೆ ಅದರ ರಕ್ತದಿಂದ ರಕ್ತ ಚರಗ ಚೆಲ್ಲುತ್ತಾರೆ. ಇಂಥ ಬಲಿ ನೀಡಿಕೆಯ ಕುರುಹಾಗಿ ಜೋಕುಮಾರ ಆರಾಧಿಸಲ್ಪಡುತ್ತಾನೆ. ಈ ಹಿನ್ನೆಲೆಯಲ್ಲಿ ಜೋಕುಮಾರ ಸತ್ತ ನಂತರ ಮಳೆಯಾಗುತ್ತದೆಂಬ ನಂಬಿಕೆ ಹುಟ್ಟಿರುವ ಸಾಧ್ಯತೆ ಇದೆ. ಆದ್ದರಿಂದ ಜೋಕುಮಾರನ ವೀರ್ಯವನ್ನು ಭೂಮಿಯಲ್ಲಿ ಚೆಲ್ಲಾಡಿದರೆ, ಆಗ ಭೂಮಿ ಗರ್ಭಧರಿಸಿ ಬೆಳೆಗಳ ಮೂಲಕ ಫಲವಂತಿಕೆ ನೀಡುವಳೆಂದು ನಂಬುತ್ತಾರೆ. ಭಾದ್ರಪದ ಮಾಸದಲ್ಲಿ ಹೊಲಗಳಲ್ಲಿ ತೆನೆಯ ಮೇಲೆ ಕುಳಿತ ಮಂಜಿನ ನೊರೆ ಜೋಕುಮಾರನ ವೀರ್ಯ ಎಂಬುದಾಗಿ ರೈತರು ನಂಬುತ್ತಾರೆ. ಮಕ್ಕಳಿಲ್ಲದ ಬಂಜೆಯರು ಜೋಕುಮಾರನಿಗೆ ಹರಕೆ ಹೊತ್ತರೆ ಮಕ್ಕಳಾಗುತ್ತವೆಂಬ ನಂಬಿಕೆ ಹೆಚ್ಚು ಪ್ರಚಲಿತದಲ್ಲಿದೆ.

ರೈತರು ತಮ್ಮ ಹೊಲ, ಗದ್ದೆಗಳಲ್ಲಿ ಮಣ್ಣಿನ ಗಡಿಗೆಗೆ ಬಿಳಿಬಣ್ಣ ಬಳಿದು, ಅದಕ್ಕೆ ರುಂಡ ಆಕಾರದ ಚಿತ್ರ ಬರೆದು, ಮುಖದ ಮೇಲೆ ದಪ್ಪ ಮೀಸೆಗಳನ್ನು ಬರೆದು, ಹಳೆಯ ಬಟ್ಟೆಯಿಂದ ಜೋಕುಮಾರನ ಆಕೃತಿ ಮಾಡಿ, ಬೆದರು ನಿಲ್ಲಿಸುತ್ತಾರೆ. ಜೋಕುಮಾರನ ವಿಕಾರ ರೂಪಕ್ಕೆ ಹೊಲದ ಪೈರನ್ನು ತಿನ್ನಲು ಬರುವ ಪಕ್ಷಿಗಳು ಹೆದರಿ ಓಡುತ್ತವೆ. ಜೋಕುಮಾರ ತನ್ನಲ್ಲಿಯ ಸತ್ವವನ್ನು ಭೂಮಿಯಲ್ಲಿ ಹರಡುತ್ತಾನೆ. ಆತನ ಇರುವಿಕೆಯಿಂದ ಬೆಳೆ ಸಮೃದ್ಧಿಯಾಗಿ ಬರುತ್ತದೆಂಬ ನಂಬಿಕೆ ಇದೆ. ಮಳೆ ದೇವತೆಯಾದ ಜೋಕುಮಾರನ ಆಚರಣೆಯಿಂದ ಕಾಲಕ್ಕೆ ಸರಿಯಾಗಿ

ಮಳೆ ಒಂದು ರೈತರ ಕಷ್ಟ ನಿವಾರಣೆಯಾಗುವುದೆಂಬ ಆಶಯ ಆಚರಣೆಯ ಹಿನ್ನೆಲೆಯಾಗಿ ಕಂಡುಬರುತ್ತದೆ.

**೫. ಕ್ಯಾತಪ್ಪ, ಚಂಗಳೀಕಮ್ಮರ ಆಚರಣೆ**

ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿಯಲ್ಲಿ ನಾಗರಪಂಚಮಿಯಾದ ಮರುದಿನ ಕ್ಯಾತಪ್ಪ, ಚಂಗಳೀಕಮ್ಮರ ಆಚರಣೆ ನಡೆಯುತ್ತದೆ. ಬಾರೀಕಾರ ಸಮುದಾಯದ ಎರಡು ಬೇರೆ ಬೇರೆ ಮನೆಗಳಲ್ಲಿ ಇವರಿಬ್ಬರ ಜನನವಾಗುತ್ತದೆ. ಈ ಎರಡು ಮನೆಗಳಿಂದ ಮಣ್ಣಿನ ಮೂರ್ತಿಗಳನ್ನು ಒಂದೆಡೆ ತಂದು ಪ್ರತಿಷ್ಠಾಪಿಸುತ್ತಾರೆ. ದಂಪತಿಗಳನ್ನು ವಿವಿಧ ಹೂಗಳಿಂದ ಅಲಂಕರಿಸಿ, ಪೂಜಿಸಿ, ನೈವೇದ್ಯ ಅರ್ಪಿಸುತ್ತಾರೆ. ಸಾಯಂಕಾಲ ವಿವಿಧ ವಾದ್ಯಗಳೊಂದಿಗೆ ಮೆರವಣಿಗೆ ಮೂಲಕ ನದಿಯಲ್ಲಿ ವಿಸರ್ಜಿಸುತ್ತಾರೆ. ಜೋಕುಮಾರನಂತೆ ಖ್ಯಾತಪ್ಪನು ಮಳೆ ದೈವವಾಗಿದ್ದಾನೆ. ಈತನ ಜೀವಿತಾವಧಿ ಒಂದು ದಿನ ಮಾತ್ರ. ಜೋಕುಮಾರ ದುರಂತ ನಾಯಕನಾದರೆ, ಖ್ಯಾತಪ್ಪ ಶಾಂತ ಸ್ವರೂಪಿಯಾಗಿದ್ದಾನೆ. ಸದ್ದು, ಗದ್ದಲದ ನಡುವೆ ಆಚರಣೆಗೊಳ್ಳುವ ಗಣಪ, ದುರಂತ ನಾಯಕನಾಗಿ ಆಚರಣೆಗೊಳ್ಳುವ ಜೋಕುಮಾರ ಇವರಿಬ್ಬರ ನಡುವೆ ನಿಶ್ಯಬ್ಧವಾಗಿ ಆಚರಣೆಗೊಳ್ಳುವ ಕ್ಯಾತಪ್ಪ ಇವರೆಲ್ಲ ಕೃಷಿಕರ ಆಚರಣೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಪಡೆದಿದ್ದಾರೆ.

**೬. ವಟ್ಲು ಹೊಡೆಯುವ ಆಚರಣೆ**

ಶ್ರಾವಣಮಾಸದ, ಕೃಷ್ಣ ಪಕ್ಷದ ಎರಡನೆಯ ದಿನದಂದು ಶ್ರೀಕೃಷ್ಣ ಜನ್ಮಾಷ್ಟಮಿಯನ್ನು ಆಚರಿಸಲಾಗುತ್ತದೆ. ಇದು ಭಾರತದಾದ್ಯಂತ ಆಚರಿಸಲ್ಪಡುತ್ತದೆ. ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿಯಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿ ಹಿನ್ನೆಲೆಯಲ್ಲಿ ಅಂದು ವಟ್ಲು ಹೊಡೆಯುವ ಆಚರಣೆ ಇದೆ. ಅಂದು ಮಣ್ಣಿನಿಂದ ತಯಾರಿಸಿದ ಕೃಷ್ಣನಮೂರ್ತಿ ಪೂಜಿಸಲ್ಪಡುವುದು. ಸಾಯಂಕಾಲ ೨೦ ಅಡಿ ಎತ್ತರದ ಕಟ್ಟಿಗೆಯ ನುಣುಪಾದ ಕಂಬವನ್ನು ನಿಲ್ಲಿಸಿ, ಅದರ ಮೇಲ್ತುದಿಯಲ್ಲಿರುವ ಚಕ್ರಾಕೃತಿಗೆ ಹಾಲು, ಮೊಸರು, ಬೆಣ್ಣೆಯ ಗಡಿಗೆಗಳನ್ನು ಕಟ್ಟಿರುತ್ತಾರೆ. ಈ ರೀತಿ ನಿರ್ಮಿಸಿದ ಕಂಬ ತೀರ ನುಣುಪಾಗಿದ್ದು, ಸುಲಭವಾಗಿ ಏರಲು ಬರುವುದಿಲ್ಲ. ಕಂಬ ಏರುವವರು ದಾಸ ಮನೆತನದವರು. ಏರುವಾಗ ಎಲ್ಲಾ ಕಡೆಯಿಂದಲೂ ಬಣ್ಣದ ನೀರನ್ನು ಎರಚುತ್ತಾರೆ. ಏರಿದ ವ್ಯಕ್ತಿ ಬಣ್ಣದ ನೀರಿನಿಂದ ತಪ್ಪಿಸಿಕೊಂಡು ಕಂಬ ಏರಿ ಚಕ್ರಾಕೃತಿಗೆ ಕಟ್ಟಲಾಗಿದ್ದ, ಹಾಲು, ಮೊಸರು, ಬೆಣ್ಣೆಗಳ ಗಡಿಗೆಗಳನ್ನು, ಮಜ್ಜಿಗೆ ಕಡಗೋಲಿನಿಂದ ಪಟಪಟನೆ ಒಡೆಯುತ್ತಾನೆ. ನಂತರ ಅದರ ಜೊತೆಗಿದ್ದ ಚಕ್ಕುಲಿ, ವಡೆಗಳನ್ನು ತಿನ್ನುವುದರ ಮೂಲಕ ವಿಜಯೋತ್ಸವ ಆಚರಿಸುತ್ತಾರೆ. ಇದು ಅಪ್ಪಟ ಗ್ರಾಮೀಣ ಶೈಲಿಯ ಆಚರಣೆಯಾಗಿದೆ.

ಈ ಆಚರಣೆಯಲ್ಲಿ ಮನೋರಂಜನಾತ್ಮಕವಾದ ಶ್ರೀಕೃಷ್ಣನ ಬಾಲ್ಯದ ವರ್ತನೆಗಳ ಅನುಕರಣೆಯಿದೆ. ಕಂಬ ಏರುವ ದಾಸಪ್ಪನ ವಂಶಜರು ವೈಷ್ಣವ ಪಂಥದ ಅನುಯಾಯಿಗಳಾಗಿದ್ದಾರೆ. ಈ ಆಚರಣೆಯಲ್ಲಿ ಪಾಲ್ಗೊಳ್ಳುವ ವೈಶ್ಯ ಮತ್ತು ಬ್ರಾಹ್ಮಣ ಕುಟುಂಬಗಳ

ಮೂಲ ನೆಲೆ ಹಿಂದೆ ನಾರಾಯಣದೇವರ ಕೆರೆಯಾಗಿತ್ತು. ತುಂಗಭದ್ರಾ ಜಲಾಶಯದ ಹಿನ್ನೀರಿನಲ್ಲಿ ಊರು ಮುಳುಗಿದಾಗ ಈ ಕುಟುಂಬಗಳು ಮರಿಯಮ್ಮನಹಳ್ಳಿಯಲ್ಲಿ ಪುನರ್ವಸತಿ ಪಡೆದಿವೆ. ಇವರು ಹೆಚ್ಚಾಗಿ ತೆಲುಗು ಭಾಷಿಕರಾಗಿದ್ದಾರೆ. ವಟ್ಲು ಶಬ್ದ ತೆಲುಗು ಮೂಲದ್ದಾಗಿದೆ. ಇದು ಕನ್ನಡದಲ್ಲಿ 'ನೆಲುವು' ಎಂಬ ಅರ್ಥ ಪಡೆದಿದೆ. ಇದನ್ನು ಹಗ್ಗದಿಂದ ತಯಾರಿಸಲಾಗಿದ್ದು, ಒಳಮನೆಯ ಮೇಲ್ಛಾವಣಿಗೆ ತೂಗು ಹಾಕಿರುತ್ತಾರೆ. ಇದರಲ್ಲಿ ಹೈನು ಹಾಗೂ ಅಡುಗೆ ಪದಾರ್ಥಗಳನ್ನು ಗಡಿಗೆಗಳಲ್ಲಿ ತುಂಬಿಸಿ ಇಡುತ್ತಾರೆ. ಇದಕ್ಕೆ ಗಾಳಿ ತಗಲುವುದರಿಂದ ಹೈನು ಹಾಗೂ ಅಡುಗೆ ಪದಾರ್ಥಗಳು ಕೆಡವುದಿಲ್ಲ. ಬೆಕ್ಕು, ಕ್ರಿಮಿ-ಕೀಟಗಳಿಂದ ಆಹಾರ ಪದಾರ್ಥವನ್ನು ಸಂರಕ್ಷಿಸಿಡುವ ಸುಲಭ ಸಾಧನವಾಗಿದೆ. ಗಡಿಗೆ, ನೆಲುವು, ಕಡೆಗೋಲು ಹೈನು ಪದಾರ್ಥಗಳು ಪಶುಪಾಲಕ ಸಂಸ್ಕೃತಿಯ ಸಂಕೇತವಾಗಿ ಬಳಸಲ್ಪಡುತ್ತವೆ. ಸಂಸ್ಕೃತಿಯ ಪಳೆಯುಳಿಕೆಗಳಾದ ಈ ವಸ್ತುಗಳ ಮೇಲಿನ ಅಪ್ಯಾಯಮಾನತೆ ಹಾಗೂ ಆಚರಣೆಗಳಲ್ಲಿಯ ಸರಳತೆ ಇಲ್ಲಿ ಅಭಿವ್ಯಕ್ತಗೊಂಡಿದೆ.

ಸ್ಥಳೀಯರ ಪ್ರಕಾರ - ವಿಜಯನಗರ ಕಾಲದ ಪಾಳೇಗಾರನಾಗಿದ್ದ ಸೋಮಶೇಖರ ನಾಯಕನ ಕಾಲದಿಂದಲೂ ನಾರಾಯಣದೇವರಕೆರೆಯಲ್ಲಿ ವಟ್ಲು ಹೊಡೆಯುವ ಆಚರಣೆ ಇತ್ತು. ಅದು ರಾಜಪ್ರಭುತ್ವದ ಕಾಲದಲ್ಲಿ ನಡೆದ ವೈಷ್ಣವ ಪಂಥದ ಆಚರಣೆಯಾಗಿತ್ತು. ಆದರೆ ಇಂದು ಇತರ ಸಮುದಾಯದವರ ಪಾಲ್ಗೊಳ್ಳುವಿಕೆಯಿದೆ. ನಾರಾಯಣದೇವರಕೆರೆ ಜಲಾಶಯದಲ್ಲಿ ಮುಳುಗಿದಾಗ ಅಲ್ಲಿನ ಜನರೆಲ್ಲ ಮರಿಯಮ್ಮನಹಳ್ಳಿಯಲ್ಲಿ ವಸತಿ ನೆಲೆಯನ್ನು ಕಂಡುಕೊಂಡರೂ ವಟ್ಲು ಹೊಡೆಯುವ ಆಚರಣೆ ಮಾತ್ರ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡು ಬಂದಿದೆ. ಈ ಸಮುದಾಯದ ದೈವ ಶ್ರೀಕೃಷ್ಣನಾಗಿದ್ದಾನೆ. ಹೈನು ಪದಾರ್ಥಗಳು ಪಶುಪಾಲಕ ವರ್ಗದ ಸಮೃದ್ಧಿಯ ಕುರುಹಾಗಿ ಇಂದಿಗೂ ಉಳಿದುಕೊಂಡಿವೆ.

ವಟ್ಲು ಹೊಡೆಯುವ ಆಚರಣೆ, ಜನರ ಬದುಕಿನ ಸಂಘರ್ಷ, ಹೋರಾಟ, ಶೌರ್ಯ ಪ್ರದರ್ಶನಗಳನ್ನೊಳಗೊಂಡ ಮನೋರಂಜನಾತ್ಮಕ ಆಚರಣೆಯಾಗಿದೆ. ಆಧುನಿಕತೆಯ ಸೆಳೆತಕ್ಕೆ ಬಲಿಯಾಗದೇ ಶಿಷ್ಟತೆಯನ್ನು ಬದಿಗಿರಿಸಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಎಲ್ಲ ಸಮುದಾಯದವರ ಪಾಲ್ಗೊಳ್ಳುವಿಕೆಯಿಂದ ಸಂಭ್ರಮದಿಂದ ಆಚರಿಸಲ್ಪಡುತ್ತದೆ.

**೭. ಕೊಂಡ ಹಾಯುವ ಆಚರಣೆ**

ಜನಪದರಲ್ಲಿ ಪಂಚಭೂತಗಳ ದಿವ್ಯಸ್ವರೂಪವನ್ನು ಅರಿತು, ಅವುಗಳ ಆರಾಧಕರಾಗಿದ್ದಾರೆ. ವೈದಿಕ ಪರಂಪರೆಯ ಪ್ರಕಾರ ಅಗ್ನಿ ಸೃಷ್ಟಿ ಮೂಲವಾದುದೆಂದು ಕೆಡುಕಿನ, ವಿನಾಶದ ಚಿಹ್ನೆಯಾಗಿ ಸ್ವೀಕರಿಸಿದ್ದಾರೆ. ಜಗಳ, ಹೊಡೆದಾಟ, ಹಗೆತನವನ್ನು ಬೆಂಕಿಗೆ ಸಮೀಕರಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಅಗ್ನಿ ತುಳಿಯುವ ಆಚರಣೆ ವೀರಭದ್ರ ದೇವರ ಹುಟ್ಟಿನೊಂದಿಗೆ ತಳುಕು ಹಾಕಿಕೊಂಡಿದೆ. ಹೊಸಪೇಟೆಯ ಸಣ್ಣಕ್ಕಿ ವೀರಭದ್ರ ದೇವರ ಜಾತ್ರೆ ಮತ್ತು ಕಂಪ್ಲಿ ಹೋಬಳಿಯ ನಂ. ೩ ಸಣಾಪುರ ಗ್ರಾಮದ ವೀರಭದ್ರ ದೇವರ ಜಾತ್ರೆಯಲ್ಲಿ ಈ ಆಚರಣೆ ಕಂಡುಬರುತ್ತದೆ.

ಹೊಸಪೇಟೆಯಲ್ಲಿ ಯುಗಾದಿ ಪಾಡ್ಯದಂದು ಹಾಗೂ ಸಣಾಪುರದಲ್ಲಿ ಶಿವರಾತ್ರಿ ಆಗಿ ೧೧ ದಿನಕ್ಕೆ ಅಗ್ನಿಕೊಂಡ ಹಾಯುತ್ತಾರೆ.

ದೇವಸ್ಥಾನದ ಮುಂಭಾಗದಲ್ಲಿ ೧೨೮ ಅಂಗುಲ ಚೌಕಾಕಾರದ, ೫ ಅಡಿ ಅಗಲ, ೪ ಅಡಿ ಆಳದ ಅಗ್ನಿಕುಂಡ ನಿರ್ಮಿಸಿರುತ್ತಾರೆ. ಈ ಕುಂಡವನ್ನು ತೆಂಗಿನ ಗರಿ, ಕಬ್ಬಿನ ಗರಿ, ಬಾಳೆ ಗರಿ, ರಂಗೋಲಿಯಿಂದ ಅಲಂಕಾರ ಮಾಡಲಾಗಿರುತ್ತದೆ. ಕೊಂಡಕ್ಕಾಗಿ ಅರಳಿ, ಬೇವು, ಬನ್ನಿ ಮರಗಳನ್ನು ಕಡಿಯುವಂತಿಲ್ಲ. ಇನ್ನುಳಿದ ಮರಗಳ ಕಟ್ಟಿಗೆಗಳನ್ನು ಅಗ್ನಿಕುಂಡದಲ್ಲಿ ಹಾಕಲಾಗುತ್ತದೆ. ಕೊಂಡ ಹಾಯುವ ಮೊದಲು ಎರಡು ದಿನಗಳು ಪೂಜಾವಿಧಿಗಳು ನಡೆಯುತ್ತವೆ. ಸಂಜೆ ಗುಡಿಯ ಪೂಜಾರಿಯು ಕರ್ಪೂರದ ಜ್ಯೋತಿಯಿಂದ ಅಗ್ನಿಕುಂಡದ ಕಟ್ಟಿಗೆಗಳಿಗೆ ಅಗ್ನಿ ಸ್ಪರ್ಶ ಮಾಡುತ್ತಾನೆ. ಕಟ್ಟಿಗೆಗಳು ಇಡೀ ರಾತ್ರಿ ಉರಿದು ಕೆಂಡವಾಗುತ್ತವೆ. ಬೆಳಗ್ಗೆ ಸೂರ್ಯೋದಯದ ಮುನ್ನ ಮಂಗಲ ವಾದ್ಯಗಳೊಂದಿಗೆ ಗಂಗೆಯನ್ನು ಪೂಜಿಸಿ, ನಂತರ ಒಡಪು ಹೇಳುತ್ತಾ ಕೊಂಡ ಹಾಯುತ್ತಾರೆ. ಇಲ್ಲಿ ಶಸ್ತ್ರಧಾರಣೆ ನಡೆಯುತ್ತದೆ. ನೂಲಿನ ದಾರಕ್ಕೆ ೧೦೧ ಗಂಟುಗಳನ್ನು ಹಾಕಿ, ದಬ್ಬಣ ಆಕಾರದ ಶಸ್ತ್ರ ತಯಾರಿಸಿ ದವಡೆಯ ಚರ್ಮಕ್ಕೆ ಒಬ್ಬೊಬ್ಬರಾಗಿ ಪೋಣಿಸಿಕೊಳ್ಳುತ್ತಾರೆ. ಕೈ, ತುಟಿ, ಕಣ್ಣುಗಳಿಗೆ ಚಿಕ್ಕ ಚಿಕ್ಕ ಶಸ್ತ್ರ ಧರಿಸುತ್ತಾರೆ. ಒಡಪು ಹೇಳುವುದು, ವೀರಗಾಸೆಯವರು ವೀರಭದ್ರನಂತೆ ಕುಣಿಯುವುದು ಹೀಗೆ ಹಲವು ಆಚರಣೆಗಳು ವೀರಭದ್ರ ದೇವರ ಜಾತ್ರೆಯಲ್ಲಿ ಪ್ರಚಲಿತದಲ್ಲಿವೆ.

ವೀರಗಾಸೆಯವರು ಒಡಪನ್ನು ಹೇಳುತ್ತಾ ಆವೇಶಭರಿತರಾಗಿ ಭಕ್ತರ ದವಡೆ, ನಾಲಿಗೆ, ಎದೆಗೆ ಶಸ್ತ್ರದಿಂದ ಚುಚ್ಚುತ್ತಾರೆ. ನಂತರ ಶಸ್ತ್ರ ಚುಚ್ಚಿದ ಭಾಗಗಳಿಗೆ ದೈವದ ಹೆಸರಿನಲ್ಲಿ ವಿಭೂತಿಯನ್ನು ಲೇಪಿಸುತ್ತಾರೆ. ಬಾಯಿಗೆ ಶಸ್ತ್ರ ಹಾಕುವುದನ್ನು ಕೆಲವು ವಿದ್ವಾಂಸರು ಆಚರಣೆಯ ಹಿನ್ನೆಲೆಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಸಾಂಕೇತಿಕ ರೂಪ ಎಂದರೆ, ಈ ಆಚರಣೆಯಿಂದ ವ್ಯಕ್ತಿ ಶಾಂತಗೊಳ್ಳುತ್ತಾನೆ ಹಾಗೂ ದೈವದ ಹೆಸರಲ್ಲಿ ನೋವನ್ನು ಸಹಿಸುವ ಶಕ್ತಿ ಪಡೆಯುತ್ತಾನೆ ಎಂದು ಭಕ್ತರು ಹೇಳುತ್ತಾರೆ.

ವೀರಭದ್ರನ ಹುಟ್ಟಿನ ಬಗೆಗೆ ಈ ರೀತಿಯ ಐತಿಹ್ಯವಿದೆ.

ಅಷ್ಟದಿಕ್ಪಾಲಕರು, ಹರಿಹರ, ಬ್ರಹ್ಮ ಮೊದಲಾದವರು ದಕ್ಷ ಯಾಗಕ್ಕೆ ಬೆಂಬಲವಾಗಿ ನಿಂತಿರುತ್ತಾರೆ. ದಕ್ಷನ ಮಗಳಾದ ದಾಕ್ಷಾಯಿಣಿ, ಶಿವನ ಅಪ್ಪಣೆಯಿಲ್ಲದೆ ದಕ್ಷ ಯಾಗಕ್ಕೆ ಆಗಮಿಸಿ ಅಲ್ಲಿ ಅವಮಾನಿತಳಾಗಿ ಅಗ್ನಿಪ್ರವೇಶ ಮಾಡುತ್ತಾಳೆ. ಇದರಿಂದ ಕುಪಿತಗೊಂಡ ಶಿವ ಜಡೆ ಬಿಚ್ಚಿ ನೆಲಕ್ಕಪ್ಪಳಿಸುತ್ತಾನೆ. ದಕ್ಷನ ಮಿತಿ ಮೀರಿದ ಅಹಂನ್ನು ಸಹಿಸದ ಶಿವನು ತನ್ನ ಉರಿನೇತ್ರದಿಂದ ವೀರಭದ್ರನನ್ನು ಸೃಷ್ಟಿಸಿದನು. ಲೋಕಪಾಲಕ ವೀರಭದ್ರ, ಶಿವನ ಆಜ್ಞೆಯನ್ನು ಪಾಲಿಸಿ ದಕ್ಷ ಬ್ರಹ್ಮನ ತಲೆ ತೆಗೆದನು. ದಕ್ಷ ಬ್ರಹ್ಮನ ಹೆಂಡತಿಯಾದ ಪ್ರಸೂತಿ ದೇವಿಯ ಭಕ್ತಿಯ ಮನವಿಯನ್ನು ಮನ್ನಿಸಿ, ಯಜ್ಞ ಕುಂಡದ ಹತ್ತಿರ ಬಿದ್ದ ಕುರಿ ತಲೆಯನ್ನು ದಕ್ಷ ಬ್ರಹ್ಮನಿಗಿಟ್ಟು ಜೀವದಾನ ಮಾಡಿದನೆಂಬ ಐತಿಹ್ಯವಿದೆ. ಮರುಜೀವ ಪಡೆದ ದಕ್ಷನು ವೈದಿಕ

ಪರಂಪರೆಯಿಂದ, ಶೈವ ಪರಂಪರೆಗೆ ಪರಿವರ್ತನೆಗೊಂಡನು. ಹೀಗೆ ವೈದಿಕ ನೆಲೆಯ ವಿರೋಧ ವೀರಭದ್ರನ ಆಚರಣೆಯಲ್ಲಿ ಕಂಡುಬರುತ್ತದೆ.

ಶತ್ರು ನಿಶ್ಶಸ್ತ್ರನಾದಾಗ ಬಗ್ಗು ಬಡಿಯಬೇಕೆನ್ನುವಂತೆ, ಜಡವಾಗುತ್ತಿರುವ ಧರ್ಮವನ್ನು ಅಂತ್ಯಗೊಳಿಸಿ, ಹೊಸಧರ್ಮ ಸ್ಥಾಪಿಸುವುದು ವೀರಭದ್ರನ ಹುಟ್ಟಿನ ಉದ್ದೇಶವಾಗಿರಬೇಕೆಂದು ತಿಳಿಯುತ್ತದೆ. ವೀರಭದ್ರನು ತನ್ನ ಶಕ್ತಿ, ಸಾಮರ್ಥ್ಯಗಳಿಂದ ದೈವತ್ವವನ್ನು ಪಡೆದಿರುವುದು ಸತ್ಯ ಸಂಗತಿಯಾಗಿದೆ. ವೀರಭದ್ರನ ಉದಯ ದ್ರಾವಿಡ ಸಮುದಾಯಗಳ ಜಾಗೃತವಾದ ಪ್ರಜ್ಞಾ ಪರಂಪರೆಯನ್ನು ಕಟ್ಟಿಕೊಡುತ್ತದೆ.

ವೀರಭದ್ರ ದೇವರ ಜಾತ್ರೆಯಲ್ಲಿ ಕೊಂಡ ಹಾಯುವಾಗ, ಅಸ್ತ್ರ ಹಾಕುವಾಗ, ಗುಗ್ಗಳದ ಆಚರಣೆಗಳಲ್ಲಿ ಪುರವಂತಿಕೆ ಕುಣಿತ ಕಂಡುಬರುತ್ತದೆ. ಇದು ಶೈವ ಸಂಪ್ರದಾಯಕ್ಕೆ ಸೇರಿದ ಧಾರ್ಮಿಕ ಮೂಲದ ಜನಪದ ನೃತ್ಯವಾಗಿದೆ. ವೀರಗಾಸೆಯವರು ವೀರಭದ್ರನ ವೇಷವನ್ನು ಧರಿಸಿಕೊಂಡು, ಕತ್ತಿ ಝಳಪಿಸುತ್ತಾ, ವೀರಾವೇಶದಿಂದ ದಕ್ಷಯಾಗ, ವೀರಭದ್ರನ ಜನನ, ವೀರಭದ್ರನ ವಿಜಯಕ್ಕೆ ಸಂಬಂಧಿಸಿದ ಹಲವಾರು ಕುತೂಹಲಕಾರಿ ವಿಷಯಗಳನ್ನು ಪ್ರಚುರಪಡಿಸುತ್ತಾರೆ. ಇದಕ್ಕೆ 'ಒಡಪು' ಹೇಳುವುದು ಎಂದು ಕರೆಯುತ್ತಾರೆ. ಒಡಪು ಹೇಳುವವರು ಒಮ್ಮೊಮ್ಮೆ ಆವೇಶಭರಿತರಾಗಿ ಜ್ಞಾನ ತಪ್ಪಿ ಬೀಳುವುದುಂಟು. ಆಗ ಆ ವ್ಯಕ್ತಿಗೆ ತೆಂಗಿನಕಾಯಿ, ನಿಂಬೆಹಣ್ಣುಗಳಿಂದ ಇಳೆ ತೆಗೆಯುತ್ತಾರೆ. ಇದು ವಂಶ ಪಾರಂಪರಿಕ ಕಲೆಯಾಗಿದ್ದು, ಸಾಕ್ಷಾತ್ ವೀರಭದ್ರನ ಆಗಮನವಾದಂತೆ ಜನರು ಸಂಭ್ರಮಿಸುತ್ತಾರೆ. ಈ ಆಚರಣೆಯು ಆರ್ಯ, ದ್ರಾವಿಡ ಸಂಸ್ಕೃತಿಗಳ ಸಂಕರದಲ್ಲಿ ಉದಯಿಸಿದ್ದಾಗಿದೆ. ವೀರಭದ್ರನ ಆಚರಣೆಯಲ್ಲಿ ಅಗ್ನಿ ವಿರೋಧಿ ಧೋರಣೆಗಳಿವೆ. ಅಗ್ನಿ ತುಳಿಯುವಿಕೆಯಿಂದ ಅದು ಅಪಮೌಲ್ಯೀಕರಣಗೊಳ್ಳುತ್ತದೆ. ದಕ್ಷ ಮತ್ತು ಶಿವನ ನಡುವಿನ ಯಜ್ಞ ಸಂಘರ್ಷ ವೀರಭದ್ರನ ಆಚರಣೆಗೆ ಹೊಸ ಪರಂಪರೆಯನ್ನು ಹುಟ್ಟು ಹಾಕಿದೆ. ತನ್ನ ಸಮುದಾಯ ಉಪೇಕ್ಷೆಗೆ ಒಳಪಟ್ಟಾಗ, ಅನ್ಯರಿಂದ ಅವಮಾನಿಸಲ್ಪಟ್ಟಾಗ, ಅಂಥ ಸಮಯದಲ್ಲಿ ಯಜ್ಞ ಸಂಸ್ಕೃತಿಯನ್ನು ವಿರೋಧಿಸಿ ಶೈವ ಸಂಸ್ಕೃತಿಯನ್ನು ಪ್ರತಿಪಾದಿಸಿದವನು ವೀರಭದ್ರ. ಈ ಸಾಂಸ್ಕೃತಿಕ ವೀರನ ಸಮುದಾಯಿಕ ಪ್ರಜ್ಞೆ ಇಂದಿನ ವೀರಗಾಸೆಯವರ ಪುರವಂತಿಕೆ ಕುಣಿತದಲ್ಲಿ ಕಂಡುಬರುತ್ತದೆ.

**೮. ಕೊಂಡ ಪವಾಡದ ಆಚರಣೆ**

ಸ್ತ್ರೀ ದೈವಗಳ ಆಚರಣೆಯಲ್ಲಿ ಕೊಂಡ ಹಾಯುವ ಸಂಪ್ರದಾಯವಿದೆ. ಕಮಲಾಪುರ ಹೋಬಳಿಯ ಪಾಪಿನಾಯಕನಹಳ್ಳಿ ಗ್ರಾಮದ ಗ್ರಾಮದೇವತೆ ಅಂಕ್ಲಮ್ಮ ದೇವಿಯ ಜಾತ್ರೆಯ ದಿನದಂದು ಕೊಂಡ ಪವಾಡ ನಡೆಯುತ್ತದೆ. ದೇವಿಯ ಗುಡಿಯ ಮುಂದೆ ೧೦ ಅಡಿ ಉದ್ದ, ೮ ಅಡಿ ಅಗಲದ ಕೊಂಡ ನಿರ್ಮಿಸಿರುತ್ತಾರೆ. ಬೆಳಿಗ್ಗೆ ಗಂಗೆ ಸ್ಥಳಕ್ಕೆ ಹೋಗಿ ಬಂದ ನಂತರ, ಗುಡಿಯ ಪೂಜಾರಿ ಪ್ರಥಮವಾಗಿ ಕೊಂಡ ಹಾಯುತ್ತಾನೆ. ನಂತರ, ದೇವಿಗೆ ಹರಕೆ ಹೊತ್ತ ಭಕ್ತರು ಬರಿಗಾಲಿನಲ್ಲಿ ಕೊಂಡ ಹಾಯುತ್ತಾರೆ. ದೇವಿಯು ಪೂಜಾರಿಯ ಮೈಮೇಲೆ ಆವಾಹನೆಯಾಗಿರುತ್ತಾಳೆ. ಆ ವರ್ಷದ ಒಳಿತು, ಕೆಡಕುಗಳ ಬಗ್ಗೆ ಭಕ್ತರ ಪ್ರಶ್ನೆಗಳಿಗೆ ದೈವದಿಂದ ಉತ್ತರ ದೊರೆಯುತ್ತದೆ. ಆ ರೀತಿ ವರ್ಷ ಭವಿಷ್ಯದ ಹೇಳಿಕೆಯು ಮುಂಬರುವ ದಿನಗಳಲ್ಲಿ

ಕಷ್ಟ, ಸುಖಗಳನ್ನು ಅನುಭವಿಸಲು ಭಕ್ತರನ್ನು ಮಾನಸಿಕವಾಗಿ ಸದೃಢರನ್ನಾಗಿಸುತ್ತದೆ. ಸ್ತ್ರೀ ದೈವಗಳು ಮಾತೃಪ್ರಧಾನ ಸಂಸ್ಕೃತಿಯನ್ನು ಸಂಕೇತಿಸುತ್ತದೆ. ಅಗ್ನಿಯು ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾಗಿ ನಿಲ್ಲುತ್ತದೆ. ಕೃಷಿ ಹಾಗೂ ಗ್ರಾಮದೈವಗಳು ಜಲ ಸ್ವರೂಪಿಯಾಗಿ ಮಾತೃಸ್ಥಾನ ಪಡೆದಿವೆ. ಪ್ರಪಂಚದ ಎಲ್ಲಾ ನದಿ ಸಂಸ್ಕೃತಿಗಳು ಆರಂಭ ಕಾಲದಲ್ಲಿ ಮಾತೃಪ್ರಧಾನ ಸಮಾಜಗಳಾಗಿದ್ದು, ನೀರನ್ನು ಸಾಂಕೇತಿಕ ಪ್ರತಿನಿಧಿಯನ್ನಾಗಿಸಿದ್ದವು. ಇಂದಿಗೂ ಗಂಗೆಯನ್ನು ಪೂಜಿಸಿದ ನಂತರ ಅಗ್ನಿ ತುಳಿಯುವುದು ಮಾತೃಪ್ರಧಾನ ಸಂಸ್ಕೃತಿಗೆ ಪ್ರಾಧಾನ್ಯತೆಯಾಗಿ ಗುರುತಿಸಬಹುದು.

## ೯. ಗುಳೆ ಲಕ್ಕಮ್ಮನ ಜಾತ್ರೆ

ಲಕ್ಕಮ್ಮ ಜಾನುವಾರುಗಳ ಅಧಿದೇವತೆ. ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ಗರಗ, ಗೊಲ್ಲರಹಳ್ಳಿ ಗ್ರಾಮಗಳಲ್ಲಿ ಮೂರು ವರ್ಷಕ್ಕೊಮ್ಮೆ ಗುಳೆ ಹೋಗುವುದರ ಮೂಲಕ ಲಕ್ಕಮ್ಮನ ಜಾತ್ರೆ ಆಚರಿಸುತ್ತಾರೆ. ಸಾಂಕ್ರಮಿಕ ರೋಗ ಅಥವಾ ಪ್ರಾಕೃತಿಕ ವಿಕೋಪಕ್ಕೆ ಬಲಿಯಾಗದಿರಲೆಂಬ ಉದ್ದೇಶವನ್ನಿಟ್ಟುಕೊಂಡು ಗ್ರಾಮದ ಜನ ಒಂದೆಡೆಯಿಂದ, ಇನ್ನೊಂದೆಡೆಗೆ ವಲಸೆ ಹೋಗುವುದೇ ಗುಳೆ ಹೋಗುವುದು. ಗ್ರಾಮದೇವತೆಗಳ ಹಬ್ಬ ಊರ ಒಳಗೆ ಆಚರಣೆಗೊಂಡರೆ, ಈ ದೇವತೆಗೆ ಊರ ಹೊರಗೆ ಆಚರಣೆ ನಡೆಯುವುದು ಇಲ್ಲಿಯ ವೈಶಿಷ್ಟ್ಯವಾಗಿದೆ. ಗರಗ ಗ್ರಾಮದಲ್ಲಿ ಗುಳೆ ಲಕ್ಕಮ್ಮನ ಜಾತ್ರೆಯನ್ನು ಮುಂಗಾರು ಬಿತ್ತನೆ ಮುಂಚೆ ಅಂದರೆ ಕೃತ್ತಿಕಾ ಮಳೆಯ ೨ನೇ ಪಾದ, ೩ನೇ ಪಾದದಲ್ಲಿ ಆಚರಿಸಿದರೆ, ಗೊಲ್ಲರಹಳ್ಳಿಯಲ್ಲಿ ಹಂಪಿ ಹುಣ್ಣಿಮೆ ಆಗಿ ಮೂರು ಅಥವಾ ೫ನೇ ದಿನದ ಮಂಗಳವಾರದಂದು ಆಚರಿಸುತ್ತಾರೆ. ಗುಳೆ ಹೋಗುವ ಹಿಂದಿನ ದಿನ ದೇವಿಯನ್ನು ಪ್ರತಿಷ್ಠಾಪಿಸಿ, ಉಡಿ ತುಂಬಿ ಪೂಜಿಸುತ್ತಾರೆ. ಭಕ್ತರಿಂದ ಪೂಜಿಸಲ್ಪಟ್ಟ ಲಕ್ಕಮ್ಮ ಉತ್ಸವದ ಮೂಲಕ ಊರಬಿಟ್ಟು ಹೊರಡುತ್ತಾಳೆ. ಅಂದು ಅಬಾಲವೃದ್ಧರಾದಿಯಾಗಿ, ಜಾನುವಾರುಗಳ ಸಮೇತ ಯಾರ ಬಲತ್ಕಾರವಿಲ್ಲದೆ ಇಡೀ ಊರೇ ಗುಳೆ ಹೋಗುತ್ತದೆ. ಆ ದಿನ ಯಾರೂ ಗ್ರಾಮ ಪ್ರವೇಶಿಸದಂತೆ ಪಾರಿ ಬೇಲಿಯನ್ನು ಹಾಕಿ ಬಂದೋಬಸ್ತು ಮಾಡಲಾಗಿರುತ್ತದೆ. ಮನೆಗಳಿಗೆ ಬೀಗ ಹಾಕದಿದ್ದರೂ ಯಾವುದೇ ಕಳ್ಳತನ ನಡೆಯುವುದಿಲ್ಲ. ಇದಕ್ಕೆ ಕಾರಣ ದೇವಿಯ ಉಗ್ರಕೋಪಕ್ಕೆ ಬಲಿಯಾಗುತ್ತೇವೆ ಎಂಬ ಭಯ. ಅಂದು ಊರಿಗೆ ಯಾರಾದರೂ ಅನಾಮಿಕರು, ಬಂಧುಗಳು ಪ್ರವೇಶಿಸದಿರಲೆಂದು ಊರಿನ ಅಗಸಿ ಬಾಗಿಲಲ್ಲಿ ಪಹರೆಗೆ ನಿಯೋಜನೆಗೊಂಡ ಯುವಕರು ಮಾಹಿತಿ ನೀಡುತ್ತಾರೆ.

ಇತ್ತ ಗುಳೆ ಹೋದವರು ದೇವಿಯ ಪಲ್ಲಕ್ಕಿಯನ್ನು ಮರದ ನೆರಳಲ್ಲಿ ಪ್ರತಿಷ್ಠಾಪಿಸಿ, ತಾವು ತಂದ ದವಸ-ಧಾನ್ಯಗಳಿಂದ ಅಡುಗೆ ತಯಾರಿಸಿ ಸಾಮೂಹಿಕವಾಗಿ ಭೋಜನ ಮಾಡುತ್ತಾರೆ. ಸಂಜೆ ದೇವಿಯೊಂದಿಗೆ ಉತ್ಸವ ಗ್ರಾಮ ಪ್ರವೇಶಿಸುತ್ತದೆ. ಗ್ರಾಮದ ಸುತ್ತ ಸಮೃದ್ಧಿಯ ಸಂಕೇತವಾಗಿ ಚರಗ ಚೆಲ್ಲಲಾಗುತ್ತದೆ. ದೇವಿ ಗ್ರಾಮಕ್ಕೆ ಪ್ರವೇಶಿಸುವ ಮುನ್ನ ಕುರಿಬಲಿಯನ್ನು ನೀಡಿ ಆಕೆಯನ್ನು ಶಾಂತಗೊಳಿಸುತ್ತಾರೆ. ಈ ರೀತಿಯ ಆಚರಣೆ ಸಾಂಕ್ರಾಮಿಕ ರೋಗಗಳಿಂದ

ಜನ-ಜಾನುವಾರುಗಳಿಗೆ ರಕ್ಷಣೆ ಸಿಗಲೆಂಬ ಆಶಯ ಇಲ್ಲಿಯದು. ಊರಿನ ಪ್ರವೇಶ ದ್ವಾರದಲ್ಲಿ ಹಾಕಲಾದ ಅಗ್ಗಿಷ್ಟಿಕೆಯಿಂದ ತಮ್ಮ ಮನೆಗಳಿಗೆ ಬೆಂಕಿ ತೆಗೆದುಕೊಂಡು ಹೋಗುತ್ತಾರೆ. ಮುಚ್ಚಿದ ಮನೆಗಳ ಬಾಗಿಲಿಗೆ ಪೂಜೆ ಮಾಡಿ, ಕಾಯಿ ಒಡೆದು, ಬಾಗಿಲು ತೆರೆದು ತಾವು ತಂದ ಬೆಂಕಿಯಿಂದ ಮನೆಯ ದೀಪ ಬೆಳಗಿಸುತ್ತಾರೆ. ಇಲ್ಲಿ ದೀಪ ಲಕ್ಕಮ್ಮನ ಪ್ರತೀಕವಾಗಿದೆ. ದೀಪದ ಮೂಲಕ ದೇವಿಯೇ ತಮ್ಮೆಲ್ಲರ ಮನೆಗಳಿಗೆ ಪ್ರವೇಶಿಸಿದಳು ಎಂಬುದಾಗಿ ನಂಬುತ್ತಾರೆ.

ಗುಳೆ ಲಕ್ಕಮ್ಮನ ಜಾತ್ರೆಯಲ್ಲಿ ಸಾಮೂಹಿಕ ವನ ಭೋಜನದ ಮೂಲಕ ಹಳೆಯ ಜಗಳ, ಮನಸ್ತಾಪಗಳನ್ನು ಮರೆತು ಒಂದಾಗುತ್ತಾರೆ. ಜಾತಿ, ಭೇದವಿರದ ಸಂಭ್ರಮದ ಆಚರಣೆಯಿದು. ಸ್ಥಳೀಯರ ಪ್ರಕಾರ - ಗುಳೆ ಲಕ್ಕಮ್ಮನ ಜಾತ್ರೆ ಮಾಡುವುದರಿಂದ ಊರು ಸುಭಿಕ್ಷವಾಗುತ್ತದೆ. ಮಕ್ಕಳು, ಮುದುಕರು, ಜಾನುವಾರುಗಳ ಆರೋಗ್ಯ ಚೆನ್ನಾಗಿರುತ್ತದೆ. ಹಿಂದೆ ಪ್ಲೇಗು, ಕಾಲರಾದಂತಹ ಸಾಂಕ್ರಮಿಕ ರೋಗಗಳು ಊರಲ್ಲಿ ಹರಡದಂತೆ ಊರನ್ನು ಸ್ವಚ್ಛವಾಗಿಡಬೇಕಿತ್ತು. ಒಂದು ದಿನದ ಮಟ್ಟಿಗೆ ಎಲ್ಲವನ್ನು ಖಾಲಿ ಮಾಡಿಸಿ, ಕ್ರಿಮಿ, ಕೀಟ ಹರಡದಂತೆ ಮಾಡುವ ಉಪಾಯ ಲಕ್ಕಮ್ಮನ ಜಾತ್ರೆಯ ಹಿನ್ನೆಲೆಯಾಗಿತ್ತು. ಹಿಂದೆ ವೈದ್ಯಕೀಯ ಚಿಕಿತ್ಸೆಗಳಿಲ್ಲದ ಸಮಯದಲ್ಲಿ ಸ್ವಾಭಾವಿಕವಾಗಿ ಗುಳೆ ಹೋಗಲಾಗುತ್ತಿತ್ತು. ಅದನ್ನು ಸಾಂಕೇತಿಕವಾಗಿ ಈ ಆಚರಣೆ ಪ್ರತಿನಿಧಿಸುತ್ತದೆ.

**೧೦. ಅಮ್ಮನ ಕಳಿಸುವ ಆಚರಣೆ**

ಸಮಾಜದಲ್ಲಿ ಹೆಣ್ಣು ದೇವರುಗಳು ಪ್ರಭಾವ ಬೀರಲು, ಹೆಣ್ಣಿಗೆ ಹಿಂದಿನಿಂದಲೂ ನೀಡಿದ ಶ್ರೇಷ್ಠ ಸ್ಥಾನವೇ ಮುಖ್ಯಕಾರಣ. ಪುರುಷರಿಗಿಂತ ಸ್ತ್ರೀ ಉನ್ನತ ಸ್ಥಾನದವಳು, ಆಕೆ ಪವಿತ್ರಳು ಎಂಬ ಭಾವನೆಯೆ ಹೆಣ್ಣು ದೈವಗಳ ಪ್ರಾಧಾನ್ಯತೆಗೆ ಕಾರಣ. ಇಂತಹ ಹಿನ್ನೆಲೆಗಳು ಅಮ್ಮನ ಕಳುಹಿಸುವ ಆಚರಣೆಗೆ ಕಾರಣವಾಗಿರುವ ಸಾಧ್ಯತೆಯಿದೆ. ಜನ, ಜಾನುವಾರುಗಳಿಗೆ ಕಾಯಿಲೆ ಯಾದಾಗ, ಮಳೆ-ಬೆಳೆ ಇಲ್ಲದೆ ಭೂಮಿ ಬರಡಾದಾಗ, ಸಿಡುಬು, ದಡಾರ, ಪ್ಲೇಗ್, ಕಾಲರಾ ಇತ್ಯಾದಿ ಸಾಂಕ್ರಮಿಕ ರೋಗಗಳು ಉಲ್ಬಣಿಸಿದಾಗ, ದೈವ ನಮ್ಮ ಮೇಲೆ ಮುನಿಸಿಕೊಂಡಿದೆ ಎಂಬ ಭಾವನೆ ಗ್ರಾಮೀಣರಿಗಿದೆ. ತಾವು ನಂಬಿದ ದೈವವನ್ನು ಭಯ, ಭಕ್ತಿಯಿಂದ ಪೂಜಿಸಿ, ರೋಗ ನಿವಾರಿಸಿಕೊಳ್ಳುವ ಆಚರಣೆ ಇದಾಗಿದೆ. ಹೊಸಪೇಟೆ ತಾಲೂಕಿನ ಗ್ರಾಮೀಣ ಭಾಗಗಳಲ್ಲಿ ಅಮ್ಮನನ್ನು ರಥ ಅಥವಾ ಕುಂಭದಲ್ಲಿ ಕಳುಹಿಸುವ ಸಂಪ್ರದಾಯವಿದೆ.

ಊರಿಗೆ ರೋಗ ರುಜಿನಗಳು ಬಾರದಂತೆ ತಡೆಯುವ ಶಕ್ತಿ ಅಮ್ಮನಿಗೆ ಇರುತ್ತದೆ ಎಂಬ ನಂಬಿಕೆ ಜನರಲ್ಲಿ ಬಲವಾಗಿದೆ. ಅಮ್ಮನ ಕಳಿಸುವ ಆಚರಣೆ ವರ್ಷಕ್ಕೊಮ್ಮೆ ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಮೇ ತಿಂಗಳ ಕೊನೆಯಲ್ಲಿ ನಡೆಯುವ ಈ ಆಚರಣೆಯಲ್ಲಿ ಊರಿನ ಜನರೆಲ್ಲ ಉತ್ಸಾಹದಿಂದ ಭಾಗವಹಿಸುತ್ತಾರೆ. ಇದಕ್ಕಾಗಿ ಮೊದಲು ಊರಿನ ಮುಖಂಡರೆಲ್ಲ ಸೇರಿ ದಿನ ನಿಶ್ಚಯ ಮಾಡುತ್ತಾರೆ. ನಿಶ್ಚಯವಾದ ದಿನದ ಬಗ್ಗೆ ಊರಿನ ಜನರಿಗೆ ಸಾರಲಾಗುತ್ತದೆ. ಸಾಮಾನ್ಯವಾಗಿ ಮಂಗಳವಾರದಂದು ಈ ಆಚರಣೆ ನಡೆಯುತ್ತದೆ. ಅಂದು ರೈತರು ಹೊಲಗಳಿಗೆ ಹೋಗುವಂತಿಲ್ಲ. ಬಂಡಿ ಕಟ್ಟುವಂತಿಲ್ಲ. ಬಡಿಗೇರರು ಬೆತ್ತಲೆಯಾಗಿ ಕುಡುಗೋಲು ಮುಟ್ಟುವ

ಅತ್ತಿಗಿಡವನ್ನು ಕಡಿದು ತಂದು ದೇವಿಯಮೂರ್ತಿ ಮಾಡುತ್ತಾರೆ. ಈ ಮೂರ್ತಿಯು ನೋಡಲು ಭಯಾನಕವಾಗಿರುತ್ತದೆ. ದೇವಿ ಸೀರೆ, ಹೂ, ಕುಂಕುಮ, ಭಂಡಾರಗಳಿಂದ ಶೃಂಗಾರಗೊಳ್ಳುತ್ತಾಳೆ. ಅಲಂಕೃತ ಮೂರ್ತಿಯು ರೋಗದ ಸಂಕೇತವಾಗಿರುತ್ತದೆ. ಅಮ್ಮನ ಸುತ್ತ ತಡಿಕೆ ಕಟ್ಟಲಾಗಿದ್ದು, ಮುಖ ಮಾತ್ರ ಕಾಣಲು ರಂಧ್ರವಿರುತ್ತದೆ. ಚಿಕ್ಕ ಮಕ್ಕಳು ಮೊದಲು ದೇವಿಯನ್ನು ನೋಡಬಾರದೆಂಬ ನಂಬಿಕೆಯಿದೆ. ಇದರಿಂದಲೇ ದೈವದ ಭೀಕರತೆ ತಿಳಿಯುತ್ತದೆ. 'ದೂಳುಮರಿ' ಎಂದು ಕುರಿಯನ್ನು ಬಲಿ ನೀಡಿ ದೇವಿಯನ್ನು ಶಾಂತಗೊಳಿಸುತ್ತಾರೆ.

ಅಮ್ಮ ತನಗಿಷ್ಟವಾದವರ ಮೈಮೇಲೆ ಬಂದು ತನ್ನ ಆಸೆಗಳನ್ನು ನಿವೇದಿಸಿಕೊಳ್ಳುತ್ತಾಳೆ. ಉಡಿ ತುಂಬಿ ಪೂಜಿಸಿದ ವಸ್ತುಗಳನ್ನು ಮನೆಗೆ ತೆಗೆದುಕೊಂಡು ಹೋಗುವಂತಿಲ್ಲ. ಅಮ್ಮನ ಕಳುಹಿಸುವಾಗ ಹಿಂದೆ ಕೋಣ ಬಲಿ ಕೊಡಲಾಗುತ್ತಿತ್ತೆಂದು ಹೇಳಲಾಗುತ್ತಿದೆ. ಅಮ್ಮನ ಕಳುಹಿಸುವ ದಿನದಂದು ಜನರು ತಮ್ಮ ಮನೆಗಳನ್ನು ಸ್ವಚ್ಛ ಮಾಡುತ್ತಾರೆ. ಬೀದಿಗಳನ್ನು, ಓಣಿಗಳನ್ನು ಗುಡಿಸುತ್ತಾರೆ. ತಾವು ಸ್ವತಃ ವಿಶೇಷ ಸ್ನಾನ ಮಾಡಿ, ಮಡಿ ಉಡುತ್ತಾರೆ. ಮನೆಯ ಹೆಂಗಸರು ಕುರಿ, ಆಡು ಅಥವಾ ಕೋಳಿಯನ್ನು ಕೊಯ್ದು ಮೀಸಲು ಅಡುಗೆ ಮಾಡುತ್ತಾರೆ. ಈ ಮೀಸಲು ಅಡುಗೆಗೆ ಉಪ್ಪು ಹಾಕುವುದಿಲ್ಲ. ಅಡುಗೆ ತಯಾರಾಗುತ್ತಿರುವಂತೆ, ಡೊಳ್ಳು ಅಥವಾ ಹಲಗೆ ಬಾರಿಸಿಕೊಂಡು ಮನೆ ಮನೆಗೆ ಬರುವ ಜನರು ಅಮ್ಮನಿಗೆ ಮೀಸಲು ಎಡೆ ತನ್ನಿ ಎಂದು ಸಾರುತ್ತಾರೆ. ಆಗ ಮನೆಯ ಹೆಂಗಸರು ಅಟ್ಟದಲ್ಲಿದ್ದ ಹಳೆಪುಟ್ಟಿ ಅಥವಾ ಮೊರದಲ್ಲಿ ಎಲೆಗಳನ್ನಿಟ್ಟು ಅದರಲ್ಲಿ ಮೀಸಲು ಎಡೆ ಇರಿಸುತ್ತಾರೆ. ಅನ್ನ, ರೊಟ್ಟಿ, ಮಾಂಸದ ಅಡುಗೆಯ ಜೊತೆಗೆ ಗುಗ್ಗರಿಕಾಳು, ಕರಿಗಡಬು, ಹೋಳಿಗೆ, ಹಪ್ಪಳ, ಚಟ್ನಿ, ಪಲ್ಯ ಇರಿಸಿಕೊಂಡು ಅದರ ಪಕ್ಕದಲ್ಲಿ ಪುಟ್ಟ ದೀಪವೊಂದನ್ನು ಇರಿಸುತ್ತಾರೆ. ಊರಿನ ಎಲ್ಲ ಮನೆಯಿಂದಲೂ ಎಡೆ ಬಂದ ಮೇಲೆ, ಪೂಜಾರಿ ಎಡೆಗಳಿಗೆ ಪೂಜೆ ಮಾಡುತ್ತಾನೆ. ಪೂಜೆಯ ಕೊನೆಯಲ್ಲಿ ಎಲ್ಲರಿಗೂ ಪ್ರಸಾದ ಹಂಚಿದ ಅನಂತರ ತಂದಂಥ ಎಡೆಗಳನ್ನು ಒಂದು ಬಂಡಿಗೆ ತುಂಬಿಸುತ್ತಾರೆ. ಆ ಬಂಡಿಯನ್ನು ಎಲ್ಲರೂ ಎಳೆಯುತ್ತ ಸಕಲ ಗೌರವಗಳಿಂದ ಗ್ರಾಮದ ಗಡಿಯಾಚೆ ಸಾಗಿಸುತ್ತಾರೆ. ಹೀಗೆ ಪ್ರತಿ ಗ್ರಾಮದವರಿಂದ ದಾಟಿಸಲ್ಪಟ್ಟ ಅಮ್ಮ, ಅಂತಿಮವಾಗಿ ಕಮಲಾಪುರ ಹೋಬಳಿಯ ಗಾಳೆಮ್ಮನಗುಡಿ ಸೇರುತ್ತಾಳೆ. ಇಲ್ಲಿಂದ ಮುಂದೆ ಸಾಗುವಂತಿಲ್ಲ. ಏಕೆಂದರೆ ಗಾಳೆಮ್ಮನಗುಡಿ ಮಾರಿ ದೈವಗಳ ತವರು. ಇಲ್ಲಿಂದ ಮುಂದೆ ದಾಟಿಸುವ ಕ್ರಿಯೆ ಇದುವರೆಗೂ ನಡೆದಿಲ್ಲ. ಹಿಂದೆ ಬಯಲಲ್ಲಿ ಇರುತ್ತಿದ್ದ ದೈವಗಳು ಇಂದು ಗುಡಿ ಸೇರಿ ಪೂಜಿಸಲ್ಪಡುತ್ತಿವೆ.

ಜಾನುವಾರು ಮತ್ತು ಜನರಿಗೆ ಕಾಯಿಲೆಗಳು ಬರದೇ ಇರಲಿ, ದೇವಿಯ ಕೃಪೆ ಮತ್ತು ರಕ್ಷಣೆ ನಮ್ಮ ಮೇಲೆ ಸದಾ ಇರಲಿ ಎಂದು ಹಿಂದಿನಿಂದಲೂ ಬೆಳೆದುಕೊಂಡು ಬಂದಿರುವ ಈ ಆಚರಣೆ. ಪ್ರಸ್ತುತ ವೈಜ್ಞಾನಿಕ ಯುಗದಲ್ಲಿ ರೋಗ-ರುಜಿನಗಳನ್ನು ಗುಣಪಡಿಸಲು ಸಾವಿರಾರು ಔಷಧಿಗಳು ಅನ್ವೇಷಣೆಗೊಂಡಿದ್ದರೂ ಜನಸಾಮಾನ್ಯರಲ್ಲಿ ಇಂಥ ಮೂಢನಂಬಿಕೆಗಳು ಎಷ್ಟು ಆಳವಾಗಿ ಬೇರೂರಿವೆ ಎಂಬುದಕ್ಕೆ ಸಾಕ್ಷಿಯಾಗಿದೆ.

## ೧೧. ತೊಟ್ಟಮ್ಮ, ದೊಡ್ಡಮ್ಮ ಆಚರಣೆ

ಮೈಮೇಲೆ ಚಿಕ್ಕ ಚಿಕ್ಕ ಗುಳ್ಳೆಗಳಾದರೆ ತೊಟ್ಟಮ್ಮನೆಂದೂ, ದೊಡ್ಡ ದೊಡ್ಡ ಗುಳ್ಳೆಗಳಾದರೆ ದೊಡ್ಡಮ್ಮನೆಂದು ಗುರುತಿಸುತ್ತಾರೆ. ಈ ರೀತಿಯ ಅಮ್ಮ ಕಾಣಿಸಿಕೊಂಡಾಗ ಹೊರಗೆ ಬಿಡದೆ, ಮನೆಯಲ್ಲಿ ಪ್ರತ್ಯೇಕವಾಗಿಸುತ್ತಾರೆ. ನೀರು ತುಂಬಿದ ಗುಳ್ಳೆಗಳೇ ಅಮ್ಮನ ಲಕ್ಷಣ. ಬಿಳಿ ಒದ್ದೆ ಬಟ್ಟೆಯನ್ನು ದೇಹದ ಮೇಲೆ ಹೊದಿಸಿ, ಬೇವಿನಎಲೆ, ಕುಡುಗೋಲನ್ನು ಪಕ್ಕದಲ್ಲಿ ಇಡುತ್ತಾರೆ. ಇದರ ಉದ್ದೇಶ ಒದ್ದೆಯಾದ ಬಿಳಿಬಟ್ಟೆ, ಸ್ವಚ್ಛತೆ ಹಾಗೂ ತಂಪುಕಾರಕ ಗುಣವುಳ್ಳದ್ದು. ಖನಿಜಗಳೂ ದೇಹದ ಅನಾರೋಗ್ಯವನ್ನು ಗುಣಪಡಿಸುವ ಶಕ್ತಿಯನ್ನು ಹೊಂದಿರುತ್ತವೆ. ಕುಡುಗೋಲಿನ ಸ್ಪರ್ಶದಿಂದ ನಿರ್ದಿಷ್ಟ ಪ್ರಮಾಣದ ಖನಿಜಾಂಶ ದೇಹಕ್ಕೆ ಸಿಗಲೆಂಬ ಜಾಣ್ಮೆ ಜನರಲ್ಲಿದೆ. ಅಮ್ಮ ಬಂದವರಿಗೆ ಬೇವಿನಸೊಪ್ಪು, ಎಣ್ಣೆ ಬೆರೆಸಿದ ಉಗುರು ಬೆಚ್ಚಗಿನ ನೀರಿನಿಂದ ದಿನಕ್ಕೆರಡು ಬಾರಿ ಸ್ನಾನ ಮಾಡಿಸಲಾಗುತ್ತದೆ. ಎಣ್ಣೆ, ಗಾಯದ ಬಿಗಿತವನ್ನು ಕಡಿಮೆ ಮಾಡಿದರೆ, ಬೇವು ಗಾಯ ವಾಸಿಯಾಗುವುದಕ್ಕೆ ಸಹಾಯಕವಾಗಿದೆ. ಬೇವು ಶಕ್ತಿಯ ಸಂಕೇತವಾಗಿ ಅಮ್ಮನ ಆಚರಣೆಗಳಲ್ಲಿ ಬಳಸಲ್ಪಡುತ್ತದೆ. ಈ ಹಿನ್ನೆಲೆಯಲ್ಲಿ ಅಮ್ಮ ಬಂದವರನ್ನು ಬೇವಿನತಪ್ಪಲನ್ನು ಹಾಸಿಗೆಯ ಸುತ್ತ ಹಾಕಿ ಮಲಗಿಸುತ್ತಾರೆ. ದೈವವೇ ಬರಿಸಿದ ರೋಗವಾದ್ದರಿಂದ ವೈದ್ಯರ ಹತ್ತಿರ ತೋರಿಸುವಂತಿಲ್ಲ. ಕುಟುಂಬದ ಹಿರಿಯರೇ ಈ ಆಚರಣೆಯ ಮಾರ್ಗದರ್ಶಕರಾಗಿರುತ್ತಾರೆ. ಪ್ರತಿದಿನ ಸಂಜೆ ಹನ್ನೊಂದು ಬಗೆಯ ಧಾನ್ಯಗಳನ್ನು ಸೇರಿಸಿ ಗುಗ್ಗರಿ ಮಾಡಿ ಮನೆಯ ಬಾಗಿಲ ಹೊರಭಾಗದಲ್ಲಿ ನಿಂತು ಮಕ್ಕಳನ್ನೆಲ್ಲಾ ಕರೆದು ಹಂಚುತ್ತಾರೆ. ಅಮ್ಮ ಬಂದ ಮಕ್ಕಳ ಹತ್ತಿರ ಬೇರೆ ಮಕ್ಕಳ ಸುಳಿಯುವಂತಿಲ್ಲ. ಹೀಗೆ ಅಮ್ಮ ಹನ್ನೊಂದು ದಿನ ಆಚರಿಸಲ್ಪಡುತ್ತಾಳೆ. ಈ ಅವಧಿಯಲ್ಲಿ ಅಮ್ಮ ಬಂದಿರುವ ಮನೆಯವರು ಬಹಳ ಪರಿಶುದ್ಧರಾಗಿ ಇರಬೇಕು. ಯಾವುದೇ ಮಾಂಸಾಹಾರ, ದುಶ್ಚಟಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದರೆ ಅಮ್ಮ ಮುನಿಸಿಕೊಂಡು, ಅಮ್ಮ ಬಂದಿರುವವರನ್ನು ಬಲಿ ತೆಗೆದುಕೊಳ್ಳುತ್ತಾಳೆ ಎಂಬ ನಂಬಿಕೆ ಇದೆ. ಅಂತಿಮವಾಗಿ ಅಮ್ಮನಿಗೆ ಜೋಳದಹಿಟ್ಟು, ಬದನೆಕಾಯಿ, ಈರುಳ್ಳಿ, ಉಪ್ಪು ನೀಡಿ ಅಮ್ಮನ ಉಗ್ರತೆಯನ್ನು ತಣ್ಣಗಾಗಿಸುತ್ತಾರೆ.

## ೧೨. ಸಿತ್ಲಾ ಹಬ್ಬದ ಆಚರಣೆ

ಲಂಬಾಣಿ ಸಮುದಾಯದಲ್ಲಿ ಜೂನ್ ತಿಂಗಳಲ್ಲಿ ಸಿತ್ಲಾ ಹಬ್ಬದ ಆಚರಣೆ ಪ್ರಚಲಿತದಲ್ಲಿದೆ. ಇದು ಅಮ್ಮನ ಆಚರಣೆಯನ್ನು ಹೋಲುತ್ತದೆ. ಈ ಹಬ್ಬವನ್ನು ಸಾಧಿಯಾಡಿ, ಆಷಾಢ ಹಬ್ಬ, ಕೋಳಿ ಹಬ್ಬ ಎಂತಲೂ ಕರೆಯುತ್ತಾರೆ. ತಾಂಡದ ಹಿರಿಯರು ದಿನ ನಿರ್ಧರಿಸಿ ಊರ ಹೊರವಲಯದಲ್ಲಿ ಒಂದೆಡೆ ಎಲ್ಲರೂ ಸೇರಿ ಚಪ್ಪರ ಹಾಕುತ್ತಾರೆ. ಚಪ್ಪರದಡಿಯಲ್ಲಿ. ಏಳು ಸುಣ್ಣ ಲೇಪಿತ ಸಣ್ಣ ಕಲ್ಲುಗಳನ್ನು ಪ್ರತಿಷ್ಠಾಪಿಸುತ್ತಾರೆ. ಆ ಸಣ್ಣ ಕಲ್ಲುಗಳು ಅಮ್ಮನನ್ನು ಪ್ರತಿನಿಧಿಸುತ್ತವೆ. ಈ ಕಲ್ಲುಗಳಿಗೆ ನಾನಾ ಹೂಗಳಿಂದ ಅಲಂಕಾರ ಮಾಡಲಾಗುತ್ತವೆ. ತಾಂಡದ ಮಹಿಳೆಯರು ನವಧಾನ್ಯಗಳ ಗುಗ್ಗರಿಯನ್ನು ಕಂಚಿನ ತಟ್ಟೆಯಲ್ಲಿ ಹಾಕಿಕೊಂಡು, ತಂಬಿಗೆಯಲ್ಲಿ

ನೀರು ತುಂಬಿಕೊಂಡು ಆಗಮಿಸುತ್ತಾರೆ. ರೋಗ ನಿರೋಧಕ ಗುಣವುಳ್ಳ ಕಂಚು ಲಂಬಾಣಿಗರ ಆಚರಣೆಯಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಕಂಚಿನ ತಟ್ಟೆಯಲ್ಲಿಯ ಗುಗ್ಗುರಿಯನ್ನು ಅಮ್ಮನ ಪ್ರಸಾದವೆಂದು ಮಕ್ಕಳಿಗೆ ತಿನ್ನಿಸುತ್ತಾರೆ. ನಂತರ ಎಲ್ಲ ಮನೆಗಳಿಂದ ತಂದ ಸಿಹಿಯ ನೈವೇದ್ಯ, ಹೂ, ಹಣ್ಣು, ಕಾಯಿಗಳನ್ನು ಅಮ್ಮನಿಗೆ ಅರ್ಪಿಸುತ್ತಾರೆ. ಜನಾಂಗದ ಹಿರಿಯರು ಮಳೆ-ಬೆಳೆ ಚೆನ್ನಾಗಿ ಆಗಲಿ, ಮಕ್ಕಳು, ಮರಿ, ದನ-ಕರುಗಳು ಆರೋಗ್ಯದಿಂದ ಇರಲಿ, ಯಾವುದೇ ರೋಗ-ರುಜಿನ ಕಾಡದಿರಲಿ ಎಂದು ಅಮ್ಮನಲ್ಲಿ ಪ್ರಾರ್ಥಿಸುತ್ತಾರೆ. ಪೂಜಿಸಿದ ನಂತರವೂ ರೋಗ ಲಕ್ಷಣಗಳು ಪುನಃ ಕಾಣಿಸಿಕೊಂಡರೆ, ಮತ್ತೊಮ್ಮೆ ಆಚರಿಸುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ. ಇಲ್ಲಿ ಪೂಜಿಸಿದ ವಸ್ತುಗಳಲ್ಲಿ ಗಾಳಿ ರೂಪದಲ್ಲಿ ಅಮ್ಮನಿರುವಳೆಂಬ ಕಾರಣ ಯಾರೂ ಮುಟ್ಟುವಂತಿಲ್ಲ. ಊರೊಟ್ಟಿನ ಈ ಆಚರಣೆಯ ಪುನರಾವರ್ತನೆಯಿಂದ ಊರು ಸ್ವಚ್ಛಗೊಂಡು ರೋಗಗಳು ಸಂಪೂರ್ಣ ನಾಶಗೊಳ್ಳುತ್ತವೆ ಎಂಬ ನಂಬಿಕೆಯಿದೆ.

### ೧೩. ಗ್ರಹಣ

ಭೂಮಿ, ಸೂರ್ಯ ಹಾಗೂ ಚಂದ್ರ ಇವು ಮೂರು ಒಂದೇ ರೇಖೆಯಲ್ಲಿ ಬಂದಾಗ ಭೂಮಿಯ ನೆರಳು ಚಂದ್ರನ ಮೇಲೆ ಬಿದ್ದು ಅಥವಾ ಸೂರ್ಯಬಿಂಬಕ್ಕೆ, ಚಂದ್ರಬಿಂಬ ಅಡ್ಡವಾಗಿ ಉಂಟಾಗುವ ಕತ್ತಲೆಯ ಆವರಣವೇ ಗ್ರಹಣ. ಗ್ರಾಮೀಣ ಭಾಷೆಯಲ್ಲಿ 'ಗ್ರಾಣ' ಎಂದು ಕರೆಯುತ್ತಾರೆ. ಸೂರ್ಯನನ್ನು ರಾಹು, ಕೇತುಗಳೆಂಬ ಗ್ರಹಗಳು ಹಿಡಿಯುತ್ತವೆಂಬ ನಂಬಿಕೆಯಿದೆ. ಗ್ರಹಣ ಸಮಯದಲ್ಲಿ ಸೂರ್ಯ, ಚಂದ್ರರನ್ನು ವಿಪತ್ತಿನಿಂದ ಪಾರು ಮಾಡಲು ಪೂಜೆ, ಶಾಂತಿಯನ್ನು ಮಾಡಿಸುತ್ತಾರೆ. ಈ ಅವಧಿಯಲ್ಲಿ ಎಳ್ಳು ದಾನ, ಗೋ ದಾನ, ಹಣ ದಾನ ಮುಂತಾದ ಕಾರ್ಯಗಳು ನಡೆಯುತ್ತವೆ.

ಗ್ರಹಣ ಒಂದು ಪ್ರಾಕೃತಿಕ ಘಟನೆ. ಆದರೂ ಅದು ಮಾನವನ ಜೀವನದ ಮೇಲೆ ಉಂಟಾಗುವ ಪರಿಣಾಮಗಳನ್ನು ನಿಯಂತ್ರಿಸುವಂಥದ್ದು. ಗ್ರಹಣ ನಡೆಯುವ ಸಮಯ ಅಮಂಗಳಕರ ಮತ್ತು ಸೂತಕದ ಸಮಯ ಎಂದು ಜನರು ಭಾವಿಸುತ್ತಾರೆ. ವಿಷಜಂತುಗಳು ಆಹಾರ ಪದಾರ್ಥಗಳಲ್ಲಿ ಸೇರುತ್ತವೆಂಬ ಕಾರಣದಿಂದ ಗರಿಕೆ ಹಾಕುತ್ತಾರೆ. ಗರಿಕೆ ಹೆಚ್ಚು ತೀಕ್ಷ್ಣವಾದ ರೋಗ ನಿರೋಧ ಗುಣಗಳಿಂದ ಕೂಡಿರುವುದರಿಂದ, ವಿಷಕಾರಿ ಕಿರಣಗಳಿಂದ ಆಹಾರವನ್ನು ರಕ್ಷಿಸುವ ಗುಣ ಹೊಂದಿರುವುದೇ ಗ್ರಹಣ ಸಮಯದಲ್ಲಿ ಬಳಸಲು ಕಾರಣ.

ಗ್ರಹಣ ಕಾಲದಲ್ಲಿ ಅದರಿಂದ ಉಂಟಾಗುವ ತೊಂದರೆಗಳನ್ನು ತಪ್ಪಿಸಲು, ಗ್ರಹಣವನ್ನು ವೀಕ್ಷಿಸುವುದನ್ನು ನಿಷೇಧಿಸಿ ಅಂದು ಯಾರೂ ಎಲ್ಲೂ ಹೊರಗಡೆ ಹೋಗದೆ ಮನೆಯಲ್ಲೇ ಇರುತ್ತಾರೆ. ಯಾವುದೇ ಆಹಾರ ಪಾನೀಯಗಳನ್ನು ಸೇವಿಸುವುದಿಲ್ಲ. ಗ್ರಹಣ ಬಿಟ್ಟ ಮೇಲೆ ಮನೆಯಲ್ಲಿರುವ ನೀರನ್ನೆಲ್ಲಾ ಚೆಲ್ಲಿ, ಹೊಸ ನೀರನ್ನು ಹಿಡಿದು ಸ್ನಾನ ಮಾಡಿ, ದೇವರ ಪೂಜೆ ಮಾಡಿ ನಂತರ ಆಹಾರ ತಯಾರಿಸಿ ಸೇವಿಸುತ್ತಾರೆ. ಗರ್ಭಿಣಿ ಸ್ತ್ರೀಯರು ಯಾವುದೇ ವಸ್ತುವನ್ನು ಮುರಿಯುವುದಾಗಲಿ, ಆಹಾರ ಸೇವಿಸುವುದಾಗಲಿ ಮಾಡುವಂತಿಲ್ಲ. ಗರ್ಭಿಣಿ

ಮಹಿಳೆಯರಿಗೆ ಅಪಕಾರಿಯಾದ ಬೆಳಕಿನ ಕಿರಣಗಳು ತಾಗದಂತೆ ಆಕೆಯನ್ನು ಕತ್ತಲೆ ಕೋಣೆಯಲ್ಲಿ ಮಲಗಿಸುವ ಸಂಪ್ರದಾಯವಿದೆ. ಯಂತ್ರ, ತಂತ್ರ ಸಾಧಕರು ಗ್ರಹಣ ಕಾಲವನ್ನು ಶುಭ ಎಂದು ಪರಿಗಣಿಸುತ್ತಾರೆ. ಅಂದು ಅವರು ಮಾಡುವ ಮಾಟ, ಮಂತ್ರ, ಮೋಡಿಗಳು ಯಶಸ್ಸನ್ನು ಪಡೆಯುತ್ತವೆ ಎಂಬ ನಂಬಿಕೆ ಪ್ರಚಲಿತದಲ್ಲಿದೆ.

### ೧೪. ಚರಗ ಚೆಲ್ಲುವುದು

ಹೊಲ, ಗದ್ದೆಗಳಲ್ಲಿ ಪೈರು ಬೆಳೆದಾಗ ರೈತರು ಭೂಮಿ ತಾಯಿಗೆ ನೈವೇದ್ಯವೆಂದು ಹೊಲ ಗದ್ದೆಗಳಲ್ಲಿ ಚೆಲ್ಲುವ ಆಹಾರ ಪದಾರ್ಥವೇ ಚರಗ. ಚರಗದಲ್ಲಿ ಸಸ್ಯ ಮೂಲ ಚರಗ ಮತ್ತು ರಕ್ತ ಚರಗವೆಂಬ ಎರಡು ವಿಧಗಳಿವೆ. ಸಸ್ಯ ಮೂಲ ಚರಗ ಹೊಲ-ಗದ್ದೆಗಳ ಪೈರು ಕಾಪಾಡುತ್ತದೆಂಬ ನಂಬಿಕೆಯಿದ್ದರೆ, ರಕ್ತ ಚರಗ ಪ್ರಾಣಿ ಬಲಿಯಾಗಿದ್ದು, ಗ್ರಾಮದೇವತೆಗಳ ಹಬ್ಬಗಳಲ್ಲಿ ಊರಿನ ಹುಲುಸನ್ನು ಕಾಪಾಡುತ್ತದೆಂಬ ನಂಬಿಕೆಯಿದೆ. ಚರಗ ಚೆಲ್ಲುವುದು ಬಲಿಯ ಸಾಂಕೇತಿಕ ರೂಪ. ಭೂಮಿ ತಾಯಿ ಸಂತೃಪ್ತಗೊಂಡರೆ ಸಮೃದ್ಧ ಬೆಳೆ ಸಿಗುವುದೆಂಬ ಆಶಯ ಈ ಆಚರಣೆಯದ್ದಾಗಿದೆ.

ಚರಗವು ಎಳ್ಳಮಾವಾಸ್ಯೆಯಂದು ನಡೆಯುವ ಕೃಷಿ ಆಚರಣೆಯಾಗಿದೆ. ವರ್ಷಕ್ಕೊಮ್ಮೆ ಕೃಷಿಕರು ತಮ್ಮ ಹೊಲ-ಗದ್ದೆಗಳಲ್ಲಿ ಮುಂಗಾರು ಬೆಳೆ ಕಟಾವು, ಹಿಂಗಾರು ಬೆಳೆಬಿತ್ತನೆ ನಡೆಯುವ ಸಮಯದಲ್ಲಿ ಆಚರಿಸುವ ಹಬ್ಬವಾಗಿದೆ. ಆ ದಿನ ರೈತರು ಬಂಡಿ ತೊಳೆದು, ಚಕ್ರಗಳಿಗೆ ಕೀಲೆಣ್ಣೆ ಹಾಕಿ, ಎತ್ತುಗಳಿಗೆ ಮೈತೊಳೆದು, ಕೋಡುಗಳಿಗೆ ಬಣ್ಣ ಹಚ್ಚಿ, ಹಣೆಗೆಜ್ಜೆ, ಕೊರಳಗಂಟೆ, ಕಾಲ್ಗೆಜ್ಜೆ, ಮೈಮೇಲೆ ಚಿತ್ತಾರದ ಜೂಲು ಹೊದಿಸುತ್ತಾರೆ. ಹಬ್ಬಕ್ಕಾಗಿ ರಾತ್ರಿಯಿಡೀ ನಿದ್ರೆ ಮಾಡದೆ ಹೆಂಗಸರು ಅಡುಗೆ ತಯಾರಿಸುತ್ತಾರೆ. ಅಂದು ಅವರು ಎಳ್ಳು ಹೋಳಿಗೆ, ಕರಿಗಡಬು, ಸಜ್ಜೆ ರೊಟ್ಟಿ, ಎಣ್ಣೆಗಾಯಿ, ಬದನೆಕಾಯಿ ಪಲ್ಯ, ಕೆನೆ ಮೊಸರು ಅಡುಗೆಯೊಂದಿಗೆ ಹೆಣ್ಣುಮಕ್ಕಳು ಹೊಸ ಬಟ್ಟೆ ತೊಟ್ಟು, ಎತ್ತಿನಬಂಡಿಗಳಲ್ಲಿ ಹೊಲಕ್ಕೆ ಹೋಗುತ್ತಾರೆ. ಹೊಲದಲ್ಲಿನ ಬನ್ನಿಗಿಡದ ಕೆಳಗೆ ಐದು ಗುಂಡು ಕಲ್ಲುಗಳನ್ನು ಪ್ರತಿಷ್ಠಾಪಿಸಿ 'ಭರಮದೇವ'ರೆಂದು ಪೂಜಿಸುತ್ತಾರೆ. ಕಲ್ಲುಗಳು ಕುಂತಿಯ ಪುತ್ರರಾದ ಪಾಂಡವರ ಪ್ರತೀಕವೆಂದು ನಂಬುತ್ತಾರೆ. ಹೊಲದ ಬೆಳೆಗೆ ಅರಿಶಿಣ, ಕುಂಕುಮ, ಸೀರೆ, ಕುಪ್ಪಸ, ಹಸಿರು ಬಳೆ ತೊಡಿಸಿ, ಆರತಿ ಬೆಳಗಿ ಉಡಿ ತುಂಬುತ್ತಾರೆ. ಅಕ್ಕಿ, ಜೋಳ, ಅವರೆಯಿಂದ ತಯಾರಿಸಿದ ನೈವೇದ್ಯವನ್ನು ಚರಗ ರೂಪದಲ್ಲಿ 'ಹೋಲಿಗ್ಯಾ, ಹೋಲಿಗ್ಯಾ' ಎಂದು ಹೇಳುತ್ತಾ ಹೊಲದ ನಾಲ್ಕು ದಿಕ್ಕಿಗೂ ಚೆಲ್ಲುತ್ತಾರೆ. ಹೋಲಿಗ್ಯಾ ಎಂಬ ಕೂಗು ಎಲ್ಲಿಯವರೆಗೆ ಕೇಳಿಸುತ್ತದೆಯೋ ಅಷ್ಟು ವ್ಯಾಪ್ತಿಯವರೆಗೆ ಬೆಳೆಗಳು ಸಮೃದ್ಧವಾಗಿ ಬೆಳೆಯುತ್ತವೆ ಎಂಬ ನಂಬಿಕೆಯಿದೆ.

### ೧೫. ಕರೆ ಹರಿಯುವುದು

ರೈತರು ಜ್ಯೇಷ್ಠಮಾಸದ ಹುಣ್ಣಿಮೆಯ ದಿನ ಜಾನುವಾರುಗಳಿಗಾಗಿ ಕರೆ ಹರಿಯುವ ಆಚರಣೆಯನ್ನು ನೆರವೇರಿಸುತ್ತಾರೆ. ಇದನ್ನು 'ಕಾರಹುಣ್ಣಿಮೆ' ಎಂದು ಕರೆಯುತ್ತಾರೆ. ಮಳೆಗಾಲದ

ಮೊದಲ ಹುಣ್ಣಿಮೆಯನ್ನು ಸಂತೋಷದಿಂದ ಸ್ವಾಗತಿಸುವ ಆಚರಣೆ ಇದು. ಕಾರಹುಣ್ಣಿಮೆ ಸಂದರ್ಭದಲ್ಲಿ ಬಿತ್ತನೆ ಕಾರ್ಯ ಪೂರ್ಣಗೊಂಡು, ಫಸಲು ಮೊಳಕೆಯೊಡೆದು ರೈತರಿಗೂ, ಎತ್ತುಗಳಿಗೂ ಬಿಡುವಿನ ಸಮಯವಾದ್ದರಿಂದ ಗ್ರಾಮಾಂತರ ಪ್ರದೇಶದಲ್ಲಿ ಹೆಚ್ಚಾಗಿ ಕಾರಹುಣ್ಣಿಮೆಯನ್ನು ಆಚರಿಸುತ್ತಾರೆ.

ಗ್ರಾಮೀಣ ಭಾಗಗಳಲ್ಲಿ ಎತ್ತುಗಳನ್ನು ತಾಲೀಮು ನಡೆಸಿ, ಸಾಲಾಗಿ ನಿಲ್ಲಿಸಿ ಓಡಿಸುವ ಕ್ರಮವಿದೆ. ಅಗಸಿ ಬಾಗಿಲಲ್ಲಿರುವ ಉದ್ದನೆಯ ಕಟ್ಟಿಗೆಗೆ ಮಾವು, ಬೇವುಗಳ ತೋರಣದೊಳಗೆ ಕೊಬ್ಬರಿಯ ಬಟ್ಟಲು, ಅರಿಶಿಣಕೊಂಬು, ಉತ್ತುತ್ತಿ ಮತ್ತು ಕರಿಗಡಬು ಕಟ್ಟುತ್ತಾರೆ. ತೋರಣ ಹರಿದುಕೊಂಡು ಓಡಿಬಂದ ಎತ್ತನ್ನು ಪೂಜಿಸಿ, ಮಂಡಕ್ಕಿ, ಬೆಲ್ಲ, ಕೊಬ್ಬರಿ ಹಂಚಿ ಮೆರವಣಿಗೆ ಮಾಡುತ್ತಾರೆ.

ಕರೆ ಹರಿಯುವ ಆಚರಣೆ ಕುರಿತು ಐತಿಹ್ಯವೊಂದಿದೆ. ಶಿವನು ಕಾರಹುಣ್ಣಿಮೆಯ ದಿವಸ ನಂದಿ ಅವತಾರ ತಾಳುತ್ತಾನೆ. ರಾಕ್ಷಸರನ್ನು ಕೋಡುಗಳಿಂದ ಸಂಹರಿಸಿ, ರಕ್ತಸಿಕ್ತ ಕೋಡುಗಳ ಸಮೇತ ಆಗಮಿಸುತ್ತಾನೆ. ಕೋಡುಗಳಿಗೆ ರಾಕ್ಷಸರ ಕರುಳುಗಳು ಸುತ್ತಿಕೊಂಡಿದ್ದವೆಂದು ಆ ನೆನಪಿಗಾಗಿ ಕಾರಹುಣ್ಣಿಮೆಯಂದು ಎತ್ತುಗಳ ಕೋಡಿಗೆ ಕೆಂಪು ಬಣ್ಣ ಹಚ್ಚಿ, ಕೋಡು ಬಳೆ ಹಾಕುವ ಸಂಪ್ರದಾಯವಿದೆ.

ಈ ಆಚರಣೆಗಾಗಿ ಎತ್ತುಗಳ ಕೋಡುಗಳನ್ನು ಹರಿತವಾದ ಕತ್ತಿಯಿಂದ ಸವರಿ ಹೊಳಪಾಗಿಸುತ್ತಾರೆ. ಅವುಗಳಿಗೆ ಕೋಡಣಸು, ಕೆಂಪು ಬಣ್ಣದ ರಿಬ್ಬನ್, ಬಲೂನುಗಳಿಂದ ಶೃಂಗರಿಸುತ್ತಾರೆ. ಎತ್ತುಗಳ ಕೊರಳಿಗೆ ಗೆಜ್ಜೆಸರ, ಹಣೆಕಟ್ಟು, ಕಾಲಿಗೆ ಗೆಜ್ಜೆ, ಮೈಮೇಲೆ ಚಿತ್ತಾರದ ಹೊಸ ಜೂಲು ಹಾಕಲಾಗುತ್ತದೆ. ಕರೆ ಹರಿಯುವ ಸಾಂಕೇತಿಕ ಸಾಧನಗಳಾದ ಬೇವು, ಮಾವು, ಕೊಬ್ಬರಿ ಬಟ್ಟಲು, ಅರಿಶಿಣಕೊಂಬು, ಉತ್ತುತ್ತಿ ಹಾಕಿ ತಯಾರಿಸಲಾದ ಸರದೊಂದಿಗೆ, ಕರಿದ ಪದಾರ್ಥಗಳಾದ ಕಡುಬು, ಚಕ್ಕುಲಿ, ಕೋಡುಬಳೆಯನ್ನು ಸೇರಿಸಿದ ಹಾರವನ್ನು ಎತ್ತಿನಕೊರಳಿಗೆ ಕಟ್ಟಲಾಗುತ್ತದೆ. ಹೀಗೆ ನಾನಾ ರೀತಿಯಲ್ಲಿ ಸಿಂಗಾರಗೊಂಡ ಎತ್ತುಗಳು ಕರೆಹರಿಯಲು ಸಿದ್ಧಗೊಳ್ಳುವವು. ಜಾನುವಾರುಗಳ ಶೌರ್ಯ ಪ್ರದರ್ಶನ ಪ್ರತಿಷ್ಠೆಯ ಸಂಕೇತವಲ್ಲದೆ, ಮೋಜು, ಆನಂದ ಉಂಟು ಮಾಡುತ್ತದೆ. ಕರೆಹರಿದ ಎತ್ತು ಆಕಸ್ಮಿಕವಾಗಿ ಬೇರೆ ಗ್ರಾಮ ಸೇರಿದರೆ, ಅದನ್ನು ಹಿಂದಿರುಗಿಸಬಾರದೆಂಬ ನಿಯಮವಿದೆ. ಆ ವರ್ಷದ ಮಳೆ, ಬೆಳೆ, ಭವಿಷ್ಯ ಸೂಚಕವನ್ನು ಕಾರಹುಣ್ಣಿಮೆಯಲ್ಲಿ ಕಾಣುತ್ತೇವೆ. ಕೆಂಪು ಬಣ್ಣದ ಎತ್ತು ಕರೆ ಹರಿದರೆ ಕೆಂಪು ಧಾನ್ಯಗಳು ಸಮೃದ್ಧವಾಗಿ ಬೆಳೆದು, ಉತ್ತಮ ಮಳೆಯಾಗುವುದು ಹಾಗೂ ಬೆಳೆಗಳಿಗೆ ರೋಗ ಬಾಧೆಯಿರುವುದಿಲ್ಲ. ಬಿಳಿ ಎತ್ತು ಕರೆ ಹರಿದರೆ ಜೋಳ, ಕುಸುಬೆಯಂತಹ ಬಿಳಿ ಫಲಗಳು ಸಮೃದ್ಧಿಯಾಗಿ, ಹಿಂಗಾರು ಉತ್ತಮವಾಗಿರುತ್ತದೆ. ಕರಿಬಣ್ಣದ ಎತ್ತು ಕರೆ ಹರಿದರೆ ಯಾವ ಬೆಳೆಯೂ ಸಮೃದ್ಧಿಯಾಗದೆ ಬರಗಾಲ ಉಂಟಾಗುತ್ತದೆ ಎಂಬುದು ರೈತರ ನಂಬಿಕೆಯಾಗಿದೆ.

## ೧೬. ಮಣ್ಣೆತ್ತಿನ ಅಮಾವಾಸ್ಯೆ

ಕಾರಹುಣ್ಣಿಮೆಯ ನಂತರ ಬರುವುದೇ ಮಣ್ಣೆತ್ತಿನ ಅಮಾವಾಸ್ಯೆ. ಜ್ಯೇಷ್ಠ ಮಾಸದಲ್ಲಿನ ಕೊನೆಯ ಹಬ್ಬವಾಗಿ ಆಚರಣೆಗೊಳ್ಳುತ್ತದೆ. ಕಾರಹುಣ್ಣಿಮೆಯಂದು ಜೀವಂತ ಎತ್ತುಗಳಿಗೆ ಪೂಜೆ ಸಲ್ಲಿಸಿದರೆ, ಮಣ್ಣೆತ್ತಿನ ಅಮಾವಾಸ್ಯೆಯಂದು ಮಣ್ಣಿನ ಎತ್ತುಗಳು ಪೂಜಿಸಲ್ಪಡುತ್ತವೆ. ಮಣ್ಣಿನ ಬಸವನಿಗೆ 'ಮಣ್ಣೆತ್ತು' ಎಂದು ಕರೆಯುತ್ತಾರೆ. ಕುಂಬಾರರು ಕೆರೆಯ ಎರೆಮಣ್ಣು ತಂದು ಮಣ್ಣೆತ್ತುಗಳನ್ನು ತಯಾರಿಸುತ್ತಾರೆ. ಹಬ್ಬದ ಹಿಂದಿನ ದಿನ ಕುಂಬಾರರು ಬುಟ್ಟಿಯಲ್ಲಿ ತಾವು ತಯಾರಿಸಿದ ಮಣ್ಣೆತ್ತುಗಳನ್ನು ತುಂಬಿಕೊಂಡು ಗ್ರಾಮೀಣ ಭಾಗಗಳಲ್ಲಿ ಹೊತ್ತು ಮಾರುತ್ತಾರೆ. ಕೆಲವು ಸಾರಿ ರೈತರು ತಮ್ಮ ಹೊಲದ ಮಣ್ಣು ಇಲ್ಲವೇ ಹುತ್ತಿನ ಮಣ್ಣಿನಿಂದ ಅಲಂಕಾರಿಕವಾದ ಜೋಡಿ ಎತ್ತುಗಳು ಮತ್ತು ಗ್ವಾದಲಿ ತಯಾರಿಸುತ್ತಾರೆ. ಅವು ದೇವರ ಜಗುಲಿಯ ಮೇಲೆ ಪ್ರತಿಷ್ಠಾಪನೆಗೊಂಡು ಪೂಜಿಸಲ್ಪಡುತ್ತವೆ. ಹಬ್ಬದ ದಿನ ಬೆಳಿಗ್ಗೆ ರೈತರು ತಮ್ಮ ಜಾನುವಾರುಗಳನ್ನು ಕೆರೆ, ಕಾಲುವೆ, ಹಳ್ಳಗಳಲ್ಲಿ ಮೈತೊಳೆದು ಸ್ವಚ್ಛಗೊಳಿಸಿ, ಅವುಗಳಿಗೆ ಗೆಜ್ಜೆಸರ, ಗಂಟೆ, ಹಣೆಗಜ್ಜೆ ಕಟ್ಟಿಕೊಂಡು, ಮೈತುಂಬಾ ರಂಗು ಹಚ್ಚಿಸಿಕೊಂಡು ಅಲಂಕಾರಗೊಳ್ಳುತ್ತವೆ.

ಅಂದು ಮಧ್ಯಾಹ್ನ ಮಕ್ಕಳು ಮಣ್ಣೆತ್ತುಗಳನ್ನು ಕಟ್ಟಿಗೆಯ ಮಣೆಯ ಮೇಲಿಟ್ಟುಕೊಂಡು ಮನೆ ಮನೆಗೆ ಹೋಗಿ 'ಬಸವಾ, ಬಸವಾ ಬಂದಾನೇ, ಜೋಳದ ಫಲವಾ ತಂದಾನೇ, ರಾಗಿ ಫಲವಾ ತಂದಾನೇ, ಬತ್ತದ ಫಲವ ತಂದಾನೇ, ಸಜ್ಜೆ ಫಲವಾ ತಂದಾನೇ ಬಸವೇನಂದ ಮಳೆ ಬರಲಿ ಎಂದ' ಎಂದು ಹಾಡುತ್ತಾ ಸಾಗುತ್ತಾರೆ. ಮನೆಯ ಒಡತಿ ತಾವು ಪೂಜಿಸಿದ ಮಣ್ಣೆತ್ತುಗಳ ಜೊತೆಗೆ ದವಸ-ಧಾನ್ಯಗಳನ್ನು ನೀಡುತ್ತಾಳೆ. ಈ ರೀತಿ ಪ್ರತಿ ಮನೆಗಳಿಗೆ ಹೋಗಿ ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಸಂಗ್ರಹವಾದ ಧಾನ್ಯಗಳನ್ನು ಮಾರಿ, ಬಂದ ಹಣದಿಂದ ತಮಗೆ ಬೇಕಾದ ತಿನಿಸನ್ನು ಜೊತೆಗೆ ಪೂಜಾ ಸಾಮಗ್ರಿಗಳನ್ನು ಖರೀದಿಸುತ್ತಾರೆ. ಮಣ್ಣೆತ್ತುಗಳನ್ನು ಪೂಜಿಸಿ, ನಂತರ ನೀರಿನಲ್ಲಿ ವಿಸರ್ಜಿಸಲಾಗುತ್ತದೆ. ತಾವು ತಂದ ತಿನಿಸುಗಳನ್ನು ಹಂಚಿಕೊಂಡು ತಿನ್ನುತ್ತಾರೆ.

ಜನಪದ ಕತೆಯ ಪ್ರಕಾರ ಮಣ್ಣೆತ್ತನ್ನು ಪೂಜಿಸಿ ತನ್ನ ಪಾತಿವ್ರತ್ಯದ ಪ್ರಭಾವದಿಂದ ಸತ್ತ ಗಂಡನ ಪ್ರಾಣ ಹಿಂದಿರುಗಿ ಪಡೆದವಳು ಶಿವಶರಣೆ ಚೆನ್ನಮ್ಮ. ಈ ಪ್ರಸಂಗ ಜೇಷ್ಠ ಮಾಸದ ಅಮವಾಸ್ಯೆಯ ದಿನ ನಡೆದಿದ್ದರಿಂದ ಅದನ್ನು ಮಣ್ಣೆತ್ತಿನ ಅಮವಾಸ್ಯೆ ಎಂದು ಕರೆಯುವ ವಾಡಿಕೆಯಿದೆ. ಈಗಲೂ ರೋಹಿಣಿ ನಕ್ಷತ್ರಕ್ಕೆ 'ಚೆನ್ನಮ್ಮನ ದಂಡೆ' ಎಂದು ಕರೆಯುತ್ತಾರೆ. ದೀರ್ಘಕಾಲ ಮುತ್ತೈದೆತನ ಸಿಗಲೆಂಬ ಆಶಯದಿಂದ ಮಹಿಳೆಯರು ವಿಶೇಷವಾಗಿ ಮಣ್ಣೆತ್ತುಗಳನ್ನು ಪೂಜಿಸುತ್ತಾರೆ. ಉತ್ತು-ಬಿತ್ತಲು ಕೃಷಿಕರ ಜೀವನಾಡಿಯಾದ ಎತ್ತುಗಳು ಅತಿಮುಖ್ಯವಾದುವಗಳೆಂಬುದು ಆಚರಣೆಯ ಹಿನ್ನೆಲೆಯಾಗಿದೆ. ಜೀವನಾಧಾರವಾದ ಮಣ್ಣು, ಎತ್ತುಗಳ ರೂಪದಲ್ಲಿ ಪೂಜಿಸಲ್ಪಡುತ್ತಿರುವುದು ಕಂಡುಬರುತ್ತದೆ.

## ೧೭. ಜಾನುವಾರುಗಳನ್ನು ದೇವರಿಗೆ ಬಿಡುವ ಸಂಪ್ರದಾಯ

ಎತ್ತು ಶಿವನ ವಾಹನ. ನಂದಿಯ ಅಂಶ. ಈ ನಂಬಿಕೆಯ ಹಿನ್ನೆಲೆಯಲ್ಲಿ ಹೊಸಪೇಟೆ ತಾಲ್ಲೂಕಿನಲ್ಲಿ ಆಯಾ ಭಾಗದ ಸ್ಥಳೀಯ ದೈವದ ಹೆಸರಲ್ಲಿ, ಹರಕೆ ತೀರಿಸುವ ಸಲುವಾಗಿ ದನ-ಕರುಗಳನ್ನು, ಕೋಣಗಳನ್ನು ದೇವರಿಗೆ ಬಿಡುವ ಸಂಪ್ರದಾಯವಿದೆ. ಇದನ್ನು ಬಸವಿ ಬಿಡುವುದು ಎಂದು ಕರೆಯುತ್ತಾರೆ. ಹೀಗೆ ಬಸವಿ ಬಿಡುವುದಕ್ಕೆ ಅನೇಕ ಕಾರಣಗಳಿವೆ. ಆಕಳು ಕರು ಹಾಕದೇ ಬಂಜೆಯಾಗಿದ್ದರೆ, ಹುಟ್ಟಿದ ಕರುಗಳು ಸಾಯುತ್ತಿದ್ದರೆ, ಗುಂಪಿನಲ್ಲಿಯ ಆಕಳುಗಳು ಸಾಯುತ್ತಿದ್ದರೆ, ಆಕಳು ಬರೀ ಹೋರಿ ಕರುಗಳನ್ನು ಹಾಕುತ್ತಿದ್ದರೆ ಆಗ ಆಕಳು ಅಥವಾ ಹೋರಿಗಳನ್ನು ಬಸವಿ ಬಿಡುತ್ತಾರೆ. ಎಮ್ಮೆ ಬರೀ ಕೋಣದ ಕರುಗಳನ್ನು ಹಾಕುತ್ತಿದ್ದರೆ, ಮೊದಲು ಹುಟ್ಟಿದ ಕೋಣದ ಕರುವನ್ನು ಊರಿನ ಗ್ರಾಮದೇವತೆಯ ಹೆಸರಿನಲ್ಲಿ ಬಸವಿ ಬಿಡುತ್ತಾರೆ.

ಬಸವಿ ಬಿಡುವ ಆಕಳಿಗೆ ಸ್ನಾನ ಮಾಡಿಸಿ ಗುಡಿಗೆ ಎಳೆತಂದು, ಕುಂಕುಮ, ಹೂ, ಪತ್ರೆ ಹಾಕಿ ದೈವದ ಹೆಸರಲ್ಲಿ ಪೂಜಿಸುವುದರೊಂದಿಗೆ ಸ್ವತಂತ್ರವಾಗಿಸುತ್ತಾರೆ. ದನ-ಕರುಗಳನ್ನು ನಿರ್ದಿಷ್ಟವಾಗಿ ಯಾವ ದೇವರಿಗೆ ಬಸವಿ ಬಿಡಲಾಗುತ್ತದಯೋ ಅಂತಹ ದೇವರುಗಳ ಚಿತ್ರಗಳನ್ನು ಕಾದ ಕಬ್ಬಿಣದ ಸರಳುಗಳಿಂದ ಅವುಗಳ ಮೈಮೇಲೆ ಚಿತ್ರ ಬಿಡಿಸಲಾಗುತ್ತದೆ. ಅಂದಿನಿಂದ ಆ ದನ-ಕರುಗಳು ಸ್ವತಂತ್ರವಾಗಿರುತ್ತವೆ. ಈ ರೀತಿಯ ಆಚರಣೆಗೆ ಒಳಪಟ್ಟ ದನ-ಕರುಗಳು ಯಾರ ಗದ್ದೆಗಳಿಗೆ ನುಗ್ಗಿ ಬೆಳೆ ನಾಶ ಮಾಡಿದರೂ ಅವುಗಳನ್ನು ಯಾರೂ ಕಟ್ಟಿ ಹಾಕುವಂತಿಲ್ಲ, ಬೈಯ್ಯುವಂತಿಲ್ಲ ಮತ್ತು ಅವುಗಳಿಗೆ ಹೊಡೆಯುವಂತಿಲ್ಲ. ಒಂದು ವೇಳೆ ಯಾರಾದರೂ ಈ ನಿಯಮಗಳನ್ನು ಮುರಿದರೆ ಅವರಿಗೆ ಕೆಡಕುಂಟಾಗುತ್ತದೆ ಎಂಬ ನಂಬಿಕೆಗಳು ಪ್ರಚಲಿತದಲ್ಲಿವೆ.

ಹೀಗೆ ಬಸವಿ ಬಿಟ್ಟ ದನ-ಕರುಗಳು ಯಾರ ಮನೆಯ ಮುಂದೆ ನಿಲ್ಲುವವೋ, ಅವರುಗಳು ಅದಕ್ಕೆ ಪೂಜೆ ಮಾಡಿ, ಆಹಾರ ನೀಡುತ್ತಾರೆ ಮತ್ತು ಅವುಗಳನ್ನು ಗೌರವದಿಂದ ಕಾಣುತ್ತಾರೆ. ಬಸವಿ ದನ-ಕರುಗಳು ಸತ್ತರೆ ಮನುಷ್ಯನಿಗೆ ಮಾಡಿದಂತೆ ವಿಧಿವತ್ತಾಗಿ ಅಂತ್ಯ ಸಂಸ್ಕಾರವನ್ನು ಮಾಡುತ್ತಾರೆ. ಆದರೆ, ಊರಿನ ಗ್ರಾಮದೇವತೆಗೆ ಬಸವಿ ಬಿಟ್ಟ ಕೋಣವನ್ನು ದೇವಿಗೆ ಬಲಿ ನೀಡುತ್ತಾರೆ. ಕೋಣದ ಬಲಿ ದೇವಿಗೆ ಪ್ರಿಯವಾದದ್ದು. ಇದರಿಂದ ಕೋಣವನ್ನು ಬಲಿ ನೀಡುವುದರಿಂದ ದೇವತೆ ಸಂತೋಷಗೊಳ್ಳುತ್ತಾಳೆ ಎಂಬ ನಂಬಿಕೆ ಜನರಲ್ಲಿದೆ. ಐದು ಅಥವಾ ಒಂಬತ್ತು ವರ್ಷಕ್ಕೊಮ್ಮೆ ನಡೆಯುವ ಊರಹಬ್ಬದಂದು ಕೋಣವನ್ನು ಬಲಿ ನೀಡಲಾಗುತ್ತದೆ.

ಕಾದ ಸರಳುಗಳಿಂದ ಹಾಕಲಾಗುವ ಲಿಂಗಮುದ್ರೆಯ ಸಂಕೇತದಿಂದ ಜಾನುವಾರುಗಳನ್ನು ಧರ್ಮದ ಅಂಗವಾಗಿಸಿದ್ದಾರೆ. ಜಾನುವಾರುಗಳನ್ನು ಮಾರಾಟ ಮಾಡದಿರಲಿ ಹಾಗೂ ಸ್ವಂತ ಉಪಯೋಗಕ್ಕೆ ಬಳಸದೆ ಸಾರ್ವಜನಿಕರ ಆಸಕ್ತಿಯಾಗಲೆಂಬ ಉದ್ದೇಶವಿದೆ. ಸಾಮಾಜಿಕ ಪ್ರಯೋಜನದ ಜೊತೆ ಸಾಮಾಜಿಕ ತಿಳುವಳಿಕೆ ನೀಡುವ ಅಂಶಗಳು ಆಚರಣೆಯಲ್ಲಿವೆ.

## ೧೮. ಕಿಚ್ಚು ಹಾಯಿಸುವುದು

ಸಂಕ್ರಾಂತಿಯಂದು ಗ್ರಾಮೀಣ ಭಾಗಗಳ ರೈತರು ತಮ್ಮ ಜಾನುವಾರುಗಳಿಂದ ಕಿಚ್ಚು ಹಾಯಿಸುತ್ತಾರೆ. ಈ ಆಚರಣೆ ಸಂಕ್ರಾಂತಿಯ ಪ್ರಮುಖ ಆಕರ್ಷಣೆಯಾಗಿ ಕಂಡು ಬರುತ್ತದೆ. ರೈತನ ಜೀವನಾಧಾರವಾದ ರಾಸುಗಳನ್ನು ಸ್ವಚ್ಛಗೊಳಿಸಿ, ವಿವಿಧ ಬಗೆಯ ಗಂಟೆ ಸರ, ಹೂ ಹಾರ ಹಾಕಿ, ಕೋಡುಗಳಿಗೆ ವಿವಿಧ ಬಣ್ಣಗಳನ್ನು ಹಚ್ಚಿ, ಕೋಡಣಸುಗಳಿಂದ ಶೃಂಗರಿಸುತ್ತಾರೆ. ಹೆಬ್ಬಾಗಿ ಊರ ಹೆಬ್ಬಾಗಿಲಿನಲ್ಲಿ ಈ ಆಚರಣೆ ನೆರವೇರುತ್ತದೆ. ಹೆಬ್ಬಾಗಿಲಿನಲ್ಲಿ ಹಾಕಿದ ಹುಲ್ಲುರಾಶಿಗೆ ಬೆಂಕಿ ಹಚ್ಚುತ್ತಾರೆ. ಪ್ರಜ್ವಲಿಸುವ ಬೆಂಕಿ ಜ್ವಾಲೆಯಲ್ಲಿ ರಾಸುಗಳು ಕಿಚ್ಚು ಹಾಯುತ್ತವೆ. ವಾದ್ಯಗಳ ಸದ್ದು, ರಾಸುಗಳ ಗಂಟೆ ನಾದದ ಸದ್ದು, ಜೊತೆಗೆ ಜನರ ಕೇಕೆ, ಕೂಗಾಟಗಳಿಂದ ರಾಸುಗಳು ಬೆದರಿ ಅನಿವಾರ್ಯವಾಗಿ ಓಡಲಾರಂಭಿಸುತ್ತವೆ. ಸದ್ದು, ಗದ್ದಲಗಳು ಹೆಚ್ಚಾದಂತೆಲ್ಲಾ, ಬೆದರಿದ ರಾಸುಗಳು ಹೆಚ್ಚು ಮೇಲಕ್ಕೆ ಹಾರುತ್ತವೆ.

ಉರಿಯುವ ಬೆಂಕಿ ಜ್ವಾಲೆಯಲ್ಲಿ ಅಲಂಕೃತಗೊಂಡ ಎತ್ತುಗಳ ಜೊತೆ, ಅವುಗಳ ಒಡೆಯರು ಜಿಗಿಯುವ ದೃಶ್ಯ ಜನ ಮತ್ತು ಜಾನುವಾರುಗಳ ನಡುವಿನ ಸ್ಪರ್ಧೆಯಂತೆ ಗೋಚರಿಸುತ್ತದೆ. ಸಾಯಂಕಾಲ ನಡೆಯುವ ಆಚರಣೆಯಲ್ಲಿ ಕಿಚ್ಚು ಹಾಯ್ದು ಬಂದ ರಾಸುಗಳ ಕಾಲು ತೊಳೆದು, ಪಾದಗಳಿಗೆ ಕುಂಕುಮ, ವಿಭೂತಿ ಹಚ್ಚಿ ಬರಮಾಡಿಕೊಳ್ಳುತ್ತಾರೆ. ಬೆದರಿದ ರಾಸುಗಳಿಗೆ ಮೈದಡವಿ ಎಡೆ ತಿನ್ನಿಸುತ್ತಾರೆ. ಇದು ರೈತರು ಮತ್ತು ಜಾನುವಾರುಗಳ ಬಗೆಗಿನ ಅನ್ಯೋನ್ಯತೆಯ ಸಂಕೇತವಾಗಿದೆ. ಆ ದಿನ ವ್ಯವಸಾಯಕ್ಕೆ ಎತ್ತುಗಳನ್ನು ಬಳಸುವುದಿಲ್ಲ. ಕೆಲವೆಡೆ ಜಾನುವಾರುಗಳ ಮೈಮೇಲೆ ಕಬ್ಬಿಣದ ಬಳೆಯಿಂದ ಬರೆ ಹಾಕಿದರೆ, ಮತ್ತೆ ಕೆಲವೆಡೆ ಅವುಗಳ ಮೈಮೇಲೆ ಕಬ್ಬಿಣದ ಬಳೆಯನ್ನು ಬಣ್ಣದಲ್ಲಿ ಅದ್ದಿ ಚಿತ್ರ ಬಿಡಿಸುತ್ತಾರೆ. ಕಿಚ್ಚು ಹಾಯ್ದು ಬಂದ ರಾಸುಗಳಿಗೆ ಒನಕೆಯನ್ನು ಬಾಗಿಲಲ್ಲಿ ಅಡ್ಡ ಇಟ್ಟು, ಅದರ ಮೇಲೆ ದಾಟಿಸುವ ಸಂಪ್ರದಾಯವಿದೆ. ಜಾನುವಾರುಗಳಿಗೆ ಕಾಯಿಲೆ ಬಾರದಿರಲೆಂಬ ಉದ್ದೇಶದಿಂದ ಕಬ್ಬಿಣ ಕಾಯಿಸಿ ಬರೆ ಹಾಕಲಾಗುತ್ತದೆ.

ಸಂಕ್ರಾಂತಿ ಹಬ್ಬವು ಸೂರ್ಯಾರಾಧನೆ ಜೊತೆ, ಹಸುಗಳ ಆರಾಧನೆಯು ಆಗಿದೆ. ಕೃಷಿಕರು ಹಸುಗಳಲ್ಲಿ ದೇವತೆಯನ್ನು ಕಾಣುತ್ತಾರೆ. ಕಾಮಧೇನುವೆಂದು ಗೌರವಿಸುತ್ತಾರೆ. ಶಿವನ ವಾಹನವನ್ನಾಗಿಸಿ ದೈವತ್ವಕ್ಕೇರಿಸಿದ್ದಾರೆ. ಸಂಕ್ರಮಣ ಕಾಲದಲ್ಲಿ ಪ್ರಾಣಿ, ಪಕ್ಷಿ ಹಾಗೂ ಮನುಷ್ಯರ ಮೇಲೆ ಪ್ರಕೃತಿ ತನ್ನ ಪ್ರಭಾವ ಬೀರುತ್ತದೆಂಬುದು ವೈಜ್ಞಾನಿಕ ಸತ್ಯವಾಗಿದೆ. ಇದರಿಂದ ಜಾನುವಾರುಗಳಿಗೆ ಚರ್ಮ ವ್ಯಾಧಿಗಳು ಬರುವುದುಂಟು. ಅವುಗಳ ಮೈ ಸುಡುವಷ್ಟು ತೀಕ್ಷ್ಣವಾದ ಬೆಂಕಿಯ ಬಿಸಿಯಲ್ಲಿ ಓಡಿಸುವುದರಿಂದ, ಧನುರ್ಮಾಸದ ಚಳಿಗಾಳಿಗೆ ಮುದುಡಿದ ಹಸುಗಳ ದೇಹಕ್ಕೆ ಬೆಚ್ಚನೆಯ ಅನುಭವ ನೀಡುತ್ತದೆ. ಜಾನುವಾರುಗಳಿಗೆ ಸೋಂಕು, ಕ್ರಿಮಿಗಳು ನಾಶವಾಗಲೆಂಬ ಹಿನ್ನೆಲೆಯಲ್ಲಿ ಬೆಂಕಿ ಆರಿದ ಮೇಲೆ ಬೂದಿಯನ್ನು ಹಸುಗಳ ಮೈ ಮೇಲೆ ಹಾಕಿ ತಿಕ್ಕುತ್ತಾರೆ. ಇದರಿಂದ ಜಾನುವಾರುಗಳ ಮೈಮೇಲಿನ ಹುಳ, ಹುಪ್ಪಟೆ, ಉಣ್ಣೆಗಳು

ನಾಶವಾಗಿ ಹಸುಗಳ ಮೈ ಹಗುರವಾಗುತ್ತದೆಂಬ ನಂಬಿಕೆಯಿದೆ. ಹಿಂದೆ ಹಸುಗಳಿಗೆ ಕಾಲುಬಾಯಿ ರೋಗ, ಚಪ್ಪೆರೋಗ ಬರುತ್ತಿದ್ದು, ಒಂದೊಂದಾಗಿ ಸಾವನ್ನಪ್ಪುತ್ತಿದ್ದವು. ಅದನ್ನು ತಡೆಗಟ್ಟುವ ಉದ್ದೇಶ ಈ ಆಚರಣೆಯದ್ದಾಗಿರಬೇಕು.

### ೧೯. ಹುಲುಸು ಚೆಲ್ಲುವುದು

ಗ್ರಾಮದೇವತೆಯ ಹಬ್ಬಗಳಲ್ಲಿ ಅತ್ಯಂತ ಮಹತ್ವದ ಮತ್ತು ಅಂತಿಮ ವಿಧಿಕ್ರಿಯೆ ಹುಲುಸು ಚೆಲ್ಲುವ ಆಚರಣೆಯಾಗಿದೆ. ಹೊಲೆಯ ಸಮುದಾಯದ ವ್ಯಕ್ತಿ, ಈ ಆಚರಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾನೆ. ಈತನು ಗ್ರಾಮದೇವತೆಗೆ ಬಲಿ ನೀಡಲಾದ ಕೋಣದ ರಕ್ತದ ಜೊತೆ ಬೆರೆತ ಅನ್ನವನ್ನು ಬೆತ್ತಲೆಯಾಗಿ ಗ್ರಾಮದ ಗಡಿಯ ಸುತ್ತ ಹುಲುಸು ಚೆಲ್ಲುತ್ತಾ ಸಾಗುತ್ತಾನೆ. ಬೆತ್ತಲೆಯಾಗುವುದು ಹಾಗೂ ರಕ್ತಮಿಶ್ರಿತ ಆಹಾರ ಚೆಲ್ಲುವಿಕೆ ಬಲಿಯ ಸಂಕೇತವಾಗಿದೆ. ಇಲ್ಲಿಯೂ ಸಹ ಪುರುಷನ ಬಲಿಯಾಗುವಿಕೆಯ ಅನುಕರಣೆಯಿದೆ. ಹುಲುಸು ಚೆಲ್ಲುವವನ ಪತ್ನಿ ಬಿಳಿ ಸೀರೆಯುಟ್ಟು, ಆಚರಣೆ ಮುಗಿಯುವವರೆಗೂ ತನ್ನ ಮೂಗಲ್ಲಿರುವ ಮೂಗುತಿ ತಿರುಗಿಸುತ್ತಾ ಇರಬೇಕು. ಈ ವರ್ತನೆಗಳು ಹಿಂದೆ ನರಬಲಿ ಇತ್ತೆಂದು, ಬಲಿಯಾದವನ ಪತ್ನಿ ವಿಧವೆಯಾಗುತ್ತಿದ್ದಳೆಂಬುದನ್ನು ಸಾಬೀತುಪಡಿಸುತ್ತದೆ. ಹುಲುಸು ಚೆಲ್ಲುವಾಗ ತೊಂದರೆಯಾದರೆ ತಿರುಗಿಸುವ ಮೂಗುತಿ ನಿಂತು ಬಿಡುತ್ತದೆಂಬ ನಂಬಿಕೆಯಿದೆ.

ಹುಲುಸು ಚೆಲ್ಲುವುರಿಂದ ಉತ್ತಮ ಮಳೆ-ಬೆಳೆ ಸಮೃದ್ಧಿಯಾಗುವುದರ ಜೊತೆಗೆ ಗ್ರಾಮವು ಸುಭಿಕ್ಷವಾಗಿರುತ್ತದೆ ಎಂಬ ನಂಬಿಕೆಯೇ ಈ ಆಚರಣೆಯ ಮುಂದುವರಿಕೆಗೆ ಮೂಲ ಕಾರಣವಾಗಿದೆ. ಹುಲುಸಿನೊಂದಿಗೆ ಗ್ರಾಮದೇವತೆಯ ಸಂಚಾರವಾಗುತ್ತದೆ. ಆಗ ದೈವದ ಪಾದಸ್ಪರ್ಶದಿಂದ ಭೂಮಿ ಗಟ್ಟಿಗೊಂಡು ಫಲ ಸಮೃದ್ಧಿಯಾಗುವುದೆಂಬ ಆಶಯ ಗ್ರಾಮೀಣ ರದ್ದಾಗಿದೆ. ಗ್ರಾಮದ ಸುತ್ತ ಹುಲುಸಿನ ರೂಪದಲ್ಲಿ ದೈವಶಕ್ತಿ ಇದೆ ಎಂದು ಪರಿಭಾವಿಸುತ್ತಾರೆ. ಯಾವುದೇ ರೀತಿಯ ದುಷ್ಟಶಕ್ತಿಗಳ ಬಾಧೆ ಗ್ರಾಮಕ್ಕಿರುವುದಿಲ್ಲ ಎಂಬುದು ಅವರ ನಂಬಿಕೆ. ಗ್ರಾಮದವರೆಲ್ಲಾ ಇಂಥ ಬಿಡುಗಡೆಯ ಭಾಗ್ಯವನ್ನು ಗ್ರಾಮದೇವತೆಯನ್ನು ಆಶ್ರಯಿಸುವುದರ ಮೂಲಕ ಪಡೆಯುತ್ತಾರೆ.

### ೨೦. ಬಾಳೆದಿಂಡಿನ ಹರಕೆ

ಕಮಲಾಪುರ ಹೋಬಳಿಯ ಪಾಪಿನಾಯಕನಹಳ್ಳಿ ಗ್ರಾಮದೇವತೆ ಅಂಕ್ಲಮ್ಮ ದೇವಿಯ ಫೆಬ್ರವರಿ ತಿಂಗಳಲ್ಲಿ ನಡೆಯುವ ಉತ್ಸವದಲ್ಲಿ ಬಾಳೆದಿಂಡಿನ ಪವಾಡದ ಆಚರಣೆ ಪ್ರಚಲಿತದಲ್ಲಿದೆ. ವಿಭೂತಿ, ಅರಿಶಿಣ, ಕುಂಕುಮ, ಬೇವಿನಸೊಪ್ಪಿನಿಂದ ಅಲಂಕೃತಗೊಂಡ ಬಾಲಕನೇ ಆಚರಣೆಯಲ್ಲಿ ಪ್ರಮುಖ ವ್ಯಕ್ತಿ. ಇಲ್ಲಿ ಬಲಿಯ ಪ್ರತೀಕವಾಗಿ ಬೇವು ಬಳಸಲ್ಪಡುತ್ತದೆ. ಬಾಳೆದಿಂಡಿನೊಂದಿಗೆ ಬಾಲಕನನ್ನು ಹೊತ್ತವರು ಗುಡಿಯನ್ನು ಐದು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ಮೂರನೇ ಸುತ್ತಿನ ಪ್ರದಕ್ಷಿಣೆ ಸಮಯದಲ್ಲಿ ಬಾಲಕನ ಜೀವ ಹೋಗಿರುತ್ತದೆಂದು ಜನ ನಂಬುತ್ತಾರೆ. ಆಗ ಜೋಗತಿಯರು ದೇವಿಯ ಎದುರು ಬಾಲಕನನ್ನು ಮಲಗಿಸಿ ಬಯ್ಯಲು ಪ್ರಾರಂಭಿಸುತ್ತಾರೆ.

ಹರಕೆಯಲ್ಲಿ ಆಗುವ ಲೋಪ ದೋಷಗಳನ್ನು ತಿದ್ದಿಕೊಳ್ಳುತ್ತೇವೆಂದು, ನಾನಾ ರೀತಿಯ ಹರಕೆ ತೀರಿಸುತ್ತೇವೆಂದು, ಉತ್ಸವ ಆಚರಿಸುವುದಿಲ್ಲವೆಂದು ಹೀಗೆ ದೇವರನ್ನು ಹರಿಸುವ ರೀತಿಯಲ್ಲಿ ಬಯ್ಯುತ್ತಾರೆ. ಆಗ ಗುಡಿಯ ಪೂಜಾರಿ ದೇವಿಯ ತೀರ್ಥವನ್ನು ಬಾಲಕನ ಮುಖದ ಮೇಲೆ ಸಿಂಪಡಿಸಿದಾಗ ಬಾಲಕನಿಗೆ ಪ್ರಜ್ಞೆ ಮರಳುತ್ತದೆಂಬ ನಂಬಿಕೆಯಿದೆ. ಇದು ಮೂಲದಲ್ಲಿ ನರಬಲಿ ಆಚರಣೆಯಾಗಿದ್ದು, ಇಂದು ಬಾಳೆದಿಂಡಿನ ಪವಾಡವಾಗಿ ಸ್ಥಿತ್ಯಂತರಗೊಂಡಿರುವ ಸಾಧ್ಯತೆಯಿದೆ.

ಇಲ್ಲಿ ನರಬಲಿಗೆ ಬದಲಾಗಿ ಬಾಳೆ ಬಳಕೆಯಾಗುತ್ತಿದೆ. ಬಾಳೆ ಒಂದೇ ಫಲದೊಂದಿಗೆ ಅಂತ್ಯ ಕಾಣುವ ಸಸ್ಯವಾಗಿದ್ದು, ಈ ಹಿನ್ನೆಲೆಯಲ್ಲಿ ಬಾಳೆಯನ್ನು ಅನಿಷ್ಟದ ಜನನವೆಂದು ಗ್ರಾಮೀಣರು ಆಚರಣೆಗಳಲ್ಲಿ ಪರಿಭಾವಿಸುತ್ತಾರೆ. ಇಲ್ಲಿ ಉಗ್ರ ನಾಟಕೀಯತೆಯ ಮೂಲಕ ಬಲಿ ನೀಡಿಕೆಯಾಗುತ್ತದೆ.

### ೨೧. ಕಂಪ್ಲಿ ಕಾಳಮ್ಮನ ಹರಕೆ

ಕಾಳಮ್ಮ ಕಂಪ್ಲಿಯ ಮೀನುಗಾರರ ದೈವ. ಪ್ರತಿವರ್ಷ ಮಾರ್ಚ್ ಹಾಗೂ ಏಪ್ರಿಲ್ ತಿಂಗಳಲ್ಲಿ ಇಲ್ಲಿ ಹರಕೆ ತೀರಿಸುವ ಆಚರಣೆ ನೆರವೇರುತ್ತದೆ. ಸಾಹಸ ಪ್ರದರ್ಶನದ ಮೂಲಕ ಭಕ್ತರು ತಮ್ಮ ದೇಹವನ್ನು ನಾನಾ ವಿಧವಾಗಿ ದಂಡಿಸಿಕೊಳ್ಳುವ ಹರಕೆ ಇದು. ಭಕ್ತರು ಕಬ್ಬಿಣದ ಕೊಕ್ಕೆ ಬೆನ್ನಿಗೆ ಹಾಕಿಕೊಂದು, ನೈಲಾನು ಹಗ್ಗವನ್ನು ಮಾರುತಿ ಕಾರಿಗೆ, ಆಟೋಕ್ಕೆ ಕಟ್ಟಿ ಆಂಜನೇಯ ದೇವಸ್ಥಾನದಿಂದ ಸುಂಕಲಮ್ಮ ಗುಡಿಯವರೆಗೆ ಸುಮಾರು ಎರಡು ಕಿ.ಮೀ.ನಷ್ಟು ದೂರ ಎಳೆದು ಹರಕೆ ತೀರಿಸುತ್ತಾರೆ. ಕೆನ್ನೆಗೆ ಮಾರುದ್ದ ಶಸ್ತ್ರ ಹಾಕಿಸಿಕೊಂಡು ಕಬ್ಬಿಣದ ಗುಂಡು ಹಾಗೂ ದೇವಿಯ ಚಿಕ್ಕ ತೇರನ್ನು ಎಳೆಯುತ್ತಾರೆ. ಪ್ರತಿವರ್ಷ ಮೀನುಗಾರ ಯುವಕರು ಈ ರೀತಿಯ ಹರಕೆ ತೀರಿಸುವುದು ಇಲ್ಲಿಯ ಸಂಪ್ರದಾಯ. ತಮ್ಮ ತಪ್ಪುಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಕ್ಕಾಗಿ ಹರಕೆಯ ರೂಪದಲ್ಲಿ ದೇಹ ದಂಡಿಸಲಾಗುತ್ತದೆಂಬುದು ಭಕ್ತರ ಹೇಳಿಕೆಯಾಗಿದೆ. ಮಹಿಳೆಯರು ಕಳಸ, ಕೆನ್ನೆಗೆ ಶಸ್ತ್ರ ಹಾಕಿಸಿಕೊಳ್ಳುವುದರ ಮೂಲಕ ಹರಕೆ ತೀರಿಸುತ್ತಾರೆ. ಇಲ್ಲಿ ಸಾಹಸ ಪ್ರದರ್ಶನದ ಹರಕೆಗಳು ಪುರುಷರಿಗೆ ಮಾತ್ರ. ಸಿಡಿ ರೂಪದ ಆಚರಣೆಗಳು ಆಧುನಿಕತೆಗೆ ತಕ್ಕಂತೆ ಈ ರೀತಿಯಾಗಿ ಬದಲಾವಣೆಗೊಂಡಿರುವ ಸಾಧ್ಯತೆಯಿದೆ. ಏಕೆಂದರೆ ಕಬ್ಬಿಣದ ಕೊಕ್ಕೆಯನ್ನು ಬೆನ್ನಿಗೆ, ಬಾಯಿಗೆ ಸಿಕ್ಕಿಸಿಕೊಂಡು ವಸ್ತುಗಳನ್ನು ಎಳೆಯುವುರಿಂದ, ಇವು ಬೆನ್ನು ಸಿಡಿ, ಬಾಯಿ ಸಿಡಿ ಪ್ರಕಾರದ ಆಚರಣೆಗಳನ್ನು ಹೋಲುವಂತಿವೆ.

### ೨೨. ದೇವದಾಸಿ ಸಂಪ್ರದಾಯ

'ದೇವದಾಸಿ' ಎಂದರೆ 'ದೇವರ ದಾಸಿಯರು'. ಅಂದರೆ ದೇವರ ಸೇವೆಗೆ ಮೀಸಲಾದವರು ಎಂದರ್ಥ. ಪ್ರಾಚೀನ ಕಾಲದಿಂದಲೂ ಈ ಸಂಪ್ರದಾಯ ಆಚರಣೆಯಲ್ಲಿರುವುದು ಕಂಡುಬರುತ್ತದೆ. ದೇವದಾಸಿ ಸಂಪ್ರದಾಯ ಸಮಾಜದಲ್ಲಿ ಒಂದು ಅನಿಷ್ಟ ಸಂಪ್ರದಾಯಗಳಲ್ಲಿ ಒಂದಾಗಿದ್ದರೂ ಕೂಡ, ಸಮಾಜ ಅದನ್ನು ಸ್ವೀಕರಿಸಿತ್ತು. ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ಗಾಯನ, ನರ್ತನ,

ಆರತಿ ಸೇವೆ, ಚಾಮರ ಸೇವೆ ಇನ್ನಿತರ ಸೇವಾ ಕಾರ್ಯಗಳನ್ನು ಮಾಡುವುದಕ್ಕಾಗಿ ನೇಮಕವಾಗುತ್ತಿದ್ದ ಸ್ತ್ರೀಯರನ್ನು 'ದೇವದಾಸಿ'ಯರೆಂದು ಕರೆಯುತ್ತಿದ್ದರು.

ದೇವದಾಸಿ ಸಂಪ್ರದಾಯವನ್ನು ಮುತ್ತು ಕಟ್ಟಿಸಿಕೊಳ್ಳುವ ಸಂಪ್ರದಾಯ, ಬಸವಿ ಬಿಡುವ ಸಂಪ್ರದಾಯ ಮತ್ತು ದೇವರಿಗೆ ಬಿಡುವ ಸಂಪ್ರದಾಯ ಎಂತಲೂ ಕರೆಯುತ್ತಾರೆ. ಸಮಾಜದ ಕೆಳಸ್ತರದ ಮಾದಿಗ, ಹೊಲೆಯ, ವಡ್ಡ, ಲಂಬಾಣಿ, ಕುರುಬ, ಬೇಡ, ಕೊರಮ ಇತ್ಯಾದಿ ಸಮುದಾಯಗಳಲ್ಲಿ ಈ ಆಚರಣೆ ಕಂಡುಬರುತ್ತದೆ. ಈ ಸಂಪ್ರದಾಯ ವಂಶಪಾರಂಪರ್ಯವಾಗಿ ಅಲ್ಲದಿದ್ದರೂ ಕೆಲವು ಕುಟುಂಬಗಳಲ್ಲಿ ವಂಶಪಾರಂಪರ್ಯವಾಗಿ ಕಂಡುಬರುವುದನ್ನು ಗಮನಿಸಬಹುದು.

ಕರ್ನಾಟಕದ ಸಂದರ್ಭದಲ್ಲಿ ಈ ಸಂಪ್ರದಾಯವು ಏನಿಲ್ಲವೆಂದರೂ ಕ್ರಿ.ಶ. ೭೭೮-೭೭೯ರಿಂದ ಕಂಡುಬರುತ್ತದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನದಲ್ಲಿ 'ದೇಗುಲದ ಸೂಳೆ'ಯೊಬ್ಬಳು ದಾನ ಕೊಟ್ಟ ವಿಷಯವು ಬಂದಿದೆ. 'ಲೋಕ ಮಹಾದೇವಿಯರ ದೇಗುಲದ ಸೂಳೆ ಗೋಯಿಂದ ಪೊಡ್ಡಿಯ ಮಗಳು ಬಾದಿ ಪೊಡ್ಡಿಯೆಂಬೊಳ್ ಉತ್ತಮ ಗೋಸಾಸ ಮಿಕ್ಕೊಳ್' ಎಂಬ ವಿವರಣೆಯಿದೆ. ಕನ್ನಡ ಶಾಸನಗಳಲ್ಲಿ ಎಲ್ಲಿಯೂ 'ದೇವದಾಸಿ' ಎಂಬ ಪದ ಕಂಡು ಬರುವುದಿಲ್ಲ. ಅದರ ಬದಲು 'ಸೂಳೆ' ಎಂಬ ಪದ ಬರುವುದೇ ಹೆಚ್ಚು. 'ಪಾತ್ರ' ಎಂಬುದೂ ದೇವದಾಸಿಯನ್ನೇ ಸೂಚಿಸುತ್ತದೆ. ೩ನೇ ಸೋಮೇಶ್ವರನ 'ಅಭಿಲಾಷಾತಾರ್ಥ ಚಿಂತಾಮಣಿ'(ಮಾನಸೋಲ್ಲಾಸ ಕ್ರಿ.ಶ. ೧೧೨೯-೩೦)ಯಲ್ಲಿ ದೇವಸ್ಥಾನಗಳಿಗೆ ಕೊಡಬೇಕಾದ ವಸ್ತುಗಳಲ್ಲಿ 'ದಾಸಿಕೆ'ಯರನ್ನೂ ಹೆಸರಿಸಿದೆ. -"ಗೃಹಂ ಗ್ರಾಮಸ್ತ ಥಾ ಭೂಮಿರ್ದಾಸಿಕಾದ್ಯ ವಿಭೂಷಣಂ" ಇಲ್ಲಿ ದಾಸಿಕಾ ಎಂದರೆ 'ದೇವದಾಸಿ' ಎಂದರ್ಥ ಎಂಬ ಹೇಳಿಕೆಯನ್ನು ಎಂ. ಚಿದಾನಂದಮೂರ್ತಿಯವರು ತಮ್ಮ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ - ಕ್ರಿ.ಶ. ೪೫೦-೧೧೫೦ ಕೃತಿಯಲ್ಲಿ ವಿವರಿಸಿದ್ದಾರೆ. ಆದರೆ, ಸಮಾಜಶಾಸ್ತ್ರಜ್ಞರಾದ ಜೋಗನ್‌ಶಂಕರ್ ಅವರು ತಮ್ಮ "ದೇವದಾಸಿ ಸಂಪ್ರದಾಯ" ಕೃತಿಯಲ್ಲಿ 'ಆಲನಹಳ್ಳಿಯಲ್ಲಿ ದೊರೆತ ಕ್ರಿ.ಶ. ೧೧೧೩ನೇ ಶತಮಾನದ ಶಾಸನದಲ್ಲಿ 'ದೇವದಾಸಿ' ಪದದ ಉಲ್ಲೇಖವಿದ್ದು, ಈ ಪದದ ಉಲ್ಲೇಖವಿರುವ ಅತ್ಯಂತ ಪ್ರಾಚೀನ ಶಾಸನ ಇದು ಎಂಬ ಹೇಳಿಕೆಯನ್ನು ನೀಡುತ್ತಾರೆ.

ದೇವದಾಸಿಯರು ದೇವಸ್ಥಾನದ ಅಕ್ಕ-ಪಕ್ಕಗಳಲ್ಲೇ ವಾಸಿಸುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಕೆಲವು ಶಾಸನಗಳಲ್ಲಿ 'ಸೂಳೆವಳ' ಎಂಬ ವ್ಯಕ್ತಿಗೂ ದಾನವನ್ನು ಕೊಟ್ಟಂತೆ ಕಂಡುಬರುತ್ತದೆ. ಇವನು ದೇವಸ್ಥಾನ ಸೂಳೆಯರ ಮೇಲ್ವಿಚಾರಕನಾಗಿ ಕೆಲಸ ನಿರ್ವಹಿಸುತ್ತಿದ್ದನೆಂಬುದಾಗಿ ತಿಳಿದುಬರುತ್ತದೆ. ಪ್ರಾಚೀನ ಹಿಂದೂ ಗ್ರಂಥಗಳಲ್ಲಿ ಏಳು ವಿಧದ ದೇವದಾಸಿಯರ ಉಲ್ಲೇಖಗಳು ಸಿಗುತ್ತವೆ.

೧. ದತ್ತಾ:- ತನ್ನನ್ನು ತಾನೇ ಯಾವುದಾದರೂ ದೇವಾಲಯವೊಂದಕ್ಕೆ ಅರ್ಪಿಸಿಕೊಂಡವಳು.

೨. ವಿಕ್ರೀತಾ:- ದೇವಾಲಯದ ಸೇವಾ ಕಾರ್ಯಗಳಿಗಾಗಿ ತನ್ನನ್ನೇ ಮಾರಿಕೊಂಡವಳು.

೩. ಭೃತ್ಯಾ:- ತನ್ನ ಕುಟುಂಬದವರ ಪೋಷಣೆಯ ಸಲುವಾಗಿ ದೇವದಾಸಿಯಾದವಳು.

೪. ಭಕ್ತಾ:- ಕೇವಲ ಭಕ್ತಿ-ಭಾವಗಳಿಂದ ಪ್ರೇರಿತಳಾಗಿ ದೇವಾಲಯವನ್ನು ಪ್ರವೇಶಿಸಿದವಳು.

೫. ಹೃತಾ:- ಅಪಹರಿಸಿಕೊಂಡು ತಂದ ಹೆಣ್ಣು. ದೇವಾಲಯಕ್ಕೆ ಉಡುಗೊರೆಯಾಗಿ ಬಂದವಳು.

೬. ಅಲಂಕಾರಾ:- ರಾಜ ಅಥವಾ ಮಂತ್ರಿ ಯಾವ ಯುವತಿಯನ್ನು ಅಪೇಕ್ಷಿತ ಪರಂಪರೆಯಲ್ಲಿ ಸಂಪೂರ್ಣ ದೀಕ್ಷತೆಯೆಂದು ಭಾವಿಸುತ್ತಿದ್ದರೊ ಅಂಥ ಯುವತಿಯನ್ನು ಅಲಂಕರಿಸಿ ದೇವಾಲಯಕ್ಕೆ ಒಪ್ಪಿಸಲಾಗುತ್ತಿತ್ತು.

೭. ರುದ್ರಗಣಿಕಾ ಅಥವಾ ಗೋಪಿಕಾ:- ನಿಯಮಿತ ವೃತ್ತಿ ಅಥವಾ ವೇತನ ಪಡೆದು ನಾಟ್ಯ, ಗಾಯನ ಮೊದಲಾದ ಕೆಲಸಗಳನ್ನು ನಿರ್ವಹಿಸುವಳು.

ಈ ವಿವರಗಳನ್ನು ಗಮನಿಸಿದಾಗ ದೇವರನ್ನು ಜೀವಂತ ವ್ಯಕ್ತಿಯಂತೆ ಭಾವಿಸಿ ವೈಭವದಲ್ಲಿ ಬಾಳುವ ಒಬ್ಬ ವ್ಯಕ್ತಿಯ ಎಲ್ಲಾ ಭೋಗಗಳನ್ನು ದೇವರಿಗೆ ಅರ್ಪಿಸುವ ಸಂಪ್ರದಾಯ ದೇವದಾಸಿ ಸಂಪ್ರದಾಯದ ಮೂಲವಾಗಿರಬೇಕು ಎಂದು ತಿಳಿಯುತ್ತದೆ.

ದೇವದಾಸಿ ಸಂಪ್ರದಾಯವನ್ನು ಆರಂಭಿಸಿದವರು ಅರಸರು ಎಂದು ಶಾಸನಗಳಿಂದ ತಿಳಿಯುತ್ತದೆ. ರಾಜರುಗಳು ದೇವಸ್ಥಾನಗಳನ್ನು ಕಟ್ಟಿಸಿ, ಅದರ ನಿರ್ವಹಣೆಗೆ ದೇವದಾಸಿಯರನ್ನು ನೇಮಿಸುತ್ತಿದ್ದರು. ದೇವಸ್ಥಾನದ ಆವರಣವನ್ನು ಶುದ್ಧವಾಗಿಟ್ಟುಕೊಳ್ಳುವುದು, ದೇವರ ವಿಗ್ರಹಗಳನ್ನು ಶುಚಿಯಾಗಿಡುವುದು, ಅರ್ಚಕರ ಪೂಜೆಗೆ ಸಹಾಯ ಮಾಡುವುದು, ನೈವೇದ್ಯ ತಯಾರಿಸುವುದು ಈ ಎಲ್ಲಾ ಕೆಲಸಗಳನ್ನು ದೇವದಾಸಿಯರು ಮಾಡುತ್ತಿದ್ದರು. ಅವರು ಹಾಡಿ, ನರ್ತಿಸಿ ದೇವರನ್ನು ಪೂಜಿಸುತ್ತಿದ್ದರು. ನಂತರ ಅರಸರು, ಅರ್ಚಕರು, ಊರ ಶ್ರೀಮಂತರು, ಭೂ ಮಾಲೀಕರು ದೇವರ ಸೇವೆಯೊಂದಿಗೆ ತಮ್ಮ ಸೇವೆಯನ್ನೂ ಮಾಡಲು ದೇವದಾಸಿಯರನ್ನು ಬಳಸಿಕೊಂಡರು.

ರಾಜರು ದೇವದಾಸಿಯರನ್ನು ಭೋಗಿಸುವಾಗ ದೇವಸ್ಥಾನದ ಅರ್ಚಕರು ತಾವು ದೇವರ ಪ್ರತಿರೂಪ ಆಗಿರುವುದರಿಂದ ದೇವದಾಸಿಯರನ್ನು ಭೋಗಿಸಲು ತಮಗೂ ಅಧಿಕಾರವಿದೆ ಎಂದು ವಾದಿಸಿದರು. ರಾಜರುಗಳಿಗೂ ಅರ್ಚಕರಿಗೂ ಈ ವಿಷಯವಾಗಿ ವಾಗ್ವಾದಗಳೇ ನಡೆದವು. ದೇವದಾಸಿಯರನ್ನು ನೋಡಿಕೊಳ್ಳುವುದು, ಊಟ-ವಸತಿಗಳನ್ನು ನೀಡುವುದು ತಾನೇ ಆದ್ದರಿಂದ ಅವರಿಗೆ ಒಡೆಯ ತಾನೇ ಎಂದು ರಾಜವಾದಿಸಿದರೆ, ದೇವಸ್ಥಾನದಲ್ಲಿ ದೇವರನ್ನು ಪೂಜಿಸುವವನು ತಾನು, ತನಗೆ ಸಹಕರಿಸುವವರು ದೇವದಾಸಿಯರಾದ್ದರಿಂದ ಅವರನ್ನು ಭೋಗಿಸಲು ತನಗೂ ಅಧಿಕಾರವಿದೆ ಎಂದು ಅರ್ಚಕರೂ ವಾದಿಸಿದರು. ಕೊನೆಗೆ ರಾಜರೂ, ಅರ್ಚಕರೂ ಒಂದು ಒಪ್ಪಂದಕ್ಕೆ ಬಂದರು. ರಾಜನಿಗೆ ವೇಶ್ಯೆಯರಾಗುವ ದೇವದಾಸಿಯರು ಎದೆಗೆ 'ಚಕ್ರ' ಮತ್ತು 'ಗರುಡ'ನ ಗುರುತು ಹಾಕಿಕೊಳ್ಳುತ್ತಿದ್ದರು. ಅರ್ಚಕರಿಗೆ ವೇಶ್ಯೆಯರಾಗುವ ದೇವದಾಸಿಯರು 'ಶಂಖ'ದ ಗುರುತನ್ನು ಹಾಕಿಕೊಳ್ಳಬೇಕಿತ್ತು.

ಕ್ರಮೇಣ ರಾಜವಂಶಗಳ ಆಳ್ವಿಕೆ ಅಳಿದ ನಂತರ ಬ್ರಾಹ್ಮಣರು, ಮೇಲ್ಜಾತಿಯ ಶ್ರೀಮಂತರು, ಭೂಮಾಲೀಕರು ತಮ್ಮ ಬಯಕೆಗಾಗಿ ದೇವದಾಸಿಯರನ್ನು ಧರ್ಮದ ಭಯ ಹುಟ್ಟಿಸಿ ವೇಶ್ಯೆಯರನ್ನಾಗಿ ಮಾಡಿಕೊಂಡರು. ರಾಜಪ್ರಭುತ್ವಕ್ಕೂ ದೇವಾಲಯ ಸಂಸ್ಕೃತಿಗೂ ಅನ್ಯೋನ್ಯ ಸಂಬಂಧವಿತ್ತು. ಹೀಗಾಗಿ ಧಾರ್ಮಿಕ ಆವರಣದಲ್ಲಿಯೇ ಹೆಣ್ಣನ್ನು ಲೈಂಗಿಕ ಶೋಷಣೆಗೆ ಒಳಗು ಮಾಡುವ ದೇವದಾಸಿ ಸಂಪ್ರದಾಯ ಇನ್ನಷ್ಟು ಗಟ್ಟಿಗೊಂಡಿತು. ದೇವರ ಹೆಸರಲ್ಲಿ ಏನೆಲ್ಲಾ ನಡೆಯಬಹುದು ಎಂಬುದಕ್ಕೆ ದೇವದಾಸಿಯಂಥ ಕ್ರೂರ ಸಂಪ್ರದಾಯವೇ ಸಾಕ್ಷಿಯಾಗಿದೆ. ಇದನ್ನು ಯಾರೂ ಪ್ರಶ್ನಿಸದಂತೆ ದೇವರ ಹೆಸರಿನ ಬೇಲಿಕಟ್ಟಿ ಅದನ್ನು ಮುರಿಯದಂತೆ ಮಾಡಿದರು. ಧರ್ಮದ ಹೆಸರಲ್ಲಿ, ಜಾತಿಯ ಹೆಸರಲ್ಲಿ, ಉಳ್ಳವರ ಹೆಸರಲ್ಲಿ ಜನರ ಮೇಲೆ ನಿಯಂತ್ರಣ ಹೇರುವ ಅನೇಕ ಹುನ್ನಾರಗಳು ಆಧುನಿಕ ಯುಗದಲ್ಲೂ ಹುಟ್ಟಿಕೊಂಡವು. ಹೀಗಾಗಿ ದೇವದಾಸಿ ಸಮಸ್ಯೆ ಧಾರ್ಮಿಕ ಆವರಣದಲ್ಲಿಯೇ ಸುತ್ತುವರೆದು ಜನ ಪ್ರಶ್ನಿಸದಂತೆ ಮಾಡಿತು.

ಜನರ ಅಜ್ಞಾನ, ಮೌಢ್ಯ, ಅನಕ್ಷರತೆ, ಭಯ ಇವುಗಳನ್ನು ಬಳಸಿಕೊಂಡ ಮೇಲ್ವರ್ಗ, ಧರ್ಮದ ಚೌಕಟ್ಟಿನಿಂದ ಹೊರಬರದಂತೆ ಸಂಪ್ರದಾಯದ ಸರಪಳಿಯಲ್ಲಿ ಸ್ತ್ರೀಯರನ್ನು ಬಿಗಿದು, ಚಕಾರವೆತ್ತದಂತೆ ಮೌನವಾಗಿ ಅವಳು ದೇವರ ಹೆಸರಲ್ಲಿ ದೇವದಾಸಿಯಾಗುವಂತೆ ಒಪ್ಪಿಸಿದರು. ಇದೊಂದು ಸಹಜ ಕ್ರಿಯೆ ಎಂಬಂತೆ ಈ ಸಂಪ್ರದಾಯಕ್ಕೆ ಸ್ತ್ರೀಯರು ಬಲಿಯಾದರು. ಇಂದಿಗೂ ತನ್ನ ಅಸ್ತಿತ್ವದ ಹುಡುಕಾಟಕ್ಕಾಗಿ ಸ್ತ್ರೀಯು ಪ್ರಯತ್ನಿಸದಂತೆ ಬೋಧನೆ ಮಾಡಿ ಮೌಲ್ಯಗಳ ಹೆಸರಲ್ಲಿ ಸಮಾಜ ಒಪ್ಪುವಂತೆ ಮಾಡಿರುವರು.

ನಮ್ಮ ಶಾಸ್ತ್ರಗಳನ್ನು ಒಪ್ಪುವುದಾದರೆ, ಮಹಿಳೆ ಒಮ್ಮೆ ಮದುವೆಯಾದರೆ ಮತ್ತೊಮ್ಮೆ ಮದುವೆಯಾಗುವಂತಿಲ್ಲ. ಯಾವುದಕ್ಕೂ ಶಾಸ್ತ್ರದ ನೆಪವೊಡ್ಡಿ ಬದುಕು ನಡೆಸುವ ನಾವು, ಇಲ್ಲಿ ದೇವರ ಹೆಣ್ಣನ್ನು ಯಾರೋ ಭೋಗಿಸುವಾಗ ಯಾವ ಶಾಸ್ತ್ರಗಳೂ ಅಡ್ಡಬರಲಿಲ್ಲವೇ? ಪ್ರಶ್ನಿಸಲಿಲ್ಲವೇ? ದೇವರೊಂದಿಗೆ ಮದುವೆಯಾದ ಅವಳು ಜೀವನ ಪೂರ್ತಿ ದೇವಸ್ಥಾನಗಳಲ್ಲಿ ದೇವರಿಗೆ ಆನಂದ ಉಂಟಾಗುವಂತೆ ನರ್ತನ ಮಾಡುತ್ತಾ, ಹಾಡುತ್ತಾ ಜೀವನ ಸವೆಸುವ ಇವರನ್ನು ಭೋಗಿಸುವವರು ಮಾತ್ರ ಭೂಲೋಕದ ದೇವತೆಗಳು(ಮನುಷ್ಯರು).

**ಪ್ರಸ್ತುತ ಸಂದರ್ಭ**

**ದೇವದಾಸಿಯನ್ನಾಗಿ ಬಿಡಲು ಕಾರಣಗಳು**

೧. ಯಾವ ಔಷಧೋಪಚಾರಕ್ಕೂ ವಾಸಿಯಾಗದಂಥ ಖಾಯಿಲೆಗೆ ತುತ್ತಾದಾಗ ಕುಟುಂಬದ ಹಿರಿಯರು ತಮ್ಮ ಮನೆ ದೇವರಿಗೆ ಖಾಯಿಲೆ ವಾಸಿ ಮಾಡಿದರೆ ನಿನ್ನ ಸೇವೆಯನ್ನು ಮಾಡಲು ದೇವದಾಸಿಯನ್ನಾಗಿ ಬಿಡುತ್ತೇವೆಂದು ಹರಕೆ ಮಾಡಿಕೊಂಡಂಥ ಸಂದರ್ಭ.

೨. ಒಂದು ವೇಳೆ ಹೆಣ್ಣುಮಕ್ಕಳು ವಿವಾಹವಾಗದೇ ಅವಿವಾಹಿತರಾಗಿ ಉಳಿದಂಥ ಸಂದರ್ಭ.

೩. ಕುಟುಂಬದಲ್ಲಿ ಗಂಡು ಸಂತಾನವಿಲ್ಲದೇ ಹೋದಂಥ ಸಂದರ್ಭದಲ್ಲಿ ವಂಶಾಭಿವೃದ್ಧಿ ಬಯಕೆಯಿಂದಾಗಿ ಹಿರಿಯ ಹೆಣ್ಣು ಮಗಳನ್ನು ದೇವದಾಸಿಯನ್ನಾಗಿ ಬಿಡುವ ಸಂದರ್ಭ.

ದೇವದಾಸಿ ಸಂಪ್ರದಾಯ ಹೆಣ್ಣನ್ನು ಧಾರ್ಮಿಕವಾಗಿ ಶೋಷಣೆ ಮಾಡುವ, ಹೆಣ್ಣಿನ ಲೈಂಗಿಕ ಸುಲಿಗೆಗೆ ದೇವರು-ಧರ್ಮ ಒಟ್ಟಾಗಿ ಕೈಜೋಡಿಸಿ ಅವಳ ಅಸ್ತಿತ್ವವನ್ನೇ ನಾಶ ಮಾಡುವ ಸಂಪ್ರದಾಯವಾಗಿದೆ. ಒಬ್ಬ ದೇವದಾಸಿ ಯೌವ್ವನವನ್ನು ಕಳೆದು ವೃದ್ಧಾಪ್ಯಕ್ಕೆ ಬಂದಾಗ ಜೋಗತಿ ಎಂಬ ಹೆಸರನ್ನು ಪಡೆಯುತ್ತಾಳೆ. ಜೋಗತಿಗೂ ದೇವದಾಸಿಯರಿಗೂ ಇರುವ ಅಂತರವೆಂದರೆ ಜೋಗತಿಯರು ರೇಣುಕಾ ಯಲ್ಲಮ್ಮನ ಪಂಥದ ಪ್ರಚಾರಕರು.

ದೇವದಾಸಿಯರು ಆದಿಶಕ್ತಿಯಾದ, ಪಾರ್ವತಿಯ ಅಂಶವಾದ ರೇಣುಕ ಅಥವಾ ಯಲ್ಲಮ್ಮನೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವುದು ಆಶ್ಚರ್ಯಕರ ರೀತಿಯಲ್ಲಿ. ಉದಾಹರಣೆಗೆ, ಕಾರ್ತವೀರ್ಯಾರ್ಜುನನಿಂದ ಜಮದಗ್ನಿ ಕೊಲ್ಲಲ್ಪಟ್ಟಾಗ ರೇಣುಕೆ ವಿಧವೆಯಾದಳು ಎಂದು ತೋರಿಸಲು ದೇವಾಲಯದಲ್ಲಿರುವ ಯಲ್ಲಮ್ಮನ ವಿಗ್ರಹದ ಕೈಯಲ್ಲಿರುವ ಬಳೆಗಳನ್ನು ಒಡೆದು ಹಾಕಿ ಅವಳ ಹಣೆಯ ಕುಂಕುಮವನ್ನು ಅಳಿಸಿದಾಗ, ದೇವದಾಸಿಯರು ತಾವೂ ವಿಧವೆಯಾದಂತೆ ಎದೆ ಬಡಿದುಕೊಂಡು ಅಳುತ್ತಾರೆ. ತಮ್ಮ ಕೈಯಲ್ಲಿರುವ ಬಳೆಗಳನ್ನು ಒಡೆದುಕೊಂಡು, ಕುಂಕುಮವನ್ನು ಅಳಿಸುತ್ತಾರೆ. ಮತ್ತೆ ಒಂದು ತಿಂಗಳು ನಂತರ ನಡೆಯುವ ಪ್ರಹಸನ(ನಾಟಕ)ದಲ್ಲಿ ಜಮದಗ್ನಿಗೆ ಜೀವ ಬಂದು, ಯಲ್ಲಮ್ಮನಿಗೆ ಸೌಭಾಗ್ಯವೊದಗಿದಾಗ ಅವರು ಮತ್ತೆ ಬಟ್ಟೆ ತೊಟ್ಟು ಕುಂಕುಮವನ್ನಿಡುತ್ತಾರೆ. ದೇವದಾಸಿಯರಲ್ಲಿ ಅನೇಕರು ಯಲ್ಲಮ್ಮನಿಗೆ ಏಕೆ ಮೀಸಲಿಟ್ಟಿದ್ದಾರೆಂಬುದಕ್ಕೆ ಸರಳ ಉತ್ತರ, ಅವಳೇ ಈ ಪ್ರದೇಶಗಳ ಪ್ರಮುಖ ದೇವತೆಯೆಂಬುದು.

**ದೇವದಾಸಿಯನ್ನಾಗಿ ಬಿಡುವ ಮುನ್ನ ಅನುಸರಿಸುವ ಆಚರಣೆಗಳು**

ಧಾರ್ಮಿಕ ಪರಂಪರೆಯಲ್ಲಿ ಹರಕೆ ತೀರಿಸುವಲ್ಲಿಯೂ ಅನೇಕ ವಿಧಾನಗಳನ್ನು ಅನುಸರಿಸಿ ಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಹತ್ತು ಹಲವು ಕಾರಣಗಳಿಗಾಗಿ ದೇವದಾಸಿ ಬಿಡುವ ಹರಕೆಗಳು ಚಾಲ್ತಿಯಲ್ಲಿವೆ. ತನ್ನದಲ್ಲದ ತಪ್ಪಿಗೆ ಒಂದು ಹೆಣ್ಣು ಬದುಕಿನುದ್ದಕ್ಕೂ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು, ಒಬ್ಬನಿಗೆ ಅಥವಾ ಅನೇಕರಿಗೆ ತನ್ನ ಶರೀರವನ್ನು ಒಪ್ಪಿಸುತ್ತಾ ಯೌವ್ವನ ಕಳೆದು ಮುಪ್ಪು ಆವರಿಸಿದಾಗ ಜೋಗತಿಯಾಗಿ ಅಡ್ಡಾಡಿ ಕೊನೆಗೆ ಜೀವ ಕಳೆದುಕೊಳ್ಳುವವರೆಗೆ ನಿರಾಶ್ರಿತಳಾಗಿ ಬದುಕುವ ದೇವದಾಸಿ ಮಹಿಳೆಯ ಜೀವನ ಅತ್ಯಂತ ದಾರುಣವಾದದ್ದು. ಅದರಲ್ಲೂ ವಿಧಿವತ್ತಾಗಿ ನಡೆಯುವ ಈ ಕ್ರಿಯೆಯಲ್ಲಿ ಅವಳನ್ನು ಮಾನಸಿಕವಾಗಿ ಗಟ್ಟಿಗೊಳಿಸುವ ಅನೇಕ ಹುನ್ನಾರಗಳು ಇಲ್ಲಿ ಕಂಡುಬರುತ್ತದೆ.

ದೇವದಾಸಿ ಬಿಡುವ ಹರಕೆ ಬಹುದೊಡ್ಡ ವಿಧಿ ಕಾರ್ಯವಾಗಿದೆ. ಆ ದಿನ ಕನ್ಯೆಯ ತಂದೆ-ತಾಯಿ, ಸಂಬಂಧಿಕರು, ಹಿರಿಯ ದೇವದಾಸಿಯರು ಒಂದೆಡೆ ಸೇರುತ್ತಾರೆ. ತಮ್ಮ ಮಗಳನ್ನು ದೇವರಿಗೆ ಬಿಡಲು ಅಪೇಕ್ಷಿಸಿದವರು ಮದುವೆ ಮಾಡುವುದಕ್ಕೆ ಮಾಡಿಕೊಳ್ಳುವ

ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಮನೆಯನ್ನು ಸುಣ್ಣ-ಬಣ್ಣ ಬಳಿದು, ಸಿಂಗರಿಸಿ, ಶುಭ್ರಗೊಳಿಸುತ್ತಾರೆ. ಒಂಬತ್ತು ಬಗೆಯ ಕುಂಕುಮ ಮತ್ತು ಅರಿಶಿಣ ಪುಡಿಗಳು, ಐದು ಚಿಪ್ಪು ಬಾಳೆಹಣ್ಣು, ಇಪ್ಪತ್ತೈದು ವೀಳ್ಯದೆಲೆ, ಊದುಬತ್ತಿ, ವಿಭೂತಿ, ಶ್ರೀಗಂಧ, ಇಪ್ಪತ್ತೈದು ಅಡಿಕೆ, ನಾಣ್ಯಗಳು, ಕಳಸ, ಐದು ಅಚ್ಚು ಬೆಲ್ಲ ಮತ್ತು ಮುತ್ತು ಪೋಣಿಸಿದ ತಾಳಿ ಇವಿಷ್ಟು ವಸ್ತುಗಳನ್ನು ಹೊಂದಿಸುತ್ತಾರೆ. ಕನ್ಯೆಯನ್ನು ಮದುವಣಗಿತ್ತಿಯಂತೆ ಅಲಂಕರಿಸಿ, ಮಂಗಲ ದ್ರವ್ಯಗಳೊಡನೆ ತಾವು ಹರಕೆ ಹೊತ್ತ ದೇವರ ಗುಡಿಗೆ ಹೋಗಿ, ದೇವರನ್ನು ಪೂಜಿಸುತ್ತಾರೆ. ದೇವರಗುಡಿಯ ಮುಂದಿನ ಅಥವಾ ಪಕ್ಕದ ಕಟ್ಟೆಯ ಮೇಲೆ ಕರಿಕಂಬಳಿಯನ್ನು ಹಾಸಿ, ಕನ್ಯೆಯನ್ನು ಪೂರ್ವದಿಕ್ಕಿಗೆ ಮುಖ ಮಾಡಿ ಕೂಡಿಸುತ್ತಾರೆ. ಪೂಜೆಯ ವಿಧಿ-ವಿಧಾನಗಳೆಲ್ಲ ಮುಗಿದ ನಂತರ, ಗುಡಿಯ ಪೂಜಾರಿ 'ಲಿಂಗಮುದ್ರೆ'ಯನ್ನು ('ಲಿಂಗಮುದ್ರೆ'ಯು ಬೆಳ್ಳಿಯ ಲೋಹದಿಂದ ತಯಾರಿಸಲಾಗಿದ್ದು, ಮುದ್ರೆಯು 'ಶಂಖ' ಮತ್ತು 'ಚಕ್ರ'ಗಳನ್ನು ಒಳಗೊಂಡಿರುತ್ತದೆ. ಇದನ್ನು ಬೆಂಕಿಯಲ್ಲಿ ಕಾಯಿಸಿ ಒತ್ತಲಾಗುತ್ತದೆ. 'ಹೂ ಮುದ್ರೆ' - ಎಂಬ ಮತ್ತೊಂದು ಮುದ್ರೆ ಇದ್ದು, ಒಂಬತ್ತು ವರ್ಷದ ಒಳಗಿನ ಮಕ್ಕಳನ್ನು ದೇವದಾಸಿಯನ್ನಾಗಿ ಬಿಡುವ ಸಂದರ್ಭದಲ್ಲಿ ಹೂವನ್ನು ಬೆಂಕಿಯಲ್ಲಿ ಕಾಯಿಸಿ ಎದೆ ಮತ್ತು ಬೆನ್ನ ಭಾಗಕ್ಕೆ ಒತ್ತುತ್ತಾರೆ. ಮಕ್ಕಳು ವಯಸ್ಕರಾದಾಗ ಮತ್ತೊಮ್ಮೆ ಲಿಂಗಮುದ್ರೆಯನ್ನು ಒತ್ತುತ್ತಾರೆ.) ಕನ್ಯೆಯ ಎದೆಯ ಭಾಗ ಮತ್ತು ಬೆನ್ನ ಮೇಲೆ ಒತ್ತುತ್ತಾನೆ. ನಂತರ, ದೇವರಗುಡಿಯಲ್ಲಿಟ್ಟು ಪೂಜಿಸಿ ತಂದ ಮುತ್ತು ಪೋಣಿಸಿದ ತಾಳಿಯನ್ನು ಗುಡಿಯ ಪೂಜಾರಿಯು ದೇವರ ಹೆಸರಿನಲ್ಲಿ ಕನ್ಯೆಯ ಕೊರಳಿಗೆ ಕಟ್ಟುತ್ತಾನೆ. ಹಿರಿಯ ದೇವದಾಸಿಯರು ಚೌಡಿಕೆ, ತಂಬೂರಿ, ಜಾಗಟೆಗಳನ್ನು ಬಾರಿಸುತ್ತಾ ಹಿನ್ನೆಲೆಯ ಸಂಗೀತದೊಂದಿಗೆ ಯಲ್ಲಮ್ಮನನ್ನು ಕುರಿತ ಹಾಡುಗಳನ್ನು ಹಾಡುತ್ತಾರೆ. ಸಾಂಪ್ರದಾಯಿಕ ಮದುವೆಯಲ್ಲಿ ಅಕ್ಷತೆ ಹಾಕುವಂತೆ, ಈ ಕಾರ್ಯಕ್ರಮದಲ್ಲಿ ಭಾಗಿಯಾದವರೆಲ್ಲರೂ ಅಕ್ಷತೆ ಹಾಕಿ, ಉಡುಗೊರೆ ನೀಡಿ ಎಲ್ಲರೂ ಊಟ ಮಾಡಿ ಹೊರಟು ಹೋಗುತ್ತಾರೆ. ಆ ದಿನದಿಂದ ಆ ಕನ್ಯೆಯು ಅಧಿಕೃತವಾಗಿ ದೇವದಾಸಿ ಯಾಗುತ್ತಾಳೆ.

ಈ ರೀತಿಯ ಆಚರಣೆ ದೇವಸ್ಥಾನ ಪ್ರವೇಶ ನಿಷೇಧವಿದ್ದಂಥ ಸಮಯದಲ್ಲಿ ಊರ ಹೊರಗೆ ಆಚರಿಸಲಾಗುತ್ತದೆ. ಊರ ಹೊರಗಿನ ಯಾವುದಾದರೂ ಹಸಿರು ಗಿಡದ ಪಕ್ಕದಲ್ಲಿ ಕಂಬಳಿಯನ್ನು ಹಾಸಿ ಕನ್ಯೆಯನ್ನು ಪೂರ್ವದಿಕ್ಕಿಗೆ ಮುಖಮಾಡಿ ಕೂಡಿಸುತ್ತಾರೆ. ಹಸಿರು ಗಿಡಕ್ಕೆ ಮುತ್ತು ಪೋಣಿಸಿದ ತಾಳಿಯನ್ನು ಮುಟ್ಟಿಸಿ ಹಿರಿಯ ದೇವದಾಸಿ ಮಹಿಳೆಯು ತಾಳಿಯನ್ನು ಕನ್ಯೆಯ ಕೊರಳಿಗೆ ಕಟ್ಟುತ್ತಾಳೆ. ಈ ರೀತಿಯ ಆಚರಣೆಯಲ್ಲಿ ಹಿರಿಯ ದೇವದಾಸಿ ಮಹಿಳೆ ಪ್ರಮುಖ ಪಾತ್ರವನ್ನು ವಹಿಸುತ್ತಾಳೆ(ಈ ತೆರನಾದ ಆಚರಣೆ ಪ್ರಸ್ತುತ ಕಾಲಾವಧಿಯಲ್ಲಿ ನಡೆಯುತ್ತಿರುವಂಥದ್ದು). ಈ ಎಲ್ಲಾ ಕಾರ್ಯಕ್ರಮ ಮುಗಿದ ನಂತರ, ಕನ್ಯೆಯ ಜಾತಿಯ ದೈವದವರಿಗೆ (ಹಿರಿಯರು) ಊಟ ಹಾಕಿಸುವುದರ ಮೂಲಕ ಈ ಆಚರಣೆ ಪೂರ್ಣವಾಗುವುದು. ಈ ಆಚರಣೆಯ ಎಲ್ಲಾ ಖರ್ಚು-ವೆಚ್ಚವನ್ನು ಮೊದಲು ಕನ್ಯೆಯ ತಂದೆ-ತಾಯಿಗಳು

ವಹಿಸಿಕೊಳ್ಳುತ್ತಿದ್ದರು. ನಂತರ ಕಾಲಾವಧಿಯಲ್ಲಿ ಪ್ರಥಮವಾಗಿ ಕನ್ಯೆಯ ಬಳಿಗೆ ಬರುವ ವ್ಯಕ್ತಿಯೇ ಆ ಪೂರ್ಣ ಖರ್ಚನ್ನು ಭರಿಸಬೇಕಾಗುತ್ತದೆ. ದೇವದಾಸಿಯ ಪಾಲಕರೆಲ್ಲರೂ ಶ್ರೀಮಂತನೊಬ್ಬನು ತಮ್ಮ ಮಗಳ ಮೀಸಲು ಮುರಿಯಲು ಬಯಸುತ್ತಾರೆ. ಏಕೆಂದರೆ ಕೆಲವರು ಹಣ, ಒಡವೆ, ವಸ್ತ್ರಗಳನ್ನು ಕೊಡುತ್ತಾರೆ ಮತ್ತು ಈ ದಿನದ ಖರ್ಚೆಲ್ಲಾ ಅವರೇ ನೋಡಿಕೊಳ್ಳುತ್ತಾರೆ. ಒಂದು ವೇಳೆ ಕನ್ಯತ್ವ ಮುರಿಯಲು ಯಾರೂ ಮುಂದೆ ಬರದಿದ್ದರೆ ಅವಳ ಸೋದರಮಾವನಿಂದ ಈ ಕಾರ್ಯ ನೆರವೇರಿಸುತ್ತಾರೆ. ಅವಳ ಕನ್ಯತ್ವವನ್ನು ಮುರಿಯುವ ವ್ಯಕ್ತಿ ಅವಳ ಜೀವನಾವಶ್ಯಕತೆಗಳನ್ನು ಪೂರೈಸುವುದು ಅವಶ್ಯವಾದರೂ ಕ್ರಮೇಣ ಅವನು ಅವಳಲ್ಲಿ ಆಸಕ್ತಿ ಕಳೆದುಕೊಂಡಾಗ ದೇವದಾಸಿಯಾದ ಅವಳು ಸಾರ್ವಜನಿಕ ಸ್ತ್ರೀಯಾಗಲು ಯಾವ ಕಾಯಿದೆ-ಕಟ್ಟಳೆಗಳು ಅಡ್ಡಿ ಬರುವುದಿಲ್ಲ. ಆಕೆ ಮುಂದೆ ತನ್ನ ಜಾತಿಯ ಇಲ್ಲವೇ ಮೇಲ್ಜಾತಿಯ ಯಾವ ಗಂಡಸಿನೊಂದಿಗಾದರೂ ಲೈಂಗಿಕ ಸಂಬಂಧವನ್ನಿಟ್ಟುಕೊಳ್ಳಬಹುದು. ಹಾಗೆ ಸಂಬಂಧವನ್ನಿರಿಸಿಕೊಂಡ ಗಂಡಸು ಆಕೆಯ ಕ್ಷೇಮ-ಸಮಾಚಾರದ ಸಕಲ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ.

ದೇವದಾಸಿ ಸಂಪ್ರದಾಯವನ್ನು ಸಮಾಜವೇ ಸ್ವೀಕರಿಸಿದ್ದರಿಂದ ಅಂತಹ ಸ್ತ್ರೀಯ ಜೊತೆ ಸಂಬಂಧವನ್ನಿಟ್ಟುಕೊಳ್ಳುವುದು ಅಂದಿನ ಕಾಲಕ್ಕೆ ಅನೈತಿಕವಾಗಿರಲಿಲ್ಲ. ಅದು ಪ್ರತಿಷ್ಠೆಯ ವಿಷಯವಾಗಿತ್ತು ಮತ್ತು ಪುಣ್ಯದ ಕೆಲಸವೆಂದು ಜನ ನಂಬಿದ್ದರು. ಇದನ್ನು ಕೀಳಾದ ಸಂಗತಿ ಎಂದು ಯಾರೂ ಹೇಳುತ್ತಿರಲಿಲ್ಲ. ದೇವದಾಸಿಯರು 'ನಿತ್ಯ ಸುಮಂಗಲೆ'ಯರು ಆಗಿದ್ದರಿಂದ ಸಮಾಜದಲ್ಲಿ ಅವರನ್ನು ಗೌರವಯುತವಾಗಿ ಕಾಣಲಾಗುತ್ತಿತ್ತು. ದೇವರ ಹೆಸರಿನಲ್ಲಿ ದೇವರ ಸೇವೆಯನ್ನು ಮಾಡಲು ನಿಯೋಜನೆಗೊಂಡ ಇಂತಹ ಸ್ತ್ರೀಯರನ್ನು ಧರ್ಮದ ಭಯ ಹುಟ್ಟಿಸಿ ವೇಶ್ಯೆಯರನ್ನಾಗಿ ಮಾಡಿಕೊಳ್ಳಲಾಯಿತು. ದೇವರ ಹೆಣ್ಣಾದರೂ ಹಿಂದೆ ಆಕೆ ಉನ್ನತ ವರ್ಗದ, ಶ್ರೀಮಂತರ ಮತ್ತು ಭೂಮಾಲೀಕರ ಕಾಮೋಪಶಮನದ ಸಾಧನವೂ ಆಗಿ ಪರಿಣಮಿಸಿದ್ದಳು ಎಂಬುದನ್ನು ತಿಳಿಯಬಹುದು. ದೇವರು-ಧರ್ಮದ ಭಯದಲ್ಲಿ ಕೆಳಜಾತಿಯ ಹೆಣ್ಣುಮಕ್ಕಳನ್ನು ದೇವದಾಸಿ ಹೆಸರಿನಲ್ಲಿ ವೇಶ್ಯೆಯರನ್ನಾಗಿ ಮಾಡುವ ನೀಚ ಪ್ರವೃತ್ತಿ ಹಿಂದೂ ಧರ್ಮ ಬಿಟ್ಟರೆ ಇನ್ನೂ ಯಾವುದೇ ಧರ್ಮದಲ್ಲಿಯೂ ಇಲ್ಲವೆಂದೇ ಹೇಳಬಹುದು.

(ಉತ್ತರಪ್ರದೇಶದ ಮುಸ್ಲಿಂ ಸಮುದಾಯದಲ್ಲಿ ದೇವದಾಸಿ ಸಂಪ್ರದಾಯ ಈಗಲೂ ಜಾರಿಯದಲ್ಲಿದೆ. ಪ್ರಾಯಕ್ಕೆ ಬರುವ ಹೆಣ್ಣು ಮಕ್ಕಳನ್ನು ಖುರಾನ್‌ಗೆ ವಿವಾಹ ಮಾಡಿ ದರ್ಗಾಗಳಿಗೆ ಅರ್ಪಿಸುತ್ತಾರೆ. ಇವರನ್ನು 'ಬೀಬಿ' ಎಂದು ಕರೆಯುತ್ತಾರೆ.)

ಸಮಾಜದಲ್ಲಿ ಆಚರಣೆಯಲ್ಲಿದ್ದ ಇಂತಹ ಅನಿಷ್ಟ ಸಂಪ್ರದಾಯವನ್ನು ಕುರಿತು ೧೯೧೨ರಲ್ಲಿ ಪಂಡಿತ ಮದನ ಮೋಹನ ಮಾಳವೀಯರು 'ಎಳೆಯ ಹೆಣ್ಣುಮಕ್ಕಳನ್ನು ವೇಶ್ಯೆಯರನ್ನಾಗಿ ಮಾಡುವ ದೇವದಾಸಿ ಸಂಪ್ರದಾಯ ಅತ್ಯಂತ ಹೀನಾಯ' ಎಂದು ಹೇಳಿದರು. ಬಿ.ಆರ್. ಅಂಬೇಡ್ಕರ್ ಅವರು ದೇವದಾಸಿ ಸಂಪ್ರದಾಯ ವಿರೋಧಿಸಿ ಚಳವಳಿ ನಡೆಸುವವರೆಗೂ

ಯಾರೂ ಕಾನೂನುಗಳ ಬಗ್ಗೆ ತಲೆಕೆಡಿಸಿಕೊಂಡಿರಲಿಲ್ಲ. ಅಂಬೇಡ್ಕರ್ ಅವರು ೧೯೩೬ ಜೂನ್ ೧೩ರಂದು ಮುಂಬೈನಲ್ಲಿ ದೇವದಾಸಿಯರ ಅಧಿವೇಶನ ನಡೆಸಿದರು. ದೇವದಾಸಿ ಬದುಕಿನಿಂದ ಹೊರಬರುವಂತೆ ದಲಿತ ಹೆಣ್ಣುಮಕ್ಕಳಿಗೆ ಕರೆ ನೀಡಿದರು. ದಲಿತರಾದ್ದರಿಂದ ಇಂಥ ಹೀನ ಕೃತ್ಯಗಳಿಗೆ ಸ್ತ್ರೀಯರನ್ನು ಮೇಲ್ಜಾತಿಯವರು ಸುಲಭವಾಗಿ ಬಳಸಿಕೊಳ್ಳುತ್ತಾರೆ. ಆದ್ದರಿಂದ ಹಿಂದೂ ಧರ್ಮವನ್ನು ಬಿಟ್ಟು ಬರುವಂತೆ ಮನವಿ ಮಾಡಿಕೊಂಡರು. ಆ ಸಮಾರಂಭದಲ್ಲಿ ಅನೇಕ ದಲಿತ ಕುಟುಂಬಗಳು ಬೌದ್ಧ ಮತಕ್ಕೆ ಮತಾಂತರಗೊಂಡವು. ಆ ಕುಟುಂಬಗಳಲ್ಲಿ ದೇವದಾಸಿ ಸಂಪ್ರದಾಯ ಸಂಪೂರ್ಣ ನಿಂತಿತು.

೧೯೩೪ರಲ್ಲಿ ಮುಂಬೈ ಪ್ರೆಸಿಡೆನ್ಸಿ ದೇವದಾಸಿ ಸಂಪ್ರದಾಯದ ವಿರುದ್ಧ 'ಮಹಿಳೆಯನ್ನು ದೇವರಿಗೆ ದೇವದಾಸಿಯನ್ನಾಗಿ ಅರ್ಪಿಸಲು ಏರ್ಪಡಿಸುವ ಸಮಾರಂಭ ಅಥವಾ ಮಹಿಳೆಯ ಗಮನಕ್ಕೆ ತಾರದೆ ಸಮಾರಂಭ ಏರ್ಪಡಿಸಲು ಉದ್ದೇಶಿಸುವುದು ಅಪರಾಧ' ಎಂಬ ಕಾನೂನು ಜಾರಿಗೊಳಿಸಿತು. ಇದೇ ಕಾನೂನು ದೇವದಾಸಿಯರ ಮದುವೆಗಳನ್ನು ಮಾನ್ಯ ಮಾಡಿತು.

೧೯೪೭ರಲ್ಲಿ ಮದರಾಸು ಪ್ರೆಸಿಡೆನ್ಸಿ ದೇವದಾಸಿ ನಿಯಂತ್ರಣ ಕಾನೂನು ಜಾರಿ ಮಾಡಿತು. ಆದರೆ, ಈ ಕಾನೂನುಗಳು ಪುಸ್ತಕಗಳಲ್ಲಿ ಹಾಗೆಯೇ ಉಳಿದವು. ಎಷ್ಟೇ ಕಠಿಣ ಕ್ರಮಗಳನ್ನು ಜರುಗಿಸಿದರೂ ಕೂಡ ದೇವದಾಸಿ ಬಿಡುವವರ ಮತ್ತು ಅವರನ್ನು ಬಳಸುವವರ ಮನಸ್ಸು ಮಾತ್ರ ಬದಲಾಗಲೇ ಇಲ್ಲ.

೧೯೮೨ರಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ದೇವದಾಸಿ(ಸಮರ್ಪಣಾ ನಿಷೇಧ) ಕಾಯಿದೆ ಜಾರಿಗೊಳಿಸಿತು. ಕೇವಲ ಕಾಯಿದೆ, ಕಾನೂನಿನಿಂದ ಅನಿಷ್ಟ ಸಂಪ್ರದಾಯ ನಿವಾರಣೆ ಸಾಧ್ಯವಿಲ್ಲವೆಂದು ತಿಳಿದ ಸರ್ಕಾರ, ದೇವದಾಸಿ ಸಂಪ್ರದಾಯ ನಿರ್ಮೂಲನೆಗಾಗಿ ೧೯೯೧ರಲ್ಲಿ 'ದೇವದಾಸಿ ಪುನರ್‌ವಸತಿ ಯೋಜನೆ' ಆರಂಭಿಸಿತು. ಈ ಯೋಜನೆಯ ಮೂಲಕ ದೇವದಾಸಿಯರಿಗೆ ಕೌಶಲ ಅಭಿವೃದ್ಧಿ ತರಬೇತಿ, ಕುರಿ ಸಾಕಣೆ, ಆಶ್ರಯ ಮನೆ, ಮಾಸಾಶನ ಸೌಲಭ್ಯ, ದೇವದಾಸಿ ಪುನರ್ವಿವಾಹ ಕಾರ್ಯಕ್ರಮ - ಇತರೆ ಯೋಜನೆಗಳ ಮೂಲಕ ದೇವದಾಸಿಯರಲ್ಲಿ ನೈತಿಕ ಸ್ಥೈರ್ಯ ತುಂಬಲು ಹಾಗೂ ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿ ಮಾಡಲು ಕ್ರಮ ಕೈಗೊಂಡಿದೆ.

೧೯೮೫ರಲ್ಲಿ ಬಿ.ಎಲ್. ಪಾಟೀಲ ಅವರ ನೇತೃತ್ವದಲ್ಲಿ ಅಥಣಿಯಲ್ಲಿ 'ವಿಮೋಚನಾ ದೇವದಾಸಿ ಪುನರ್ವಸತಿ ಸಂಘ'ವು ದೇವದಾಸಿ ಸಂಪ್ರದಾಯ ತಡೆಗೆ ಅನೇಕ ಕಾರ್ಯಕ್ರಮಗಳನ್ನು, ಆಂದೋಲನಗಳನ್ನು ಹಾಗೂ ಪುನರ್ವಸತಿಯ ಭಾಗವಾಗಿ ಸಾಕ್ಷರತೆ, ಉದ್ಯೋಗ, ತರಬೇತಿಗಳು, ಶಿಶುವಿಹಾರಗಳು, ಶಿಕ್ಷಣ ಸಂಸ್ಥೆಗಳನ್ನು ತೆರೆದು ದೇವದಾಸಿ ಸಂಪ್ರದಾಯವನ್ನು ಹೋಗಲಾಡಿಸಲು ಶ್ರಮಿಸಿದ್ದು ಕರ್ನಾಟಕದಲ್ಲೊಂದು ದಾಖಲೆಯಾಗಿದೆ. ಇದರ ಜೊತೆಗೆ ಅನೇಕ ಸ್ವಯಂ ಸೇವಾ ಸಂಸ್ಥೆಗಳು ದೇವದಾಸಿ ಸಂಪ್ರದಾಯ ವಿರುದ್ಧ ಜನರಲ್ಲಿ ಅರಿವು ಮೂಡಿಸುತ್ತಿವೆ. ದೇವದಾಸಿಯರ

ಸಮಾವೇಶಗಳನ್ನು ಏರ್ಪಡಿಸುವುದರ ಮೂಲಕ ಅವರ ನೋವುಗಳಿಗೆ ಸ್ಪಂದಿಸುತ್ತಿವೆ. ಮೂಢನಂಬಿಕೆಯಿಂದ ತಮ್ಮ ಬಾಳನ್ನು ಹಾಳು ಮಾಡಿಕೊಳ್ಳುತ್ತಿರುವ ಇಂತಹ ಜನಾಂಗಗಳಿಗೆ ಅರಿವು ಮೂಡಿಸುವುದರ ಜೊತೆಗೆ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವಂಥ ಕೆಲಸವನ್ನು ಮಾಡುತ್ತಿವೆ.

ಸ್ತ್ರೀಯರಿಗೆ ವಿಧಿಸಲಾದ ಸಾಮಾಜಿಕ ಕರ್ತವ್ಯ ಮತ್ತು ಧಾರ್ಮಿಕ ನಂಬಿಕೆಗಳ ಕಾರಣವಾಗಿ ದೇವದಾಸಿ ಸಂಪ್ರದಾಯವನ್ನು ಯಾವ ಅಡೆ-ತಡೆಗಳಿಲ್ಲದೆ ಆಚರಿಸಿಕೊಂಡು ಬರಲಾಯಿತು. ರಾಜರ ಮಹತ್ವಾಕಾಂಕ್ಷೆಯ ಮೋಹಕ್ಕೂ ಮಹಿಳೆಯರು ಹೆಗಲು ಕೊಡಬೇಕಾಯಿತು. ಪುರೋಹಿತ, ಶ್ರೀಮಂತ, ಭೂಮಾಲೀಕರ ಪಾರಮಾರ್ಥಿಕ ಸಾಧನೆಗಳಿಗೂ ಸ್ತ್ರೀಯರು ಮಾಯೆಯಾಗಿ ಬಿಂಬಿತವಾಗಬೇಕಾಯಿತು. ಯುದ್ಧದಲ್ಲಿ ನಿರತರಾದ ಸೈನಿಕರಿಗೆ ದೇಹ ಸುಖವನ್ನು ಕೊಡಲೆಂದು ಗಣಿಕಾ ಸ್ತ್ರೀಯರು, ವೇಶ್ಯೆಯರು, ವಾರಾಂಗನೆಯರು ಬೇಕಾಯಿತು. ಈ ಸಂಪ್ರದಾಯ ದೈವಿಕ ನೆಲೆಯೊಂದಿಗೆ ತಳಕು ಹಾಕಿಕೊಂಡಿರುವುದರಿಂದ ಅದಕ್ಕೆ ಬಲಿಯಾಗುತ್ತಿರುವವರಲ್ಲಿ ಭಯ ಆವರಿಸಿಕೊಂಡಿದ್ದರೆ, ಅದನ್ನು ಪೋಷಿಸಿಕೊಂಡು ಬರುತ್ತಿರುವವರಲ್ಲಿ ಸ್ವಯಂ ಪ್ರತಿಷ್ಠೆ ನೆಲೆಗೊಂಡಿತ್ತು. ಮೇಲ್ವರ್ಗಗಳು ತಮ್ಮ ಸ್ತ್ರೀಯರನ್ನು ತಮ್ಮ ಸ್ವಂತಕ್ಕಾಗಿ ಮಾತ್ರ ಬಳಸಿಕೊಂಡರು. ಅಂದರೆ ತಮ್ಮ ಸ್ತ್ರೀಯರನ್ನು ವೈಧವ್ಯ, ಸತಿಪದ್ಧತಿ, ಬಹುಪತ್ನಿತ್ವಗಳಿಗೆ ಬಲಿಕೊಟ್ಟರೆ ಹೊರತು, ಅವರ ಪುನರ್‌ವಿವಾಹಕ್ಕೆ ಅವಕಾಶ ಕೊಡಲಿಲ್ಲ. ಆದರೆ ಶೂದ್ರ ಸ್ತ್ರೀಯರನ್ನು ತಮ್ಮ ದೈಹಿಕ ಸೇವೆ, ಲೈಂಗಿಕ ಕೆಲಸಗಳಿಗಾಗಿ ಬಳಸಿಕೊಂಡರು. ಪ್ರಾಚೀನ ಕಾಲದಲ್ಲಿ ಮೇಲ್ವರ್ಗಗಳಲ್ಲಿ ದೇವದಾಸಿ ಸಂಪ್ರದಾಯ ಆಚರಣೆಯಲ್ಲಿದ್ದಿರಬಹುದಾದ ಸಾಧ್ಯತೆಗಳಿದ್ದರೂ ತದನಂತರದಲ್ಲಿ ಅದು ಸಂಪೂರ್ಣ ವಾಗಿ ತಳಸಮುದಾಯಗಳಲ್ಲಿ ಕೇಂದ್ರಿಕೃತವಾಯಿತು. ಆದ್ದರಿಂದಲೇ ಮೇಲ್ವರ್ಗದ ಜನರು ದೇವದಾಸಿ ಸಂಪ್ರದಾಯದಂಥ ಆಚರಣೆಗಳಿಗೆ ಕಟ್ಟುಬಿದ್ದು ತಳಸಮುದಾಯಗಳ ಹೆಣ್ಣು ಮಕ್ಕಳನ್ನು ಖರೀದಿಸಿ ದೇವರಿಗೆ ಬಿಟ್ಟು ತಮ್ಮ ಹರಕೆ ತೀರಿಸಿಕೊಂಡ ಅನೇಕ ಉದಾಹರಣೆಗಳು ದೊರೆಯುತ್ತವೆ. ಇವತ್ತಿಗೂ ಈ ಆಚರಣೆಗಳು ತಳಸಮುದಾಯಗಳಲ್ಲಿ ಅಲಿಖಿತ ನಿಯಮದಂತೆ ಆಚರಿಸಿಕೊಂಡು ಬರುತ್ತಿರುವುದು ನಮ್ಮ ವ್ಯವಸ್ಥೆಯ ಬಹುದೊಡ್ಡ ವ್ಯಂಗ್ಯವಾಗಿದೆ.

### ೨೩. ಬೇಟೆಯ ಆಚರಣೆ

ಹೊಸಪೇಟೆ ತಾಲ್ಲೂಕಿನ ಕಮಲಾಪುರ ಗ್ರಾಮದಲ್ಲಿ ಯುಗಾದಿ ಪಾಡ್ಯದ ತರುವಾಯ ಗ್ರಾಮದ ವಿಳುಕೇರಿ ನಾಯಕ ಜನಾಂಗದವರು ಆಚರಿಸುವ ಪ್ರಸಿದ್ಧ ಬೇಟೆಯ ಆಚರಣೆಯು ವಿಶೇಷವಾಗಿ ಕಂಡುಬರುತ್ತದೆ. ಯುಗಾದಿ ಹಬ್ಬದಲ್ಲಿ ಆಚರಿಸುವ ಬೇಟೆಯಲ್ಲಿ ಹಂದಿ ಬೇಟೆ ಪ್ರಮುಖವಾದುದು. ಹಿಂದಿನಿಂದಲೂ ಇದು ಪ್ರಸಿದ್ಧಿ ಪಡೆದು ಪ್ರಚಲಿತದಲ್ಲಿದೆ. ಹಂದಿ ಲಕ್ಷ್ಮಿಯ ಸ್ವರೂಪ, ಸಮೃದ್ಧಿ ಸಂಕೇತವೆಂಬ ನಂಬಿಕೆಗಳಿವೆ. ಯುಗಾದಿಯ ಅಮಾವಾಸ್ಯೆಯ ದಿನ ಆಯಾಯ ಕೇರಿಗಳಲ್ಲಿ ಕಾಡಿನಹಂದಿ ಬೇಟೆಗೆಂದು ಹೋಗುವುದಕ್ಕೆ ಒಂದು ವಾರ ಮೊದಲೇ

ಹೋಗುವ ದಿನವನ್ನು ಗೊತ್ತುಪಡಿಸುತ್ತಾರೆ. ಆಯಾಯ ಕೇರಿಯ ಮುಖ್ಯಸ್ಥನ ಮುಂದಾಳತ್ವದಲ್ಲಿ ಬೇಟೆಗೆ ಯಾರ್‍ಯಾರು ಹೋಗಬೇಕೆಂದು ಸಮಾಲೋಚನೆ ನಡೆಸಿ ನಿರ್ಣಯಿಸುತ್ತಾರೆ. ಯುಗಾದಿಯ ಅಮಾವಾಸ್ಯೆಯ ದಿನ ಕೇರಿಯ ಮುಖ್ಯಸ್ಥ ಸೂಚಿಸಿರುವ ವ್ಯಕ್ತಿಯ ನಾಯಕತ್ವದಲ್ಲಿ ಕೇರಿಯ ಗುಂಪು ಆಯುಧಭರಿತರಾಗಿ ಊರಿನ ಎಲ್ಲಾ ದೇವರಿಗೆ ಕೈಮುಗಿದು, ದೇವರ ಆಶೀರ್ವಾದ ಪಡೆಯುತ್ತಾರೆ. ಇವರು ಬೇಟೆಗೆ ಹೊರಡುವಾಗ ಯಾರ ಜೊತೆಯೂ ಮಾತನಾಡುವುದಿಲ್ಲ. ಒಂದು ವೇಳೆ ಮಾತನಾಡಿದರೆ ಆ ದಿನ ಬೇಟೆ ಸಿಗುವುದಿಲ್ಲ ಎಂಬ ನಂಬಿಕೆ ವ್ಯಾಸಬೇಡರಲ್ಲಿದೆ. ಬೇಟೆಗಾಗಿ ಮೊದಲು ಗ್ರಾಮದ ಅಕ್ಕಪಕ್ಕದ ಕಾಡಿನಲ್ಲಿ ಬೇಟೆಯಾಡುತ್ತಾರೆ. ನಂತರ ಬೇಟೆ ಸಿಗಲಿಲ್ಲವೆಂದರೆ ಅವುಗಳು ವಾಸಿಸುವ ಜಾಗವನ್ನು ಬೇಧಿಸಿಕೊಂಡು, ಗಡಿ ಪ್ರಾಂತ್ಯ ಮೀರಿ ಹೋಗುತ್ತಾರೆ.

ಮೊದಲು ಇವರು ಬೇಟೆಗೆ ಹೊರಡುವ ಮುನ್ನ ಆನೆಗೊಂದಿ ಅರಸರನ್ನು ಕರೆಸುವುದು ಮತ್ತು ಅವರ ಒಪ್ಪಿಗೆಯನ್ನು ಪಡೆಯುವುದು ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯವಾಗಿದೆ. ಅರಸನು ನಾಯಕರ ಪ್ರತಿಷ್ಠೆಯ ಚಾವಡಿಕೇರಿಯ ಕಟ್ಟೆಯ ಮೇಲೆ ಕುಳಿತು, ಬೇಟೆಗೆ ಹೋಗುವವರಿಗೆ ಒಪ್ಪಿಗೆಯನ್ನು ಕೊಟ್ಟು, ಶುಭವಾಗಲೆಂದು ಹಾರೈಸುತ್ತಾನೆ. ರಾಜನ ಅಪ್ಪಣೆ ಪಡೆದು ಬೇಟೆಗೆ ಹೋಗುವುದು ಇಂದಿಗೂ ನಡೆದುಕೊಂಡು ಬಂದಿದೆ. ಪುರುಷರು ಬೇಟೆಗೆ ಹೊರಡುವಾಗ ಅವರ ಪತ್ನಿಯರು ಮೂರು ದಿನ ಮುಂಚೆ ಮಂಗಳಸೂತ್ರವನ್ನು ತೆಗೆದು, ದೇವರ ಜಗುಲಿಯ ಮೇಲಿಟ್ಟು ಪೂಜಿಸುತ್ತಾರೆ. ಗಂಡನ ಸಾವಿಗೆ ಅಂಜದೆ ಅವರ ಪತ್ನಿಯರು ದಿಟ್ಟ ನಿಲುವನ್ನು ತಾಳಿ ಬೇಟೆಗೆ ಪ್ರೋತ್ಸಾಹಿಸಿ, ಗಂಡನಿಗೆ ಪೂಜೆ ಮಾಡಿ ಕಾಲು ಮುಗಿದು, ಮರಳಿ ಬರುವಂತೆ ಪ್ರಾರ್ಥಿಸುತ್ತಾರೆ. ಬೇಟೆಯಿಂದ ಹಿಂದಿರುಗಿದ ಗಂಡನು ದೇವರ ಪೂಜೆ ಮುಗಿಸಿಕೊಂಡು ಮನೆಗೆ ಬಂದಾಗ, ಹೆಂಡತಿ ಆರತಿ ಬೆಳಗಿ, ಪೂಜೆ ಮಾಡಿ ಪುನಃ ತನ್ನ ತಾಳಿಯನ್ನು ಗಂಡನಿಂದ ಕಟ್ಟಿಸಿಕೊಳ್ಳುತ್ತಾಳೆ. ಇಲ್ಲಿ ಬೇಟೆಗೆ ಹೋದ ಗಂಡ ಮರಳಿ ಬರುವನೇ, ಇಲ್ಲವೆಂಬ ಶಂಕೆಯಿಂದ ಈ ರೀತಿ ಮಾಡುತ್ತಾರೆ ಎಂಬುದಾಗಿ ತಿಳಿದುಬರುತ್ತದೆ.

ಬಡವ, ಶ್ರೀಮಂತ, ವಿದ್ಯಾವಂತ, ಸರ್ಕಾರಿ ನೌಕರ ಪ್ರತಿಯೊಬ್ಬರೂ ಸೇರಿ ಬೇಟೆಗೆ ಹೊರಡುವಾಗ ತಮ್ಮ ಕೇರಿಯ ಹೊರಗಿರುವ ಬುಡ್ಡೆಕಲ್ಲಿಗೆ ಪೂಜಿಸುತ್ತಾರೆ. ಬೇಟೆಗಾರರು ಸರಳ ಉಡುಪಿನಿಂದಿದ್ದು, ಒಳ ಅಂಗಿಯನ್ನು ಧರಿಸಿರುತ್ತಾರೆ. ಎಲ್ಲಾ ಕೇರಿಯವರು ಸೇರಿ, ಚಾವಡಿಕೇರಿಯ ಮೂಲಕ ಬೇಟೆಗೆ ಹೋಗುತ್ತಾರೆ. ಬೇಟೆಗಾಗಿ ಕೈಗೊಡಲಿ, ಕೊಡ್ಲಿ, ಬಾಣಕೋಲು, ಕತ್ತಿ, ಭರ್ಜಿ, ಬಂದೂಕುಗಳನ್ನು ಬಳಸುತ್ತಾರೆ. ಬೇಟೆಯಲ್ಲಿ ಸಿಕ್ಕ ಹಂದಿಯನ್ನು ಗಾಡಿಯಲ್ಲಿ ಕುಳ್ಳಿರಿಸಿ, ಸರ್ವಾಲಂಕಾರ ಮಾಡಿ, ಊರಿನ ಗಾರಿಭಾವಿ ಆಂಜನೇಯ ಗುಡಿಯ ಹತ್ತಿರ ಎಲ್ಲರೂ ಸೇರಿ, ತಮಟೆ, ಹಲಗೆಗಳನ್ನು ಬಡಿಯುತ್ತಾ, ಕುಣಿಯುತ್ತ ಮೆರವಣಿಗೆ ಮಾಡುತ್ತಾರೆ.

ಮೆರವಣಿಗೆಯ ಸಂದರ್ಭದಲ್ಲಿ ತಮ್ಮ ಆಯುಧಗಳಿಗೆ ಪೂಜೆ ಮಾಡಿರುತ್ತಾರೆ. ಮೆರವಣಿಗೆ ಕೇರಿಯ ಬುಡ್ಡೆಕಲ್ಲಿನತ್ತ ಬಂದಾಗ, ಕೇರಿಯ ಸುಮಂಗಲೆಯರು, ಹರೆಯದ ತರುಣಿಯರು ಬೇಟೆ ಹೊಡೆದುಕೊಂಡು ಬಂದ ತಮ್ಮವರಿಗೆ ಆರತಿಯನ್ನು ಬೆಳಗುವರು. ಅವರುಗಳು ತಮಗಿಷ್ಟ ಬಂದಷ್ಟು ಹಣವನ್ನು ಆರತಿ ತಟ್ಟೆಗೆ ಹಾಕುವರು. ಮೆರವಣಿಗೆಯ ನಂತರ, ಬೇಟೆಯಾಡಿ ತಂದ ಹಂದಿಯನ್ನು ಪೂಜೆ ಮಾಡಿ, ಹಂದಿಯ ಕಿವಿಯ ತುದಿ, ಬಾಲಗಳನ್ನು ಕತ್ತರಿಸಿ ಕೇರಿಯ ಬುಡ್ಡೆಕಲ್ಲಿನ ಪಕ್ಕದಲ್ಲಿ ಹೂಳುತ್ತಾರೆ. ಈ ರೀತಿ ಮಾಡುವುದರಿಂದ ಲಕ್ಷ್ಮಿಯು ತಮ್ಮ ಕೇರಿಯನ್ನು ಬಿಟ್ಟು ಹೋಗುವುದಿಲ್ಲ ಎಂದು ನಂಬುತ್ತಾರೆ. ಎಲ್ಲ ಮುಗಿದ ಬಳಿಕ ಹಂದಿಯನ್ನು ಕೊರವರಿಗೆ ಅಥವಾ ಹರಿಜನರಿಗೆ ತಿನ್ನಲು ಕೊಡುತ್ತಾರೆ. ಬೇಟೆಯ ಮರುದಿನ ಮಾರಮ್ಮನ ಹಬ್ಬ ಮಾಡಿ ಕುರಿಯನ್ನು ಬಲಿ ಕೊಟ್ಟು, ಸಾಮೂಹಿಕವಾಗಿ ಊಟ ಮಾಡುವುದರ ಮೂಲಕ ಬೇಟೆ ಹಬ್ಬವನ್ನು ಸಮಾಪ್ತಿಗೊಳಿಸುತ್ತಾರೆ.

ಕಮಲಾಪುರ ಗ್ರಾಮದಲ್ಲಿ ೨೦೧೦ ರಿಂದೀಚೆಗೆ ಬೇಟೆಗೆ ಕಡಿವಾಣ ಹಾಕಲಾಗಿದೆ. ೧೯೬೩ರ ಕರ್ನಾಟಕ ಅರಣ್ಯಶಾಸನ, ೧೯೭೨ರ ವನ್ಯಮೃಗ ಸಂರಕ್ಷಣೆ ಕಾಯ್ದೆ ಹಾಗೂ ಆಯಾ ಭಾಗದ ಪೊಲೀಸ್ ಕಾಯ್ದೆಯ ಸೆಕ್ಷನ್ ೩೫ರ ಅನ್ವಯ ಬೇಟೆ ಆಡುವುದನ್ನು ನಿಷೇಧಿಸಿ, ಸರ್ಕಾರ ಕಾನೂನು ಜಾರಿ ಮಾಡಿರುವುದರಿಂದ ಇವೆಲ್ಲವುಗಳು ಬೇಟೆಯ ಮೇಲೆ ನಿರ್ಬಂಧಗಳನ್ನು ಹೇರಿವೆ. ಈ ರೀತಿಯ ನಿರ್ಬಂಧಗಳಿಂದಾಗಿ ಬೇಟೆ ಸಂಸ್ಕೃತಿ ಮಾಯವಾಗುತ್ತಿದೆ. ಇಂದಿನ ಸಂಸ್ಕೃತೀಕರಣ, ನಗರೀಕರಣ, ಜಾಗತೀಕರಣಗಳ ಪ್ರಭಾವವೂ ಇದರ ಮೇಲೆ ಆಗಿದೆ. ಬಹುಹಿಂದಿನಿಂದಲೂ ಆಚರಿಸಿಕೊಂಡು ಬರಲಾಗುತ್ತಿದ್ದ ಬೇಟೆಯು ಇಂದು ತನ್ನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಹಿರಿಮೆಯನ್ನು ಕಳೆದುಕೊಳ್ಳುತ್ತಿದೆ. ಈ ಜನಾಂಗಗಳಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾದಂತೆಲ್ಲ ಅವರ ಆಚರಣೆಗಳು ಮಾರ್ಪಾಡುಗೊಳ್ಳುತ್ತಿವೆ. ಇಂದು ಬೇಟೆಯಾಡುವುದು ಅಪರಾಧವಾಗಿದ್ದರೂ ಯುಗಾದಿ ಹಬ್ಬದಲ್ಲಿ ಕೇವಲ ಸಾಂಪ್ರದಾಯಿಕವಾಗಿ ಬೇಟೆಯ ಆಚರಣೆ ಉಳಿದುಕೊಂಡು ಬಂದಿದೆ.

**೨೪. ಗಾವು ಜಗಿಯುವುದು(ಸಿಗಿಯುವುದು)**

ಹೊಸಪೇಟೆ ತಾಲ್ಲೂಕಿನ ಕಂಪ್ಲಿ ಹೋಬಳಿಯ ಮಾವಿನಹಳ್ಳಿ ಗ್ರಾಮದ ಗ್ರಾಮದೇವತೆ ಮಾರೆಮ್ಮದೇವಿಯ ಜಾತ್ರೆಯಲ್ಲಿ ಗಾವು ಜಗಿಯುವ ಆಚರಣೆ ಪ್ರಚಲಿತದಲ್ಲಿದೆ. ಗಾವು ಜಗಿಯುವ ವ್ಯಕ್ತಿಯನ್ನು ಪೋತುರಾಜನೆಂದು ಕರೆಯುತ್ತಾರೆ. ಪೋತುರಾಜನಾದವನು ಕಪ್ಪುಬಣ್ಣದ ಮೇಕೆಯನ್ನು ತನ್ನ ಹಲ್ಲುಗಳ ಮೂಲಕ ಸಿಗಿದು, ರಕ್ತ ಕುಡಿದು, ಹಸಿಮಾಂಸವನ್ನು ಸೇವಿಸುವುದೇ ಗಾವು ಜಗಿಯುವುದು. ಗಾವು ಜಗಿಯುವ ವ್ಯಕ್ತಿಯು ಬಚ್ಚಿಟ್ಟ ಮೇಕೆಯನ್ನು ಹುಡುಕಿ ತರಬೇಕು. ತಪ್ಪಿಸಿಕೊಳ್ಳಲು ಪ್ರಯತ್ನಿಸುವ ಮೇಕೆಯನ್ನು ರೋಷದಿಂದ ಹಿಡಿದು ತಂದು, ಅದರ ಕತ್ತು ಹಾಗೂ ಎರಡು ಕಾಲುಗಳನ್ನು ಕೈಗಳಿಂದ ಜಗಿಯಾಗಿ ಹಿಡಿದು ರಕ್ತ ಹೀರುತ್ತಾನೆ. ಈ

ರೀತಿಯ ವರ್ತನೆಗಳು ಆದಿಮಾನವನ ಬೇಟೆ ಸಂಸ್ಕೃತಿಯನ್ನು ಸಂಕೇತಿಸುತ್ತವೆ. ಗಾವು ಜಗಿಯುವ ಹಕ್ಕು ವಂಶಪಾರಂಪರ್ಯವಾದುದು. ಗಾವು ಜಗಿಯುವ ವ್ಯಕ್ತಿ ಮಡಿಯಿಂದ ಉಪವಾಸವಿದ್ದು, ಪತ್ನಿಯಿಂದ ದೂರವಿರಬೇಕು. ಉಪವಾಸವಿರುವುದರಿಂದ ವ್ಯಕ್ತಿಗೆ ರೋಷ, ಆವೇಶ ಹೆಚ್ಚಾಗಿ, ಏನೂ ಸಿಕ್ಕಿದರೂ ತಿಂದು ಬಿಡುವಷ್ಟು ಕೆಚ್ಚು ಇರುತ್ತದೆ. ಈ ಹಿನ್ನೆಲೆಯಲ್ಲಿ ಗಾವು ಜಗಿಯುವ ವ್ಯಕ್ತಿಯ ಶಕ್ತಿ ಇಮ್ಮಡಿಗೊಳ್ಳುವುದರಿಂದ ಉಪವಾಸವಿರುವ ನಿಯಮವನ್ನು ಅನುಸರಿಸಿಕೊಂಡು ಬಂದಿರಬೇಕು.

ಪೋತುರಾಜನನ್ನು ಶಿವನ ವರಪ್ರಸಾದವೆಂದು ಭಾವಿಸಲಾಗಿದೆ. ಐತಿಹ್ಯದ ಪ್ರಕಾರ ಕಲ್ಯಾಣದೇವಿ ಮತ್ತು ಶಿವಲಿಂಗರಾಜರೆಂಬ ಶಿವಭಕ್ತ ದಂಪತಿಗಳು ಅನೇಕ ವರ್ಷಗಳ ಕಾಲ ಸಂತಾನವಿಲ್ಲದೆ ಶಿವನನ್ನು ಕುರಿತು ತಪಸ್ಸು ಆಚರಿಸುತ್ತಾರೆ. ಇವರ ತಪಸ್ಸು ಮೆಚ್ಚಿದ ಶಿವನು, ಪ್ರತ್ಯಕ್ಷವಾಗಿ ಅರವತ್ತು ಸಿಂಹಬಲದ ಬಲಿಷ್ಠ ಮಗುವಾಗಲಿ ಎಂಬ ವರವನ್ನು ನೀಡಿದನು. ಹೀಗೆ ಜನಿಸಿದ ಮಗು ನಿತ್ಯ ಮೇಕೆಗಳ ಜೊತೆಯಲ್ಲಿ ಆಟವಾಡುತ್ತಿದ್ದ ಕಾರಣ, ಅವನಿಗೆ ಪೋತುರಾಜ ಎಂದು ಪ್ರೀತಿಯಿಂದ ನಾಮಕರಣ ಮಾಡಿದ್ದರು. ಇದರಿಂದ ಪೋತುರಾಜ ಶೈವ ಸಂಪ್ರದಾಯವನೆಂದು ತಿಳಿದುಬರುತ್ತದೆ. ಪೋತುರಾಜನೆಂದರೆ ಗ್ರಾಮದೇವತೆಯ ಸೇವಕನೆಂದೂ, ಗಂಡನೆಂದೂ, ಸಹೋದರನೆಂದೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಪರಿಭಾವಿಸಲಾಗುತ್ತದೆ.

ಗಾವು ಜಗಿಯುವ ಪೋತುರಾಜರು ಮುಖದ ಮೇಲೆ ಕುಂಕುಮ ಲೇಪಿಸಿಕೊಂಡು ಅರೆಬೆತ್ತಲೆಯಾಗಿ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಚಡಿಯಿಂದ ಹೊಡೆದುಕೊಳ್ಳುತ್ತಾ, ಆರ್ಭಟಿಸುತ್ತಾ ಬಚ್ಚಿಟ್ಟ ಮೇಕೆ ಮರಿಯನ್ನು ಹುಡುಕಿ ತರುತ್ತಾರೆ. ಪ್ರಾಣ ಬಿಡುವವರೆಗೂ ಅದರ ಕುತ್ತಿಗೆಯ ಭಾಗದಿಂದ ಚರ್ಮ ಜಗಿಯಲು ಪ್ರಾರಂಭಿಸುತ್ತಾರೆ. ಗಾವು ಜಗಿಯುವಾಗ ಬರೀ ಸಂಪ್ರದಾಯವಾಗಿರದೆ, ಪ್ರತಿಷ್ಠೆಯ ಸಂಕೇತವೂ ಹೌದು. ಗಾವು ಜಗಿಯುವುದು ಮೇಕೆ ಮ್ಯಾವ್ ಎಂದು ಕಿರುಚಿದರೆ, ಆ ಗ್ರಾಮಕ್ಕೆ ಮುಂದೆ ಕೆಡಕು ಉಂಟಾಗುತ್ತದೆಂಬ ನಂಬಿಕೆಯಿದೆ. ಈ ಹಿನ್ನೆಲೆಯಲ್ಲಿ ಪೋತುರಾಜ ಮೊದಲು ಮೇಕೆ ಮರಿಯ ಬಾಯಿಗೆ ಬಾಯಿ ಹಾಕಿ, ಅದರ ನಾಲಿಗೆಯನ್ನು ಹಲ್ಲಿನಿಂದ ಕಚ್ಚಿ ಕೀಳುತ್ತಾನೆ.

**ಉಲ್ಲೇಖ ಹಾಗೂ ಟಿಪ್ಪಣಿಗಳು**

೧. ಕೃಷ್ಣಮೂರ್ತಿ. ೬೨ ವಯಸ್ಸು, ವ್ಯವಸಾಯ, ಕಮಲಾಪುರ.

೨. ಹುಲಿಗೆಮ್ಮ, ೬೦ ವಯಸ್ಸು, ಕೂಲಿ, ಕಮಲಾಪುರ.

೩. ವೇಣುಗೋಪಾಲ, ೪೩ ವಯಸ್ಸು, ದಿನಗೂಲಿ ನೌಕರ, ಕಮಲಾಪುರ.

೪. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೫. ಲಕ್ಷ್ಮೀದೇವಮ್ಮ, ೭೪ ವಯಸ್ಸು, ಕೂಲಿ, ವೆಂಕಟಾಪುರ.

೬. ಕೆಂಚಮ್ಮ, ೬೮ ವಯಸ್ಸು, ಕೂಲಿ, ಹಂಪಿ.

೭. ಮಂಜುನಾಥ, ೪೫ ವಯಸ್ಸು, ಕೂಲಿ, ಪ್ರಕಾಶನಗರ, ಹಂಪಿ.

೮. ಶಿವಯ್ಯಸ್ವಾಮಿ, ೫೦ ವಯಸ್ಸು, ವ್ಯವಸಾಯ, ಹಂಪಿ.

೯. ಕಾಳಮ್ಮ, ೬೪ ವಯಸ್ಸು, ಕೂಲಿ, ಕಮಲಾಪುರ.

೧೦. ಅನಿಲ್‌ಜೋಶಿ, ೪೨ ವಯಸ್ಸು, ಅರ್ಚಕರು, ಹಂಪಿ.

೧೧. ಗುಂಡಾಚಾರ್, ೭೦ ವಯಸ್ಸು, ಅರ್ಚಕರು, ಕಮಲಾಪುರ.

೧೨. ಕೃಷ್ಣಭಟ್ಟ, ೪೨ ವಯಸ್ಸು, ವ್ಯವಸಾಯ, ಹಂಪಿ.

೧೩. ಧನರಾಜ್ ಓಸ್ವಾಲ್, ೪೮ ವಯಸ್ಸು, ವ್ಯಾಪಾರಿ, ಕಮಲಾಪುರ.

೧೪. ಓಬಯ್ಯ, ೬೮ ವಯಸ್ಸು, ವ್ಯವಸಾಯ, ಕಮಲಾಪುರ.

೧೫. ಶ್ರೀನಿವಾಸಮೂರ್ತಿ, ೬೫ ವಯಸ್ಸು, ನಿವೃತ್ತ ಶಿಕ್ಷಕರು, ಹೊಸಪೇಟೆ.

೧೬. ಶಿವಯ್ಯಸ್ವಾಮಿ, ೫೦ ವಯಸ್ಸು, ವ್ಯವಸಾಯ, ಹಂಪಿ.

೧೭. ಶ್ರೀನಿವಾಸ ಶ್ರೇಷ್ಠಿ, ೬೫ ವಯಸ್ಸು, ವ್ಯಾಪಾರಿ, ಹಂಪಿ.

೧೮. ಬಾಲಮ್ಮ, ೮೦ ವಯಸ್ಸು, ಕೂಲಿ, ನಲ್ಲಾಪುರ.

೧೯. ಅಂಗಡಿ ರುದ್ರಪ್ಪ, ೮೨ ವಯಸ್ಸು, ರೈತ, ಕಾಕುಬಾಳು.

೨೦. ಲಿಂಗಯ್ಯ.ಡಿ., ೧೯೮೪, **ಕರ್ನಾಟಕದ ಗ್ರಾಮದೇವತೆಗಳು,** ಪುಟ ೪.

೨೧. ಮಂಜುನಾಥ ಬೇವಿನಕಟ್ಟಿ, ೨೦೦೯, **ಕರ್ನಾಟಕದ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ,** ಪುಟ ೫.

೨೨. ಪಾಟೀಲ.ಬಿ.ಪಿ., ೧೯೯೬, **ಗ್ರಾಮದೇವತೆಗಳು(ಉಪನ್ಯಾಸ ಗ್ರಂಥಮಾಲೆ),** ಪುಟ ೧೩.

೨೩. ಲಿಂಗಯ್ಯ.ಡಿ., ೧೯೮೪, **ಕರ್ನಾಟಕದ ಗ್ರಾಮದೇವತೆಗಳು,** ಪುಟ ೫.

೨೪. ಪಾಟೀಲ.ಬಿ.ಪಿ., ೧೯೯೬, **ಗ್ರಾಮದೇವತೆಗಳು(ಉಪನ್ಯಾಸ ಗ್ರಂಥಮಾಲೆ),** ಪುಟ ೧೫.

೨೫. ಲಿಂಗಯ್ಯ.ಡಿ., ೧೯೮೪, **ಕರ್ನಾಟಕದ ಗ್ರಾಮದೇವತೆಗಳು,** ಪುಟ ೭.

೨೬. ತಿಪ್ಪೇಸ್ವಾಮಿ.ಜಿ.ಆರ್., ೧೯೯೬, **ಕೋಲಾರಮ್ಮ,** ಪುಟ ೮.

೨೭. ಚಿದಾನಂದಮೂರ್ತಿ.ಎಂ., ೧೯೯೮, **ಹೊಸತು ಹೊಸತು,** ಪುಟ ೩೪೬.

೨೮. ತಿಪ್ಪೇಸ್ವಾಮಿ.ಜಿ.ಆರ್., ೧೯೯೬, **ಕೋಲಾರಮ್ಮ,** ಪುಟ ೮.

೨೯. ಸುಂಕಾಪುರ.ಎಸ್.ಎಸ್.(ಪ್ರ.ಸಂ.), ಕೊಟ್ರಶೆಟ್ಟಿ.ಎಂ.ಜಿ.(ಸಂ)., ೧೯೯೦, **ಜಾನಪದ ಸಾಹಿತ್ಯ ದರ್ಶನ-ಭಾಗ-೮,** ಪುಟ ೨೨೦.

೩೦. ಹಿರೇಮಠ.ಎಸ್.ಎಸ್., ೧೯೯೨, **ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಜಾತ್ರೆಗಳು, ಭಾಗ-೨,** ಪುಟ ೨೩.

೩೧. ಸಿದ್ಧಲಿಂಗಯ್ಯ, ೨೦೦೯, **ಗ್ರಾಮದೇವತೆಗಳು,** ಪುಟ ೧೬.

೩೨. ಸುಂಕಾಪುರ.ಎಸ್.ಎಸ್.(ಪ್ರ.ಸಂ.), ಕೊಟ್ರಶೆಟ್ಟಿ.ಎಂ.ಬಿ.(ಸಂ)., ೧೯೯೦, **ಜಾನಪದ ಸಾಹಿತ್ಯ ದರ್ಶನ-ಭಾಗ-೮,** ಪುಟ ೨೧೬.

೩೩. ಸಿದ್ಧಲಿಂಗಯ್ಯ, ೨೦೦೯, **ಗ್ರಾಮದೇವತೆಗಳು,** ಪುಟ ೧೭.

೩೪. ಅದೇ., ಪುಟ ೧೮.

೩೫. ಅದೇ., ಪುಟ ೨೦.

೩೬. ಅದೇ., ಪುಟ ೨೨.

೩೭. ತಿಪ್ಪೇಸ್ವಾಮಿ.ಜಿ.ಆರ್., ೧೯೯೬, **ಕೋಲಾರಮ್ಮ,** ಪುಟ ೯.

೩೮. ಸಿದ್ಧಲಿಂಗಯ್ಯ, ೨೦೦೯, **ಗ್ರಾಮದೇವತೆಗಳು,** ಪುಟ ೯೭.



# ಅಧ್ಯಾಯ : ಆರು

## ಫಲಿತಗಳ ಸಮಾರೋಪ

ಇಂದು 'ಜನಪದ' ಹಾಗೂ 'ತೋಂಡಿ' ಚರಿತ್ರೆಯ ಅಧ್ಯಯನದ ನೆಲೆಗಳು ಹೊಸ ಪರಿಭಾಷೆ, ಅಂತೆಯೇ ವೈಜ್ಞಾನಿಕವಾಗಿಯೂ ಅನಾವರಣವಾಗುತ್ತಿವೆ. ಅಲ್ಲದೇ ಈ ಕ್ಷೇತ್ರಗಳನ್ನು ವಿದ್ವಾಂಸರು, ಅಧ್ಯಯನಕಾರರು ತಮ್ಮ ವ್ಯಾಪಕ ಕ್ಷೇತ್ರಕಾರ್ಯದ ಮುಖೇನ ಹಲವಾರು ಮಗ್ಗಲುಗಳನ್ನು ಬಿಡಿಸುತ್ತಿದ್ದಾರೆ. ಮುಖ್ಯವಾಗಿ ಒಂದು ಕಾಲದಲ್ಲಿ ಈ ಕ್ಷೇತ್ರಗಳನ್ನು ಉದಾಸೀನ ಮಾಡಲಾಗಿತ್ತು. ಆದರೆ ಇಂದು ಗಂಭೀರವಾದ ನೆಲೆಗಳಲ್ಲಿ ಅಧ್ಯಯನಗಳಾಗುತ್ತಿರುವುದನ್ನು ಗಮನಿಸಿದರೆ ಮೌಖಿಕ ಪರಂಪರೆಯ ಮಹತ್ವವು ತಿಳಿಯುತ್ತಿದೆ. ಮೌಖಿಕವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಅಡಗಿಕೊಂಡಿರುವ ಗಾದೆ, ಒಗಟು, ಕಥೆ, ಹಾಡು, ಐತಿಹ್ಯ, ನಂಬಿಕೆ, ಆಚರಣೆಗಳು ಮುಂತಾದ ಸಾಹಿತ್ಯ - ಚರಿತ್ರೆಯ ಪ್ರಕಾರಗಳು ತಮ್ಮದೇ ಆದ ನೆಲೆಗಳಲ್ಲಿ ನಿಂತು ಶಿಷ್ಟ ನೆಲೆಗಳಿಗಿಂತ ಮಿಗಿಲೆಂಬಂತೆ ತಮ್ಮ ಛಾಪನ್ನು ಮೂಡಿಸಿವೆ. ಈ ಬಗೆಯ ಬದಲಾವಣೆಗಳಿಂದ 'ಮೌಖಿಕ ಚರಿತ್ರೆ'ಗೂ ಎಲ್ಲಿಲ್ಲದ ಮಹತ್ವ ಕಾಣಿಸಿಕೊಂಡಿದೆ.

ಯಾವುದೇ ಶಿಷ್ಟವೆನ್ನಬಹುದಾದ ಸಾಹಿತ್ಯ ಪರಂಪರೆಗೆ ಜನಪದರ ಪ್ರಭಾವ, ಪ್ರೇರಣೆ ಯಿರುವುದನ್ನು ಗುರುತಿಸಬಹುದು. ಇದರರ್ಥ ಮೌಖಿಕ ಪರಂಪರೆ ಎಂಬುದು ಕೇವಲ ಶಾಬ್ದಿಕವಾದ ಮಾತಲ್ಲ, ಬದಲಾಗಿ ಅದೊಂದು ಜೀವನಾನುಭವವೂ ಆಗಿರುತ್ತದೆ. ಮೌಖಿಕ ನೆಲೆಗಳು ಸಂಸ್ಕೃತಿಯ ಪ್ರತಿಬಿಂಬ ಅಂತೆಯೇ ಚರಿತ್ರೆಯ ಕೊಂಡಿಗಳೂ ಹೌದು. ಹೀಗಾಗಿ ಸಾಮಾಜಿಕ ಪರಿಸರದಲ್ಲಿ ಹಾಗೂ ವ್ಯಕ್ತಿಗಳ ಸಮೂಹ ಸೃಷ್ಟಿಯಲ್ಲಿ ಸ್ಥಿರೀಕೃತಗೊಳ್ಳುತ್ತಲೇ 'ಜನಪದ ಸಾಹಿತ್ಯ' ಹಾಗೂ 'ಮೌಖಿಕ ಚರಿತ್ರೆ'ಗಳೆಂದು ಅನಾವರಣ ಆಗುವುದೂ ಉಂಟು.

ದಿನಂಪ್ರತಿ ಸಾಮಾಜಿಕ ಪರಿಸರದಲ್ಲಿ ಕಂಡುಂಡ ಅನುಭವವೇ ಸಾಹಿತ್ಯವಾಗಿ ಒಡಮೂಡುತ್ತದೆ. ಶಿಷ್ಟ ಸಾಹಿತ್ಯದಂತೆ, ಮೌಖಿಕ ಸೃಷ್ಟಿಗೆ ಯಾವುದೇ ವ್ಯಾಕರಣದ ಹಂಗಿಲ್ಲ. ಅದು ತಾನೇ ವ್ಯಾಕರಣವಾಗಿ ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಸೃಷ್ಟಿಯಾಗುವಂತಹದು. ಇದರಿಂದ ಉತ್ಪಾದನೆಯಾಗುವ ಮೌಖಿಕ ಪರಂಪರೆಯ ಎಲ್ಲಾ ಪ್ರಕಾರಗಳೂ ಜನಪದರ ಕಲಾಕೌಶಲ್ಯದಲ್ಲಿ ಕೆತ್ತಲ್ಪಟ್ಟ ಅಪೂರ್ವ ಕೃತಿಗಳಾಗುತ್ತವೆ. ಜನಪದರ ಈ ಬಗೆಯ ಸಾಹಿತ್ಯಕ್ಕೆ ವಸ್ತುವೆಂದರೆ

ಜೀವನವೇ. ಇಲ್ಲಿ ಅಲೌಕಿಕ ಜಗತ್ತಿನ ವರ್ಣನೆಗೆ ಮಿಗಿಲಾಗಿ ಲೌಕಿಕದ ಅರಿವು ಹೆಚ್ಚಾಗಿರುತ್ತದೆ. 'ಐತಿಹ್ಯ ಎಂಬುದು ಒಂದು ವಸ್ತುವನ್ನು ಒಬ್ಬ ವ್ಯಕ್ತಿ, ಪ್ರಾಣಿಗಳನ್ನು ಕಂಡು ಆರೋಪಿಸಲಾದ ಇತ್ಯಾತ್ಮಕ ಕಥಾನಕ' ಎನ್ನಬಹುದು. ಅಂದರೆ ಇಲ್ಲಿ ಹೇಳಲ್ಪಟ್ಟ ಸಾಮಗ್ರಿಯು ತನ್ನ ಮೂಲ ರೂಪಿಕೆಯ ಮೂಲಕ ಅಂತರಂಗದ ಗುಣಲಕ್ಷಣಗಳನ್ನು ನಿರೂಪಣೆಯ ಮೂಲಕ ಹೊರಹೊಮ್ಮಿಸುತ್ತಿರುತ್ತದೆ. ಹೇಳಲ್ಪಟ್ಟ ಸಾಮಗ್ರಿ ಹಾಗೂ ಪರಿಸರದ ಹಿನ್ನೆಲೆ ಈ ಎರಡೂ ಕಾರ್ಯಕಾರಣ ಸಂಬಂಧವನ್ನು ಬೆಸೆಯುತ್ತಿರುತ್ತದೆ. ಆದ್ದರಿಂದ 'ಐತಿಹ್ಯ'ದ ಕಥಿತ ಜಗತ್ತೇ ಒಂದು ಕುತೂಹಲಕರವಾದ ಲೋಕವೆನ್ನಬಹುದು.

ಜನಪದರ ಎಲ್ಲಾ ಲಕ್ಷಣಗಳನ್ನು ಮೈಗೂಡಿಸಿಕೊಂಡೇ ರೂಪುಗೊಳ್ಳುವ ಈ ಐತಿಹ್ಯಗಳು ಜೀವಾನಾನುಭವ ಮತ್ತು ಸಮಾಜದ ಅಂಗವಾಗಿಯೇ ಬೆಳೆಯುತ್ತಿರುತ್ತವೆ. ಐತಿಹ್ಯಗಳು ಮುಖ್ಯವಾಗಿ ಒಂದು ಘಟನೆ, ವ್ಯಕ್ತಿ, ಸ್ಥಳವನ್ನು ತನ್ನ ಮೂಲ ಆಕರವನ್ನಾಗಿಸಿಕೊಂಡೇ ಸಾಗುವಂಥವು. ನಮ್ಮ ಗ್ರಾಮೀಣ ಸಮಾಜದಲ್ಲಿ ಭೌತಿಕ ವಸ್ತುಗಳನ್ನು ಕಂಡಾಗ ಅದನ್ನು ಇದ್ದಂತೆಯೇ ಹೇಳುವುದು ಸಪ್ಪೆಯೆನಿಸುತ್ತದೆ. ಈ ಕಾರಣಕ್ಕಾಗಿ ಬಿಡಿ ಬಿಡಿಯಾಗಿ ಬೌದ್ಧಿಕ ನೆಲೆಯ ಹಿನ್ನೆಲೆಯಲ್ಲಿ ಒಂದು ಕಥೆಯನ್ನಾಗಿ ಹೆಣೆಯುವುದು ಅವರಿಗೆ ಸಂತಸದ ಸಂಗತಿ. ಈ ಕುತೂಹಲ ಭಾರತದಾದ್ಯಂತ ಏಕರೀತಿಯಲ್ಲಿ ನಡೆದುಕೊಂಡು ಬಂದಿದೆ. ಕರ್ನಾಟಕ ಪರಿಸರದಲ್ಲಿ ಇದು ಸಮಕಾಲೀನ ಸಾಂಸ್ಕೃತಿಕ ಆಯಾಮಗಳನ್ನು ಕಾಲಾಂತರದಲ್ಲಿ ಚಿತ್ರಿಸುತ್ತಲೇ ಬರುತ್ತಿರುತ್ತದೆ. ಆಯಾಕಾಲದ ಪರಿಸರದ ಅನ್ವಯ ಬದಲಾಗುವ ಸಮಾಜದ ಮನೋಧರ್ಮವನ್ನು ಐತಿಹ್ಯಗಳ ಮುಖಾಂತರ ಸೂಕ್ಷ್ಮವಾಗಿ ಅರಿಯಲು ಸಾಧ್ಯ ಇದೆ ಎಂಬ ತೀರ್ಮಾನಕ್ಕೆ ಬರಬಹುದು. ಈ ಕಾರಣಕ್ಕಾಗಿಯೇ ಐತಿಹ್ಯಗಳಿಗೆ ಒಂದು ನಿರ್ದಿಷ್ಟ ವ್ಯಾಖ್ಯಾನವೆಂಬುದು ನೆಪ ಮಾತ್ರವಾಗುತ್ತದೆ.

ಐತಿಹ್ಯಗಳು ಚಲನಶೀಲ ಗುಣವನ್ನು ಹೊಂದಿವೆ. ಒಂದು ಸಮಾಜ, ಸಂಸ್ಕೃತಿ, ಚರಿತ್ರೆ ಮುಂತಾದ ಸಂಗತಿಗಳಿಗೆ ಬದ್ಧವಾಗುತ್ತಲೇ ಅದನ್ನು ವ್ಯಾಪಕವಾಗಿ ತನ್ನ ಒಡಲಲ್ಲಿ ಇರಿಸಿಕೊಂಡು ಮುಂದಿನ ಪೀಳಿಗೆಗೆ ಸಾಮಗ್ರಿಯಾಗಬಲ್ಲದು. ಈ ಕಾರಣದಿಂದ ಐತಿಹ್ಯಕ್ಕೆ ಮೌಖಿಕ ಪರಂಪರೆಯಲ್ಲಿ ವಿಶೇಷ ಸ್ಥಾನವಿದೆ. ಐತಿಹ್ಯವೊಂದರಲ್ಲಿ ಗಾದೆ, ಒಗಟು, ಕಥೆ, ಹಾಡು, ನಂಬಿಕೆ, ಆಚರಣೆ, ಎಲ್ಲವೂ ಒಂದಲ್ಲ ಒಂದು ಬಗೆಯಲ್ಲಿ ಐಕ್ಯವಾಗಿರುತ್ತವೆ. ಐತಿಹ್ಯದ ವಿವರಣೆಯಲ್ಲಿಯೇ ಈ ಪ್ರಕಾರಗಳೆಲ್ಲವುಗಳ ಸಾಧ್ಯತೆಯನ್ನು ಗುರುತಿಸಬಹುದು. ಆದರೂ ಒಂದು ಶಿಸ್ತಿನ ನೆಲೆಯಲ್ಲಿ ಅವು ಬೇರೆಯಾಗಿಯೇ ನಿಲ್ಲುತ್ತವೆ. ಐತಿಹ್ಯ ಹೇಳುವ ವ್ಯಕ್ತಿಗಳ ಮೇಲೆಯೂ ಕಥಾಹಂದರವೆಂಬುದು ಹೇಗೆ ಒಂದು ಸಂಸ್ಕೃತಿಯ ಪ್ರತಿನಿಧಿಯಾಗಿ ಉಳಿಯುತ್ತದೆ ಎಂಬುದನ್ನು ಗಮನಿಸಬಹುದು. ಅಂದರೆ ಐತಿಹ್ಯವನ್ನು ಹೇಳುವ ನಿರೂಪಕರಿಂದ ಅಧ್ಯಯನದ ಮನಃಶಾಸ್ತ್ರೀಯ ಸಿದ್ಧಾಂತ ರೂಪಿಸಲು ಸಾಧ್ಯವಿದೆ.

ಐತಿಹ್ಯವೆಂಬುದು ಮೌಖಿಕ ಪರಂಪರೆಯ ಒಂದು ಭಾಗ ಮಾತ್ರವಲ್ಲ ಎಂಬ ತೀರ್ಮಾನಕ್ಕೆ ಬರಲಾಗಿದೆ. ಏಕೆಂದರೆ ಅದೊಂದು ಚರಿತ್ರೆಯೂ ಹೌದು, ಸಂಸ್ಕೃತಿಯೂ ಹೌದು. ಚರಿತ್ರೆಯನ್ನು

ಕಟ್ಟುವಲ್ಲಿ ಲಿಖಿತ ಮೂಲಾಧಾರಗಳೊಂದಿಗೆ ಭೌತಿಕ ವಸ್ತುಗಳನ್ನೇ ಜೆನ್ನತ್ತುವ ಚರಿತ್ರೆಕಾರರು ಮೌಖಿಕ ಆಕರಗಳ ಕಡೆ ಗಮನಹರಿಸಿರುವುದು ಕಂಡುಬರುವುದಿಲ್ಲ. ಇಂಥ ಚರಿತ್ರೆಯು ಕೆಲವಾರು ಕೊರತೆಗಳಿಂದ ಪೂರ್ಣವಾಗಲಾರದು ಎಂದು ಹೇಳಬಹುದು. ಉಳಿದೆಲ್ಲಾ ಆಕರಗಳಿಂದ ಇತಿಹಾಸದ ಕೆಲವು ಸಂಗತಿಗಳು ಹೊರಬೀಳದೇ ಮೌನವಾದಲ್ಲಿ ಐತಿಹ್ಯವು ನೆರವಿಗೆ ಬರುತ್ತದೆ. ಅಂತೆಯೇ ಚರಿತ್ರೆಯ ಇತರ ಆಕರಗಳಂತೆ ಇದು ಕೂಡ ಮುಖ್ಯ ಆಕರವಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಐತಿಹ್ಯಗಳು ಸ್ಥಳ ಪುರಾಣ, ಸ್ಥಳನಾಮ, ಪವಾಡ, ಮಹಾತ್ಮೆಗಳನ್ನು ತಿಳಿಸುವುದೂ ಉಂಟು. ವಿಶೇಷವಾಗಿ ಸ್ಥಳ ಪುರಾಣವು ಸ್ಥಳನಾಮ ಮತ್ತು ನಾಮವಿಜ್ಞಾನಗಳ ಅಧ್ಯಯನವನ್ನು ಒಳಗೊಂಡಿರುತ್ತದೆ. ಅಂದರೆ ಪುರಾಣ ಪ್ರಸಿದ್ಧ ಸಿದ್ಧತೆಯ ಹಿನ್ನೆಲೆಯಲ್ಲಿ ಒಂದು ಸ್ಥಳದ ಮಹತ್ವವನ್ನು ಕಟ್ಟಿಕೊಡುವ ಐತಿಹ್ಯಗಳು ಆ ಸ್ಥಳ ಜಲವಾಚಿಯೋ, ನಿಸರ್ಗವಾಚಿಯೋ ಮತ್ತು ಸಾಂಸ್ಕೃತಿಕವಾಚಿಯೋ ಇಲ್ಲವೆ ದೈವವಾಚಿಯೋ ಎಂಬುದನ್ನು ನಿರ್ಧರಿಸುವತ್ತ ಗಮನ ಸೆಳೆಯುತ್ತವೆ. ಇಂಥ ಭಾಷಿಕ ಹಿನ್ನೆಲೆಯ ಅಧ್ಯಯನಕ್ಕೆ ಪರಿಪೂರ್ಣವಾಗಿ ಐತಿಹ್ಯಗಳು ನೆರವಾಗದಿದ್ದರೂ ಕೆಲವೊಮ್ಮೆ ಪರೋಕ್ಷವಾಗಿ ಆಲೋಚಿಸಲು ಘಟನಾವಳಿಗಳನ್ನು ಕಟ್ಟಿಕೊಟ್ಟಿವೆ.

ಐತಿಹ್ಯಗಳು ಚರಿತ್ರೆ, ಪುರಾಣ, ಸ್ಥಳ ಪುರಾಣ, ಸ್ಥಳನಾಮ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವುದರಿಂದ ಚರಿತ್ರೆ ರಚನೆಯಲ್ಲಿ ಮಾತ್ರವಲ್ಲದೆ, ವ್ಯಕ್ತಿಯ ಚರಿತ್ರೆಯನ್ನು ಅರಿಯುವಲ್ಲಿ, ಸ್ಥಳದ ಮಹತ್ವವನ್ನು ಹೇಳುವಲ್ಲಿ, ಜನರ ಸಾಮಾಜಿಕತೆಯನ್ನು ಗುರುತಿಸುವಲ್ಲಿ ಮಹತ್ವದ ಪಾತ್ರವನ್ನೇ ವಹಿಸುತ್ತಿವೆ. ಜಗತ್ತಿನ ಪ್ರತಿಯೊಂದು ಸಾಂಸ್ಕೃತಿಕ ಪರಂಪರೆ ಮೊದಮೊದಲು ಐತಿಹ್ಯಗಳಂತಹ ಮೌಖಿಕ ಆಕರಗಳ ಮೂಲಕ ಸೃಷ್ಟಿಗೊಂಡಿರುತ್ತದೆ ಎಂಬುದು ಅವುಗಳ ಅಧ್ಯಯನದಿಂದ ತಿಳಿದು ಬಂದಿದೆ. ನಂಬಿಕೆ, ಸಂಪ್ರದಾಯ, ಆಚರಣೆಗಳಲ್ಲಿ ಐತಿಹ್ಯಗಳು ಸಿಂಹಪಾಲು ಪಡೆದಿವೆ. ಐತಿಹ್ಯಗಳ ಹಿನ್ನೆಲೆಯಲ್ಲಿ ಅವು ಪುನರ್‌ಸೃಷ್ಟಿಗೊಳ್ಳುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಬಹುಮುಖ್ಯವಾಗಿ ಇಂದು ಪ್ರಾದೇಶಿಕ ಇತಿಹಾಸವನ್ನು ಮತ್ತೊಮ್ಮೆ, ಮಗದೊಮ್ಮೆ ಕಟ್ಟಬೇಕಾಗಿದೆ. ಅದರಲ್ಲಿಯೂ ಮೌಖಿಕ ಚರಿತ್ರೆಯನ್ನೇ ಕೇಂದ್ರೀಕರಿಸಿಕೊಂಡಂತೆ.ಈ ಬಗೆಯ ಪ್ರಾದೇಶಿಕ ಅಥವಾ ಸ್ಥಳೀಯ ಚರಿತ್ರೆಯ ರಚನೆಗೆ ಐತಿಹ್ಯವೇ ಪ್ರಮುಖ ಆಕರವಾಗುತ್ತದೆಂಬುದು ಗಮನಾರ್ಹ ಸಂಗತಿ. ಐತಿಹ್ಯಗಳು ಸಮಗ್ರ ಚರಿತ್ರೆಯನ್ನು ನೈಜವಾಗಿ ಬಿಚ್ಚಿಡಲಾರವು ಎಂಬ ಅಪಾದನೆ ಇದ್ದರೂ, ಹಲವಾರು ಚಾರಿತ್ರಿಕ ಎಳೆಗಳನ್ನು ತನ್ಮೂಲಕ ಕಟ್ಟಿಕೊಡುತ್ತವೆ ಅನ್ನುವುದರಲ್ಲಿ ಅನುಮಾನಗಳಿಲ್ಲ. ಆ ಮೂಲಕ ಚಾರಿತ್ರಿಕ ಐತಿಹ್ಯಗಳು ಅಧ್ಯಯನವನ್ನು ಬಯಸುತ್ತಿವೆ. 'ಚರಿತ್ರೆ' ಎಂಬುದು ಗ್ರಾಮ ಸಮಾಜದಲ್ಲಿ ಮೌಖಿಕಗೊಂಡು ಶಿಷ್ಟ ಪದದ ಮಾರುವೇಷದಲ್ಲಿಯೇ ನೈಜತೆಯನ್ನು ಅಂತರಂಗದಲ್ಲಿ ಅಡಗಿಸಿಕೊಂಡಿರುವಂಥವು. ಮಾರುವೇಷವನ್ನು ಜಾಗರೂಕತೆಯಿಂದ ಬಿಡಿಸಿದಲ್ಲಿ ಮಾತ್ರ ಚರಿತ್ರೆಯ ನೈಜತೆಗಳ ಕಡೆಗೆ ತಲುಪಲು ಸಾಧ್ಯ ಎಂದು ಕಂಡುಕೊಳ್ಳಲಾಗಿದೆ.

'ಐತಿಹ್ಯ' ಪದವು ಇತಿಹಾಸದಂತೆ 'ಇತಿ', 'ಇತಿಹ' ಎಂಬ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆಯಾದರೂ ಐತಿಹ್ಯವು ಜನಪದರ ಮೌಖಿಕ ಇತಿಹಾಸವಾಗಿಯೇ ಅರ್ಥವನ್ನು ಒಳಗೊಂಡಿರುವಂಥದ್ದು. ಆದರೆ ಸ್ವರೂಪ-ಲಕ್ಷಣಗಳಿಂದ ಭಿನ್ನತೆಯೂ ಇದೆ. ಐತಿಹ್ಯಗಳಿಗೆ ಕಾಲದ ನಿರ್ದಿಷ್ಟತೆಯಾಗಲೀ ಅಥವಾ ದಾಖಲೆಗಳಾಗಲೀ ಇರುವುದಿಲ್ಲ. ಆದರೆ ಐತಿಹ್ಯದ ನಿರೂಪಕರು ತಮ್ಮ ನಿರೂಪಣೆಗೆ ಬೇಕಾದ ಆಧಾರಗಳನ್ನು ನೀಡುತ್ತಾರೆ. ಇಲ್ಲಿ ಅವಶೇಷ, ಪಳೆಯುಳಿಕೆ, ವಸ್ತು, ಸ್ಥಳ, ಕೆರೆ-ಕಟ್ಟೆ, ಕಲ್ಲು-ಬಂಡೆ, ಬೆಟ್ಟ-ಗುಡ್ಡ, ಉಡುಗೆ-ತೊಡುಗೆ, ಆಯುಧ, ಪ್ರಾಣಿ, ವ್ಯಕ್ತಿ, ದೈವ, ದೆವ್ವ, ಹಳ್ಳ, ನದಿ ಹೀಗೆ ಯಾವುದೂ ಬೇಕಾದರೂ ಐತಿಹ್ಯಕ್ಕೆ ಆಕರವಾಗಬಹುದು. ಐತಿಹ್ಯ ಬೀಜದಿಂದ ಪುರಾಣ, ಕಥನಗಳು ಹುಟ್ಟಿ ಬೆಳೆಯುತ್ತವೆ. ಯಾವುದೇ ವ್ಯಕ್ತಿ, ಸ್ಥಳ ಐತಿಹ್ಯಗಳಲ್ಲಿ ಘಟನೆ ಸಂಭವಿಸಿರುವುದನ್ನು ಗುರುತಿಸಬಹುದು. ಯಾವ ಐತಿಹ್ಯಗಳೇ ಇರಲಿ, ಒಂದು ಚಿಕ್ಕ ಸನ್ನಿವೇಶ ಅಥವಾ ಘಟನೆಯೊಂದರಿಂದಲೇ ಹುಟ್ಟಿರುತ್ತದೆ. ಘಟನೆಯಿಲ್ಲದೇ ಸಹಜವಾಗಿ ಐತಿಹ್ಯಗಳು ಹುಟ್ಟಿಕೊಂಡಿರುವುದು ತೀರ ಕಡಿಮೆಯೇ. ಘಟನಾ ಪ್ರಧಾನವಾಗಿ ಅಲ್ಲದಿದ್ದರೂ ಅಪ್ರಧಾನವಾಗಿಯಾದರೂ ಐತಿಹ್ಯಗಳಲ್ಲಿ ಸೇರಿಕೊಂಡಿರುವ ಸಾಧ್ಯತೆಗಳೇ ಹೆಚ್ಚು. ಸ್ಥಳ ಐತಿಹ್ಯದಲ್ಲಿ ಕೆಲವೊಂದು ವಿಶಿಷ್ಟ ಘಟನೆ ಇಲ್ಲವೇ ಸಂಗತಿ ಪ್ರಧಾನ ಐತಿಹ್ಯಗಳ ಸ್ಥಾಯಿ ಭಾಗವಾಗಿರುತ್ತವೆ. ವಿಜಯನಗರ ಸಾಮ್ರಾಜ್ಯ ಮತ್ತು ಸಣ್ಣ, ಪುಟ್ಟ ಪಾಳೆಪಟ್ಟುಗಳ ಉದಯ, ಏಳಿಗೆ, ನಾಶದ ಕುರಿತು ಸಾಕಷ್ಟು ಐತಿಹ್ಯಗಳು ದೊರೆತಿವೆ. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ, ಪಾಳೆಗಾರರ ಸಂಸ್ಥಾನಗಳು ಬೆಳಕಿಗೆ ಬಂದ ನಂತರ ಅವರ ಸಾಮಾಜಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯನ್ನು ಶಿಷ್ಟ ಚರಿತ್ರೆಯು ತಿರಸ್ಕರಿಸಿರುವುದನ್ನು ಐತಿಹ್ಯಗಳು ಮೌಖಿಕ ಇತಿಹಾಸದಿಂದ ಕಟ್ಟಿಕೊಟ್ಟಿರುವುದು ಗಮನಾರ್ಹ. ಹೊಸಪೇಟೆ ತಾಲೂಕು ಪರಿಸರದ ಚರಿತ್ರೆಯನ್ನು ಮೌಖಿಕ ಪರಂಪರೆಯ ಐತಿಹ್ಯಗಳು ಭಿನ್ನ ನೆಲೆಯಲ್ಲಿಯೇ ಕಟ್ಟಿಕೊಟ್ಟಿವೆ. ಅಲಕ್ಷಿತ ನೆಲೆಗಳ ಹಿನ್ನೆಲೆಯಲ್ಲಿ ಹೊಸಪೇಟೆ ತಾಲೂಕು ಪರಿಸರದ ಸ್ಥಾನಮಾನಗಳನ್ನು ಕುರಿತಾದ ಸ್ಪಷ್ಟ ಕಲ್ಪನೆ ಈ ಅಧ್ಯಯನದಿಂದ ಅನಾವರಣ ಆಗಿದೆ ಎಂದರೆ ತಪ್ಪಾಗಲಾರದು.

ಪ್ರಾದೇಶಿಕ ಹಿನ್ನೆಲೆಯಲ್ಲಿ ಯಾವುದೇ ಪಳೆಯುಳಿಕೆಗಳು ಕಂಡು ಬಂದರೂ ಅವು ತಮ್ಮ ಇತಿಹಾಸಕ್ಕೆ ಅಥವಾ ಚರಿತ್ರೆಗೆ ಸೇರಿದವುಗಳು ಎಂಬ ಭಯ-ಭಕ್ತಿಯ ಮನೋಭಾವದ ಮೂಲಕ ಕಥನ ಕಟ್ಟಿ ಅವುಗಳನ್ನು ಉಳಿಸಿಕೊಂಡು ಬರುವ ಪ್ರವೃತ್ತಿಯು ಜನಸಾಮಾನ್ಯರಲ್ಲಿ ಇರುವುದು ಈ ಅಧ್ಯಯನದಿಂದ ತಿಳಿದುಬಂದಿದೆ. ಐತಿಹ್ಯಗಳು ಜನಸಾಮಾನ್ಯರಲ್ಲಿ ಎಷ್ಟು ಪ್ರಭಾವವನ್ನು ಬೀರುತ್ತವೆ ಎಂಬುದಕ್ಕೆ ಇಂದಿಗೂ ಆಯಾ ಪ್ರದೇಶಗಳಲ್ಲಿ ಹುಟ್ಟಿಕೊಂಡು ಬಂದ ಐತಿಹ್ಯಗಳ ಆಶಯಗಳನ್ನೇ ಗಮನಿಸಬಹುದು. ಅಂದರೆ ಐತಿಹ್ಯಗಳು ಅಲ್ಲಿಯ ಜನರ ಬದುಕಿನ ಸಿದ್ಧಾಂತಗಳಾಗಿ, ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿ ಮನೆ ಮಾಡಿಕೊಂಡಿರುತ್ತವೆ. ಇವೆಲ್ಲವು 'ವಿಶೇಷ ಐತಿಹ್ಯ'ಗಳಾಗಿ ಮಾನ್ಯತೆ ಪಡೆದುಕೊಳ್ಳುತ್ತವೆ. ಈ ವಿಶೇಷತೆಯೇ ಆ ಪ್ರದೇಶದ ಪ್ರಾದೇಶಿಕತೆಯ ಲಕ್ಷಣಗಳಾಗಿ ಗುರುತಿಸಿಕೊಂಡಿರುವುದುಂಟು. ಸಂದರ್ಭದಲ್ಲಿ ಐತಿಹ್ಯಗಳು ಆ

ಪ್ರದೇಶದ ವೈಶಿಷ್ಟ್ಯವನ್ನು ಪ್ರತಿನಿಧಿಸುವ ಚಾರಿತ್ರಿಕ ಅಂಶಗಳನ್ನು ಒಳಗೊಂಡಿರುತ್ತವೆ. ಐತಿಹ್ಯಗಳು ಜನರ ಮನೋಧರ್ಮ ಮತ್ತು ಚರಿತ್ರೆಯ ಒಟ್ಟು ಅರ್ಥವನ್ನು ಮತ್ತು ಘಟನೆಯ ಮೂಲವನ್ನು ಪುನರ್‌ರಚಿಸಿ, ವ್ಯಾಖ್ಯಾನಿಸುತ್ತಿರುತ್ತವೆ. ಇದರಿಂದ ಪ್ರತಿಯೊಂದು ಸಮುದಾಯಗಳಿಗೆ ತಮ್ಮದೇ ಆದ ಕಥನ ಅಥವಾ ಪುರಾಣ ಇದೆ ಎಂಬುದು ಸ್ಪಷ್ಟ. ಈ ರೀತಿಯ ಪ್ರಕ್ರಿಯೆಯಲ್ಲಿ ಆ ಸಮುದಾಯದ ಸಾಂಸ್ಕೃತಿಕ ನಾಯಕ, ಪೌರಾಣಿಕ ಅಂಶಗಳಿಂದಾಗಿ ದೈವತ್ವವನ್ನು ಪಡೆದು ಕೊಳ್ಳುತ್ತಾನೆ. ಹಬ್ಬ, ಜಾತ್ರೆಯಂಥ ಆಚರಣೆಗಳ ಮೂಲಕ ಸಂಸ್ಕೃತಿಯ ಆರಾಧನೆಗೂ ಒಳಗಾಗುವುದೂ ಉಂಟು. ಪ್ರಕೃತಿಯ ವೈಚಿತ್ರ್ಯಗಳಿಗೂ ಹಾಗೂ ಪ್ರಾಕೃತಿಕ ಪರಿಸರಕ್ಕೆ ಸಂಬಂಧಿಸಿದ ನೈಜ ಘಟನೆಗಳಿಗೂ, ಐತಿಹ್ಯಗಳು ಕೊಂಡಿಯಾಗಬಹುದು ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಲಿಖಿತ ಚರಿತ್ರೆಯಲ್ಲಿ ದಾಖಲಾದ ಯಾವ ಮುಖ್ಯ ದೊರೆಗಳೂ ಐತಿಹ್ಯಗಳ ನಿರೂಪಣೆಗಳಲ್ಲಿ ಸ್ಥಾನ ಪಡೆದಿಲ್ಲ. ಹಾಗೆಯೇ ವಿಜಯನಗರದ ಅರಸರ ಆರಾಧ್ಯ ದೈವ ವಿರೂಪಾಕ್ಷನಿಗೂ ಅಂಥ ಸ್ಥಾನವನ್ನೇನೂ ನೀಡಿಲ್ಲ. ಆದರೆ ಐತಿಹ್ಯಗಳಲ್ಲಿ ಪಟ್ಟಣದ ಯಲ್ಲಮ್ಮ, ಗಾಳೆಮ್ಮ, ಕಾಳಮ್ಮ, ದುರುಗಮ್ಮ, ಅಂಕ್ಲಮ್ಮ, ಹೊಸೂರಮ್ಮ, ತಳವಾರಪ್ಪನಂಥ ಮೊದಲಾದ ಜನಪದ ದೈವಗಳಿಗೇ ಇಲ್ಲಿ ಪ್ರಾಶಸ್ತ್ಯ ಸಂದಾಯವಾಗಿರುವುದನ್ನು ಗಮನಿಸಬಹುದು. ಇಂಥ ಜನಪದ ದೈವಗಳಿಗೆ ಸಂಬಂಧಿಸಿದಂತೆ ಕೆಲವು ಹೆಸರುಗಳು ದಾಖಲಾಗಿರುವುದನ್ನು ಬಿಟ್ಟರೆ ಉಳಿದಂತೆ ಯಾವ ವ್ಯಕ್ತಿಗಳ ಹೆಸರುಗಳೂ ಐತಿಹ್ಯಗಳಲ್ಲಿ ದಾಖಲಾಗಿಲ್ಲ. ಅಂದರೆ ಜನರು ವ್ಯಕ್ತಿಗಿಂತ ಘಟನೆಗಳಿಗೇ ಹೆಚ್ಚು ಮಹತ್ವ ನೀಡಿದ್ದಾರೆ ಎಂಬುದು ಸ್ಪಷ್ಟ.

ಸಮುದಾಯದ ನೈತಿಕತೆಯನ್ನು ಆಧರಿಸಿ ಅನೇಕ ಐತಿಹ್ಯಗಳು ಹುಟ್ಟಿಕೊಂಡಿವೆ. ತಮ್ಮ ಗ್ರಹಿಕೆಯ ಪರಂಪರೆಗೆ ಅಥವಾ ನೈತಿಕ ನೆಲೆಗಟ್ಟಿಗೆ ಪೆಟ್ಟಾದಾಗ ಜನರು ಅದಕ್ಕೆ ಬಹಳ ತೀವ್ರವಾಗಿ ಪ್ರತಿಕ್ರಿಯಿಸಿರುವುದುಂಟು. ಅಂಥ ಐತಿಹ್ಯಗಳೇ ಹೆಚ್ಚಾಗಿ ಕಂಡು ಬಂದಾಗ ಅಲ್ಲಿಯ ಸಂಸ್ಥಾನಗಳು ಜನರ ಗ್ರಹಿಕೆಗಳ ಮೇಲೆ ಹೇಗೆ ದಾಳಿ ಇಡುತ್ತಿದ್ದವು ಎಂಬ ಬಗ್ಗೆ ಈ ಅಧ್ಯಯನದಲ್ಲಿ ಸುಳಿವುಗಳು ದೊರೆತಿವೆ. ವಿಜಯನಗರ ಸಂಸ್ಥಾನವನ್ನು ನಾವು ಎಷ್ಟೇ 'ದೇಶೀ'ಯವೆಂದು ಕರೆದರೂ ಅದು ಪೂರ್ಣಪ್ರಮಾಣದಲ್ಲಿ ಹಾಗೇ ಆಗಿರಲಿಲ್ಲ ಎಂಬುದನ್ನು ಗಮನಿಸಲಾಗಿದೆ. ಕಾರಣ, ವಿದೇಶೀ ಜನರೊಡನೆ ಅದಕ್ಕಿದ್ದ ಸಂಪರ್ಕದಿಂದಾಗಿ ಸಮ್ಮಿಶ್ರ ಸಂಸ್ಕೃತಿಯೊಂದು ಅಲ್ಲಿ ರೂಪುಗೊಂಡಿತ್ತು. ಜನರು ಈ ಸಮ್ಮಿಶ್ರ ಸಂಸ್ಕೃತಿಗೆ ತಮ್ಮ ನೈತಿಕ ನೆಲೆಗಟ್ಟಿನಲ್ಲಿ ಪ್ರತಿಕ್ರಿಯಿಸದೆ ಬಿಟ್ಟಿಲ್ಲ. ಲೈಂಗಿಕತೆಗೆ ಸಂಬಂಧಿಸಿದ ಐತಿಹ್ಯಗಳೆಲ್ಲವೂ ಈ ಬಗೆಯವೇ. ವಸಾಹತುಪೂರ್ವದಲ್ಲಿಯೇ ಸಂಸ್ಥಾನವೊಂದು ವಸಾಹತೀಕರಣಕ್ಕೆ ಹೇಗೆ ದಾರಿ ಮಾಡಿಕೊಟ್ಟಿತ್ತು ಎಂಬುದಕ್ಕೆ ವಿಜಯನಗರ ಸಂಸ್ಥಾನವೇ ಒಳ್ಳೆಯ ಉದಾಹರಣೆ.

ಸಾಮಾನ್ಯವಾಗಿ ಐತಿಹ್ಯಗಳು ಸಂಸ್ಥಾನದ ಘಟನೆಗಳಿಗೆ ಪ್ರತಿಕ್ರಿಯಿಸದೆ ಕೌಟುಂಬಿಕ ನೆಲೆಗಳಲ್ಲಿ ಮಾತ್ರ ಪ್ರತಿಕ್ರಿಯಿಸಿವೆ. ಪಂಪಮ್ಮನಿಂದ ತೊಡಗಿ, ಅಕ್ಕ-ತಂಗಿಯರ ಗುಂಡುಗಳವರೆಗೆ ಇದನ್ನು

ಕಾಣಬಹುದು. ಜನರಿಗೆ ಕುಟುಂಬ-ಬಂಧುತ್ವದ ಬಗ್ಗೆ ಇದ್ದಂಥ ಕಾಳಜಿಗಳು ಸಾಮ್ರಾಜ್ಯದ ಮೇಲೆ ಇದ್ದಂತಿಲ್ಲ. ಹಾಗೆ ನೋಡಿದರೆ ಸಂಸ್ಥಾನಗಳು ಕೂಡಿ ಹಾಕಿದ ಸಂಪತ್ತಿನ ಬಗೆಗೆ ಜನರಲ್ಲಿ ನಿಗೂಢ ಭಯ ಇತ್ತು ಎಂಬುದರಲ್ಲಿ ಅನುಮಾನಗಳು ಇಲ್ಲ. ಇದಕ್ಕೆ 'ಘಟ್ಟಿ ಕೋಟೆಯ ಐತಿಹ್ಯ'ವೇ ಸಾಕ್ಷಿ. ಅಂತೆಯೇ ಅರಸರುಗಳ ಜಿಪುಣತನದ ಬಗ್ಗೆಯೂ ಜನರಿಗೆ ಅಸಡ್ಡೆ ಇತ್ತು. ಅದನ್ನು 'ರಾಯರ ಕೆರೆಯ ಐತಿಹ್ಯ' ಸಾಬೀತುಪಡಿಸದೆ ಬಿಟ್ಟಿಲ್ಲ. ಅಲ್ಲದೆ ದಾಸರ ಪದಗಳಲ್ಲಿಯೂ ಇದನ್ನು ಗಮನಿಸಬಹುದು.

ಇಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಇನ್ನಷ್ಟು ಸಂಕ್ಷಿಪ್ತಗೊಳಿಸಲು ಪ್ರಯತ್ನಿಸಲಾಗಿದೆ. ಅದರಂತೆ;

೧. ಹೊಸಪೇಟೆ ತಾಲೂಕು ಪರಿಸರವು ಚಾರಿತ್ರಿಕವಾಗಿ ಮಹತ್ವವನ್ನು ಪಡೆದ ಪ್ರದೇಶವಾಗಿದ್ದು, ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ಐತಿಹ್ಯಗಳು ಭಿನ್ನ ಸ್ವರೂಪದಲ್ಲಿ ದೊರೆತಿರುವುದುಂಟು. ಅದರಲ್ಲೂ ತಾಲೂಕಿನ ನಾಲ್ಕು ಹೋಬಳಿಗಳಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಸ್ಥಳಕ್ಕೆ ಹೆಚ್ಚು ಮಹತ್ವವನ್ನು ನೀಡುವ 'ಸ್ಥಳಪ್ರಧಾನ ಐತಿಹ್ಯ'ಗಳೇ ಹೆಚ್ಚಾಗಿ ಕಾಣಿಸಿಕೊಂಡಿರುವುದು ಈ ಅಧ್ಯಯನದಿಂದ ತಿಳಿದುಬಂದಿದೆ.

೨. ಜನಪದರಲ್ಲಿನ ಭೌತಿಕ ಆಕರಗಳಿಂದ ಹುಟ್ಟು ಪಡೆದ ಐತಿಹ್ಯಗಳು ವಿಶಿಷ್ಟ ಸ್ವರೂಪದವು ಆಗಿವೆ. ಆಯಾ ಕಾಲದ ಸಂಸ್ಕೃತಿಗಳನ್ನು ತಮ್ಮ ಒಡಲಲ್ಲಿ ಹೊತ್ತುಕೊಂಡೇ ಬರುವ ಇವುಗಳು ಸಮಕಾಲೀನ ಸಾಂಸ್ಕೃತಿಕ ಆಯಾಮಗಳೊಂದಿಗೆ ಪುನರ್ರಚನೆಗೊಳ್ಳುತ್ತಲೇ ಅನೇಕ ವ್ಯಾಖ್ಯಾನಗಳಿಗೆ ಒಳಪಟ್ಟಿರುವುದನ್ನು ಈ ಅಧ್ಯಯನದಿಂದ ಗಮನಿಸಲಾಗಿದೆ. ಹೀಗಾಗಿ ಸಮಾಜದ ಮನೋಧರ್ಮ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗ್ರಹಿಸಲು ಪ್ರಸ್ತುತ ಐತಿಹ್ಯಗಳ ಅಧ್ಯಯನದಿಂದ ಸಾಧ್ಯವಾಗಿದೆ.

೩. ನಾಮ ವಿಜ್ಞಾನದ ಹಿನ್ನೆಲೆಯಲ್ಲಿ ಸ್ಥಳಪುರಾಣ, ಸ್ಥಳನಾಮಗಳಿಗೆ ಸಂಬಂಧಿಸಿದ ಅನೇಕ ಐತಿಹ್ಯಗಳು ಹೆಚ್ಚು ದೊರಕುವುದಲ್ಲದೇ ಅವುಗಳು ನೀಡುವ ವಿವರಣೆಯು ಸಹ ಚರಿತ್ರೆಯ ರಚನೆಗೆ ಹೇಗೆ ಪೂರಕವಾಗುತ್ತವೆ ಎಂಬುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿರುವುದು ಈ ಅಧ್ಯಯನದ ಫಲಿತ.

೪. ನಾಡಿನ ಸಂಸ್ಕೃತಿಯ ವಿಭಿನ್ನ ಚಹರೆ, ಪರಂಪರೆಯ ಸಂಕೇತವಾಗಿರುವ ನಂಬಿಕೆ, ಆಚರಣೆ, ಸಂಪ್ರದಾಯ, ವಿಧಿ-ನಿಷೇಧ, ಹಬ್ಬ, ಜಾತ್ರೆ, ಉತ್ಸವ ಮುಂತಾದವುಗಳ ಮೂಲಕ ತಾಲೂಕು ಪರಿಸರವು ಹೇಗೆ ಭಿನ್ನವಾಗಿ ಗುರುತಿಸಿಕೊಂಡಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ತಿಳಿದುಕೊಳ್ಳುವಂತೆ ಆಗಿದೆ.

೫. ಚರಿತ್ರೆಯ ರಚನೆಯಲ್ಲಿ ಐತಿಹ್ಯಗಳೊಂದಿಗೆ ಸುಳ್ಳು ಹಾಗೂ ಉತ್ಪ್ರೇಕ್ಷೆಗಳು ಸೇರಿಕೊಳ್ಳುವ ಅಪಾಯವಿದೆ ಎಂಬುದು ಸಾಂಪ್ರದಾಯಿಕ ಚರಿತ್ರೆಕಾರರ ಧೋರಣೆ. ಆದರೆ ಈ ಬಗೆಯ

ಐತಿಹ್ಯಗಳ ಹಿಂದಿರುವ ಆಶಯಗಳನ್ನು ಹಾಗೂ ಚರಿತ್ರೆಯ ರಚನೆಗೆ ಬೇಕಿರುವ ಎಳೆಗಳನ್ನು ಹೇಗೆ ಹೆಕ್ಕಿ ಆಯ್ದುಕೊಳ್ಳಬೇಕಾಗುತ್ತದೆ ಎಂಬುದನ್ನು ಸಹ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೬. ಶೈವ ಹಾಗೂ ವೈಷ್ಣವ ಪಂಥಗಳ ನಡುವಿನ ಅನೇಕ ಸಂಘರ್ಷಗಳೂ ಸಹ 'ಐತಿಹ್ಯ'ಗಳಾಗಿ ರೂಪು ತಳೆದಿವೆ. ಈ ಹಿನ್ನೆಲೆಯಲ್ಲಿ 'ಹರಿ-ಹರ' ಎಂಬ ಐತಿಹ್ಯವು ಜನಜನಿತವಾಗಿರುವುದು ಒಳ್ಳೆಯ ಉದಾಹರಣೆಯಾಗಿದ್ದರೂ ಅಂತಿಮವಾಗಿ ಜನರೇ ಕಟ್ಟಿಕೊಡುವ ಕತೆಗಳೇ 'ಐತಿಹ್ಯ' ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಿದೆ.

೭. ಬಹುಪಾಲು ಬರೆಹ ರೂಪದ ಇತಿಹಾಸದ ರಚನೆಗಳು ಪ್ರಭುತ್ವ, ರಾಜಕಾರಣದ ನೆಲೆಗಳಿಗೆ ಮಾತ್ರ ಸೀಮಿತವಾಗಿರುವುದು ರುಜುವಾತಾಗಿದೆ. ಆದರೆ ಚರಿತ್ರೆಯ ಪುನರ್‌ರಚನೆಯ ಸನ್ನಿವೇಶದಲ್ಲಿ ಐತಿಹ್ಯಗಳಂಥ ಮೌಖಿಕ ಆಕರಗಳ ಬಳಕೆಯಿಂದ ಭಿನ್ನವಾದ ನೋಟಗಳು ಲಭಿಸಿರುವುದು ಉಂಟು. ಈ ಹಿನ್ನೆಲೆಯಲ್ಲಿ ಪ್ರಭುತ್ವವನ್ನು ಹೊರತುಪಡಿಸಿದ ಇನ್ನುಳಿದ ಚಹರೆಗಳು ಪ್ರಧಾನ ಎಂಬುದು ಪ್ರಸ್ತುತ ಐತಿಹ್ಯಗಳ ಬಳಕೆಯ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೮. ಅಲೆಮಾರಿಯಾಗಿದ್ದ ಮಾನವನು ಒಂದೆಡೆ ವಾಸ್ತವ್ಯ ಹೂಡಿದ ನೆಲೆಗಳೇ ಗ್ರಾಮಗಳಾದವು. ತಾಲೂಕು ಪರಿಸರದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಅಂಥ ಸ್ಥಳನಾಮಗಳೇ ಹೆಚ್ಚಿವೆ. ಅಲ್ಲದೇ ರಾಜ ಪರಿವಾರದವರ ಹೆಸರಿನ ಗ್ರಾಮನಾಮಗಳೂ ಉಂಟು. ಇನ್ನೂ ಕೆಲವು ಹಳೆಯ ಗ್ರಾಮಗಳಿಗೆ ಪ್ರತಿನಾಮಕರಣವನ್ನೂ ಮಾಡಲಾಗಿದೆ. ಕ್ರಿ.ಶ. ೧೦ನೇ ಶತಮಾನದಿಂದ, ಕ್ರಿ.ಶ. ೧೫ನೇ ಶತಮಾನದವರೆಗಿನ ಶಾಸನೋಕ್ತ ಸ್ಥಳನಾಮಗಳು ಇದಕ್ಕೆ ಉದಾಹರಣೆಯಾಗಿ ಕಂಡು ಬಂದಿರುವುದು ಗಮನಾರ್ಹ.

೯. ಅಮ್ಮನ ಆಚರಣೆಗಳಲ್ಲಿ ಗ್ರಾಮ ನೈರ್ಮಲ್ಯ, ಮಕ್ಕಳ ಅಪೌಷ್ಠಿಕತೆ ನಿವಾರಣೆ, ಸಾಂಕ್ರಾಮಿಕ ರೋಗಗಳಿಂದ ರಕ್ಷಿಸುವ ತಂತ್ರಗಾರಿಕೆಯಿದೆ. ಆಚರಣೆಯ ಮೂಲಕ ನೈಸರ್ಗಿಕ ಸಂಪನ್ಮೂಲ ಗಳನ್ನು ಬಳಸಿಕೊಂಡು ರೋಗಗಳನ್ನು ಗುಣಪಡಿಸಿರುವ ಐತಿಹ್ಯಗಳನ್ನು ಗಮನಿಸಲಾಗಿದೆ. ಅಂತೆಯೇ ಉಗ್ರವಾದ ಬಲಿಯ ಆಚರಣೆಗಳು ವಂಶಾಭಿವೃದ್ಧಿ ಹಾಗೂ ಪ್ರಾಣಿ ಪೋಷಣೆಯ ಸರಳ ಆಚರಣೆಗಳಾಗಿ ಸ್ಥಿತ್ಯಂತರಗೊಂಡಿರುವಂಥದ್ದು ಉಂಟು. ಬಲಿ ನಿಷೇಧಕ್ಕೆ ಸರ್ಕಾರದ ಬಿಗಿ ಕಾನೂನುಗಳಿದ್ದರೂ ಅಲ್ಲಲ್ಲಿ ಇಂದಿಗೂ ಪ್ರಾಣಿ ಬಲಿ ನಡೆಯುತ್ತಿರುವುದನ್ನು ಉಲ್ಲೇಖಿಸಲಾಗಿದೆ.

೧೦. ನಂಬಿಕೆಗಳೆಲ್ಲವು ಮೂಢನಂಬಿಕೆಗಳೆಂದು ಹಣೆಪಟ್ಟಿ ಕಟ್ಟಿ ತಿರಸ್ಕರಿಸುವುದಕ್ಕಿಂತಲೂ ಆ ನಂಬಿಕೆಗಳಲ್ಲಿರುವ ವೈಜ್ಞಾನಿಕ, ಸಾಮಾಜಿಕ ಗುಣ ಹಾಗೂ ಮಾನವೀಯ ಮೌಲ್ಯಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅನಕ್ಷರಸ್ಥರಾದ ಜನಪದರಿಂದ ಬಂದ ನಂಬಿಕೆ

